ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೫–೫

# ಶ್ರೀದೇವೀಭಾಗವತಂ

## ಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದವಿವರಣೆಗಳೊಡನೆ.)

ಆರನೆಯ ಸ್ಕಂಧ



ಅನುವಾದಕ

**ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,**

ಸಾಹಿತ್ಯವಿದ್ವಾನ್



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೪

# ಮುನ್ನುಡಿ

---

॥ ಶ್ರೀಗಣೇಶಶಾರದಾಗುರುಭ್ಯೋ ನಮಃ ॥

ಈ ದೇವೀಭಾಗವತ ಶಬ್ದದ ಅರ್ಥವನ್ನು ಹಿಂದಿನ ಸಂಪುಟಗಳ ಮುನ್ನುಡಿಗಳಲ್ಲಿ ತಿಳಿಸಿದೆ. ಈ ಪುರಾಣವೇ ಮಹಾಪುರಾಣವೆಂಬ ಹಿರಿಯ ಬಿರುದಿಗೆ ಅರ್ಹವಾದುದರಿಂದ ಮಹಾಪುರಾಣಗಳ ಸಾಲಿನಲ್ಲಿ ಇದನ್ನೇ ಪರಿಗಣಿಸಬೇಕೆಂಬ ವಿಷಯದಲ್ಲಿ ಪ್ರಮಾಣಗಳನ್ನೂ ಯುಕ್ತಿಗಳನ್ನೂ ಅಲ್ಲಲ್ಲಿ ವಿವರಿಸಿಯೂ ಇದೆ. ಈಗ ಈ ಪುರಾಣದಿಂದ ದೊರೆಯುವ ಉಪದೇಶಗಳ ದೃಷ್ಟಿಯಿಂದಲೂ ಇದರ ಮಹತ್ತ್ವವನ್ನು ಮನಗಾಣಬಹುದೆಂಬ ಅಂಶವನ್ನು ಸ್ವಲ್ಪಮಟ್ಟಿಗೆ ವಿವರಿಸಲಾಗುವುದು. ವೇದಗಳಲ್ಲಿ ಹೇಳಿರುವ ಮುಖ್ಯವಾದ ವೇದಾಂತತತ್ತ್ವಗಳ, ಮತ್ತು ಜನರ ನಡೆವಳಿಕೆಯಲ್ಲಿರಬೇಕಾದ ನೀತಿಗಳ, ಸ್ವರೂಪವನ್ನು ಈ ಗ್ರಂಥದಲ್ಲಿಯೂ ವಿವರಿಸಿರುವುದನ್ನು ಹೀಗೆ ಹೇಳಬಹುದು. ಋಗ್ವೇದ ೧-೨-೧೬೪ ರಲ್ಲಿ " ಏಕಂಸದ್ವಿಪ್ರಾ ಬಹುಧಾ ವದಂತಿ " ಎಂದೂ ೧೦-೧೨೯ ರಲ್ಲಿ " ಆನೀದವಾತಂ ಸ್ವಧಯಾ ತದೇಕಂ " " ಇಂದ್ರೋ ಮಾಯಾಭಿಃ ಪುರುರೂಪ ಈಯತೇ " ಎಂದೂ ಹೇಳಿದೆ. ಸರ್ವಂ ಖಲ್ವಿದಂ ಬ್ರಹ್ಮ " ಎಂದು ಛಾಂದೋಗ್ಯ ಮುಂತಾದ ಎಲ್ಲ ಉಪನಿಷತ್ತುಗಳೂ, "ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಂ" ಎಂದು ಶ್ವೇತಾಶ್ವತರೋಪನಿಷತ್ತೂ, ಸಾರಿ ಹೇಳುತ್ತಿವೆ. ಈ ಏಕತತ್ತ್ವವನ್ನೇ ಈ ದೇವೀಭಾಗವತವೂ ಅಡಿಗಡಿಗೆ ಉಪದೇಶಿಸುತ್ತದೆ. ಹೇಗೆಂದರೆ, " ಸರ್ವಂ ಖಲ್ವಿದ ಮೇವಾಹಂ ನಾನ್ಯದಸ್ತಿ ಸನಾತನಂ '' ಸ್ಕಂ. ೧. ಅ. ೧೫. ಶ್ಲೋ. ೫೨. " ಏಕಮೇವಾದ್ವಿತೀಯಂ ವೈ ಬ್ರಹ್ಮ ನಿತ್ಯಂ ಸನಾತನಂ । ದ್ವೈತಭಾವಂ ಪುನರ್ಯಾತಿ ಕಾಲ ಉತ್ಪಿತ್ಸುಸಂಜ್ಞಕೇ ॥ ೩.೬.೪. ಯೋಽಸೌ ಸಾಽಹಂ ಅಹಂ ಯೋಽಸೌ ಭೇದೋಽಸ್ತಿ ಮತಿವಿಭ್ರಮಾತ್ । ೩.೬.೨. ಸಗುಣಾ ನಿರ್ಗುಣಾಚಾಹಂ ಸಮಯೇ ಸೃಷ್ಟಿನಾಶಯೋಃ । ನಿರ್ಗುಣಃ ಪರಮಾತ್ಮಾಽಸೌ ನ ತು ದೃಶ್ಯಃ ಕದಾಚನ ॥ ೩.೬.೭. ಸಗುಣಾ ಕಾರಣತ್ವಾದ್ವೈ ನಿರ್ಗುಣಾ ಪುರುಷಾಂತಿಕೇ ॥ ೩.೬.೭೨. ತ್ರಿಗುಣಾ ಸಾಽಖಿಲಾಧಾರಾ ಸರ್ವಜ್ಞಾ ಸರ್ವಸಂಮತಾ । ೬.೨೮.೨೪. ಉತ್ಪತ್ತಿಕಾಲಯೋಗಾತ್ಸಾ ಭಿನ್ನಾ ಭಾತಿ ಶಿವಾ ತದಾ ೪.೧೬.೨೪ ಪರಾತ್ಮನಸ್ತಥಾ ಶಕ್ತೇಃ ತಯೋರೈಕ್ಯಂ ಸದೈವ ಹಿ । ಯೋ ವೇದ ಸ ವಿಮುಕ್ತೋಽಸ್ಮಿ ಸಂಸಾರೇ ತ್ರಿಗುಣಾತ್ಮಕೇ ॥ ೬.೧೫.೫೦ ನಾಹಂ ಸ್ತ್ರೀ ನ ಪುಮಾಂ

ಶ್ಚಾಹಂ ನ ಕ್ಲೀಬಂ ಸರ್ಗಸಂಕ್ಷಯೇ | ಸರ್ಗೇ ಸತಿ ವಿಭೇದಸ್ಸ್ಯಾತ್ ಕಲ್ಪಿತೋಽಯಂ ಧಿಯಾ ಪುನಃ || ೩.೬.೭. ಭವಾಮಿ ಶಕ್ತಿರೂಪೇಣ ಕರೋಮಿ ಚ ಪರಾಕ್ರಮಂ | ನೂನಂ ಸರ್ವೇಷು ದೇವೇಷು ನಾನಾನಾಮಧರಾ ಹ್ಯಹಂ | ೩.೬.೧೩. ಮಾಯೇಶ್ವರೀ ಭಗವತೀ ಸಚ್ಚಿದಾನಂದರೂಪಿಣೀ || ೬.೩೧.೪೯.

ಅದ್ವಿತೀಯವಾದ ಪರಬ್ರಹ್ಮಚೈತನ್ಯವು ಒಂದೇ ಯಾವಾಗಲೂ ಇರುವ ನಿತ್ಯವೂ ನಿರ್ವಿಕಾರವೂ ಆದತತ್ತ್ವವು. ಆದರೂ ಈ ಪ್ರಪಂಚ ಸಂಸಾರವು ಅನಾದಿಕಾಲ ದಿಂದಲೂ ಸಾಗಿ ಬರುತ್ತಿದೆ. ಇದರಲ್ಲಿ ಜೀವರು ತಮ್ಮ ಕರ್ಮಾನುಸಾರವಾಗಿ ದೇಹ ಗಳನ್ನು ಪಡೆಯುತ್ತಾ, ಸುಖದುಃಖರೂಪಗಳಾದ ಕರ್ಮಫಲಗಳನ್ನು ಅನುಭವಿಸು ತ್ತಿರುತ್ತಾರೆ. ಇದಕ್ಕಾಗಿ ಈ ಜಗತ್ತಿನ ಸೃಷ್ಟಿ, ರಕ್ಷಣೆ, ಸಂಹಾರ ಕಾರ್ಯಗಳು ನಡೆಯ ಬೇಕಾಗಿವೆ. ಇದಕ್ಕೆ ಮೊಟ್ಟಮೊದಲು ಎನ್ನುವುದಿಲ್ಲವು. ಪ್ರತಿಯೊಂದು ಪ್ರಪಂಚದ ಸೃಷ್ಟಿಯ ಪ್ರಾರಂಭವೂ ಆಪೇಕ್ಷಿಕವಾದುದು. ಈ ಕಾರ್ಯಗಳನ್ನು ಬ್ರಹ್ಮಾ, ವಿಷ್ಣು, ರುದ್ರರೆಂಬ ತ್ರಿಮೂರ್ತಿಗಳು ಸರಸ್ವತೀ, ಲಕ್ಷ್ಮೀ, ಗೌರೀ ಎಂಬ ಶಕ್ತಿರೂಪರಾದ ಸಹಧರ್ಮಿಣಿಯರ ಸಹಕಾರದಿಂದ ನೆರವೇರಿಸುತ್ತಿದಾರೆ. ಇವೆಲ್ಲಕ್ಕೂ ಮೂಲಕಾರಣ ವಾದ ಶಕ್ತಿಗೇ ಮಾಯೆ ಎಂದು ಹೆಸರು. ಆ ಮಾಯೆಯು ಸತ್ತ್ವರಜಸ್‌ತಮಸ್ ಎಂಬ ಮೂರು ಗುಣಗಳೇ ಸ್ವರೂಪವಾಗಿವುಳ್ಳದ್ದಾಗಿದೆ. ಸೃಜ್ಯಮಾನವಾದ ಪ್ರಾಣಿ ಗಳ ಕರ್ಮವಶದಿಂದ ಬ್ರಹ್ಮಚೈತನ್ಯದಲ್ಲಿ ಉಂಟಾಗುವ ಮೊದಲನೆಯ ಸ್ಪಂದಕ್ಕೇ ಆದಿಶಕ್ತಿ ಎಂದು ಹೆಸರು. ಸೃಷ್ಟಿಗೆ ಅಭಿಮುಖವಾದ ಶಕ್ತಿಗೆ ಮಾಯೆ ಎಂದು ಹೆಸರು. ಈ ಮಾಯೆಯು ಬ್ರಹ್ಮತತ್ತ್ವಕ್ಕೆ ಉಪಾಧಿಯು. ಸೃಷ್ಟಿಯು ನೆರವೇರಿದ ಮೇಲೆ ಕಡೆಗೆ ಪ್ರಳಯವಾಗಲು ಈ ಮಾಯಾಶಕ್ತಿ ಬ್ರಹ್ಮತತ್ತ್ವದಲ್ಲಿ ಅಂತರ್ಮುಖವಾಗಿ ಪ್ರಕೃತಿ ಎನಿಸಿಕೊಂಡಿರುತ್ತದೆ. ಈ ಶಕ್ತಿ ಮತ್ತು ಶಕ್ತಿ ವಿಶಿಷ್ಟವಾದ ಬ್ರಹ್ಮವೇ ಶಿವ, ಶಕ್ತಿ ರೂಪವಾದ ಪ್ರಥಮ ದಂಪತಿಗಳೆಂದು ವ್ಯವಹಾರವಿದೆ. ಮಾಯಾಗುಣ ಗಳ ವೈಷಮ್ಯದ ಪರಿಣಾಮಗಳಿಂದ ತ್ರಿಮೂರ್ತಿಗಳೂ ಪ್ರಪಂಚವೂ ಉಂಟಾಗುತ್ತಾ, ಅವರ ಮೂಲಕ ಅನುಸೃಷ್ಟಿಯು ಮುಂದುವರಿಯುತ್ತದೆ. ಇದು ಪ್ರವೃತ್ತಿಮಾರ್ಗವು. ಬ್ರಹ್ಮತತ್ತ್ವದ ಇಚ್ಛಾಜ್ಞಾನ ಕ್ರಿಯಾಶಕ್ತಿರೂಪವಾದ ಮಾಯೆಯು ಸಗುಣವೂ ಸಾಕಾ ರವೂ ಲಿಂಗಭೇದವುಳ್ಳದೂ ಆಗಿ ಪ್ರಪಂಚಕಾರ್ಯವು ಮುಂದುವರಿದು ನೆರವೇರಿದ ಮೇಲೆ, ಪ್ರಳಯಕಾಲವು ಸನ್ನಿಹಿತವಾಗಲು ಕಾರ್ಯವೆಲ್ಲವೂ ಕಾರಣದಲ್ಲಿ ಲೀನವಾ ಗುತ್ತಾ, ಮೂಲಕಾರಣವಾದ ಪ್ರಕೃತಿಯಲ್ಲಿ ಲೀನವಾಗುತ್ತದೆ. ಆಗ ಮಾಯಾಗುಣ ಗಳಲ್ಲಿ ವೈಷಮ್ಯದಿಂದ ಪರಿಣಾಮಗಳು ಆಗುವುದು ನಿಂತು ಸಾಮ್ಯದಲ್ಲಿ ಪರ್ಯವಸಾನ

ವಾಗುತ್ತದೆ. ಆಗ ಭೇದಕವಾಗಿ ತೋರುತ್ತಿದ್ದ ಉಪಾಧಿಯೂ ಲೀನವಾಗಿರುವುದರಿಂದ, ಮಾಯೆಯೂ, ಶಕ್ತಿಯೂ, ಎಲ್ಲಕ್ಕೂ ಅಧಿಷ್ಠಾನವಾದ ಬ್ರಹ್ಮವೂ, ಅಭಿನ್ನವಾಗಿ ಒಂದೇ ಆಗಿ ಉಳಿಯುತ್ತದೆ. ಹೀಗೆ ಸೃಷ್ಟಿಸ್ಥಿತಿ ಲಯಗಳು ಆಗುತ್ತಿರುತ್ತವೆ.

ಜೀವರು ಸಕಾಮಕರ್ಮಾಚರಣೆಯಿಂದ ಪ್ರವೃತ್ತಿಮಾರ್ಗದಲ್ಲಿ ಸುಖದುಃಖಗಳನ್ನು ಅನುಭವಿಸುತ್ತಾರೆ. ಕೆಲವರು ವಿವೇಕವೈರಾಗ್ಯಗಳಿಂದ ನಿಷ್ಕಾಮಕರ್ಮಾಚರಣೆಯನ್ನು ಚಿತ್ತಶುದ್ಧಿಗಾಗಿ ಮಾಡುತ್ತಾ, ಚಿಚ್ಛಕ್ತಿಯ ಆರಾಧನೆಯಿಂದ ಜ್ಞಾನವನ್ನು ಪಡೆದು ನಿವೃತ್ತಿಮಾರ್ಗದಲ್ಲಿ ಕಡೆಗೆ ಬ್ರಹ್ಮಶಕ್ತ್ಯಭೇದವನ್ನೂ, ಬ್ರಹ್ಮಾತ್ಮೈಕ್ಯವನ್ನೂ ಸಾಕ್ಷಾತ್ಕರಿಸಿಕೊಂಡು ಮುಕ್ತಿಯನ್ನು ಪಡೆಯುತ್ತಾರೆ. ಇದಕ್ಕೆ ಮುಂಚೆ ಜೀವರು ತಮ್ಮ ತಮ್ಮ ಸಂಸ್ಕೃತಿ, ರುಚಿಗಳಿಗೆ ತಕ್ಕಂತೆ ತಮ್ಮ ಚಿತ್ತದ ಏಕಾಗ್ರತೆಗಾಗಿ ಮೊದಲು ಸಗುಣಸಾಕಾರ ಮೂರ್ತಿ ಪೂಜೆಯಲ್ಲಿ ಆಸಕ್ತರಾಗಿರುತ್ತಾರೆ. ಆಮೇಲೆ ಸಗುಣನಿರಾಕಾರ ತತ್ವದ ಧ್ಯಾನವೆಂಬ ಮುಂದಿನ ಸೋಪಾನಕ್ಕೆ ಏರುತ್ತಾರೆ. ಅನಂತರದಲ್ಲಿ ನಿರ್ಗುಣವೂ ನಿರಾಕಾರವೂ, ನಿರ್ವಿಕಾರಿಯೂ, ನಿತ್ಯವೂ ಆದ ಬ್ರಹ್ಮತತ್ವದ ಸಾಕ್ಷಾತ್ಕಾರವನ್ನು ಪಡೆಯಲು ವೇದಾಂತ ಶ್ರವಣ, ಮನನ, ನಿದಿಧ್ಯಾಸನಗಳಿಂದ ಮುಂದುವರಿಯುತ್ತಾ ಕಡೆಗೆ ಬ್ರಹ್ಮಾತ್ಮೈಕ್ಯದ ಅಪರೋಕ್ಷಾನುಭವವೆಂಬ ನಿಶ್ರೇಯಸವನ್ನೂ ಪಡೆಯುತ್ತಾರೆ.

ಇಹಲೋಕದಲ್ಲಿ ಅಭ್ಯುದಯಗಳನ್ನೂ ಸಂಪಾದಿಸಲೂ, ಪರಲೋಕಗಳಲ್ಲಿ ಸದ್ಗತಿಗಳನ್ನು ಪಡೆಯಲೂ, ಪರಸಂವಿದ್ರೂಪಿಣಿಯಾದ ಪರಾಶಕ್ತಿಯ ಸಗುಣಸಾಕಾರ ರೂಪದ ಉಪಾಸನೆಯು, ಇತರರಾದ ಶಿವ, ವಿಷ್ಣು ಮುಂತಾದ ದೇವತೆಗಳ ಉಪಾಸನೆಯಂತೆ, ಸುಲಭವಾಗಿಯೂ ಶೀಘ್ರವಾಗಿಯೂ ಫಲವನ್ನು ಪಡೆಯಲು ಸಹಾಯವಾಗುತ್ತದೆ. ಸಾಮಾನ್ಯವಾಗಿ ಜನರೆಲ್ಲರೂ ಈ ಅಂತಸ್ತಿನಲ್ಲಿದಾರೆ. ಜನರ ಸಂಸ್ಕೃತಿ, ರುಚಿಗಳಿಗೆ ಅನುಸಾರವಾಗಿ ಶೈವರಾಗಿಯೋ, ವೈಷ್ಣವರಾಗಿಯೋ ಇರುತ್ತಾರೆ. ಇದರಿಂದ ಏಕಾಂತಭಕ್ತಿಯು ಲಭಿಸಿದರೂ, ಹೃದಯಸಂಕೋಚದಿಂದ ಪರಮತ ಸಹನೆಯು ಬಲಪಡದೆ ಇಷ್ಟಾರ್ಥಸಿದ್ಧಿಗೆ ಅಡ್ಡಿಯಾಗುತ್ತದೆ. ಇದನ್ನು ತಪ್ಪಿಸಿ ಕಾಪಾಡಲು ಈ ಪುರಾಣವು ಶಿವ, ವಿಷ್ಣು ಮುಂತಾದವರ ಅಭೇದವನ್ನೂ ಬೋಧಿಸುತ್ತದೆ. ಯೋ ಹರಿಸ್ಸ ಶಿವಸ್ಸಾಕ್ಷಾದ್ಯಶ್ಶಿವಸ್ಸ ಸ್ವಯಂ ಹರಿಃ । ಏತಯೋರ್ಭೇದ ಮಾತಿಷ್ಠನ್ ನರಕಾಯ ಭವೇನ್ನರಃ ॥ ೩.೬.೫೫ ಯಸ್ತ್ವಂ ಸೋಽಸೌ ಪುನರ್ಯೋಽಸೌ ಸ ತ್ವಂ ನಾಸ್ತ್ಯತ್ರ ಸಂಶಯಃ ॥ ೬.೧೮.೩೧. ಉಭಯೋರಂತರಂ ನಾಸ್ತಿ ಮಿಥಸ್ಸಂಸಕ್ತಚೇತಸೋಃ॥ ೬.೧೮.೪೬. ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ॥

ಇದು ವಿಶ್ವಧರ್ಮದ ಅರಿವು ಆಚರಣೆಗೆ ಮೊದಲನೆಯ ಮೆಟ್ಟಿಲಾಗಿದೆ. ವಿಶ್ವ ಧರ್ಮವೆಂದರೆ ಯಾವ ಧರ್ಮವು ಒಟ್ಟು ಪ್ರಪಂಚಕ್ಕೇ ಅನ್ವಯಿಸುತ್ತದೋ, ಯಾವುದು ಮಾನವರೆಲ್ಲರನ್ನೂ ಪ್ರಾಣಿ ಸಾಮಾನ್ಯವನ್ನೂ, ಧರಿಸಿ ಕಾಪಾಡಬಲ್ಲುದೋ, ಅಂತಹ ಧರ್ಮವು ಅಥವಾ ನಡೆವಳಿಕೆಯಾಗಿದೆ. ಇದರಿಂದ ಹರಿಯೇ ಹೆಚ್ಚು, ಹರನು ಕಡಿಮೆ, ಹರನೇ ಹೆಚ್ಚು, ಹರಿಯು ಕಡಿಮೆ ಎಂದು ಹೊರಾಡುವುದು ತಪ್ಪುತ್ತದೆ. ಇದರಿಂದ ಎಲ್ಲ ಮತಧರ್ಮಗಳ ವಿಷಯದಲ್ಲಿ ಎಲ್ಲರಿಗೂ ಸಹನೆ, ಸಹಾನುಭೂತಿ, ಸಹಕಾರ ಗಳು ಉಂಟಾಗಿ ಶಾಂತಿಸುಖಗಳು ಲಭಿಸುತ್ತವೆ. ಮತ್ತು ಈ ಮತಧರ್ಮಗಳ ಮೇಲೆ ಅಜ್ಞಾನದಿಂದ ಅನ್ಯಾಯವಾಗಿ ಹೊರಿಸಿರುವ ದೂರು ನಾಶವಾಗುತ್ತದೆ. ಈ ಉದ್ದೇಶ ಕ್ಕಾಗಿಯೇ ಶ್ರೀ ಶಂಕರಾಚಾರ್ಯರು ವಿಶಾಲಮನೋಭಾವದಿಂದಲೂ ಉದಾರಹೃದಯದ ಭಕ್ತಿಯಿಂದಲೂ ದೇವರನ್ನು ಹೀಗೆ ಸ್ತೋತ್ರಮಾಡಿರುತ್ತಾರೆ.

ತ್ರಯೀ ಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ
ಪ್ರಭಿನ್ನೇ ಪ್ರಸ್ಥಾನೇ ಪರಮಿದಮದಃ ಪಥ್ಯಮಿತಿ ಚ ।
ರುಚೀನಾಂ ವೈಚಿತ್ರ್ಯಾತ್ ಋಜುಕುಟಿಲನಾನಾಪಥಜುಷಾಂ
ನೃಣಾಮೇಕೋ ಗಮ್ಯಸ್ತ್ವಮಸಿ(ಸರಿತಾ)ಪಯಸಾಮರ್ಣವ ಇವ ॥

ಬೇಲೂರಿನ ಶ್ರೀ ಕೇಶವದೇವಸ್ಥಾನದಲ್ಲಿರುವ ಶಿಲಾಶಾಸನದಲ್ಲಿ ದೊರೆಯುತ್ತ ದೆಂದು ತಿಳಿದುಬರುವ ಈ ಪದ್ಯದಲ್ಲಿ ಮೇಲಿನ ಪದ್ಯದ ಭಾವವನ್ನು ಆ ಕಾಲಕ್ಕೆ ತಕ್ಕಂತೆ ಪ್ರಾಯಶಃ ವಿಷ್ಣುಭಕ್ತರೊಬ್ಬರು ಮಾರ್ಪಡಿಸಿ ವಿಸ್ತರಿಸಿರುತ್ತಾರೆ.

ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನಃ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ।
ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ
ಸೋಽಯಂ ವೋ ವಿದಧಾತು ವಾಂಛಿತಫಲಂ ತ್ರೈಲೋಕ್ಯನಾಥೋ ಹರಿಃ ॥

ಈಗಿನ ಕಾಲಕ್ಕೆ ತಕ್ಕಂತೆ ಈ ಭಾವವನ್ನೂ ಇನ್ನೂ ವಿಸ್ತರಿಸಿ ಮೇಲ್ಪಡಿಸಿ ಹೀಗೆ ಹೇಳಿದರೆ ತಪ್ಪಾಗಲಾರದೆಂದು ತೋರುತ್ತದೆ.

ಯಶ್ಶೈವೈಸ್ಸಮುಪಾಸ್ಯತೇ ಶಿವ ಇತಿ,ಬ್ರಹ್ಮೇತಿ ವೇದಾಂತಿಭಿಃ,
ವಿಷ್ಣುರ್ವೈಷ್ಣವಮಾರ್ಗಗೈಃ,ಭಗವತೀ ಶಕ್ತಿಸ್ತು ಶಾಕ್ತೈಃ ಪರಾ ।
ಬೌದ್ಧೈರ್ಬುದ್ಧ ಇತಿ,ಸ್ವಭಾವ ಇತರೈಃ,ಅಲ್ಲೇತಿ ಮುಸ್ಲಿಂಜನೈಃ,
ಕ್ರಿಸ್ತೈಃ ಗಾಡ್ಇತಿ,ನಾಮಮಾತ್ರವಿವಿಧಂ,ಪಾಯಾತ್ತದೇಕಂ ಮಹಃ ॥

ಈ ಎಲ್ಲ ಮತಾನುಯಾಯಿಗಳೂ, ದೇವರು ಪ್ರಪಂಚದ ಸೃಷ್ಟಿಸ್ಥಿತಿಲಯ ಕರ್ತನೆಂದೂ, ಆದುದರಿಂದ ಅವನು ಸರ್ವಜ್ಞನೂ ಸರ್ವಶಕ್ತನೂ ಆಗಿರಬೇಕೆಂದೂ, ದಯಾಳುವೆಂದೂ, ಭಕ್ತರ ಪ್ರಾರ್ಥನೆಗಳನ್ನು ಲಾಲಿಸಿ, ಅವರ ಅಪರಾಧಗಳನ್ನು ಕ್ಷಮಿಸಿ, ಗುಣಗಳಿಗೆ ಒಳ್ಳೆಯ ಫಲಗಳನ್ನೂ ಕೊಟ್ಟು, ಎಲ್ಲರನ್ನೂ ಕಾಪಾಡುತ್ತಾನೆಂದೂ ನಂಬಿ ಆರಾಧಿಸುತ್ತಿದಾರೆ. ಇವರಲ್ಲಿ ಶೈವರೂ, ವೈಷ್ಣವರೂ, ದ್ವೈತಿಗಳೂ ವಿಶಿಷ್ಟಾದ್ವೈತಿಗಳೂ, ದೇವರನ್ನು ಸಗುಣ, ಸಾಕಾರವ್ಯಕ್ತಿ ಎಂದು ಪೂಜಿಸುತ್ತಾರೆ. ಮುಸಲ್ಮಾನರೂ, ಕ್ರಿಶ್ಚಿಯನ್ನರೂ ದೇವರು ನಿರಾಕಾರನೆಂದೂ ಆದರೂ ಸಗುಣನೆಂದೂ ನಂಬಿ ಆರಾಧಿಸುತ್ತಾರೆ. ಭಕ್ತನು ಉಪಾಸನೆಯ ಮಾರ್ಗದಲ್ಲಿ ಪಡೆಯುವ ಮಜಲುಗಳೇ ಇವೆಂದೂ, ಇವುಗಳ ಸಹಾಯದಿಂದ ಮುಂದುವರಿದು ಕಡೆಗೆ ನಿರ್ಗುಣನಿರಾಕಾರ ಬ್ರಹ್ಮತತ್ವದ ಅಪರೋಕ್ಷಾನುಭವವಾಗಲು, ಭೇದವೆಲ್ಲವೂ ಔಪಾಧಿಕವಾದುದೆಂದೂ ಮನಗಂಡಮೇಲೆ ಸಚ್ಚಿದಾನಂದರೂಪವಾದ ಬ್ರಹ್ಮಾತ್ಮೈಕ್ಯದಲ್ಲಿ ಪರ್ಯವಸಾನವಾಗುವುದೇ ಮೋಕ್ಷವೆಂದು ವೇದಾಂತಿಗಳೂ ಅದ್ವೈತಿಗಳೂ ವಿವರಿಸುತ್ತಾರೆ. ಈ ತತ್ವವನ್ನೇ ಈ ಪುರಾಣವು ವಿಸ್ತಾರವಾಗಿ ವಿವರ ಉದಾಹರಣೆಗಳಿಂದ ನಿರೂಪಿಸುತ್ತಿದೆ.

ಇಂತಹ ವಿಶ್ವಧರ್ಮದ ಅರಿವು ಆಚರಣೆಗಳಿಂದಲೇ ಈ ಜಗತ್ತಿನ ಭವಿಷ್ಯ ಕಲ್ಯಾಣವನ್ನು ಸಾಧಿಸಬೇಕಾಗಿದೆ. ಈ ತಿಳಿವಳಿಕೆಯು ಜನರಲ್ಲಿ ರೂಢಿಗೆ ಬರಲೆಂಬ ಉದ್ದೇಶದಿಂದಲೇ ಪಂಚಾಯತನ ಪೂಜೆಯು ಬಳಕೆಗೆ ಬಂದುದು. ಆದರಲ್ಲೂ ದೇವೀ ಪಂಚಾಯತನ ಪೂಜಾಕ್ರಮದಿಂದ ಹೆಚ್ಚು ಪ್ರಯೋಜನವು ಸುಲಭವಾಗಿಯೂ ಶೀಘ್ರವಾಗಿಯೂ ಜನರಿಗೆ ದೊರೆಯುತ್ತದೆ. ಇಂತಹ ತಿಳಿವಳಿಕೆಯನ್ನು ಕೊಡುವ ಈ ಪುರಾಣವು ಸಂಸ್ಕೃತವನ್ನು ಬಲ್ಲವರಿಗೂ, ಕನ್ನಡವನ್ನು ಮಾತ್ರ ತಿಳಿದಿರುವವರಿಗೂ, ಪ್ರಯೋಜನಕಾರಿಯಾಗಲೆಂದು ಸಂಸ್ಕೃತಮೂಲ, ಕನ್ನಡ ಅರ್ಥಾನುವಾದ, ವಿವರಣೆಗಳೊಡನೆ ಬರೆದು ಅಚ್ಚುಮಾಡಿಸಿ ಪ್ರಚಾರಮಾಡಬೇಕೆಂದು, ನಮ್ಮನ್ನಾಳುತ್ತಿರುವ ಮಹಾಸ್ವಾಮಿಯವರಾದ **ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್**ರವರ ಆಜ್ಞಾನುಸಾರವಾಗಿ ಈ ಗ್ರಂಥವನ್ನೂ ಪ್ರಕಟಿಸಲಾಗಿದೆ. ಇಂತಹ ಕಾರ್ಯವು ಸಫಲವಾಗುವಂತೆ ಸರ್ವದಾ ನೆರವೇರುತ್ತಿರಲೆಂದು ಜಗನ್ಮಾತಾದೇವಿಯನ್ನು ಪ್ರಾರ್ಥಿಸುತ್ತಿರುತ್ತೇನೆ.

ಸ್ವಭಾನುಸಂವತ್ಸರದ
ಫಾಲ್ಗುಣ ಕೃಷ್ಣ ಪಂಚಮೀ
ಬುಧವಾರ, ೧೫-೩-೧೯೪೪.

**ಎಡತೊರೆ ದೇವಯ್ಯದೀಕ್ಷಿತರ ಮಗ**
**ಚಂದ್ರಶೇಖರಶಾಸ್ತ್ರೀ.**

# ಶ್ರೀದೇವೀಭಾಗವತದ ಆರನೆಯ ಸ್ಕಂಧದ

## ವಿಷಯಸೂಚಿಕೆ

---

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಃ ಸ್ಕಂಧಃ

### || ಪ್ರಥಮೋಽಧ್ಯಾಯಃ ||

### ಮೊದಲನೆಯ ಅಧ್ಯಾಯವು

|| ಋಷಯ ಊಚುಃ ||

**ಸೂತ ಸೂತ ಮಹಾಭಾಗ ಮಿಷ್ಟಂತೇ ವಚನಾಮೃತಂ |**
**ನ ತೃಪ್ತಾಃಸ್ಮೋ ವಯಂ ಪೀತ್ವಾ ದ್ವೈಪಾಯನಕೃತಂ ಶುಭಂ ||೧||**

---

|| ಶ್ರೀ ಗಣೇಶಶಾರದಾಗುರುಭ್ಯೋನಮಃ ||

**ಶುದ್ಧಬ್ರಹ್ಮೈಕತತ್ತ್ವೇ ಪ್ರಥಮಕೃತಪರಿಸ್ಪಂದರೂಪಾಽದಿಶಕ್ತಿಃ |**
**ಸಾಽನಾದಿಃ ಪ್ರಾಣಿಕರ್ಮಪ್ರಕೃತಫಲಸಮಾಧಾನಹೇತೋಃ ಪ್ರವೃತ್ತಾ |**
**ಇಚ್ಛಾಜ್ಞಾನಕ್ರಿಯಾಖ್ಯಾ ಪ್ರಕೃತಿಗತಗುಣೋಪಾಧಿನಾನಾಸ್ವರೂಪಾ |**
**ತನ್ವಾನಾಽಸ್ತೇ ಪ್ರಪಂಚಾನ್ ಸಕಲಚಿದಚಿದಾಕಾರರೂಪಂ ಪ್ರಪನ್ನಾನ್ ||**

ವೇದಾಂತದರ್ಶನವು ಸಕಾರಣವಾಗಿ ತತ್ತ್ವವಿಮರ್ಶೆಯನ್ನು ಮಾಡಿ ಸಿದ್ಧಾಂತವನ್ನು ಹೀಗೆ ವಿವರಿಸುತ್ತದೆ. ಈ ಪ್ರಪಂಚವನ್ನೂ ಅದರಿಂದ ನಮಗೆ ಬರುತ್ತಿರುವ ಅನುಭವಗಳನ್ನೂ ಒಟ್ಟಿನಲ್ಲಿ ಚನ್ನಾಗಿ ಪರಿಶೀಲಿಸಿದರೆ ಇವೆಲ್ಲಕ್ಕೂ ಮೂಲಭೂತವಾದ ತತ್ತ್ವವು ಒಂದೇ ಎಂದೂ, ಆ ತತ್ತ್ವವೇ ಎಲ್ಲವನ್ನೂ ಒಳಗೊಳ್ಳಬಲ್ಲಷ್ಟು ದೊಡ್ಡದಾದ, ಎಲ್ಲಕ್ಕಿಂತಲೂ ಸೂಕ್ಷ್ಮವೂ ಆದ, ಮೇಲಾದ ಮತ್ತು ನಿತ್ಯವಾದ ಕಾರಣವೆಂದು ಗೊತ್ತಾಗುತ್ತದೆ. ಅದಕ್ಕೆ ಪರಬ್ರಹ್ಮವೆಂದು ಹೆಸರು. ಈ ಪ್ರಪಂಚಗಳಲ್ಲಿರುವ ಪ್ರಾಣಿಗಳು, ಅದರಲ್ಲೂ ವಿಶೇಷವಾಗಿ ಮಾನವರು, ನಾನಾ ಬಗೆಯ ಕರ್ಮಗಳನ್ನು ಮಾಡಿಯೂ ಮಾಡುತ್ತಲೂ ಇರುತ್ತಾರೆ. ಆ ಕರ್ಮಗಳಿಗೆ ಫಲಗಳಾದ

ಸುಖದುಃಖಗಳನ್ನು ಒಂದು ವ್ಯವಸ್ಥಿತವಾದ ಕ್ರಮದಲ್ಲಿ ಆ ಪ್ರಾಣಿಗಳು ತಕ್ಕ ದೇಶ ಕಾಲಗಳಲ್ಲಿ ಅನುಭವಿಸುವಂತೆ ಆಗಲೂ ಬೇಕಾದ ಪದಾರ್ಥಗಳನ್ನೂ ಸನ್ನಿವೇಶ ಗಳನ್ನು ಏರ್ಪಡಿಸಲು ಈ ಪ್ರಪಂಚಗಳ ಸೃಷ್ಟಿ-ಸ್ಥಿತಿ-ಲಯಗಳೆಂಬ ವ್ಯವಹಾರವು ಸಾಗುತ್ತಿರಬೇಕಾಗಿದೆ. ಅದಕ್ಕೋಸ್ಕರ ಆ ಬ್ರಹ್ಮತತ್ವದಲ್ಲಿ 'ನಾನು ಬಹುವಾಗ ಬೇಕು. ನಾನು ಈ ಎಲ್ಲವನ್ನೂ ಸೃಷ್ಟಿಸಬೇಕು" ಎಂಬ ಇಚ್ಛಾಜ್ಞಾನಕ್ರಿಯೆಗಳು ಉಂಟಾಗುತ್ತವೆ. ಈ ವೃತ್ತಿಗೇ, ಈ ಪ್ರಥಮಸ್ಪಂದಕ್ಕೇ, ಪ್ರತಿ ಸೃಷ್ಟಿಯ ಪ್ರಾರಂಭ ದಲ್ಲೂ ಉಂಟಾಗುವ ಈ ಮೊದಲಿನ ಪ್ರವೃತ್ತಿಗೇ ಪರಾಶಕ್ತಿ, ಮಹಾಮಾಯಾ, ಮೂಲಾವಿದ್ಯಾ ಎಂದು ಹೆಸರು. ಪ್ರಾಣಿಗಳು ಮಾಡಿರುವ ಕರ್ಮಗಳಲ್ಲಿ ಫಲೋ ನ್ಮುಖವಾಗಿರುವ ಪ್ರಕೃತ ಅಥವಾ ಪ್ರಾರಬ್ಧ ಕರ್ಮಗಳಿಗೆ ಅನುಸಾರವಾಗಿ ಆ ಫಲ ಗಳನ್ನು ಅವರಿಗೆ ಕೊಡಲು ಈ ವೃತ್ತಿಯು ಉಂಟಾಗುತ್ತದೆ. ಇದರ ಪರಿಣಾಮ ರೂಪವಾದ ಈ ಜಗತ್ಸಂಸಾರವು, ಎಂದರೆ ಕರ್ತೃತ್ವ, ಭೋಕ್ತೃತ್ವ, ಜನನ, ಮರಣ ಗಳ ಪ್ರವಾಹಪರಂಪರೆಯು ಅನಾದಿಕಾಲದಿಂದ ಉಂಟಾಗುತ್ತಿರುವುದರಿಂದ ಸೃಷ್ಟಿಗೆ ಮೊಟ್ಟಮೊದಲೆನ್ನುವುದೇ ಇಲ್ಲವು ; ಅಲ್ಲದೆ ಈ ವಿಷಮ ಫಲಗಳನ್ನು ಕೊಡುವ ಶಕ್ತಿಗೆ ವೈಷಮ್ಯ ನೈರ್ಘೃಣ್ಯ ದೋಷಗಳ ಮತ್ತು ಅನವಸ್ಥಾದೋಷದ ಸಂಪರ್ಕವಾಗಲಿ ಇಲ್ಲವು. ಪ್ರಾಣಿಗಳೇ ಅವರವರ ಸುಖದುಃಖ ವೈಚಿತ್ರ್ಯಗಳಿಗೆ ಅವರ ಕರ್ಮ ಗಳಿಂದ ಹೊಣೆಗಾರರಾಗಿರುತ್ತಾರೆ. ಆದರೂ ಇವೆಲ್ಲದರ ವ್ಯವಸ್ಥಾಪಕವಾದ ತತ್ವವೇ ಶಕ್ತಿ, ದೇವೀ ಅಥವಾ ಮಾಯಾವಿಶಿಷ್ಟಬ್ರಹ್ಮತತ್ವವಾಗಿದೆ ಎಂಬುದು ಈ ದೇವೀ ಭಾಗವತದಲ್ಲಿ ಪ್ರತಿಪಾದಿಸಿರುವ ಸಿದ್ಧಾಂತವಾಗಿದೆ.

ಈ ಶಕ್ತಿವಿಶಿಷ್ಟವಾದ ಬ್ರಹ್ಮಕ್ಕೆ ಮಾಯೆಯು ಉಪಾಧಿಯು. ಈ ಮಾಯೆಯು ತ್ರಿಗುಣಾತ್ಮಕವಾದುದು. ಹೀಗೆ ಸೃಷ್ಟಿಗೆ ಉನ್ಮುಖವಾದ, ಇಚ್ಛಾಜ್ಞಾನಕ್ರಿಯಾಶಕ್ತಿ ಎಂಬ ವೃತ್ತಿವಿಶಿಷ್ಟವಾದ ಬ್ರಹ್ಮವೂ, ಸತ್ವರಜಸ್ತಮಸ್ಸೆಂಬ ತ್ರಿಗುಣಾತ್ಮಕವಾದ ಉಪಾಧಿಭೂತವಾದ ಮಾಯೆಯೂ, ಅವಿನಾಭಾವದಿಂದ, ಅಗ್ನಿಯೂ ದಾಹಕ ಶಕ್ತಿಯೂ ಇರುವಂತೆ, ಅಭಿನ್ನತತ್ವಗಳಾಗಿರುತ್ತಾರೆ. ಈ ಗುಣಗಳ ಸಾಮ್ಯಾವಸ್ಥೆಗೆ ಪ್ರಕೃತಿ ಎಂದು ಹೆಸರು. ಸಮುದ್ರದಲ್ಲಿ ಅಲೆಗಳುಂಟಾಗುವಂತೆ, ಶಕ್ತಿವೃತ್ತಿಗಳಿಂದ ಪ್ರಕೃತಿಯ ಗುಣಗಳಲ್ಲಿ ವೈಷಮ್ಯದ ಬದಲಾವಣೆಗಳುಂಟಾಗಿ, ಈ ಪ್ರಪಂಚಗಳ ರೂಪದಲ್ಲಿ ಪರಿಣಾಮಗಳಾಗುತ್ತವೆ. ಈ ಪ್ರವೃತ್ತಿಮಾರ್ಗದಲ್ಲಿ ಕ್ರಮವಾಗಿ ಮಹ ತ್ತತ್ವ, ಅಹಂಕಾರತ್ತತ್ವ, ಮನಸ್, ಬುದ್ಧಿ, ಆಕಾಶ, ವಾಯು, ತೇಜಸ್ಸು, ಜಲ, ಪೃಥಿವೀ ಎಂಬ ಪಂಚಭೂತಗಳ ತನ್ಮಾತ್ರೆಗಳು, ಜ್ಞಾನೇಂದ್ರಿಯ ಪಂಚಕ, ಪ್ರಾಣ

ಪಂಚಕ, ಕರ್ಮೇಂದ್ರಿಯ ಪಂಚಕಗಳೂ, ಸ್ಥೂಲಮಹಾಭೂತಗಳೂ, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ವಿಷಯಗಳೂ ಹೊರಹೊಮ್ಮಿದಂತೆ ತೋರುತ್ತವೆ. ಪಂಚಪ್ರಾಣ, ದಶೇಂದ್ರಿಯ, ಮನೋಬುದ್ಧಿಗಳಿಂದ ಸೂಕ್ಷ್ಮಶರೀರಗಳು ಏರ್ಪಡುತ್ತವೆ. ಈ ಸೂಕ್ಷ್ಮಶರೀರಗಳಲ್ಲಿಯೂ ಪ್ರಪಂಚದಲ್ಲಿಯೂ 'ನಾನು, ನನ್ನದು,' ಎಂಬ ಅಭಿಮಾನದಿಂದ ಜೀವರು ಏರ್ಪಡುತ್ತಾರೆ. ಹೀಗೆ ಜೀವರೆಂಬ ಚಿತ್ತತ್ವಗಳಿಂದಲೂ, ಜಡವಸ್ತುಶರೀರಗಳೆಂಬ ಅಚಿತ್ತತ್ವಗಳಿಂದಲೂ ಕೂಡಿದ ಈ ಪ್ರಪಂಚಗಳು ಈ ಮಾಯಾಶಕ್ತಿಯಿಂದ ಪರಿಣಮಿಸುತ್ತವೆ. ಇವೆಲ್ಲಕ್ಕೂ ಮೂಲಕಾರಣಳೂ ಪರಾಶಕ್ತಿಸ್ವರೂಪಳೂ ಆದ ದೇವಿಯು ಬ್ರಹ್ಮ, ವಿಷ್ಣು, ರುದ್ರರೆಂಬ ತ್ರಿಮೂರ್ತಿಗಳಿಗೂ ಅವರ ಶಕ್ತಿಗಳಾದ ವಾಣೀ, ಲಕ್ಷ್ಮೀ, ಉಮಾದೇವಿಯರಿಗೂ ಕಾರಣಳಾಗಿರುತ್ತಾ ಮುಖ್ಯ ಸೃಷ್ಟಿಯು ನೆರವೇರಲು, ಬ್ರಹ್ಮ ಮತ್ತು ಅವನ ಮಾನಸಪುತ್ರರೇ ಮುಂತಾದ ಅಧಿಕಾರಿಕದೇವತೆಗಳಿಂದ ಅನುಸೃಷ್ಟಿಗಳೂ ಮುಂದುವರಿಯುತ್ತವೆ.

ಹೀಗಿರುವಲ್ಲಿ ಸಕಾಮುಕರ್ಮಾಚರಣೆಯಲ್ಲಿ ಆಸಕ್ತರಾದ ಜೀವರಿಗೆ ಸಾಂಸಾರಿಕವಾದ ವ್ಯಾವಹಾರಿಕವಾದ ಸುಖದುಃಖಗಳನ್ನೂ, ವಿವೇಕವೈರಾಗ್ಯಗಳನ್ನು ಸಂಪಾದಿಸಿ ನಿಷ್ಕಾಮುಕರ್ಮಾಚರಣೆಯಲ್ಲಿ ಆಸಕ್ತರಾಗಿರುವ ಜೀವರಿಗೆ ಚಿತ್ತಶುದ್ಧಿ ಜ್ಞಾನಪ್ರಾಪ್ತಿಯ ಮೂಲಕ ಮೋಕ್ಷವೆಂದರೆ ಈ ಸಂಸಾರ ನಿರ್ಬಂಧ ದುಃಖದಿಂದ ಬಿಡುಗಡೆ ಎಂಬ ನಿತ್ಯಾನಂದಾನುಭವವನ್ನೂ, ದೇವಿಯೇ ಅನುಗ್ರಹಿಸುತ್ತಾಳೆ. ಇಂತಹ ದೇವಿಯು ಎಲ್ಲರಿಗೂ ಕಲ್ಯಾಣಗಳನ್ನು ಅನುಗ್ರಹಿಸುತ್ತಿರಲಿ.

ನೈಮಿಶಾರಣ್ಯದಲ್ಲಿ ವಾಸಮಾಡುತ್ತಿರುವ ಋಷಿಗಳು ಸೂತಪುರಾಣೀಕನ ವಿಷಯದಲ್ಲಿ ತಮಗೆ ಇರುವ ಆದರವನ್ನು ತೋರಿಸುವುದಕ್ಕಾಗಿ ಸೂತ, ಸೂತ ಎಂಬುದಾಗಿ ಎರಡಾವೃತ್ತಿ ಸಂಬೋಧಿಸಿರುವರು.

೭. ಸೂತಪುರಾಣೀಕನೇ, ಅದೃಷ್ಟಶಾಲಿಯಾದವನೇ, ನಾವು ವ್ಯಾಸಋಷಿಯಿಂದ ರಚಿತವಾದ ಮಂಗಳಕರವಾದ, ನಮಗೆ ತುಂಬ ಹಿತಕರವಾಗಿರುವ, ನೀನು ಇದುವರೆಗೂ ಹೇಳಿರುವ ದೇವಿಯ ಮಹಾತ್ಮ್ಯೆಯನ್ನು ತಿಳಿಸುವ ಕಥೆಯಿಂದ ಕೂಡಿರುವ, ಅಮೃತದಂತಿರುವ ನಿನ್ನ ಮಾತುಗಳನ್ನು ಕೇಳಿದೆವು. ಅವುಗಳನ್ನು ಎಷ್ಟು ಕೇಳಿದಾಗ್ಯೂ ನಮಗೆ ತೃಪ್ತಿಯೇ ಉಂಟಾಗಿರುವುದಿಲ್ಲವು. ಇನ್ನೂ ಕೇಳಬೇಕೆಂಬ ಆಸೆಯೇ ಹೆಚ್ಚಾಗುತ್ತಿದೆ !

ಪುನಸ್ತ್ವಾಂ ಪ್ರಷ್ಟು ಮಿಚ್ಛಾಮಃ ಕಥಾಂ ಪೌರಾಣಿಕೀಂ ಶುಭಾಂ ।
ವೇದೇಽಪಿ ಕಥಿತಾಂ ರಮ್ಯಾಂ ಪ್ರಸಿದ್ಧಾಂ ಪಾಪನಾಶಿನೀಂ ॥೨॥

ವೃತ್ರಾಸುರ ಇತಿಖ್ಯಾತೋ ವೀರ್ಯವಾಂಸ್ತ್ವಷ್ಟುರಾತ್ಮಜಃ ।
ಸ ಕಥಂ ನಿಹತಸ್ಸಂಖ್ಯೇ ವಾಸವೇನ ಮಹಾತ್ಮನಾ ॥೩॥

ತ್ವಷ್ಟಾ ವೈ ಸುರಪಕ್ಷೀಯಸ್ತತ್ಪುತ್ರೋ ಬಲವತ್ತರಃ ।
ಶಕ್ರೇಣ ಘಾತಿತಃ ಕಸ್ಮಾತ್ ಬ್ರಹ್ಮಯೋನಿರ್ಮಹಾಬಲಃ ॥೪॥

ದೇವಾಸ್ಸತ್ವಗುಣೋತ್ಪನ್ನಾ ಮಾನುಷಾ ರಾಜಸಾಃ ಸ್ಮೃತಾಃ ।
ತಿರ್ಯಞ್ಚಸ್ತಾಮಸಾಃ ಪ್ರೋಕ್ತಾಃ ಪುರಾಣಾಗಮವಾದಿಭಿಃ ॥೫॥

---

ಹೀಗೆಯೇ ನೀನು ಹೇಳುವ ಕಥೆಯನ್ನು ಕೇಳುತ್ತಿರಬೇಕೆಂಬ ಇಚ್ಛೆಯು ನಮಗೆ ಬಹಳವಾಗಿರುವುದರಿಂದ, ವೇದದಲ್ಲಿ ಹೇಳಲ್ಪಟ್ಟಿರುವ, ಮನೋಹರವಾದ, ಪುರಾಣಗಳಲ್ಲಿಯೂ ಪ್ರಸಿದ್ಧವಾದ, ಮಂಗಳಕರವಾದ, ಪಾಪವನ್ನು ನಾಶಪಡಿಸುವುದಾದ, ಕಥೆಯನ್ನು ಹೇಳುವುದಕ್ಕಾಗಿ ನಾವು ನಿನ್ನನ್ನು ಪುನಃ ಪ್ರಶ್ನೆ ಮಾಡಲು ಆಶಿಸಿರುವೆವು. ||೨||

ತ್ವಷ್ಟೃಬ್ರಹ್ಮನ ಮಗನಾದ ಬಹಳ ಬಲಿಷ್ಠನಾದ ಆ ವೃತ್ರಾಸುರನೆಂಬವನು ಮಹಿಮೆಯುಳ್ಳ, ಆ ಇಂದ್ರನಿಂದ ಯುದ್ಧದಲ್ಲಿ ಯಾವ ಪ್ರಕಾರದಿಂದ ಏಕೆ ಕೊಲ್ಲಲ್ಪಟ್ಟನು ? ||೩||

ಅಲ್ಲದೆ ತ್ವಷ್ಟೃಬ್ರಹ್ಮನು, ದೇವತೆಗಳ ಪಕ್ಷಕ್ಕೆ ಸೇರಿದವನು. ಅವನ ಮಗನೂ ಬಲವುಳ್ಳವನು. ಅಷ್ಟುಮಟ್ಟಿನ ಬಲದಿಂದ ಕೂಡಿದವನಾಗಿ, ಬ್ರಾಹ್ಮಣನಾಗಿರುವ ತ್ವಷ್ಟೃಬ್ರಹ್ಮನ ಮಗನನ್ನು ಇಂದ್ರನು ಕೊಲ್ಲಲು ಕಾರಣವೇನು ? ||೪||

ಪುರಾಣವನ್ನೂ ಶಾಸ್ತ್ರಗಳನ್ನೂ ಸಹ ಓದುವವರು ಮತ್ತು ತಿಳಿದವರು ದೇವತೆಗಳನ್ನು ಸತ್ತ್ವಗುಣದಿಂದ ಕೂಡಿರುವುದರಿಂದ ಸಾತ್ವಿಕರೆಂಬದಾಗಿ ಕರೆಯುವರು. ಮನುಷ್ಯರನ್ನು ರಜೋಗುಣದಿಂದ ಕೂಡಿರುವ ಕಾರಣ ರಾಜಸರೆಂಬದಾಗಿಯೂ, ತಿರ್ಯಕ್ ಪ್ರಾಣಿಗಳನ್ನು ತಮೋಗುಣದಿಂದ ಕೂಡಿರುವುದರಿಂದ ತಾಮಸರೆಂಬದಾಗಿಯೂ ಹೇಳುವರು. ||೫||

**ವಿರೋಧೋತ್ರ ಮಹಾನ್ ಭಾತಿ ನೂನಂ ಶತಮಖೇನ ಹ ।**
**ಛಲೇನ ಬಲವಾನ್ ವೃತ್ರಃ ಶಕ್ರೇಣ ವಿನಿಪಾತಿತಃ ॥೬॥**

**ವಿಷ್ಣುಃ ಪ್ರೇರಯಿತಾ ತತ್ರ ಸ ತು ಸತ್ತ್ವಧರಃ ಪರಃ ।**
**ಪ್ರವಿಷ್ಟಃ ಪವಿಮಧ್ಯೇ ಸ ಛದ್ಮನಾ ಭಗವಾನ್ ಪ್ರಭುಃ ॥೭॥**

**ಸಂಧಿಂ ವಿಧಾಯ ಸಹ್ಯೇವಂ ಮನ್ತ್ರಿತೋಽಸೌ ಮಹಾಬಲಃ ।**
**ಹರಿಭ್ಯಾಂ ಸತ್ಯಮುತ್ಸೃಜ್ಯ ಜಲಫೇನೇನ ಶಾತಿತಃ ॥೮॥**

---

ಸಾತ್ವಿಕರಾಗಿರುವ ದೇವತೆಗಳಿಗೆ ಮುಖ್ಯನಾದ, ನೂರು ಯಜ್ಞಗಳನ್ನು ಮಾಡಿದವನಾದ ಇಂದ್ರನು ಬ್ರಾಹ್ಮಣನಾಗಿಯೂ, ತುಂಬ ಬಲಿಷ್ಠನಾಗಿಯೂ ಇದ್ದ ವೃತ್ರಾಸುರನನ್ನು ಮೋಸದಿಂದ ಕೊಂದನೆಂಬುದು ಸಾತ್ವಿಕನಾದ ಇಂದ್ರನ ವಿಷಯದಲ್ಲಿ ಒಪ್ಪುವ ಮಾತಾಗಿರಲಾರದು. ರಜೋಗುಣವು ಇರುವ ಕಡೆಯಲ್ಲಿ ಮೋಸದ ಕೆಲಸವು ನಡೆಯುವುದು ಸ್ವಾಭಾವಿಕವಾಗಿ ಇರುವುದು. ಸಾತ್ವಿಕನು ಹೀಗೆ ಮೋಸ ಮಾಡಿದನೆಂಬುದು ದೊಡ್ಡ ವಿರೋಧವಾಗಿರುವುದು. ॥೬॥

ವಿಷ್ಣುವು ವೃತ್ರಾಸುರನನ್ನು ಸಂಹಾರ ಮಾಡಲು ಇಂದ್ರನನ್ನು ಪ್ರೇರಿಸಿದನು, ಮತ್ತು ಆ ವಿಷ್ಣುವೇ ಕಪಟವೇಷವನ್ನು ಹಾಕಿಕೊಂಡು ವಜ್ರಾಯುಧದ ಮಧ್ಯ ಭಾಗಕ್ಕೆ ಸೇರಿದ್ದನು. ವಿಷ್ಣುವಾದರೋ ಸತ್ತ್ವಗುಣವುಳ್ಳವರಿಗೆಲ್ಲರಿಗೂ ಉತ್ತಮನಾದವನು. ಆದರೂ ವೃತ್ರಾಸುರನನ್ನು ಮೋಸದಿಂದ ಹೀಗೆ ಕೊಂದಿರುವುದು ತುಂಬ ಧರ್ಮವಿರುದ್ಧವಾದ ಕಾರ್ಯವಾಗಿರುವುದು. ॥೭॥

ತುಂಬ ಬಲಿಷ್ಠನಾದ ವೃತ್ರಾಸುರನೊಡನೆ ಇಂದ್ರನೂ, ವಿಷ್ಣುವೂ ಸಹ ನಿನ್ನನ್ನು ಕೊಲ್ಲುವುದಿಲ್ಲವೆಂದು ಮೊದಲು ಮಂತ್ರಾಲೋಚನೆಯನ್ನು ಮಾಡಿ ಸಂಧಿಯನ್ನು ಮಾಡಿಕೊಂಡರು. ಹೀಗೆ ಸ್ನೇಹವನ್ನು ಮಾಡಿಕೊಂಡಾಗ್ಯೂ ಇವರಿಬ್ಬರೂ ಅವನೊಡನೆ ಮಾಡಿಕೊಂಡ ಒಪ್ಪಿಗೆಯ ಪ್ರಕಾರ ನಡೆಯದೇ, ತಮ್ಮ ಸತ್ಯವಾಕ್ಯವನ್ನು ಬಿಟ್ಟು ವೃತ್ರಾಸುರನನ್ನು ನಿಗ್ರಹಮಾಡಲು ಪ್ರಯತ್ನಪಟ್ಟವರಾಗಿ ನೀರಿನ ನೊರೆಯರಾಶಿಯನ್ನು ಮಾಡಿ ತೆಗೆದಿಟ್ಟುಕೊಂಡು, ಅದರಿಂದ ಆ ವೃತ್ರಾಸುರನನ್ನು ಅನುಚಿತವಾಗಿ ಕೊಂದರು. ॥೮॥

**ಕೃತಮಿಂದ್ರೇಣ ಹರಿಣಾ ಕಿಮೇತತ್ ಸೂತಸಾಹಸಂ ।**
**ಮಹಾಂತೋಽಪಿ ಚ ಮೋಹೇನ ವಂಚಿತಾಃ ಪಾಪಬುದ್ಧಯಃ ॥೯॥**

**ಅನ್ಯಾಯವರ್ತಿನೋಽತ್ಯರ್ಥಂ ಭವನ್ತಿ ಸುರಸತ್ತಮಾಃ ।**
**ಸದಾಚಾರೇಣ ಯುಕ್ತೇನ ದೇವಾಃ ಶಿಷ್ಟತ್ವಮಾಗತಾಃ ॥೧೦॥**

**ಏವಂ ವಿಶಿಷ್ಟಧರ್ಮೇಣ ಶಿಷ್ಟತ್ವಂ ಕೀದೃಶಂ ಪುನಃ ।**
**ಹತ್ವಾ ವೃತ್ರಂ ತು ವಿಶ್ವಸ್ತಂ ಶಕ್ರೇಣ ಛದ್ಮನಾ ಪುನಃ ॥೧೧॥**

**ಪ್ರಾಪ್ತಂ ಪಾಪಫಲಂ ನೋವಾ ಬ್ರಹ್ಮಹತ್ಯಾಸಮುದ್ಭವಂ ।**
**ಕಿಂ ಚ ತ್ವಯಾ ಪುರಾ ಪ್ರೋಕ್ತಂ ವೃತ್ರಾಸುರವಧಃ ಕೃತಃ ॥೧೨॥**

**ಶ್ರೀ ದೇವ್ಯಾ ಇತಿ ತಚ್ಚಾಪಿ ಚಿತ್ತಂ ಮೋಹಯತೀಹ ನಃ ।**

---

ಓ ಸೂತಪುರಾಣಿಕನೇ, ಇಂದ್ರನೂ ವಿಷ್ಣುವೂ ಕೂಡ, ವೃತ್ರಾಸುರನನ್ನು ಕೊಲ್ಲಲು ಹೀಗೆ ಸಾಹಸವನ್ನು ಏತಕ್ಕೆ ಮಾಡಿದರು? ದೊಡ್ಡವರೂ ಕೂಡ ಅಜ್ಞಾನ ದಿಂದ ಮೋಸಹೋದವರಾಗಿ ಕೆಟ್ಟಬುದ್ಧಿಯುಳ್ಳವರಾಗಿ ಇತರರನ್ನು ಮೋಸಮಾಡಿದ ರಲ್ಲವೇ? ॥೯॥

ಹಿಂದೆ ಹೇಳಿದ ರೀತಿಯಿಂದ ದೇವತೆಗಳಲ್ಲಿ ಶ್ರೇಷ್ಠರಾದವರೂ ಕೂಡ ಬಹಳ ಮಟ್ಟಿನ ಅನ್ಯಾಯವಲ್ಲಿ ನಡೆಯುವವರೆಂಬುದು ಸ್ಪಷ್ಟವಾಗಿರುವುದು. ಆದರೂ ದೇವತೆ ಗಳೆಂದರೆ ಯಾವಾಗಲೂ ಒಳ್ಳೆಯ ಆಚಾರವುಳ್ಳವರಾಗಿರುವುದರಿಂದ ಶಿಷ್ಟರೆಂತಲೂ ಸಾಧುಗಳೆಂತಲೂ ಪ್ರಸಿದ್ಧಿಯನ್ನು ಹೊಂದಿರುವರು! ॥೧೦॥

ವೃತ್ರಾಸುರನನ್ನು ಕೊಲ್ಲುವುದಿಲ್ಲವೆಂದು ನಂಬಿಕೊಂಡಿದ್ದವನನ್ನು ಮೋಸ ದಿಂದ ಕೊಂದ ಇಂದ್ರನೇ ಮೊದಲಾದ ದೇವತೆಗಳಿಗೆ ಶಿಷ್ಟರೆಂಬ ಹೆಸರು ಯಾವ ರೀತಿಯಿಂದ ಸಲ್ಲುವುದು? ಮತ್ತು ಬ್ರಾಹ್ಮಣನಾದ ಅವನನ್ನು ಕೊಂದುದರಿಂದ ಬ್ರಹ್ಮಹತ್ಯೆಯು ಉಂಟೇ? ಇಲ್ಲವೇ? ಮತ್ತು ಬ್ರಹ್ಮಹತ್ಯೆಯಿಂದುಂಟಾದ ಪಾಪ ಫಲವು ಇಂದ್ರನಿಗೆ ಉಂಟೇ? ಇಲ್ಲವೇ? ಇದನ್ನು ಹೇಳು. ॥೧೧॥

ಮತ್ತು ನೀನು ನಾಲ್ಕನೆಯ ಸ್ಕಂಧದಲ್ಲಿ ಶ್ರೀದೇವಿಯು ವೃತ್ರಾಸುರನನ್ನು ಸಂಹರಿಸಿದಳು ಎಂದು ಹೇಳಿರುತ್ತೀಯೆ. ಇಲ್ಲಿಯೂ ಇತರ ಪುರಾಣಗಳಲ್ಲಿಯೂ ಸಹ ಇಂದ್ರನು ವೃತ್ರಾಸುರನನ್ನು ಸಂಹಾರಮಾಡಿದನೆಂದು ಪ್ರಸಿದ್ಧಿಯಾಗಿರುವುದು,

॥ ಸೂತ ಉವಾಚ ॥

**ಶೃಣ್ವಂತು ಮುನಯೋ ವೃತ್ತಂ ವೃತ್ರಾಸುರವಧಾಶ್ರಯಂ ॥೧೩॥**

**ಯಥೇಂದ್ರೇಣ ಚ ಸಂಪ್ರಾಪ್ತಂ ದುಃಖಂ ಹತ್ವಾ ಸಮುದ್ಭವಮ್ ।**
**ಏವಮೇವ ಪುರಾ ಪೃಷ್ಟೋ ವ್ಯಾಸಃ ಸತ್ಯವತೀಸುತಃ ॥೧೪॥**

**ಪಾರಿಕ್ಷಿತೇನ ರಾಜ್ಞಾಽಽಹಿ ಸ ಯದಾಹ ಚ ತದ್ಬ್ರುವೇ ।**

॥ ಜನಮೇಜಯ ಉವಾಚ ॥

**ಕಥಂ ವೃತ್ರಾಸುರಃ ಪೂರ್ವಂ ಹತೋ ಮಘವತಾ ಮುನೇ ॥೧೫॥**

**ಸಹಾಯಂ ವಿಷ್ಣುಮಾಸಾದ್ಯ ಛದ್ಮನಾ ಸಾತ್ವಿಕೇನ ಹ ।**
**ಕಥಂ ಚ ದೇವ್ಯಾ ನಿಹತೋ ದೈತ್ಯೋಽಸೌ ಕೇನ ಹೇತುನಾ ॥೧೬॥**

**ಕಥಮೇಕ ವಧೋ ದ್ವಾಭ್ಯಾಂ ಕೃತಸ್ಸ್ಯಾನ್ಮುನಿಪುಂಗವ ।**
**ತದೇತತ್ ಶ್ರೋತುಮಿಚ್ಛಾಮಿ ಪರಂ ಕೌತೂಹಲಂ ಹಿ ಮೇ ॥೧೭॥**

---

ಆದುದರಿಂದ ನಮ್ಮ ಮನಸ್ಸಿಗೆ ಬಂದಿರುವ ಈ ಸಂಶಯವನ್ನು ನೀನು ಪರಿಹರಿಸತಕ್ಕದ್ದುಯುಕ್ತವು. ॥೧೨॥

ಸೂತಪುರಾಣಿಕನು ಹೇಳಿದನು—ಓ ಮುನಿಗಳೇ ಕೇಳಿರಿ, ವೃತ್ರಾಸುರನ ವಧೆಯ ವಿಷಯವಾಗಿ ನಡೆದಿರುವ ಕಥೆಯನ್ನು ಹೇಳುವೆನು. ಇಂದ್ರನೂ ಕೂಡ ವೃತ್ರಾಸುರನನ್ನು ಕೊಂದುದರಿಂದ ಉಂಟಾದ ದುಃಖವನ್ನು ಅನುಭವಿಸಿದ ಕಥೆಯನ್ನು ಸಹ ಹೇಳುವೆನು. ಪೂರ್ವದಲ್ಲಿ ಸತ್ಯವತೀದೇವಿಗೆ ಮಗನಾದ ವ್ಯಾಸಋಷಿಯನ್ನು ಕುರಿತು ಪರೀಕ್ಷಿದ್ರಾಜನ ಮಗನಾದ ಜನಮೇಜಯರಾಜನು ಈ ವಿಷಯವನ್ನು ಪ್ರಶ್ನೆಮಾಡಲು ವ್ಯಾಸಋಷಿಯು ಅವನಿಗೆ ಹೇಳಿರುವುದನ್ನು ನಿಮಗೆ ನಾನು ವಿಸ್ತಾರವಾಗಿ ಹೇಳುವೆನು. ॥೧೩-೧೪॥

ಜನಮೇಜಯ ರಾಜನು ಕೇಳಿದನು—ಓ ವ್ಯಾಸಋಷಿಯೇ, ಸಾತ್ವಿಕನಾದ ಇಂದ್ರನಿಂದ ವೃತ್ರಾಸುರನು ಪೂರ್ವದಲ್ಲಿ ವಿಷ್ಣುವಿನ ಸಹಾಯವನ್ನು ಹೊಂದಿ ಮೋಸದಿಂದ ಹೇಗೆ ಕೊಲ್ಲಲ್ಪಟ್ಟನು? ಈ ವೃತ್ರಾಸುರನು ಯಾವ ಕಾರಣದಿಂದ ದೇವಿಯಿಂದಲೂ ವಧೆಮಾಡಲ್ಪಟ್ಟನು? ಓ ಋಷಿಶ್ರೇಷ್ಠನೇ, ಒಬ್ಬನ ವಧೆಯನ್ನು ಇಬ್ಬರೂ ಮಾಡಿದರೆ? ಅಥವಾ ಒಬ್ಬರೇ ಮಾಡಿದರೇ? ಲೋಕದಲ್ಲಿ ಒಬ್ಬನನ್ನು

**ಮಹತಾಂ ಚರಿತಂ ಶೃಣ್ವನ್ ಕೋ ವಿರಜ್ಯೇತ ಮಾನವಃ ।**
**ಕಥಯಾಂಬಾವೈಭವಂ ತ್ವಂ ವೃತ್ರಾಸುರ ವಧಾಶ್ರಿತಂ ॥೧೮॥**

॥ ವ್ಯಾಸ ಉವಾಚ ॥

**ಧನ್ಯೋಽಸಿ ರಾಜನ್ ತವ ಬುದ್ಧಿರೀದೃಶೀ**
**ಜಾತಾಪುರಾಣ ಶ್ರವಣೇಽತಿ ಸಾದರಾ ।**
**ಪೀತ್ವಾಽಮೃತಂ ದೇವವರಾಸ್ತು ಸರ್ವಥಾ**
**ಪಾನೇ ವಿತೃಷ್ಣಾಃ ಪ್ರಭವನ್ತಿ ವೈ ಪುನಃ ॥೧೯॥**

---

ಒಬ್ಬನೇ ಕೊಲ್ಲಬೇಕೆಂದು ನಿಯಮವಿಲ್ಲವೇ? ಇಬ್ಬರಾದರೂ ಕೊಲ್ಲಬಹುದೇ? ಪ್ರಕೃತದಲ್ಲಿ ದೇವಿಯಾಗಲಿ, ಇಂದ್ರನಾಗಲಿ, ಇಬ್ಬರೂ ಸಮರ್ಥರಾದವರೇ ಹೊರತು ಅಸಮರ್ಥರಲ್ಲ. ವೇದದಲ್ಲಿ ಇಂದ್ರನು ವೃತ್ರಾಸುರನನ್ನು ಕೊಂದನೆಂದು ಪ್ರಸಿದ್ಧಿಯಾಗಿರುವುದು. ಪುರಾಣದಲ್ಲಿ ದೇವಿಯು ವೃತ್ರಾಸುರನನ್ನು ನಿಗ್ರಹಿಸಿದಳೆಂದು ವರ್ಣಿತವಾಗಿರುವುದು. ಆದುದರಿಂದ ಈ ವಿಷಯದಲ್ಲಿ ಆಶ್ಚರ್ಯವುಂಟಾಗಿರುವುದು! ನೀನು ನನಗೆ ಈಗ ಉಂಟಾಗಿರುವ ಕುತೂಹಲವನ್ನು ನಾಶಮಾಡುವ ಉತ್ತರವನ್ನು ಹೇಳಬಲ್ಲೆಯಾದುದರಿಂದ ಅದನ್ನು ಕೇಳಲು ಇಚ್ಛೆಯುಳ್ಳವನಾಗಿರುತ್ತೇನೆ. ॥೧೫-೧೬-೧೭॥

ಮನುಷ್ಯನು ಯಾವನೇ ಅಗಲಿ ದೊಡ್ಡವರ ಚರಿತ್ರೆಯನ್ನು ಕೇಳುತ್ತಾ ವೈರಾಗ್ಯವನ್ನು ಹೊಂದುವನು? ಎಂದರೆ ಕಥೆಯನ್ನು ಕೇಳುತ್ತಾ ತೃಪ್ತಿಯು ಯಾರಿಗೂ ಉಂಟಾಗುವುದಿಲ್ಲವು. ಆದ್ದರಿಂದ ನೀನು ವೃತ್ರಾಸುರನ ಸಂಹಾರಕ್ಕೆ ಸಂಬಂಧಿಸಿರುವ ಜಗನ್ಮಾತೆಯ ಮಹಿಮೆಯ ಕಥೆಯನ್ನು ಹೇಳು—ಎಂದು ಜನಮೇಜಯರಾಯನು ಪ್ರಶ್ನೆ ಮಾಡಿದನು. ॥೧೮॥

ವ್ಯಾಸಋಷಿಯು ಹೇಳಿದನು—ಎಲೈ ಜನಮೇಜಯರಾಜನೇ ಕೇಳು—ದೇವತೆಗಳೆಲ್ಲರೂ ಅಮೃತವನ್ನು ಕುಡಿದು ಆ ಅಮೃತದ ರುಚಿಯನ್ನು ಬಲ್ಲವರಾದ ಕಾರಣ ಪುನಃ ಅಮೃತವನ್ನು ಪಾನಮಾಡುವುದರಲ್ಲಿಯೂ ಆಸೆಯಿಲ್ಲದವರಾಗುವರು. ನೀನಾದರೋ ದೇವಿಯ ಮಹಿಮೆಯನ್ನು ಹೇಳುವ ಪುರಾಣವನ್ನು ಕೇಳಿಯೂ ಕೂಡ ಪುನಃ ಆ ದೇವಿಯ ಚರಿತ್ರೆಯನ್ನು ಕೇಳುವ ವಿಷಯದಲ್ಲಿ ವಿಶ್ವಾಸದಿಂದ ಕೂಡಿರುತ್ತಾ, ಹೀಗೆ ಪ್ರಶ್ನೆಯನ್ನು ಮಾಡುವ ಬುದ್ಧಿಯುಳ್ಳವನಾಗಿರುತ್ತೀಯೆ. ಆದುದರಿಂದ ನೀನೇ ಧನ್ಯನಾದವನು! ॥೧೯॥

ದಿನೇ ದಿನೇ ತೇऽಧಿಕ ಭಕ್ತಿಭಾವಃ
ಕಥಾಸುರಾಜನ್ ಮಹನೀಯ ಕೀರ್ತೇಃ ।
ಶ್ರೋತಾ ಯದೈಕಪ್ರವಣಃ ಶೃಣೋತಿ
ವಕ್ತಾ ತದಾ ಪ್ರೀತಮನಾ ಬ್ರವೀತಿ ॥೨೦॥

ಯುದ್ಧಂ ಪುರಾ ವಾಸವವೃತ್ರಯೋರ್ಯ
ದ್ವೇದೇ ಪ್ರಸಿದ್ಧಂ ಚ ತಥಾ ಪುರಾಣೇ ।
ದುಃಖಂ ಸುರೇಂದ್ರೇಣ ತಥೈವ ಲಬ್ಧಂ
ಹತ್ವಾ ರಿಪುಂ ತ್ವಾಷ್ಟ್ರಮಪಾಪಮೇವ ॥೨೧॥

ಚಿತ್ರಂ ಕಿಮತ್ರ ನೃಪತೇ ಪರಿವಜ್ರಭೃದ್ಭ್ಯಾಂ
ಯಚ್ಛದ್ಮನಾ ವಿನಿಹತಸ್ತ್ರಿಶಿರೋऽಥವೃತ್ರಃ ।

---

ಎಲೈ ರಾಜನೇ, ಮನ್ನಿಸಲು ಯೋಗ್ಯವಾದ ಕೀರ್ತಿಯುಳ್ಳ ದೇವಿಯ ಚರಿತ್ರೆಯನ್ನು ಕೇಳುವ ವಿಷಯದಲ್ಲಿ ನಿನಗೆ ಭಕ್ತಿಯು ಪ್ರತಿದಿನದಲ್ಲಿಯೂ ಹೆಚ್ಚುತ್ತಲಿದೆ. ದೇವಿಯ ಕಥೆಯನ್ನು ಕೇಳುವವನು ಯಾವಾಗ ಚಿತ್ತೈಕಾಗ್ರ್ಯದಿಂದ, ಭಕ್ತಿಯಿಂದ ಕೇಳುವನೋ ಆಗ ಹೇಳುವವನೂ ಕೂಡ ಸಂತೋಷದಿಂದ ವಿಸ್ತಾರವಾಗಿ ಹೇಳುವನು. ನೀನು ದೇವಿಯ ಚರಿತ್ರೆಯನ್ನು ಕೇಳಲು ಇಷ್ಟು ಆದರದಿಂದ ಕೂಡಿರುವ ಕಾಲದಲ್ಲಿ ನಾನು ಸಂತೋಷವಾಗಿ ಈ ಚರಿತ್ರೆಯನ್ನು ವಿಸ್ತಾರವಾಗಿ ನಿನಗೆ ಹೇಳುವೆನು. ॥೨೦॥

ಬಹ್ವೃಚ ಬ್ರಾಹ್ಮಣದಲ್ಲಿ ಪ್ರಸಿದ್ಧವಾಗಿರುವ ವೃತ್ರಾಸುರ ಮತ್ತು ಇಂದ್ರ ಇವರ ಯುದ್ಧವು ಪುರಾಣದಲ್ಲಿಯೂ ಸಹ ಹೇಳಲ್ಪಟ್ಟಿರುವುದು. ತ್ವಷ್ಟೃಬ್ರಹ್ಮನ ಮಗನನ್ನು ಯಾವ ವಿಧವಾದ ಪಾಪಕರ್ಮವಿಲ್ಲದವನಾದರೂ ಇಂದ್ರನು ಶತ್ರುವನ್ನಾಗಿ ತಿಳಿದು ಅಶಕ್ಯವಾದ ಕೆಲಸವಾದರೂ ಹಿಂತೆಗೆಯದೆ ಅವನನ್ನು ಹೇಗೆ ಕೊಂದನೋ ಹಾಗೆಯೇ, ಅವನಿಗೆ ಆ ಕೊಲೆಯಿಂದ ಉಂಟಾದ ಬ್ರಹ್ಮಹತ್ಯೆಯ ಪಾಪವೂ ದುಃಖವೂ ಪ್ರಾಪ್ತವಾಯಿತು. ॥೨೧॥

ಮುನಿಗಳೂ ಕೂಡ ಶರೀರಸಂಬಂಧವಾದ ದುಃಖವನ್ನು ತಾವು ಪ್ರತ್ಯಕ್ಷವಾಗಿ ಅನುಭವಿಸುತ್ತಿದ್ದಾಗ್ಯೂ ಪಾಪದ ಭಯವು ಇದ್ದಾಗ್ಯೂ, ಮಾಯೆಯಿಂದ ಮೋಹಿತರಾಗಿ ನಿಂದ್ಯವಾದ ಕರ್ಮಗಳನ್ನೂ ಕೂಡ ಮಾಡಿದರು. ಹೀಗಿರುವಾಗ

ಮಾಯಾಬಲೇನ ಮುನಯೋಽಪಿ ವಿಮೋಹಿತಾಸ್ತೇ
ಚಕ್ರುಶ್ಚ ನಿಂದ್ಯಮನಿಶಂ ಕಿಲ ಪಾಪಭೀತಾಃ ॥೨೨॥

ವಿಷ್ಣುಃ ಸದೈವ ಕಪಟೇನ ಜಘಾನ ದೈತ್ಯಾನ್
ಸತ್ತ್ವಾತ್ಮಮೂರ್ತಿರಪಿ ಮೋಹಮವಾಪ್ಯ ಕಾಮಮ್ ।
ಕೋಽನ್ಯೋಽಸ್ತಿ ತಾಂ ಭಗವತೀಂ ಮನಸಾಽಪಿ ಜೇತುಂ
ಶಕ್ತಃ ಸಮಸ್ತಜನಮೋಹಕರೀಂ ಭವಾನೀಮ್ ॥೨೩॥

ಮತ್ಸ್ಯಾದಿಯೋನಿಷು ಸಹಸ್ರಯುಗೇಷು ಸದ್ಯಃ
ಸಾಕ್ಷಾದ್ಭವತ್ಯಪಿ ಯಯಾ ವಿನಿಯೋಜಿತೋಽತ್ರ ।

---

ದೇವತೆಗಳು ದುಃಖಸಂಬಂಧವಿಲ್ಲದಿರುವ ಸ್ವರ್ಗಸುಖವನ್ನು ಯಾವಾಗಲೂ ಅನುಭವಿಸುತ್ತಿರುವವರಾಗಿ ಮದಾಂಧರಾಗಿರುವಾಗ ಮಾಯೆಯಿಂದ ಮೋಹಗೊಂಡಿಲ್ಲವೆಂದು ಹೇಗೆ ತಾನೇ ಹೇಳಲಾದೀತು ? ಎಲೈ ಜನಮೇಜಯರಾಜನೇ ಕೇಳು – ಋಷಿಗಳೂ, ದೇವತೆಗಳೂ ಸಹ ಹೀಗೆ ಮಾಯೆಯಿಂದ ಮೋಹಿತರಾಗಿರುವಾಗ, ಇಂದ್ರನೂ ವಿಷ್ಣುವೂ ಇವರಿಬ್ಬರೂ ಮಾಯೆಯಿಂದ ಮೋಸಗೊಳಿಸಲ್ಪಟ್ಟವರಾಗಿ ಬ್ರಾಹ್ಮಣನಾದ ನಿರಪರಾಧಿಯಾದ ತ್ವಷ್ಟೃಪುತ್ರನನ್ನು ವಧೆ ಮಾಡಿದ್ದಲ್ಲದೆ, ವೃತ್ರನೆಂಬ ಅಸುರನನ್ನೂ ಸಹ ಮೋಸದಿಂದ ವಧಿಸಿದರೆಂಬುದು ಆಶ್ಚರ್ಯಕರವಾದುದೇನೂ ಅಲ್ಲವು. ಲೋಕದಲ್ಲಿ ಮಾಯೆಯಿಂದ ಮೋಹಿತರಾಗಿ ಎಲ್ಲರೂ ಪಾಪಕರ್ಮಗಳನ್ನು ಮಾಡಿಯೇ ತೀರುವರು. ॥೨೨॥

ವಿಷ್ಣುವು ಸತ್ತ್ವಗುಣದಿಂದ ಕೂಡಿದವನಾಗಿದ್ದಾಗ್ಯೂ ಯಾವಾಗಲೂ ಮಾಯೆಯ ಮಹಿಮೆಯಿಂದ ಮೋಹಿತನಾಗಿ ಬಹಳಮಟ್ಟಿನ ಮೋಸದಿಂದ ರಾಕ್ಷಸರನ್ನು ನಾಶಪಡಿಸುತ್ತಿರುವನು. ವಿಷ್ಣುವೂ ಕೂಡ ಮಾಯೆಯ ಮೋಹಜಾಲವನ್ನು ಗೆಲ್ಲಲು ಅಶಕ್ತನಾಗಿರುವಾಗ, ಪೂಜ್ಯಳಾಗಿಯೂ ಸಮಸ್ತ ಪ್ರಾಣಿಗಳನ್ನು ಪ್ರತಿಕ್ಷಣದಲ್ಲಿಯೂ ಮೋಸಗೊಳಿಸುತ್ತ ಇರುವ ದೇವಿಯನ್ನು ಮನಸ್ಸಿನಿಂದಲಾದರೂ ಗೆಲ್ಲಲು ಯಾವನು ತಾನೇ ಶಕ್ತನಾಗಿರುವನು ? ॥೨೩॥

ನರನೆಂಬ ಋಷಿಗೆ ಸ್ನೇಹಿತನೂ, ಮಹಾಮಹಿಮನೂ, ನಾಶರಹಿತನೂ, ಆಗಿರುವ ನಾರಾಯಣನೂ ಕೂಡ ಯಾವ ಮಾಯೆಯಿಂದಲೇ ಪ್ರೇರಿಸಲ್ಪಟ್ಟವನಾಗಿ ಅನೇಕ ಯುಗಗಳಲ್ಲಿ ಮತ್ಸ್ಯವೇ ಮೊದಲಾದ ನಾನಾವಿಧವಾದ ಯೋನಿಗಳಲ್ಲಿ

ನಾರಾಯಣೋ ನರಸಖೋ ಭಗವಾನನನ್ತಃ
ಕಾರ್ಯಂ ಕರೋತಿ ವಿಹಿತಾವಿಹಿತಂ ಕದಾಚಿತ್ ॥೨೪॥

ದೇಹಂ ಧನಂ ಗೃಹಮಿದಂ ಸ್ವಜನಾ ಮದೀಯಂ
ಪುತ್ರಾಃ ಕಳತ್ರಮಿತಿ ಮೋಹಮುಪೇತ್ಯ ಸರ್ವಃ ।
ಪುಣ್ಯಂ ಕರೋತ್ಯಥ ಚ ಪಾಪಚಯಂ ಕರೋತಿ
ಮಾಯಾಗುಣೈರತಿಬಲೈರ್ನಿಕಲೀಕೃತೋ ಯತ್ ॥೨೫॥

ನ ಜಾತು ಮೋಹಂ ಕ್ಷಪಿತುಂ ನರಃ ಕ್ಷಮಃ
ಕಶ್ಚಿದ್ಭವೇದ್ಭೂಪ ಪರಾವರಾರ್ಥವಿತ್ ।
ವಿಮೋಹಿತಸ್ತ್ರೈಸ್ತ್ರಿಭಿರೇವ ಮೂಲತೋ
ವಶೀಕೃತಾತ್ಮಾ ಜಗತೀತಲೇ ಭೃಶಂ ॥೨೬॥

---

ಜನ್ಮಗಳನ್ನು ಹೊಂದಿದವನಾಗಿ ಆಯಾಯ ಜನ್ಮಗಳಲ್ಲಿ ಸ್ವಭಾವಸಿದ್ಧವಾಗಿ ಪ್ರಾಪ್ತವಾಗುವ, ಶಾಸ್ತ್ರಗಳಲ್ಲಿ ವಿಹಿತವಾದ ಅಥವಾ ನಿಷಿದ್ಧವಾದ ಕರ್ಮಗಳನ್ನು ಮಾಡಿದನು ಮತ್ತು ಮಾಡುತ್ತಿರುವನು ಎಂಬುದು ಪ್ರಸಿದ್ಧವಾಗಿ ಇರುತ್ತದೆ. ಹೀಗಿರುವಾಗ ಇತರರ ವಿಷಯವನ್ನು ಹೇಳತಕ್ಕದ್ದೇನು. ॥೨೪॥

ಲೋಕದಲ್ಲಿ ಎಲ್ಲಾ ಪ್ರಾಣಿಗಳೂ ಕೂಡ ಬಹಳ ಬಲಿಷ್ಠವಾದ ಮಾಯಾ ಗುಣಗಳಿಂದ ಮೋಹಗೊಳಿಸಲ್ಪಟ್ಟವರಾಗಿ, ಕೊಂಚವೂ ಸ್ವಾತಂತ್ರ್ಯವಿಲ್ಲದವರಾಗಿರುವರು! ಇವರು ನನ್ನ ಶರೀರ, ನನ್ನ ಹಣಕಾಸು, ನನ್ನ ಮನೆ, ನನ್ನ ಜನಗಳು, ನನ್ನ ಮಕ್ಕಳು, ನನ್ನ ಹೆಂಡತಿ ಎಂಬುದಾಗಿ ಮೋಹವನ್ನು ಹೊಂದಿ ಪುಣ್ಯಕೆಲಸವನ್ನಾಗಲಿ ಅಥವಾ ಕೆಟ್ಟಕೆಲಸವನ್ನಾಗಲಿ ಮಾಡುವರು. ಇವರಿಂದ ಹೀಗೆ ಕಾರ್ಯವನ್ನು ಮಾಡಿಸುವುದು ಮಾಯಾ ಸಂಬಂಧವಾದ ಅಹಂಕಾರ ಮಮಕಾರಗಳೇ ಹೊರತು ಬೇರೆಯೊಂದಿಲ್ಲವಾದುದರಿಂದ ಮಾಯಾಧೀನರಾಗಿ ಸರ್ವರೂ ನಡೆಯುತ್ತಿರುವರು. ॥೨೫॥

ಭೂಮಿಯಲ್ಲಿ ಜನ್ಮವನ್ನು ಹೊಂದಲು ಕಾರಣವಾದ ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ವಿಧವಾದ ಗುಣಗಳಿಂದ ಕೂಡಿ ಪ್ರಾಣಿಯು ಹುಟ್ಟಿದವನಾಗಿ ಪುನಃ ಆ ಗುಣಗಳಿಂದಲೇ ಮೋಹವನ್ನು ಹೊಂದಿರುವವನಾದ ಕಾರಣ, ತನ್ನ ಸ್ವಾತಂತ್ರ್ಯವು ಏನೂ ಇಲ್ಲದೆ ಆ ಮಾಯೆಯ ಅಧೀನಕ್ಕೆ ಒಳಗಾದವನಾಗಿ, ಕಾರ್ಯ

ಅಥ ತೌ ಮಾಯಯಾ ವಿಷ್ಣುವಾಸವೌ ಮೋಹಿತೌ ಭೃಶಂ ।
ಜಘ್ನತು ಶ್ಛದ್ಮನಾ ವೃತ್ರಂ ಸ್ವಾರ್ಥಸಾಧನತತ್ಪರೌ ॥೨೬॥

ತದಹಂ ಸಂಪ್ರವಕ್ಷ್ಯಾಮಿ ವೃತ್ತಾಂತಮವನೀಪತೇ ।
ಕಾರಣಂ ಪೂರ್ವವೈರಸ್ಯ ವೃತ್ರವಾಸವಯೋರ್ಮಿಥಃ ॥೨೮॥

ತ್ವಷ್ಟಾ ಪ್ರಜಾಪತಿರ್ಹ್ಯಾಸೀತ್ ದೇವಶ್ರೇಷ್ಠೋ ಮಹಾತಪಾಃ ।
ದೇವಾನಾಂ ಕಾರ್ಯಕರ್ತಾ ಚ ನಿಪುಣೋ ಬ್ರಾಹ್ಮಣಪ್ರಿಯಃ ॥೨೯॥

ಸ ಪುತ್ರಂ ವೈ ತ್ರಿಶಿರಸಂ ಇಂದ್ರದ್ವೇಷಾತ್ಕಿಲಾಸೃಜತ್ ।
ವಿಶ್ವರೂಪೇತಿ ವಿಖ್ಯಾತಂ ನಾಮ್ನಾ ರೂಪೇಣ ಮೋಹನಂ ॥೩೦॥

---

ಕಾರಣಗಳನ್ನು ತಿಳಿದು ಮೇಲುಕೀಳುಗಳ ವಿವೇಕದಿಂದ ಮೋಹವನ್ನು ನಾಶಮಾಡಿಕೊಂಡು ಜೀವಿಸಲು ಯಾವನೂ ಸಾಮಾನ್ಯವಾಗಿ ಸಮರ್ಥನಾಗಲಾರನು. ॥೨೬॥

ಎಲ್ಲರೂ ಮಾಯೆಗೆ ಅಧೀನರಾಗಿಯೇ ಇರಬೇಕಾದ ಕಾರಣ, ವಿಷ್ಣುವೂ, ಇಂದ್ರನೂ ಸಹ ಮಾಯೆಯಿಂದ ಹೆಚ್ಚಾದ ಮೋಹವನ್ನು ಹೊಂದಿದವರಾಗಿ ತಮ್ಮ ತಮ್ಮ ಕಾರ್ಯವನ್ನು ಸಾಧಿಸಲು ಆಸಕ್ತರಾಗಿ ಮೋಸದಿಂದ ವೃತ್ರಾಸುರನನ್ನು ಕೊಂದರು. ॥೨೬॥

ಎಲೈ ಜನಮೇಜಯರಾಜನೇ ಕೇಳು, ಇಂದ್ರನಿಗೂ ವೃತ್ರಾಸುರನಿಗೂ ಸಹ ವೈರವು ಉಂಟಾಗಲು ಕಾರಣವನ್ನೂ ಮತ್ತು ಅವರಿಬ್ಬರ ಚರಿತ್ರೆಯ ವಿಷಯವಾದ ವೃತ್ತಾಂತವನ್ನೂ ಸಹ ನಾನು ನಿನಗೆ ತಿಳಿಸುತ್ತೇನೆ. ॥೨೮॥

ಬಹಳಮಟ್ಟಿನ ತಪಶ್ಶಕ್ತಿಯುಳ್ಳವನಾಗಿಯೂ, ದೇವತೆಗಳಿಗೆ ಬೇಕಾದ ಕೆಲಸಗಳನ್ನು ಮಾಡಿಕೊಡುವವನಾಗಿಯೂ, ಅವರೆಲ್ಲರಿಗೂ ಶ್ರೇಷ್ಠನಾಗಿಯೂ ಬುದ್ಧಿವಂತನಾಗಿಯೂ, ಬ್ರಾಹ್ಮಣರ ವಿಷಯದಲ್ಲಿ ಅನುಕೂಲನಾಗಿಯೂ, ಇರುವ ತ್ವಷ್ಟೃ ಎಂಬ ಬ್ರಹ್ಮನು ಪ್ರಸಿದ್ಧನಾಗಿರುತ್ತಿದ್ದನು. ॥೨೯॥

ಆ ತ್ವಷ್ಟೃಬ್ರಹ್ಮನು ಇಂದ್ರನ ಮೇಲಿನ ದ್ವೇಷದಿಂದ ವಿಶ್ವರೂಪನೆಂಬ ಹೆಸರುಳ್ಳವನಾದ, ಆ ಹೆಸರಿಗೆ ಅನುಸಾರವಾಗಿ ಪ್ರಪಂಚವನ್ನು ಮೋಹಗೊಳಿಸುವವನಾದ ಮೂರು ತಲೆಗಳುಳ್ಳವನಾದ ಒಬ್ಬ ಮಗನನ್ನು ಸೃಷ್ಟಿಮಾಡಿದನು. ॥೩೦॥

ತ್ರಿಭಿಸ್ಸವದನ್ಯೈಃ ಶ್ರೇಷ್ಠೈರ್ವ್ಯರೋಚತ ಮನೋಹರೈಃ ।
ತ್ರಿಭಿರ್ಭಿನ್ನಾನಿ ಕಾರ್ಯಾಣಿ ಮುಖೈಸ್ಸಮಕರೋನ್ಮುನಿಃ ॥೩೧॥

ವೇದಾನೇಕೇನ ಸೋಽಧೀತೇ ಸುರಾಂಚೈಕೇನ ಸೋಽಪಿಬತ್ ।
ತೃತೀಯೇನ ದಿಶಸ್ಸರ್ವಾ ಯುಗಪಚ್ಚ ನಿರೀಕ್ಷತೇ ॥೩೨॥

ತ್ರಿಶಿರಾ ಭೋಗಮುತ್ಸೃಜ್ಯ ತಪಶ್ಚಕ್ರೇ ಸುದುಷ್ಕರಂ ।
ತಪಸ್ವೀ ಸಮ್ಯದುರ್ದಾಂತೋ ಧರ್ಮಮೇವ ಸಮಾಶ್ರಿತಃ ॥೩೩॥

ಪಂಚಾಗ್ನಿಸಾಧನಂ ಕಾಲೇ ಪಾದಸಾಗ್ರೇ ನಿವೇಶನಂ ।
ಜಲಮಧ್ಯೇ ನಿವಾಸಂ ಚ ಹೇಮಂತೇ ಶಿಶಿರೇ ತಥಾ ॥೩೪॥

---

ಆ ವಿಶ್ವರೂಪನು ಉತ್ತಮವಾದ ಮತ್ತು ಮನೋಹರವಾದ ಮೂರು ಮುಖಗಳಿಂದ ಹೊಳೆಯುತ್ತಿದ್ದನು. ಆ ಮುನಿಯು ತನ್ನ ಮೂರು ಮುಖಗಳಿಂದ ಬೇರೆ ಬೇರೆಯಾದ ಕೆಲಸಗಳನ್ನು ಮಾಡುತ್ತಿದ್ದನು. ॥೩೧॥

ಆ ವಿಶ್ವರೂಪನು ವೇದಗಳನ್ನು ಒಂದು ಮುಖದಿಂದ ಅಧ್ಯಯನಮಾಡುತ್ತಿದ್ದನು. ಇನ್ನೊಂದು ಮುಖದಿಂದ ಮದ್ಯಪಾನವನ್ನು ಮಾಡುತ್ತಿದ್ದನು. ಮೂರನೆಯ ಮುಖದಿಂದ ಎಲ್ಲಾ ದಿಕ್ಕುಗಳನ್ನು ಒಟ್ಟಿಗೆ ನೋಡುತ್ತಿದ್ದನು. ॥೩೨॥

ಆ ತ್ರಿಶಿರಸ್ಸೆಂಬುವನು ತಾನು ವಿಷಯಭೋಗಾಭಿಲಾಷೆಯನ್ನು ಬಿಟ್ಟು ವೈರಾಗ್ಯವುಳ್ಳವನಾಗಿ ತಪಸ್ಸನ್ನು ಮಾಡಲು ಇಚ್ಛೆಯಿಂದ, ಉಪಶಾಂತನಾಗಿ, ಇಂದ್ರಿಯನಿಗ್ರಹವುಳ್ಳವನಾಗಿ, ಧರ್ಮವನ್ನೇ ಆಶ್ರಯಿಸಿಕೊಂಡು, ಇತರರು ಯಾರೂ ಸಾಮಾನ್ಯವಾಗಿ ಮಾಡಲಾಗದಿರುವ ತಪಸ್ಸನ್ನು ಮಾಡಲುಪಕ್ರಮಿಸಿದನು. ॥೩೩॥

ಬೇಸಗೆಯಲ್ಲಿ ಪಂಚಾಗ್ನಿಯನ್ನು ಸಿದ್ಧಪಡಿಸಿಕೊಂಡು ಮಧ್ಯದಲ್ಲಿ ತಪಸ್ಸನ್ನು ಮಾಡುವನು. ಹಾಗೆಯೇ ತನ್ನ ಕಾಲುಗಳನ್ನು ಮರದ ಕೊಂಬೆಗೆ ನೇತುಹಾಕಿಕೊಂಡು ಕೆಳಮುಖನಾಗಿಯೂ, ಮತ್ತೆ ಕೆಲವು ಕಾಲದಲ್ಲಿ ಎಂದರೆ ಹೇಮಂತ ಋತುವಿನಲ್ಲಿಯೂ, ಶಿಶಿರ ಋತುವಿನಲ್ಲಿಯೂ ಸಹ ನೀರಿನಲ್ಲಿ ಮುಳುಗಿಕೊಂಡೂ ತಪಸ್ಸನ್ನು ಮಾಡುತ್ತಿದ್ದನು. ॥೩೪॥

ನಿರಾಹಾರೋ ಜಿತಾತ್ಮಾಽಸೌ ತ್ಯಕ್ತಸರ್ವಪರಿಗ್ರಹಃ ।
ತಪಶ್ಚಚಾರ ಮೇಧಾವೀ ದುಷ್ಕರಂ ಮಂದಬುದ್ಧಿಭಿಃ ॥೩೫॥

ತಂ ಚ ದೃಷ್ಟ್ವಾ ತಪಸ್ಯಂತಂ ಖೇದಮಾಪ ಶಚೀಪತಿಃ ।
ವಿಷಾದಮಗಮತ್ತತ್ರ ಶಕ್ರೋಽಯಂ ಮಾಸ್ಮಭೂದಿತಿ ॥೩೬॥

ದೃಷ್ಟ್ವಾ ತಸ್ಯ ತಪೋವೀರ್ಯಂ ಸತ್ಯಂ ಚಾಮಿತತೇಜಸಃ ।
ಚಿನ್ತಾಂ ಚ ಮಹತೀಂ ಪ್ರಾಪ ಹ್ಯನಿಶಂ ಪಾಕಶಾಸನಃ ॥೩೭॥

ವಿವರ್ಧಮಾನಸ್ತ್ರಿಶಿರಾ ಮಾಮಯಂ ಶಾತಯಿಷ್ಯತಿ।
ನೋಪೇಕ್ಷ್ಯಸ್ಸರ್ವಥಾ ಶತ್ರುರ್ವರ್ಧಮಾನ ಬಲೋ ಬುಧೈಃ ॥೩೮॥

---

ಈ ವಿಶ್ವರೂಪನು, ತನ್ನ ಮನಸ್ಸನ್ನು ನಿಗ್ರಹಿಸಿಕೊಂಡು, ಬದ್ಧಿವಂತನಾಗಿ, ವ್ಯವಹಾರವನ್ನು ಎಲ್ಲವನ್ನೂ ಬಿಟ್ಟು, ಆಹಾರವಿಲ್ಲದವನಾಗಿ, ದಡ್ಡರಾದವರು ಯಾರೂ ಮಾಡಲು ಶಕ್ಯವಲ್ಲದಿರುವ ತಪಸ್ಸನ್ನು ಮಾಡುತ್ತಿದ್ದನು. ||೩೫||

ಶಚೀದೇವಿಗೆ ಪತಿಯಾದ ಇಂದ್ರನು ತಪಸ್ಸನ್ನು ಮಾಡುತ್ತಿರುವ ಆ ವಿಶ್ವ ರೂಪನನ್ನು ನೋಡಿದನು. ಅವನು ತಪಸ್ಸನ್ನು ಮಾಡುವ ಕ್ರಮವನ್ನೂ ನೋಡಿದ್ದ ರಿಂದ, ಇಂದ್ರನಿಗೆ ಮನಸ್ಸಿನಲ್ಲಿ ಯೋಚನೆಯುಂಟಾಯಿತು. ಆಗ ಇಂದ್ರನು ಅಲ್ಲಿಯೇ ನಿಂತುಕೊಂಡು ಇವನು ಮುಂದೆ ಈ ಘೋರವಾದ ತಪಸ್ಸನ್ನು ಮಾಡು ವುದರಿಂದ ಇಂದ್ರನಾದಾನು. ಹಾಗೆ ನನ್ನ ಇಂದ್ರಪಟ್ಟವು ಇವನಿಗೆ ಸಿಕ್ಕಬಾರದು. ಎಂಬುದಾಗಿ ಅವನ ಅಭಿವೃದ್ಧಿಯ ವಿಷಯದಲ್ಲಿ ಇಂದ್ರನು ವ್ಯಸನಪಟ್ಟನು. ||೩೬||

ಆ ವಿಶ್ವರೂಪನ ಸತ್ಯವನ್ನೂ ಮತ್ತು ಅವನ ತಪಸ್ಸಿನ ಬಲವನ್ನೂ ಸಹ ನೋಡಿ ಇಂದ್ರನು ತನ್ನಲ್ಲಿ ತಾನು ಯಾವಾಗಲೂ ಬಹಳಮಟ್ಟಿಗೆ ಆತಂಕದಿಂದ ಕೂಡಿದ ದುಃಖವನ್ನು ಹೊಂದಿದನು. ||೩೭||

ದಿನೇದಿನೇ ವೃದ್ಧಿಯನ್ನು ಹೊಂದುತ್ತಿರುವ ತ್ರಿಶಿರಸ್ಸೆಂಬ ಅನ್ವರ್ಥವಾದ ಹೆಸರುಳ್ಳ ಈ ವಿಶ್ವರೂಪನು ಇನ್ನುಮುಂದೆ ನನ್ನನ್ನೂ ನಿಗ್ರಹ ಮಾಡುವನು ! ಲೋಕದಲ್ಲಿ ತಿಳಿವಳಿಕೆಯುಳ್ಳವರು ಪ್ರತಿದಿನದಲ್ಲಿಯೂ, ವೃದ್ಧಿಯನ್ನು ಹೊಂದು ತ್ತಿರುವ ಬಲದಿಂದ ಹೆಚ್ಚುತ್ತಿರುವ ಶತ್ರುವನ್ನು ಸರ್ವಪ್ರಕಾರದಿಂದಲೂ ಉಪೇಕ್ಷೆ ಮಾಡಬಾರದು, ಎಂದು ಹೇಳುವರು. ||೩೮||

ತಸ್ಮಾದುಪಾಯಃ ಕರ್ತವ್ಯಸ್ತಪೋನಾಶಾಯ ಸಾಂಪ್ರತಂ ।
ಕಾಮಸ್ತು ತಪಸಾಂ ಶತ್ರುಃ ಕಾಮಾನ್ನಶ್ಯತಿ ವೈ ತಪಃ ॥೩೯॥

ತಥೈವಾದ್ಯ ಪ್ರಕರ್ತವ್ಯಂ ಭೋಗಾಸಕ್ತೋ ಭವೇದ್ಯಥಾ ।
ಇತಿ ಸಂಚಿಂತ್ಯ ಮನಸಾ ಬುದ್ಧಿಮಾನ್ ಬಲಸೂದನಃ ॥೪೦॥

ಆಜ್ಞಾಪಯತ್ತೋಽಪ್ಸರಸ ಸ್ತ್ವಾಷ್ಟ್ರ ಪುತ್ರಪ್ರಲೋಭನೇ ।
ಉರ್ವಶೀಂ ಮೇನಕಾಂ ರಂಭಾಂ ಘೃತಾಚೀಂ ಚ ತಿಲೋತ್ತಮಾಂ ॥೪೧॥

ಸಮಾಹೂಯಾ ಬ್ರವೀಚ್ಛಕ್ರಸ್ತಾಸ್ತದಾ ರೂಪಗರ್ವಿತಾಃ ।
ಪ್ರಿಯಂ ಕುರುಧ್ವಂ ಮೇ ಸರ್ವಾಃ ಕಾರ್ಯೇಽದ್ಯ ಸಮುಪಸ್ಥಿತೇ ॥೪೨॥

---

ಆದ್ದರಿಂದ ಈಗ ಈ ವಿಶ್ವರೂಪನ ತಪಸ್ಸು ನಾಶವಾಗುವಂತೆ ತಕ್ಕ ಉಪಾಯವನ್ನು ನಾನು ಮಾಡಬೇಕು. ಈ ಉಪಾಯವು ಇವನಿಗೆ ಕಾಮವು ಉಂಟಾಗುವಂತೆ ಮಾಡುವುದೇ ಆಗಿರುತ್ತದೆ. ಕಾಮವೆಂಬುವುದು ತಪಸ್ಸಿಗೆ ಶತ್ರುವಾಗಿರುವುದು. (ಕಾಮದಿಂದ) ಭೋಗೇಚ್ಛೆಯಿಂದ, ಭೋಗಪಡುವುದರಿಂದ ತಪಸ್ಸು ನಾಶವಾಗುವುದು. ||೩೯||

ಬಲನೆಂಬ ರಾಕ್ಷಸನನ್ನು ನಾಶಮಾಡಿದವನಾದ, ಬುದ್ಧಿವಂತನಾದ ಇಂದ್ರನು ಮೇಲೆ ಹೇಳಿದ ಪ್ರಕಾರದಿಂದ ತನ್ನ ಮನಸ್ಸಿನಲ್ಲಿ ಯೋಚಿಸಿ ಈ ವಿಶ್ವರೂಪನು ತನ್ನ ಮನಸ್ಸನ್ನು ತಪಸ್ಸಿನಿಂದ ಹಿಂತಿರುಗಿಸಿಕೊಂಡು ಭೋಗಗಳನ್ನು ಅನುಭವಿಸುವುದಕ್ಕೆ ಹೇಗಾದರೆ ಉದ್ಯುಕ್ತನಾಗುವನೋ, ಆ ರೀತಿಯಾದ ಕೆಲಸಗಳನ್ನು ಈಗ ನಾನು ಮಾಡತಕ್ಕದ್ದು. ಎಂದು ನಿರ್ಧರಿಸಿದನು. ||೪೦||

ಇಂದ್ರನು ಸೌಂದರ್ಯದಿಂದ ಗರ್ವವುಳ್ಳವರಾಗಿರುವ ಊರ್ವಶೀ, ಮೇನಕಾ, ರಂಭಾ, ತಿಲೋತ್ತಮಾ, ಘೃತಾಚೀ ಇವರೇ ಮೊದಲಾದ ಅಪ್ಸರಸ್ತ್ರೀಯರನ್ನು ಕರೆದು ತ್ವಷ್ಟೃಬ್ರಹ್ಮನ ಮಗನಾದ ವಿಶ್ವರೂಪನ ಮನಸ್ಸನ್ನು ಆಕರ್ಷಿಸಿ ಕೆಡಿಸುವುದಕ್ಕಾಗಿ ಅವರಿಗೆ ಅಪ್ಪಣೆ ಮಾಡಿದನು. ಮತ್ತು ಅವರನ್ನು ಕುರಿತು ಮುಂದೆ ಹೇಳುವ ಮಾತನ್ನು ಹೇಳಿದನು. "ನೀವೆಲ್ಲರೂ ಸೇರಿ ಈಗ ನನಗೆ ಆಗಬೇಕಾಗಿರುವ ಕಾರ್ಯವು ಒದಗಿರುವಾಗ ಹಿತವನ್ನು ಮಾಡಿರಿ." ||೪೧-೪೨||

ಯತ್ನೋ ಮೇಽದ್ಯ ಮಹಾನ್ ಶತ್ರುಸ್ತಪಸ್ತಪತಿ ದುರ್ಜಯಃ ।
ಕಾರ್ಯಂ ಕುರುತ ಗಚ್ಛಧ್ವಂ ಪ್ರಲೋಭಯತ ಮಾಚಿರಂ ॥೪೩॥

ಶೃಂಗಾರವೇಷೈರ್ವಿವಿಧೈರ್ಹಾವೈರ್ದೇಹಸಮುದ್ಭವೈಃ ।
ಪ್ರಲೋಭಯತ ಭದ್ರಂ ವಃ ಶಮಯಧ್ವಂ ಜ್ವರಂ ಮಮ ॥೪೪॥

ಅಸ್ವಸ್ಥೋಽಹಂ ಮಹಾಭಾಗಾ ಸಮ್ಯಕ್‌ಜ್ಞಾತ್ವಾ ತಪೋಬಲಂ ।
ಬಲವಾನಾಸನಂ ಮೇಽದ್ಯ ಗ್ರಹೀಷ್ಯತ್ಯವಿಲಂಬಿತಃ ॥೪೫॥

ಭಯಂ ಮೇ ಸಮುಪಾಯಾತಂ ಕ್ಷಿಪ್ರಂ ನಾಶಯತಾಬಲಾಃ ।
ಉಪಕುರ್ವಂತು ಸಹಿತಾಃ ಕಾರ್ಯೇಽದ್ಯ ಸಮುಪಸ್ಥಿತೇ ॥೪೬॥

---

ನನ್ನ ಶತ್ರುವಾದವನೊಬ್ಬನು ಈಗ ಪ್ರಯತ್ನಪೂರ್ವಕವಾಗಿ ಸಿದ್ಧಿಯನ್ನು ಹೊಂದಲಿಚ್ಛೆಯುಳ್ಳವನಾಗಿ ನನ್ನಿಂದ ಜಯಿಸಲಸಾಧ್ಯನಾಗಿರುವಂತೆ ತಪಸ್ಸನ್ನು ಮಾಡುತ್ತಿರುವನು. ನೀವೆಲ್ಲರೂ ಅವನ ಹತ್ತಿರಕ್ಕೆ ಹೋಗಿರಿ. ಅಲ್ಲಿ ಹೋಗಿ ನಿಮ್ಮ ಕಾರ್ಯಗಳನ್ನು ಮಾಡಿರಿ. ಅವನ ಮನಸ್ಸು ತಪಸ್ಸಿನಿಂದ ಹಿಮ್ಮೆಟ್ಟುವಂತೆ ಮಾಡಿರಿ. ನೀವು ತಡಮಾಡಬೇಡಿ. ಬೇಗನೆ ಕೆಲಸವನ್ನು ಮಾಡಿರಿ. ॥೪೩॥

ನೀವುಗಳು ನಿಮ್ಮ ಶರೀರದ ನಾನಾವಿಧವಾದ ಹಾವಭಾವಗಳಿಂದಲೂ, ಅನೇಕ ವಿಧವಾದ ಶೃಂಗಾರ ವೇಷಗಳಿಂದಲೂ ಸಹ ಅವನ ಮನಸ್ಸು ತಪಸ್ಸನ್ನು ಮಾಡ ದಂತೆ ಮಾಡಿ ನನ್ನ ಮನಸ್ಸಿಗೆ ಉಂಟಾಗಿರುವ ಕೊರಗನ್ನು ಹಾಳುಮಾಡಿರಿ. ನಿಮಗೆ ಒಳ್ಳೆಯದಾಗಲಿ. ॥೪೪॥

ಎಲೌ ಅದೃಷ್ಟಶಾಲಿಗಳಾದ ಅಪ್ಸರಸ್ತ್ರೀಯರೇ, ನಾನು ಈಗ ಬಲವಾದ ಮನೋರೋಗವುಳ್ಳವನಾದ್ದರಿಂದ ಆರೋಗ್ಯವುಳ್ಳವನಾಗಿಲ್ಲ. ಅವನು ಮಾಡುತ್ತಿರುವ ತಪಸ್ಸಿನ ಬಲವೂ, ದಿನೇ ದಿನೇ ಹೆಚ್ಚುತ್ತಾ, ಅವನು ಅದರಿಂದ ಬಲಿಷ್ಠನಾಗಿ ನನ್ನ ಅಧಿಕಾರವನ್ನು ಬೇಗನೇ ಅವನು ತೆಗೆದುಕೊಂಡು ಬಿಡುವನು ಎಂಬುವ ಭಯವು ನನ್ನ ದುರವಸ್ಥೆಗೆ ಕಾರಣವಾಗಿರುತ್ತದೆ. ॥೪೫॥

ಎಲೌ ಸ್ತ್ರೀಯರೇ, ನನಗೆ ಭಯವು ದಿನೇ ದಿನೇ ಹೆಚ್ಚುತ್ತಿರುವುದು. ಇದನ್ನು ನೀವುಗಳು ನಾಶಮಾಡಿರಿ. ಈಗ ಕೆಲಸವು ಒದಗಿರುವಾಗ ನೀವೆಲ್ಲರೂ ಒಟ್ಟುಗೂಡಿ, ನನಗೆ ಉಪಕಾರವನ್ನು ಮಾಡಿರಿ, ಎಂದು ಇಂದ್ರನು ಹೇಳಿದನು.॥೪೬॥

**ತಚ್ಛ್ರುತ್ವಾ ವಚನಂ ನಾರ್ಯಃ ಊಚುಸ್ತಂ ಪ್ರಣತಾಃ ಪುರಃ ।**
**ಮಾ ಭಯಂ ಕುರು ದೇವೇಶ ಯತಿಷ್ಯಾಮಃ ಪ್ರಲೋಭನೇ ॥೪೭॥**

**ಯಥಾ ನ ಸ್ಯಾದ್ಭಯಂ ತಸ್ಮಾತ್ ತಥಾ ಕಾರ್ಯಂ ಮಹಾದ್ಯುತೇ ।**
**ನೃತ್ಯಗೀತವಿಹಾರೈಶ್ಚ ಮುನೇಸ್ತಸ್ಯ ಪ್ರಲೋಭನೇ ॥೪೮॥**

**ಕಟಾಕ್ಷೈರಂಗಭೇದೈಶ್ಚ ಮೋಹಯಿತ್ವಾ ಮುನಿಂ ವಿಭೋ ।**
**ಲೋಲುಪಂ ವಶಮಸ್ಮಾಕಂ ಕರಿಷ್ಯಾಮೋ ನಿಯಂತ್ರಿತಮ್ ॥೪೯॥**

॥ ವ್ಯಾಸ ಉವಾಚ ॥

**ಇತ್ಯಾಭಾಷ್ಯ ಹರಿಂ ನಾರ್ಯೋ ಯಯುಸ್ತ್ರಿಶಿರಸೋಽಂತಿಕಂ ।**
**ಕುರ್ವಂತ್ಯೋ ವಿವಿಧಾನ್ ಭಾವಾನ್ ಕಾಮಶಾಸ್ತ್ರೋಚಿತಾನಪಿ ॥೫೦॥**

---

ಆ ಅಪ್ಸರಸ್ತ್ರೀಯರು ಇಂದ್ರನ ಮಾತನ್ನು ಕೇಳಿದವರಾಗಿ, ಅವನ ಎದುರಿಗೆ ಅವನಿಗೆ ನಮಸ್ಕಾರಮಾಡಿದವರಾಗಿ, ಓ ದೇವಾಧಿಪತಿಯಾದ ಇಂದ್ರನೇ, ನಿನಗೆ ಯಾವ ಕಡೆಯಿಂದಲೂ ಭಯವು ಉಂಟಾಗಬೇಡ. ನಾವುಗಳು ಆ ವಿಶ್ವರೂಪನನ್ನು ಮೋಸಗೊಳಿಸಲು ಪ್ರಯತ್ನ ಮಾಡುವೆವು. ॥೪೭॥

ಓ ಮಹಾತೇಜಶ್ಶಾಲಿಯಾದ ಇಂದ್ರನೇ, ನಿನಗೆ ಹೇಗಾದರೆ ಅವನಿಂದ ಭಯವು ಉಂಟಾಗಲಾರದೋ ಆ ರೀತಿಯಾಗಿ ಕೆಲಸವನ್ನು ನಾವುಗಳು ನಡೆಸುವೆವು. ನಮ್ಮ ನೃತ್ಯ, ಗೀತ ಮತ್ತು ಅನೇಕ ವಿಧವಾದ ಬಿನ್ನಾಣಗಳು ಇವುಗಳಿಂದ ಮುನಿಯಾದ ಅವನ ಮನಸ್ಸನ್ನು ಮೋಸಗೊಳಿಸುವವರಾಗಿ ನಿನ್ನ ಇಷ್ಟವು ನೆರವೇರುವಂತೆ ಮಾಡುವೆವು. ॥೪೮॥

ಓ ಪ್ರಭುವಾದ ಇಂದ್ರನೇ, ನಾವುಗಳು ಮುನಿಯಾದ ವಿಶ್ವರೂಪನನ್ನು ಕಟಾಕ್ಷಗಳಿಂದಲೂ ನಮ್ಮ ಅಂಗಗಳ ವಿನ್ಯಾಸಗಳಿಂದಲೂ ಸಹ ಮೋಹಗೊಳಿಸಿ ನಮ್ಮ ಅಧೀನಕ್ಕೆ ಸಿಕ್ಕಿಸಿಕೊಂಡು ನಮ್ಮಲ್ಲಿ ಆಸಕ್ತನಾಗುವಂತೆ ಮಾಡಿ ಒಂದು ವಿಧವಾದ ಬಂಧನದಲ್ಲಿರುವಂತೆ ಮಾಡುವೆವು. ॥೪೯॥

ವ್ಯಾಸಋಷಿಯು ಹೇಳಿದನು—ಆ ಅಪ್ಸರ ಸ್ತ್ರೀಯರು ಇಂದ್ರನ ಸಂಗಡ ಹೀಗೆ ಮಾತನಾಡಿಕೊಂಡು ತಪಸ್ಸನ್ನು ಮಾಡುತ್ತಿರುವ ತ್ರಿಶಿರಸ್ಸಿನ ಹತ್ತಿರಕ್ಕೆ ಬಂದರು. ಆಗ ಆ ಸ್ತ್ರೀಯರು ಕಾಮಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಅನೇಕ

**ಗಾಯಂತ್ಯಸ್ತಾಲಭೇದೈಸ್ತಾ ನೃತ್ಯಂತಃ ಪುರತೋ ಮುನೇಃ ।**
**ತಂ ಪ್ರಲೋಭಯಿತುಂ ಚಕ್ರುರ್ನಾನಾಭಾವಾನ್ ವರಾಂಗನಾಃ ॥೩೧॥**

**ನಾಶಕ್ನತ್ಸ ತಪೋರಾಶಿರಂಗನಾನಾಂ ವಿಡಂಬನಂ ।**
**ಇಂದ್ರಿಯಾಣಿ ವಶೇ ಕೃತ್ವಾ ಮೂಕಾನ್ಧಬಧಿರಃ ಸ್ಥಿತಃ ॥೩೨॥**

**ದಿನಾನಿ ಕತಿಚಿತ್ತಸ್ಥುರ್ನಾರ್ಯಸ್ತಸ್ಯಾಶ್ರಮೇ ವರೇ ।**
**ಕುರ್ವನ್ತ್ಯೋ ಗಾನನೃತ್ಯಾದಿ ಪ್ರಪಂಚಾನತಿ ಮೋಹದಾನ್ ॥೩೩॥**

**ನ ಚಚಾಲ ಯದಾ ಕಾಮಂ ಧ್ಯಾನಾಚ್ಚ ತ್ರಿಶಿರಾಮುನಿಃ ।**
**ಪರಾವೃತ್ಯ ತದಾ ದೇವ್ಯಃ ಪುನಶ್ಶಕ್ರಮುಪಸ್ಥಿತಾಃ ॥೩೪॥**

---

ವಿಧವಾದ ಅಭಿಪ್ರಾಯಗಳನ್ನು ಸೂಚಿಸುವ ಶೃಂಗಾರಚೇಷ್ಟೆಗಳನ್ನು ಆತ್ರಿಶಿರಸ್ಸಿನ ಮುಂದುಗಡೆಯಲ್ಲಿ ಮಾಡುತ್ತಿದ್ದರು. ॥೩೦॥

ಆ ಶ್ರೇಷ್ಠರಾದ ಹೆಂಗಸರು ತ್ರಿಶಿರಸ್ಸೆಂಬ ಋಷಿಯ ಮುಂದುಗಡೆಯಲ್ಲಿ ನಿಂತುಕೊಂಡು ಅವನನ್ನು ವಶಪಡಿಸಿಕೊಳ್ಳುವುದಕ್ಕಾಗಿ ತಾಳವೇ ಮೊದಲಾದ ಪಕ್ಕವಾದ್ಯಗಳಿಂದ ಕೂಡಿದ ಸಂಗೀತ ಪದ್ಧತಿಯನ್ನು ಅನುಸರಿಸಿಕೊಂಡು ಗಾನ ಮಾಡುವುದೂ ಮತ್ತು ನರ್ತನ ಮಾಡುವುದೂ ಇವೇ ಮೊದಲಾದ ಅನೇಕ ವಿಧವಾದ ಶೃಂಗಾರ ಚೇಷ್ಟೆಗಳನ್ನು ಮಾಡಿದರು. ॥೩೧॥

ತಪಸ್ಸನ್ನು ಬಹಳವಾಗಿ ಮಾಡುತ್ತಿರುವ ಆ ತ್ರಿಶಿರಸ್ಸೆಂಬ ಮುನಿಯು ಈ ಹೆಂಗುಸರು ಮಾಡುತ್ತಿರುವ ಕೆಲಸಗಳನ್ನು ನೋಡಿದವನಾಗಿ ತನ್ನ ಇಂದ್ರಿಯಗಳನ್ನು ಹತೋಟಿಯಲ್ಲಿ ಇರಿಸಿಕೊಂಡು ಮೂಗರು, ಕುರುಡರು, ಕಿವುಡರು ಇಂಥವರು ಇರುವಂತೆ, ಕಿವಿಯು ಕೇಳದಂತೆಯೂ, ಕಣ್ಣು ಕಾಣದಂತೆಯೂ, ಮಾತನಾಡಲು ಶಕ್ತಿಯಿಲ್ಲದವನಂತೆಯೂ ಇದ್ದುಬಿಟ್ಟನು. ॥೩೨॥

ಆ ತ್ರಿಶಿರಸ್ಸಿನ ಉತ್ತಮವಾದ ಆಶ್ರಮದಲ್ಲಿ ಇಂದ್ರನಿಂದ ಕಳುಹಿಸಲ್ಪಟ್ಟ ಶ್ರೇಷ್ಠರಾದ ಆ ಹೆಂಗಸರೂ ಕೂಡ ಯಾರಿಗಾದರೂ ಮೋಹವನ್ನುಂಟುಮಾಡುವಂತಹ ಸಂಗೀತ ಮತ್ತು ನರ್ತನ ಇವೇ ಮೊದಲಾದ ಶೃಂಗಾರ ಚೇಷ್ಟೆಯ ವಿಸ್ತಾರಗಳನ್ನು ಬಹಳಮಟ್ಟಿಗೆ ನಡೆಸುತ್ತಾ ಕೆಲವು ದಿನಗಳು ಇದ್ದರು. ॥೩೩॥

ತ್ರಿಶಿರಸ್ಸೆಂಬ ಮುನಿಯು ಧ್ಯಾನಮಾಡುವುದರಿಂದ ಕೊಂಚಮಟ್ಟಿಗೂ ಮನಸ್ಸನ್ನು ಚಲಿಸದಂತೆ ಇಟ್ಟುಕೊಂಡು ಸ್ಥಿರವಾಗಿ ಇರುವುದನ್ನು ಆ ಹೆಂಗಸರು

ಕೃತಾಞ್ಜಲಿಪುಟಾಸ್ಸರ್ವಾಃ ದೇವರಾಜಮಥಾಬ್ರುವನ್ ।
ಶಾನ್ತಾ ದೀನಾ ಭಯತ್ರಸ್ತಾ ವಿವರ್ಣವದನಾ ಭೃಶಂ ॥೫೫॥

ದೇವ ದೇವ ಮಹಾರಾಜ ಯತ್ನಶ್ಚ ಪರಮಃ ಕೃತಃ ।
ನ ಸ ಶಕ್ಯೋ ದುರಾಧರ್ಷೋ ಧೈರ್ಯಾಚ್ಚಾಲಯಿತುಂ ವಿಭೋ॥೫೬॥

ಉಪಾಯೋಽನ್ಯಃ ಪ್ರಕರ್ತವ್ಯಃ ಸರ್ವಥಾ ಪಾಕಶಾಸನ ।
ನಾಸ್ಮಾಕಂ ಬಲಮೇತಸ್ಮಿನ್ ತಾಪಸೇ ವಿಜಿತೇಂದ್ರಿಯೇ ॥೫೭॥

ದಿಷ್ಟ್ಯಾ ವಯಂ ನ ಶಪ್ತಾಃಸ್ಮಃ ಯದನೇನ ಮಹಾತ್ಮನಾ ।
ಮುನಿನಾ ವಹ್ನಿತುಲ್ಯೇನ ತಪಸಾ ದ್ಯೋತಿತೇನ ಹಿ ॥೫೮॥

---

ನೋಡಿ ನಿರಾಶರಾಗಿ, ಅವರು ಹಿಂತಿರುಗಿ ಬದಲಾಗಿ ಆ ಇಂದ್ರನ ಹತ್ತಿರಕ್ಕೆ ಹೋದರು. ॥೫೪॥

ಆ ಹೆಂಗುಸರೆಲ್ಲರೂ ತಾವು ತ್ರಿಶಿರಸ್ಸಿನ ತಪಸ್ಸನ್ನು ಭಂಗಪಡಿಸುವುದಕ್ಕಾಗಿ ಬಹಳ ಪ್ರಯತ್ನದಿಂದ ಮಾಡಿದ ಕೆಲಸಗಳೆಲ್ಲವೂ ವ್ಯರ್ಥವಾದುದರಿಂದ, ಆಯಾಸವೂ, ಸಂಕಟವೂ ಮತ್ತು ಖುಷಿಯು, ಇಂದ್ರನು ಇವರಿಬ್ಬರ ಹೆದರಿಕೆಯೂ ಇವುಗಳಿಂದ ಕೂಡಿದವರಾಗಿ, ಮುಖದಲ್ಲಿ ಸ್ವಲ್ಪವೂ ಕಾನ್ತಿಯಿಲ್ಲದವರಾಗಿ, ಇಂದ್ರನ ಮುಂದುಗಡೆಯಲ್ಲಿ ಎಲ್ಲರೂ ಬೊಗಸೆ ಕಟ್ಟಿಕೊಂಡು ಇಂದ್ರನ ಸಂಗಡ ಮಾತನಾಡಿದರು. ॥೫೫॥

ಓ ದೇವಾಧಿಪನಾದ ಇಂದ್ರನೇ, ಓ ಸ್ವಾಮಿಯೇ, ಆ ತ್ರಿಶಿರಸ್ಸೆಂಬ ಮುನಿಯನ್ನು ಅವನ ಧೈರ್ಯದಿಂದ ತಪ್ಪಿಸುವುದು ಅಸಾಧ್ಯವಾಗಿರುವುದು. ನಾವುಗಳು ಎಲ್ಲರೂ ನಮ್ಮ ನಮ್ಮ ಅತಿಶಯವಾದ ಪ್ರಯತ್ನವನ್ನು ಮಾಡಿದೆವು. ನಮ್ಮ ಶಕ್ತಿಪ್ರಯತ್ನಗಳೆಲ್ಲವೂ ಅವನ ಬಳಿಯಲ್ಲಿ ವ್ಯರ್ಥವಾದುವು. ॥೫೬॥

ಪಾಕನೆಂಬ ರಾಕ್ಷಸನನ್ನು ನಿಗ್ರಹಿಸಿದ ಇಂದ್ರನೇ, ಈ ತ್ರಿಶಿರಸ್ಸೆಂಬ ಮುನಿಯು ಜಿತೇಂದ್ರಿಯನಾದವನು. ಆದ್ದರಿಂದ ಇವನ ವಿಷಯದಲ್ಲಿ ನಾವುಗಳು ಮಾಡಿದ ಪ್ರಯತ್ನವೆಲ್ಲವೂ ಕೆಲಸಮಾಡದವುಗಳಾಗಿ ವ್ಯರ್ಥವಾದುವು. ಇವನನ್ನು ನಿಗ್ರಹ ಮಾಡಲು ಬೇರೆಯ ಉಪಾಯವನ್ನು ಸರ್ವಪ್ರಕಾರದಿಂದಲೂ ಮಾಡತಕ್ಕದ್ದು ಉತ್ತಮವು. ॥೫೭॥

ಮಹಾಮಹಿಮನಾಗಿರುವ, ತಪಸ್ಸಿನಿಂದ ಚೆನ್ನಾಗಿ ಪ್ರಕಾಶವುಳ್ಳವನಾಗಿರುವ, ಬೆಂಕಿಗೆ ಸಮನಾದ ತೇಜಸ್ಸುಳ್ಳವನಾದ ಈ ತ್ರಿಶಿರಸ್ಸೆಂಬ ಮುನಿಯಿಂದ ನಾವುಗಳು

ವಿಸೃಜ್ಯಾಪ್ಸರಸಶ್ಶಕ್ರ ಶ್ಚಿಂತಾಮಾಪ ಸ ಮಂದಧೀಃ ।
ತಸ್ಯೈವ ಚ ವಧೋಪಾಯಂ ಪಾಪಬುದ್ಧಿರಸಾಂಪ್ರತಂ ॥೫೯॥

ವಿಸೃಜ್ಯ ಲೋಕಲಜ್ಜಾಂ ಸ ತಥಾ ಪಾಪಭಯಂ ಭೃಶಂ ।
ಚಕಾರ ಪಾಪಬುದ್ಧಿಂ ತು ತದ್ವಧಾಯ ಮಹೀಪತೇ ॥೬೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ
ಪ್ರಥಮೋಽಧ್ಯಾಯಃ

---

ದೈವಗತಿಯಿಂದ ಶಾಪವನ್ನು ಹೊಂದಲಿಲ್ಲವು. ಹೀಗೆ ಶಾಪವನ್ನು ಹೊಂದದೆ ನಾವು ಗಳು ಪೂರ್ವದಂತೆ ಹಿಂತಿರುಗಿ ನಿನ್ನ ಹತ್ತಿರಕ್ಕೆ ಬಂದದ್ದೇ ನಮ್ಮ ಪುಣ್ಯದ ಫಲ ವಾಗಿರುವುದು ! ಎಂದು ಇಂದ್ರನ ಸಂಗಡ ಅಪ್ಸರಸ್ತ್ರೀಯರು ಹೇಳಿದರು. ॥೫೮॥

ಓ ದೊರೆಯೇ, ಬುದ್ಧಿಯಿಲ್ಲದವನಾದ ಆ ಇಂದ್ರನು ಅಪ್ಸರಸ್ತ್ರೀಯರನ್ನು ಕಳುಹಿಸಿದನು. ಆ ಋಷಿಯ ವಿಷಯವಾಗಿ ತನಗೆ ಯೋಗ್ಯವಲ್ಲದಿರುವ ಕೆಟ್ಟ ಬುದ್ಧಿಯುಳ್ಳವನಾಗಿ ಅವನ ಕೊಲೆಯನ್ನು ಮಾಡುವುದಕ್ಕೆ ತಕ್ಕ ಉಪಾಯವನ್ನು ಮಾಡಲು, ತುಂಬಾ ಯೋಚನೆಯನ್ನು ಮಾಡಲುಪಕ್ರಮಿಸಿದನು. ॥೫೯॥

ಎಲೈರಾಜನೇ ಕೇಳು, ಆ ಇಂದ್ರನು ತನಗೆ ಲೋಕದಲ್ಲಿ ನಿರಪರಾಧಿಯಾದವ ನನ್ನು ಕೊಲೆ ಮಾಡಿದನೆಂದು ಬರುವ ಜನಾಪವಾದದಿಂದಲೂ ನಾಚಿಕೆಯನ್ನು ಹೊಂದದೆ, ತಪಸ್ವಿಯಾದ ಅವನನ್ನು ಕೊಂದರೆ ತನಗೆ ಮುಂದೆ ಬರಬಹುದಾದ ಹೆಚ್ಚಾದ ಪಾಪದ ಭಯವನ್ನೂ ಸಹ ಬಿಟ್ಟು, ಇಂದ್ರನು ಆ ತ್ರಿಶಿರಸ್ಸೆಂಬ ಮುನಿ ಯನ್ನು ಕೊಲ್ಲಲು ಕೆಟ್ಟಯೋಚನೆಯನ್ನು ಮಾಡಲು ನಿಶ್ಚಯಿಸಿದನು. ॥೬೦॥

ಇಲ್ಲಿಗೆ ಶ್ರೀದೇವಿಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಮೊದಲನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಷಷ್ಠಃ ಸ್ಕಂಧಃ

|| ದ್ವಿತಿಯೋಽಧ್ಯಾಯಃ ||

### ಎರಡನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಅಥ ಸ ಲೋಭಮುಪೇತ್ಯ ಸುರಾಧಿಪಃ**
**ಸಮಧಿಗಮ್ಯ ಗಜಾಸನ ಸಂಸ್ಥಿತಃ ।**
**ತ್ರಿಶಿರಸಂ ಪ್ರತಿದುಷ್ಟಮತಿಸ್ತದಾ**
**ಮುನಿಮಪಶ್ಯದನೋಽಯ ಪರಾಕ್ರಮಂ ॥೧॥**

**ತಮಭಿವೀಕ್ಷ್ಯದೃಢಾಸನಸಂಸ್ಥಿತಂ**
**ಜಿತಗಿರಂ ಸುಸಮಾಧಿವಶಂಗತಂ ।**
**ರವಿವಿಭಾವಸುಸನ್ನಿಭಮೋಜಸಾ**
**ಸುರಪತಿಃ ಪರಮಾಪದಮಭ್ಯಗಾತ್ ॥೨॥**

---

ವ್ಯಾಸಋಷಿಯು ಹೇಳಿದನು—ಅನಂತರದಲ್ಲಿ ಇಂದ್ರನು ತ್ರಿಶಿರಸ್ಸೆಂಬ ಮುನಿಯ ವಿಷಯದಲ್ಲಿ ಕೆಟ್ಟಬುದ್ಧಿಯುಳ್ಳವನಾಗಿ, ದುರಾಸೆಯಿಂದ ಕೂಡಿ, ತನ್ನ ವಾಹನವಾದ ಐರಾವತವೆಂಬ ಆನೆಯನ್ನು ಹತ್ತಿದವನಾಗಿ, ಅಳತೆಗೆ ಸಿಕ್ಕದಷ್ಟು ತೇಜಸ್ಸುಳ್ಳವನಾಗಿರುವ ತಪಸ್ಸನ್ನು ಮಾಡುತ್ತಿರುವವನಾದ ಆ ತ್ರಿಶಿರೋಮುನಿಯನ್ನು ನೋಡಿದನು. ||೧||

ಒಳ್ಳೆಯ ಸ್ಥಿರವಾದ ಆಸನದಲ್ಲಿ ಕೂತುಕೊಂಡು, ಯಾರ ಸಂಗಡಲೂ ಯಾವ ಮಾತನ್ನೂ ಆಡದೆ ಸಮಾಧಿಯಲ್ಲಿ ಇರುವವನಾದ, ಸೂರ್ಯ ಮತ್ತು ಅಗ್ನಿ ಇವರುಗಳಿಗೆ ಸಮಾನವಾದ ತೇಜಸ್ಸಿನಿಂದ ಹೊಳೆಯುತ್ತಿರುವ, ಆ ತ್ರಿಶಿರೋಮುನಿಯನ್ನು ನೋಡಿ ಇಂದ್ರನು ಮನಸ್ಸಿನಲ್ಲಿ ಬಹಳವಾಗಿ ನೊಂದುಕೊಂಡನು. ||೨||

ಕಥಮಸೌ ವಿನಿಹಂತುಮಹೋ ಮಯಾ
ಮುನಿರಪಾಪಮತಿಃ ಕಿಲ ಸಮ್ಮತಃ ।
ರಿಪುರಯಂ ಸುಸಮಿದ್ಧ ತಪೋಬಲಃ
ಕಥಮುಪೇಕ್ಷ್ಯ ಇಹಾಸನ ಕಾಮುಕಃ ॥೩॥

ಇತಿ ವಿಚಿಂತ್ಯ ಪವಿಂ ಪರಮಾಯುಧಂ
ಪ್ರತಿಮುಮೋಚ ಮುನಿಂ ತಪಸಿ ಸ್ಥಿತಂ ।
ಶಶಿದಿವಾಕರಸನ್ನಿಭಮಾಶುಗಂ
ತ್ರಿಶಿರಸಂ ಸುರಸಂಘಪತಿಃ ಸ್ವಯಂ ॥೪॥

ತದಭಿಘಾತಹತಸ್ಸಧರಾತಲೇ
ಕಿಲಪಪಾತ ಮಮಾರ ಚ ತಾಪಸಃ ।

---

ಇವನು ಪರಿಶುದ್ಧವಾದ ಬುದ್ಧಿಯುಳ್ಳವನು ಎಂಬದಾಗಿ ಎಲ್ಲರೂ ಒಪ್ಪಿರುವರು. ಮತ್ತು ಈ ಮುನಿಯು ಬಹಳಮಟ್ಟಿನ ಹೆಚ್ಚಾದ ತಪಸ್ಸಿನ ಬಲದಿಂದ ಕೂಡಿದವನಾಗಿರುವನು. ಹೀಗಿರುವಾಗ ಇವನನ್ನು ನಾನು ಹೇಗೆತಾನೇ ಕೊಲ್ಲಲಿ; ಈ ಮುನಿಯು ಹೀಗೆಯೇ ತಪಸ್ಸನ್ನು ತುಂಬಾ ಗಳಿಸುತ್ತಾ ಬಂದರೆ, ಈಗ ನಾನು ಅನುಭವಿಸುತ್ತಿರುವ ಮೂರು ಲೋಕದ ಆಧಿಪತ್ಯದ ಸಿಂಹಾಸನವನ್ನು ಹತ್ತಲು ಇವನೂ ಅರ್ಹನಾಗಿ ನನಗೆ ಮುಂದೆ ತೊಂದರೆಯಾಗುವುದು. ಆದ್ದರಿಂದ ನನಗೆ ಮುಂದಾದರೂ ತೊಂದರೆಯನ್ನುಂಟುಮಾಡುವ ಇವನನ್ನು ಶತ್ರುವೆಂದು ತಿಳಿದುಕೊಂಡು ಇವನ ವಿಷಯದಲ್ಲಿ ಉದಾಸೀನಭಾವವನ್ನು ಹೇಗೆತಾನೇ ವಹಿಸುವುದು ? ಎಂದು ಇಂದ್ರನು ಯೋಚನೆಯನ್ನು ಮಾಡಿದನು. ॥೩॥

ದೇವತೆಗಳ ಸಮೂಹಕ್ಕೆಲ್ಲಕ್ಕೂ ಅಧಿಪತಿಯಾದ ಇಂದ್ರನು (ಹೀಗೆ) ಹಿಂದೆ ಹೇಳಿದಂತೆ ಯೋಚನೆಯನ್ನು ಮಾಡಿ, ತಪಸ್ಸನ್ನು ಮಾಡುತ್ತಿರುವ, ಸೂರ್ಯ ಚಂದ್ರರಿಗೆ ಸಮಾನವಾದ ತೇಜಶ್ಶಾಲಿಯಾದ ತ್ರಿಶಿರಸ್ಸೆಂಬ ಮುನಿಯನ್ನು ಉದ್ದೇಶ ಮಾಡಿಕೊಂಡು, ತನ್ನ ಮುಖ್ಯವಾದ ಲಕ್ಷ್ಯದಲ್ಲಿ ಬೇಗನೇ ಕೆಲಸವನ್ನು ಮಾಡುವುದಾದ, ವಜ್ರಾಯುಧವನ್ನು ಪ್ರಯೋಗಮಾಡಿದನು.

ಆ ವಜ್ರಾಯುಧದ ಏಟಿನಿಂದ ಹೊಡೆಯಲ್ಪಟ್ಟವನಾದ, ತಪಸ್ವಿಯಾದ ಆ ತ್ರಿಶಿರೋಮುನಿಯು ಭೂಮಿಯಲ್ಲಿ ಬಿದ್ದನು ಮತ್ತು ಮರಣವನ್ನು ಹೊಂದಿದನು.

ಶಿಖರಿಣಃ ಶಿಖರಂ ಕುಲಿಶಾರ್ದಿತಂ
ನಿಪತಿತಂ ಭುವಿ ವಾದ್ಭುತದರ್ಶನಂ ॥೫॥

ತಂ ನಿಹತ್ಯ ಮುದಮಾಪ ಸುರೇಶಶ್ಚುಕ್ರುಶುಶ್ಚ ಮುನಯಸ್ತು ಸಂಸ್ಥಿತಾಃ ।
ಹಾ ಹತೇತಿ ಭೃಶಮಾರ್ತನಿಸ್ವನಾಃ ಕಿಂ ಕೃತಂ ಶತಮುಖೇನ ಪಾಪಿನಾ ॥೬॥

ವಿನಾಪರಾಧಂ ತಪಸಾಂ ನಿಧಿರ್ಹತಃ ಶಚೀಪತಿಃ ಪಾಪಮತಿರ್ದುರಾತ್ಮಾ ।
ಫಲಂ ಕಿಲಾಯಂ ತಪಸಾ ಕೃತಸ್ಯ ಪ್ರಾಪ್ನೋತು ಪಾಪೀ ಹನನೋದ್ಭವಸ್ಯ ॥

ತಂ ನಿಹತ್ಯ ತರಸಾ ಸುರರಾಜೋ ನಿರ್ಜಗಾಮ ಸುರಮಂದಿರಮಾಶು ।
ಸ ಹತೋಽಪಿ ವಿರರಾಜ ಮಹಾತ್ಮಾ ಜೀವಮಾನ ಇವ ತೇಜಸಾಂ ನಿಧಿಃ॥೮॥

---

ಇವನು ಮರಣವನ್ನು ಹೊಂದಿ ಭೂಮಿಯಲ್ಲಿ ಬಿದ್ದಿರುವುದನ್ನು ನೋಡಿದರೆ, ವಜ್ರಾಯುಧದಿಂದ ಕತ್ತರಿಸಲ್ಪಟ್ಟದ್ದಾಗಿ ಭೂಮಿಯಲ್ಲಿ ಬಿದ್ದಿರುವ ಬೆಟ್ಟದ ಶಿಖರದಂತೆ ಅತ್ಯಾಶ್ಚರ್ಯವನ್ನುಂಟುಮಾಡುವಂತೆ ಕಾಣುತ್ತಿತ್ತು. ॥೫॥

ಆತ್ರಿಶಿರೋಮುನಿಯನ್ನು ಹೊಡೆದು ಇಂದ್ರನು ಸಂತೋಷವನ್ನು ಹೊಂದಿದನು. ಆದರೆ ಋಷಿಗಳು ಎಲ್ಲರೂ ಒಟ್ಟುಕೂಡಿದವರಾಗಿ ಸಂಕಟಪಡುವ ಧ್ವನಿಯಿಂದ, ಹಾಹಾಕಾರವನ್ನು ಮಾಡುತ್ತಾ, ಪಾಪಿಯಾದ ಇಂದ್ರನು ಇದೇನು ಇಂಥ ಕೆಟ್ಟ ಕೆಲಸವನ್ನು ಮಾಡಿದನು! ಎಂದು ವ್ಯಸನಪಟ್ಟರು. ॥೬॥

ಯಾವ ವಿಧವಾದ ಅಪರಾಧವನ್ನು ಮಾಡದಿದ್ದಾಗ್ಯೂ ತಪಸ್ಸಿಗೆ ನಿಧಿಯಾಗಿದ್ದ ತ್ರಿಶಿರೋಮುನಿಯು ವಧಿಸಲ್ಪಟ್ಟನು. ದುಷ್ಟನಾದ ಕೆಟ್ಟಬುದ್ಧಿಯುಳ್ಳವನಾದ ಇಂದ್ರನು ಪಾಪಿಷ್ಠನಾಗಿ ತಾನು ಹಿಂದುಮುಂದು ಆಲೋಚನೆಯನ್ನು ಸಹ ಮಾಡದೆ ಈ ಋಷಿಯನ್ನು ಕೊಂದದ್ದರಿಂದ ಉಂಟಾಗುವ ಫಲವನ್ನು ಹೊಂದಲೇಬೇಕಾದುದು ಉಚಿತವು ಎಂದು ಅಲ್ಲಿರುವ ಋಷಿಗಳು ಹೇಳುತ್ತಿದ್ದರು. ॥೭॥

ದೇವತೆಗಳಿಗೆ ರಾಜನಾದ ಇಂದ್ರನು ಅವನನ್ನು ಬೇಗನೆ ಕೊಂದು ತನ್ನ ಅರಮನೆಯನ್ನು ಕೂಡಲೆ ಹೊಂದಿದನು. ಇವನಿಂದ ಕೊಲ್ಲಲ್ಪಟ್ಟವನಾದರೂ ಮಹಾಮಹಿಮೆಯುಳ್ಳವನಾದ ಆ ಮುನಿಯು ತೇಜಸ್ಸಿನಿಂದ ಕೂಡಿದವನಾಗಿ ಬದುಕಿರುವಂತೆ ಪ್ರಕಾಶಿಸುತ್ತಿದ್ದನು. ॥೮॥

ತಂ ದೃಷ್ಟ್ವಾ ಪತಿತಂ ಭೂಮೌ ಜೀವಂತಮಿವ ವೃತ್ರಹಾ ।
ಚಿಂತಾಮಾಪಾಽತಿಖಿನ್ನಾಂಗಃ ಕಿಂ ವಾ ಜೀವೇದಯಂ ಪುನಃ ॥೯॥

ವಿಮೃಶ್ಯ ಮನಸಾಽತೀವ ತಕ್ಷಾಣಂ ಪುರತಃ ಸ್ಥಿತಂ ।
ಮಘವಾ ವೀಕ್ಷ್ಯ ತಂ ಪ್ರಾಹ ಸ್ವಕಾರ್ಯಸದೃಶಂ ವಚಃ ॥೧೦॥

ತಕ್ಷಂ ಛಿಂಧಿ ಶಿರಾಂಸ್ಯಸ್ಯ ಕುರುಷ್ವ ವಚನಂ ಮಮ ।
ಮಾ ಜೀವತು ಮಹಾತೇಜಾ ಭಾತಿ ಜೀವನ್ನಿವ ಸ್ವಯಂ ॥೧೧॥

॥ ತಕ್ಷೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ತಕ್ಷೋವಾಚ ವಿಗರ್ಹಯನ್ ।
ಮಹಾಸ್ಕಂಧೋ ಭೃಶಂ ಭಾತಿ ಪರಶುರ್ನಕರಿಷ್ಯತಿ ॥೧೨॥

---

ವೃತ್ರಾಸುರನನ್ನು ನಾಶಮಾಡಿದವನಾದ ಇಂದ್ರನು ಭೂಮಿಯಲ್ಲಿ ಬಿದ್ದಿರುವ ಅವನ ಶರೀರವನ್ನು ನೋಡಿ ಅವನು ಬದುಕಿ ಇರುವಂತೆ ಕಾಣುತ್ತಿರುವುದರಿಂದ ಬಹಳಮಟ್ಟಿನ ವ್ಯಸನವುಳ್ಳವನಾಗಿ ಇವನೇನಾದರೂ ಮೂರ್ಛೆಯನ್ನು ಹೊಂದಿರುವನೋ ಅಥವಾ ಪುನಃ ಬದುಕುವನೋ ಎಂಬುದಾಗಿ ಹೆಚ್ಚಾದ ಯೋಚನೆಗೆ ಒಳಗಾದನು. ॥೯॥

ಇಂದ್ರನು ತನ್ನ ಮನಸ್ಸಿನಲ್ಲಿ ಹೆಚ್ಚಾಗಿ ವಿಮರ್ಶೆಯನ್ನು ಮಾಡಿ, ತನ್ನ ಮುಂದೆ ನಿಂತಿರುವ ತಕ್ಷನೆಂಬುವವನನ್ನು ಕುರಿತು ತಾನು ಮಾಡಿರುವ ಕೆಲಸಕ್ಕನುಸಾರವಾಗಿ ಈ ಮಾತನ್ನು ಹೇಳಿದನು. ॥೧೦॥

ಎಲೈ ತಕ್ಷನೇ, ನೀನು ನನ್ನ ಮಾತನ್ನು ನಡೆಯಿಸು, ಇವನ ತಲೆಗಳನ್ನು ಕತ್ತರಿಸು. ಬಹಳ ತೇಜಶ್ಶಾಲಿಯಾದ ಇವನು ಬದುಕಕೂಡದು. ನಾನು ವಜ್ರಾಯುಧದಿಂದ ಇವನನ್ನು ಹೊಡೆದಾಗ್ಯೂ ಇವನು ಸಾಯದೆ ತಾನಾಗಿ ಬದುಕಿರುವಂತೆ ಕಾಣುತ್ತಿರುವನು. ಹೀಗೆಂದು ಹೇಳಿದ ಇಂದ್ರನ ಮಾತುಗಳನ್ನು ಕೇಳಿ ಆ ತಕ್ಷನು ಇಂದ್ರನನ್ನು ಹೀಯ್ಯಾಳಿಸುತ್ತಾ ಹೀಗೆ ಹೇಳಿದನು. ॥೧೧॥

ತಕ್ಷನು ಹೇಳಿದನು---ಇವನು ದೊಡ್ಡದಾದ ಹೆಗಲುಳ್ಳವನಾಗಿ ಮಹಿಮೆಯುಳ್ಳವನಂತೆ ತೋರುತ್ತಿರುವನು. ಕೊಡಲಿಯು ಕತ್ತರಿಸಲು ಹರಿಯುವುದಿಲ್ಲ,

**ತತೋ ನಾಹಂ ಕರಿಷ್ಯಾಮಿ ಕಾರ್ಯಮೇತದ್ವಿಗರ್ಹಿತಂ ।**
**ತ್ವಯಾ ವೈ ನಿಂದಿತಂ ಕರ್ಮ ಕೃತಂ ಸದ್ಭಿರ್ವಿಗರ್ಹಿತಂ ॥೧೩॥**

**ಅಹಂ ಬಿಭೇಮಿ ಪಾಪಾದ್ವೈ ಮೃತಸ್ಯೈವ ಹಿ ಮಾರಣೇ ।**
**ಮೃತೋಽಯಂ ಮುನಿರಸ್ತ್ಯೇವ ಶಿರಸಃ ಕೃಂತನೇನ ಕಿಂ ॥೧೪॥**

**ಭಯಂ ಕಿಂ ತೇಽತ್ರ ಸಂಜಾತಂ ಪಾಕಶಾಸನ ಕಥ್ಯತಾಂ ।**

॥ ಇಂದ್ರ ಉವಾಚ ॥

**ಸಜೀವ ಇವ ದೇಹೋಽಯಮಾಭಾತಿ ವಿಶದಾಕೃತಿಃ ॥೧೫॥**

**ತಸ್ಮಾದ್ಬಿಭೇಮಿ ಮಾ ಜೀವೇನ್ಮುನಿ ಶ್ಶತ್ರುರಯಂ ಮಮ ।**

॥ ತಕ್ಷೋವಾಚ ॥

**ನಾತ್ರ ಕಿಂ ತ್ರಪಸೇ ವಿದ್ವನ್ ಕ್ರೂರೇಣಾನೇನ ಕರ್ಮಣಾ ॥೧೬॥**
**ಋಷಿಪುತ್ರಮಿಮಂ ಹತ್ವಾ ಬ್ರಹ್ಮಹತ್ಯಾಭಯಂ ನ ಕಿಂ ।**

---

ಮತ್ತು ನಿಂದ್ಯವಾದ ಈ ಕಾರ್ಯವನ್ನು ನಾನೂ ಮಾಡಲಾರೆನು. ನೀನೂ ಸಹ ಸತ್ಪು ರುಷರು ನಿಂದೆ ಮಾಡುವುದಾದ ಹೀನಕೆಲಸವನ್ನು ಮಾಡಿರುತ್ತೀಯೆ! ॥೧೨-೧೩॥

ಓ ಇಂದ್ರನೇ, ನಾನೂ ಕೂಡ ಸತ್ತವನನ್ನು ಪುನಃ ಕಡಿಯುವುದೇ ಮುಂತಾದ ಪಾಪಕೆಲಸಕ್ಕಾಗಿ ಹೆದರುತ್ತೇನೆ. ಈ ಋಷಿಯು ಮೃತನಾಗಿಯೇ ಇರುವನು. ಹೀಗೆ ಮೃತನಾಗಿ ಇರುವ ಇವನ ತಲೆಗಳನ್ನು ಕತ್ತರಿಸುವುದರಿಂದ ನಿನಗೇನು ಪ್ರಯೋಜನವು? ಇವನ ತಲೆಯನ್ನು ಕತ್ತರಿಸದೆ ಇದ್ದರೆ ಪಾಕನೆಂಬ ರಾಕ್ಷಸನನ್ನೂ ಸಂಹರಿಸಿದ ಇಂದ್ರನಾಗಿರುವ ನಿನಗೆ ಏನು ಭಯವು ಬರುವುದು? ನೀನು ಅದನ್ನು ನನಗೆ ಹೇಳು, ಎಂದು ಆ ತಕ್ಷನು ಕೇಳಿದನು. ॥೧೪॥

ಇಂದ್ರನು ಹೇಳಿದನು—ಈ ತ್ರಿಶಿರೋಮುನಿಯ ಶರೀರವು ತೇಜಸ್ಸಿನಿಂದ ಹೊಳೆಯುತ್ತಿರುವ ಆಕಾರವುಳ್ಳದ್ದಾಗಿ ಇನ್ನೂ ಬದುಕಿರುವ ಹಾಗೆಯೇ ಕಾಣುತ್ತಲಿದೆ. ಆದುದರಿಂದ ನಾನು ಹೆದರುತ್ತೇನೆ. ಇವನು ನನ್ನ ಶತ್ರುವು. ಇವನು ಬದುಕಬಾರದು. ॥೧೫॥

ಓ ತಿಳುವಳಿಕೆಯುಳ್ಳ ಇಂದ್ರನೇ, ಇವನನ್ನು ಕೊಲ್ಲುವ ಕ್ರೂರವಾದ ಈ ಕೆಲಸವನ್ನು ಮಾಡುವುದರಿಂದ ನಿನಗೆ ನಾಚಿಕೆಯುಂಟಾಗುವುದಿಲ್ಲವೇ? ಮತ್ತು

**ಪ್ರಾಯಶ್ಚಿತ್ತಂ ಕರಿಷ್ಯಾಮಿ ಪಶ್ಚಾತ್ ಪಾಪಕ್ಷಯಾಯ ವೈ ॥೧೭॥**
**ಶತ್ರುಸ್ತು ಸರ್ವಥಾ ವಧ್ಯಶ್ಛಲೇನಾಪಿ ಮಹಾಮತೇ ।**

॥ ತಕ್ಷೋವಾಚ ॥

**ತ್ವಂ ಲೋಭಾಭಿಹತಃ ಪಾಪಂ ಕರೋಷಿ ಮಘವನ್ನಿಹ ॥೧೮॥**
**ತಂ ವಿನಾಽಹಂ ಕಥಂ ಪಾಪಂ ಕರೋಮಿ ವದ ಮೇ ವಿಭೋ ।**

॥ ಇಂದ್ರ ಉವಾಚ ॥

**ಮಖೇಷು ಖಲು ಭಾಗಂ ತೇ ಕರಿಷ್ಯಾಮಿ ಸದೈವ ಹಿ ॥೧೯॥**

**ಶಿರಃ ಪಶೋಸ್ತು ತೇ ಭಾಗಂ ಯಜ್ಞೇ ದಾಸ್ಯಂತಿ ಮಾನವಾಃ ।**
**ಶುಲ್ಕೇನಾನೇನ ಛಿಂಧಿ ತ್ವಂ ಶಿರಾಂಸ್ಯಸ್ಯ ಕುರು ಪ್ರಿಯಮ್ ॥೨೦॥**

---

ಋಷಿಗೆ ಮಗನಾಗಿರುವ ಇವನನ್ನು ಕೊಂದುದರಿಂದ ನಿನಗೆ ಬ್ರಹ್ಮಹತ್ಯಾಭಯವು ಬರುವುದಿಲ್ಲವೆ? ಎಂದು ತಕ್ಷನು ಇಂದ್ರನನ್ನು ಕೇಳಿದನು. ॥೧೬॥

ಇದೆಲ್ಲವೂ ಕಳೆದನಂತರ ಆ ಋಷಿಪುತ್ರನನ್ನು ಕೊಲೆ ಮಾಡಿದ ಪಾಪ ಪರಿಹಾರಕ್ಕಾಗಿ ನಾನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವೆನು. ಎಲೈ ಬುದ್ಧಿವಂತ ನಾದ ತಕ್ಷನೇ ಕೇಳು, ಶತ್ರುವಾದವನನ್ನು ಸರ್ವವಿಧವಾದ ಉಪಾಯಗಳಿಂದಲೂ ಮೋಸದಿಂದಲಾದರೂ ಕೊಲ್ಲಲೇಬೇಕು ಎಂದು ಇಂದ್ರನು ತಕ್ಷನಿಗೆ ಹೇಳಿದನು. ॥೧೭॥

ಓ ಪ್ರಭುವಾದ ಇಂದ್ರನೇ, ನೀನು ನಿನ್ನ ದೊರೆತನದ ಆಸೆಯಿಂದ ಕೂಡಿ ದವನಾಗಿ ಈ ಕೆಟ್ಟಕೆಲಸವನ್ನು ಈಗ ಮಾಡುವವನಾಗಿರುತ್ತೀಯೆ. ನನಗೆ ಯಾವ ವಿಧವಾದ ಲೋಭವೂ ನಿನಗೆ ಇರುವಂತೆ ಇಲ್ಲದಿರುವಾಗ ನೀನು ಹೇಳುವಂತೆ ಈ ಕೆಟ್ಟಕೆಲಸವನ್ನು ನಾನು ಏತಕ್ಕೆತಾನೇ ಮಾಡಲಿ? ನೀನು ಹೇಳು, ಎಂದು ತಕ್ಷನು ಇಂದ್ರನಿಗೆ ಹೇಳಿದನು. ॥೧೮॥

ಎಲೈ ತಕ್ಷನೇ, ನಿನಗೆ ನಾನು ಯಜ್ಞದಲ್ಲಿ ಹವಿರ್ಭಾಗವು ಯಾವಾಗಲೂ ಉಂಟಾಗುವಂತೆ ಮಾಡುವೆನು. ಲೋಕದಲ್ಲಿ ಯಜ್ಞವನ್ನು ಮಾಡುವವರು ಪಶು ವಿನ ತಲೆಯನ್ನು ನಿನ್ನ ಭಾಗವನ್ನಾಗಿ ಒಪ್ಪಿಸುವರು. ನೀನು ಈ ರೀತಿಯಾಗಿ ನಿನಗೆ ಸಲ್ಲುವ ಭಾಗವನ್ನು ಸ್ವೀಕರಿಸಿ ಈ ತ್ರಿಶಿರೋ ಮುನಿಯ ತಲೆಗಳನ್ನು ಕತ್ತ ರಿಸು. ನನಗೆ ಹಿತಕರವಾದ ಈ ಕೆಲಸವನ್ನು ಮಾಡು ಎಂದು ಇಂದ್ರನು ತಕ್ಷನಿಗೆ ಹೇಳಿದನು. ॥೧೯-೨೦॥

|| ವ್ಯಾಸ ಉವಾಚ ||

ಏತಚ್ಛ್ರುತ್ವಾ ಮಹೇಂದ್ರಸ್ಯ ವಚಸ್ತಕ್ಷಾ ಮುದಾನ್ವಿತಃ ।
ಕುಠಾರೇಣ ಶಿರಾಂಸ್ಯಸ್ಯ ಚಕರ್ತ ಸುದೃಢೇನ ಹಿ ||೨೦||

ಛಿನ್ನಾನಿ ತ್ರೀಣಿ ಶೀರ್ಷಾಣಿ ಪತಿತಾನಿ ಯದಾ ಭುವಿ ।
ತೇಭ್ಯಸ್ತು ಪಕ್ಷಿಣಃ ಕ್ಷಿಪ್ರಂ ವಿನಿಷ್ಪೇತುಸ್ಸಹಸ್ರಶಃ ||೨೨||

ಕಲವಿಂಕಾಸ್ತಿತ್ತಿರಯಸ್ತಥೈವ ಚ ಕಪಿಂಜಲಾಃ ।
ಪೃಥಕ್ ಪೃಥಕ್ ವಿನಿಷ್ಪೇ ತು ಮುಖತಸ್ತರಸಾ ತದಾ ||೨೩||

ಯೇನ ವೇದಾನಧೀತೇಸ್ಮ ಸೋಮಂ ಚ ಪಿಬತೇ ತಥಾ ।
ತಸ್ಮಾದ್ವಕ್ತ್ರಾತ್ಕಿಲೋತ್ಪೇತುಃ ಸದ್ಯ ಏವ ಕಪಿಂಜಲಾಃ ||೨೪||

ಯೇನ ಸರ್ವಾ ದಿಶಃ ಕಾಮಂ ಪಿಬನ್ನಿವ ನಿರೀಕ್ಷತೇ ।
ತಸ್ಮಾತ್ತು ತಿತ್ತಿರಾಸ್ತತ್ರ ನಿಸ್ಸೃತಾಸ್ತಿಗ್ಮತೇಜಸಃ ||೨೫||

---

ವ್ಯಾಸಋಷಿಯು ಹೇಳಿದನು—ಮಹೇಂದ್ರನು ಹೇಳಿದ ಈ ಮಾತನ್ನು ಕೇಳಿ ತಕ್ಷನು ಸಂತೋಷದಿಂದ ಕೂಡಿದವನಾಗಿ ಬಹಳ ಬಲವಾಗಿರುವ ಕೊಡಲಿಯಿಂದ ಈ ತ್ರಿಶಿರೋಮುನಿಯ ತಲೆಗಳನ್ನು ಕತ್ತರಿಸಿದನು. ||೨೧||

ಯಾವಾಗ ಈ ತ್ರಿಶಿರೋಮುನಿಯ ಮೂರು ತಲೆಗಳೂ ಕತ್ತರಿಸಲ್ಪಟ್ಟವುಗಳಾಗಿ ಭೂಮಿಯ ಮೇಲೆ ಬಿದ್ದವೋ ಆ ಕ್ಷಣದಲ್ಲಿ ಆ ತಲೆಗಳಿಂದ ಹಕ್ಕಿಗಳು ಸಾವಿರಗಟ್ಟಲೆಯಾಗಿ ಹಾರಿಹೋದುವು. ||೨೨||

ಇಗ ಕತ್ತರಿಸಲ್ಪಟ್ಟ ಋಷಿಯ ಮುಖಗಳಿಂದ ಬೇರೆಬೇರೆಯಾಗಿ ಕಲವಿಂಕ ಎಂಬ ಹಕ್ಕಿಗಳೂ, ತಿತ್ತಿರಿಪಕ್ಷಿಗಳೂ, ಕಪಿಂಜಲವೆಂಬ ಹಕ್ಕಿಗಳೂ ಸಹ ಬೇಗನೇ ಹಾರಿಹೋದುವು. ||೨೩||

ಯಾವ ಮುಖದಿಂದ ವೇದಾಧ್ಯಯನವನ್ನು ಮಾಡಿಕೊಂಡು ಸೋಮಪಾನವನ್ನು ಮಾಡುತ್ತಿದ್ದನೋ ಆ ಮುಖದಿಂದ ಆ ಕ್ಷಣದಲ್ಲಿಯೇ ಕಪಿಂಜಲವೆಂಬ ಹಕ್ಕಿಗಳು ಹಾರಿಹೋದುವು. ||೨೪||

ಯಾವ ಮುಖದಿಂದ ಎಲ್ಲಾ ದಿಕ್ಕುಗಳನ್ನೂ ನುಂಗುವಂತೆ ಬಹಳಮಟ್ಟಿಗೆ ನೋಡುತ್ತಿದ್ದನೋ ಆ ಮುಖದಿಂದ ಹೆಚ್ಚಾದ ತೇಜಸ್ಸುಳ್ಳವುಗಳಾದ ತಿತ್ತಿರಿ ಎಂಬ ಹಕ್ಕಿಗಳು ಹೊರಕ್ಕೆ ಹಾರಿಹೋದುವು. ||೨೫||

ಯತ್ಸುರಾಪಂತು ತದ್ವಕ್ತ್ರಂ ತಸ್ಮಾತ್ತು ಚಟಕಾಃ ಕಿಲ ।
ವಿನಿಷ್ಪೇತುಸ್ತ್ರಿಶಿರಸ ಏವಂ ತೇ ವಿಹಗಾ ನೃಪ ॥೨೬॥

ಏವಂ ವಿನಿಸ್ಸೃತಾನ್ ದೃಷ್ಟ್ವಾ ತೇಭ್ಯಃ ಶಕ್ರಸ್ತದಾಂಡಜಾನ್ ।
ಮುಮೋದ ಮನಸಾ ರಾಜನ್ ಜಗಾಮ ತ್ರಿದಿವಂ ಪುನಃ ॥೨೭॥

ಗತೇ ಶಕ್ರೇ ತು ತಕ್ಷಾಽಪಿ ಸ್ವಗೃಹಂ ತರಸಾ ಯಯೌ ।
ಯಜ್ಞಭಾಗಂ ಪರಂ ಲಬ್ಧ್ವಾ ಮುದಮಾಪ ಮಹೀಪತೇ ॥೨೮॥

ಇಂದ್ರೋಽಥ ಸ್ವಗೃಹಂ ಗತ್ವಾ ಹತ್ವಾ ಶತ್ರುಂ ಮಹಾಬಲಂ ।
ಮೇನೇ ಕೃತಾರ್ಥಮಾತ್ಮಾನಂ ಬ್ರಹ್ಮಹತ್ಯಾಮಚಿಂತಯನ್ ॥೨೯॥

---

ಯಾವ ಮುಖದಿಂದ ಅವನು ಮದ್ಯಪಾನಮಾಡುತ್ತಿದ್ದನೋ ಆ ಮುಖದಿಂದ ಚಟಕ (ಗುಬ್ಬಚ್ಚಿ) ಎಂಬ ಪಕ್ಷಿಗಳು ಹಾರಿಹೋದವು. ಎಲೈ ಜನಮೇಜಯ ರಾಜನೇ ಕೇಳು—ಆ ಮುನಿಯ ಮೂರು ತಲೆಗಳಿಂದಲೂ ಹೀಗೆ ಹಕ್ಕಿಗಳು ಹಾರಿ ಹೋದುವು. ॥೨೬॥

ಇಂದ್ರನು ಹೀಗೆ ಹಕ್ಕಿಗಳು ಅವನ ಮುಖದಿಂದ ಹಾರಿಹೋದದ್ದನ್ನು ಕಂಡು ಮನಸ್ಸಿನಲ್ಲಿ ಬಹಳಮಟ್ಟಿನ ಸಂತೋಷವನ್ನು ಹೊಂದಿದನು. ಎಲೈ ಜನಮೇಜಯ ರಾಜನೇ ಕೇಳು, ಆ ಮೇಲೆ ಇಂದ್ರನು ಸಂತೋಷದಿಂದ ಸ್ವರ್ಗಕ್ಕೆ ಹಿಂತಿರುಗಿ ಪ್ರಯಾಣಮಾಡಿದನು. ॥೨೭॥

ಇಂದ್ರನು ಸ್ವರ್ಗಕ್ಕೆ ಹೋದನಂತರ ಆ ತಕ್ಷನೂ ಸಹ ತನ್ನ ಮನೆಗೆ ಬೇಗನೆ ಬಂದನು. ಎಲೈ ರಾಜನೇ ಕೇಳು, ಇಂದ್ರನ ಆಜ್ಞೆಯಂತೆ ಅವನೂ ಯಜ್ಞಗಳಲ್ಲಿ ಹವಿರ್ಭಾಗವನ್ನು ಹೊಂದಿ ಸಂತೋಷದಿಂದ ಇದ್ದನು. ॥೨೮॥

ಅನಂತರದಲ್ಲಿ ಇಂದ್ರನೂ ಕೂಡ ಬಹಳ ಬಲಿಷ್ಠನಾದ ಶತ್ರುವನ್ನು ನಾಶ ಮಾಡಿ, ಅದರಿಂದ ಉಂಟಾದ ಬ್ರಹ್ಮಹತ್ಯೆಯನ್ನು ಲೆಕ್ಕಕ್ಕೆ ತರದೆ, ತನ್ನ ಮನೆಗೆ ಬಂದು ತನ್ನನ್ನು ಕೃತಕೃತ್ಯನನ್ನಾಗಿ ತಿಳಿದುಕೊಂಡಿದ್ದನು. ॥೨೯॥

ತಂ ಶ್ರುತ್ವಾ ನಿಹತಂ ತ್ವಷ್ಟಾ ಪುತ್ರಂ ಪರಮಧಾರ್ಮಿಕಂ ।
ಚುಕೋಪಾತೀವ ಮನಸಾ ವಚನಂ ಚೇದಮಬ್ರವೀತ್ ॥೩೦॥

ಅನಾಗಸಂ ಮುನಿಂ ಯಸ್ಮಾತ್ ಪುತ್ರಂ ನಿಹತವಾನ್ ಮಮ ।
ತಸ್ಮಾದುತ್ಪಾದಯಿಷ್ಯಾಮಿ ತದ್ವಧಾರ್ಥಂ ಸುತಂ ಪುನಃ ॥೩೧॥

ಸುರಾಃ ಪಶ್ಯಂತು ಮೇ ವೀರ್ಯಂ ತಪಸಶ್ಚ ಬಲಂ ತಥಾ ।
ಜಾನಾತು ಸರ್ವಂ ಪಾಪಾತ್ಮಾ ಸ್ವಕೃತಸ್ಯ ಫಲಂ ಮಹತ್ ॥೩೨॥

ಇತ್ಯುಕ್ತ್ವಾಽಗ್ನಿಂ ಜುಹಾವಾಥ ಮಂತ್ರೈರಾಥರ್ವಣೋದಿತೈಃ ।
ಪುತ್ರಸ್ಯೋತ್ಪಾದನಾರ್ಥಾಯ ತ್ವಷ್ಟಾ ಕ್ರೋಧಸಮಾಕುಲಃ ॥೩೩॥

ಕೃತೇ ಹೋಮೇಽಷ್ಟರಾತ್ರಂತು ಸಂದೀಪ್ತಾಚ್ಚ ವಿಭಾವಸೋಃ ।
ಪ್ರಾದುರ್ಬಭೂವ ತರಸಾ ಪುರುಷಃ ಪಾವಕೋಪಮಃ ॥೩೪॥

---

ತ್ವಷ್ಟೃಬ್ರಹ್ಮನು ಬಹಳ ಧರ್ಮಿಷ್ಠನಾದ ತನ್ನ ಆ ಮಗನು ಇಂದ್ರನಿಂದ ಹತನಾದುದನ್ನು ಕೇಳಿ ಮನಸ್ಸಿನಲ್ಲಿ ಬಹಳ ಮಟ್ಟಿಗೆ ಕೋಪಗೊಂಡನು. ಮತ್ತು ಈ ಮಾತನ್ನು ಹೇಳಿದನು. ॥೩೦॥

ಯಾವ ವಿಧವಾದ ತಪ್ಪನ್ನೂ ಮಾಡದೆ ಇರುವ ಋಷಿಯಾಗಿ, ತಪಸ್ಸನ್ನು ಮಾಡುತ್ತಿರುವ ನನ್ನ ಮಗನನ್ನು ಯಾವ ಕಾರಣದಿಂದ ಇಂದ್ರನು ನಾಶಮಾಡಿದನೋ, ಆ ಕಾರಣದಿಂದಲೇ ನಾನೂ ಕೂಡ ಆ ಇಂದ್ರನನ್ನು ಕೊಲ್ಲುವುದಕ್ಕಾಗಿ ಬೇರೆಯೊಬ್ಬ ಮಗನನ್ನು ಸೃಷ್ಟಿಮಾಡುವೆನು. ॥೩೧॥

ದೇವತೆಗಳೆಲ್ಲರೂ ನನ್ನ ಶಕ್ತಿಯನ್ನು ನೋಡಲಿ, ಮತ್ತು ನನ್ನ ತಪಸ್ಸಿನ ಬಲವನ್ನು ಮನಗಾಣಲಿ. ಪಾಪಿಯಾದ ಇಂದ್ರನು ತಾನು ಮಾಡಿದ ದುಷ್ಕರ್ಮದ ಅಪಾರವಾದ ಫಲವನ್ನೂ ತಿಳಿಯಲಿ. ॥೩೨॥

ಹೀಗೆ ಹೇಳುತ್ತಾ ತ್ವಷ್ಟೃಬ್ರಹ್ಮನು ಕೋಪದಿಂದ ಕೂಡಿದವನಾಗಿ ಇಂದ್ರನನ್ನು ನಾಶಮಾಡುವ ಮಗನನ್ನು ಸೃಷ್ಟಿಮಾಡಲು ಅಥರ್ವಣ ವೇದದಲ್ಲಿ ಹೇಳಿದ ಮಂತ್ರಗಳಿಂದ ಅಗ್ನಿಯಲ್ಲಿ ಹೋಮವನ್ನು ಮಾಡಿದನು. ॥೩೩॥

ಹೀಗೆ ಆ ತ್ವಷ್ಟೃಬ್ರಹ್ಮನು ಎಂಟು ರಾತ್ರಿಗಳೂ ಕೂಡ ಅವಿಚ್ಛಿನ್ನವಾಗಿ ಹೋಮವನ್ನು ಮಾಡುತ್ತಾ ಇರಲು ಅಗ್ನಿಗೆ ಸಮಾನನಾದ ಒಬ್ಬ ಮನುಷ್ಯನು ಆ ಅಗ್ನಿಯಿಂದ ಉದ್ಭವಿಸಿದನು. ॥೩೪॥

ತಂ ದೃಷ್ಟ್ವಾಽಗ್ರೇ ಸುತಂ ತ್ವಷ್ಟಾ ತೇಜೋಬಲಸಮನ್ವಿತಂ ।
ವೇಗಾತ್ಪ್ರಕಟಿತಂ ವಹ್ನೇರ್ದೀಪ್ಯಮಾನಮಿವಾನಲಂ ॥೩೫॥

ಉವಾಚ ವಚನಂ ತ್ವಷ್ಟಾ ಸುತಂ ವೀಕ್ಷ್ಯ ಪುರಸ್ಥಿತಂ ।
ಇಂದ್ರಶತ್ರೋ ವಿವರ್ಧಸ್ವ ಪ್ರತಾಪಾತ್ ತಪಸೋ ಮಮ ॥೩೬॥

ಇತ್ಯುಕ್ತೇ ವಚನೇ ತ್ವಷ್ಟ್ರಾ ಕ್ರೋಧಪ್ರಜ್ವಲಿತೇನ ಚ ।
ಸೋಽವರ್ಧತ ದಿವಂ ಸ್ತಬ್ಧ್ವಾ ವೈಶ್ವಾನರಸಮದ್ಯುತಿಃ ॥೩೭॥

ಜಾತಸ್ಸಪರ್ವತಾಕಾರಃ ಕಾಲಮೃತ್ಯುಸಮಸ್ಸ್ವರಾಟ್ ।
ಕಿಂ ಕರೋಮೀತಿ ತಂ ಪ್ರಾಹ ಪಿತರಂ ಪರಮಾತುರಂ ॥೩೮॥

---

ಆಗ ತ್ವಷ್ಟೃಬ್ರಹ್ಮನು ಚೆನ್ನಾಗಿ ಪ್ರಕಾಶಿಸುತ್ತಿರುವ ಅಗ್ನಿಯ ದೆಸೆಯಿಂದ, ಬೇಗನೆ ಹೊರಕ್ಕೆ ಬಂದು, ಮನುಷ್ಯಾಕೃತಿಯಿಂದ ಕೂಡಿ, ಬೇರೆಯಾಗಿ ಹೊಳೆಯುತ್ತಿರುವ ಅಗ್ನಿಯಂತೆ, ತೇಜಸ್ಸಿನಿಂದಲೂ, ಶಕ್ತಿಯಿಂದಲೂ ಕೂಡಿಕೊಂಡು, ಮುಂದೆ ನಿಂತಿರುವ ಮಗನನ್ನು ನೋಡಿದನು. ॥೩೫॥

ಆಗ ತ್ವಷ್ಟೃಬ್ರಹ್ಮನು ತನ್ನ ಎದುರಿಗೆ ನಿಂತಿರುವ ಮಗನನ್ನು ನೋಡಿ "ಇಂದ್ರನ ಶತ್ರುವಾಗಿ ಇರುವವನೇ, ನೀನು ನನ್ನ ತಪಸ್ಸಿನ ಬಲದಿಂದಲೂ, ನಿನ್ನ ಪರಾಕ್ರಮದಿಂದಲೂ ಸಹ ವೃದ್ಧಿಯನ್ನು ಹೊಂದು" ಎಂಬುದಾಗಿ ಆಶೀರ್ವಾದವನ್ನು ಮಾಡಿದನು. ॥೩೬॥

ತ್ವಷ್ಟೃಬ್ರಹ್ಮನು ಕೋಪದಿಂದ ಉರಿಯುತ್ತಿರುವವನಾಗಿ ಹೀಗೆ ಹೇಳಿದ ಕೂಡಲೇ, ಅವನು ಅಂತರಿಕ್ಷವನ್ನೆಲ್ಲವನ್ನೂ ವ್ಯಾಪಿಸಿಕೊಂಡು ಅಗ್ನಿಗೆ ಸಮನಾದ ಕಾಂತಿಯುಳ್ಳವನಾಗಿ ವೃದ್ಧಿಯನ್ನು ಹೊಂದಿದನು. ॥೩೭॥

ಅಗ್ನಿಯ ಕುಂಡದಿಂದ ಹುಟ್ಟಿದ ಅವನು ಬೆಟ್ಟದಷ್ಟು ದೊಡ್ಡ ಆಕಾರವುಳ್ಳವನಾಗಿ, ಕಾಲಮೃತ್ಯುವಿನಂತೆ ಭಯಂಕರನಾಗಿ, ಸ್ವಾರಾಜ್ಯವನ್ನೂ ಸಂಪಾದಿಸುವಷ್ಟು ಮಟ್ಟಿನ ಶಕ್ತನಾಗಿ, ಹೆಚ್ಚಾದ ದುಃಖದಿಂದಿರುವ ತಂದೆಯನ್ನು ನೋಡಿ, ನಾನು ನಿನಗೆ ಏನನ್ನು ಮಾಡಲಿ? ಎಂದು ಕೇಳಿದನು. ॥೩೮॥

**ಕುರು ಮೇ ನಾಮಕಂ ನಾಥ ಕಾರ್ಯಂ ಕಥಯ ಸುವ್ರತ ।**
**ಚಿಂತಾತುರೋಽಸಿ ಕಸ್ಮಾತ್ತ್ವಂ ಬ್ರೂಹಿ ಮೇ ಶೋಕಕಾರಣಂ ॥೩೯॥**

**ನಾಶಯಾಮ್ಯದ್ಯ ತೇ ಶೋಕಂ ಇತಿ ಮೇ ವ್ರತಮಾಹಿತಂ ।**
**ತೇನ ಜಾತೇನ ಕಿಂ ಭೂಯಃ ಪಿತಾ ಭವತಿ ದುಃಖಿತಃ ॥೪೦॥**

**ಪಿಬಾಮಿ ಸಾಗರಂ ಸದ್ಯಶ್ಚೂರ್ಣಯಾಮಿ ಧರಾಧರಾನ್ ।**
**ಉದ್ಯಂತಂ ವಾರಯಾಮ್ಯದ್ಯ ತರಣಿಂ ತಿಗ್ಮತೇಜಸಂ ॥೪೧॥**

**ಹನ್ಮೀಂದ್ರಂ ವರುಣಂ ಸದ್ಯೋ ಯಮಂ ವಾ ದೇವತಾಂತರಂ ।**
**ಕ್ಷಿಪಾಮಿ ಸಾಗರೇ ಸರ್ವಾನ್ ಸಮುತ್ಪಾಟ್ಯ ಚ ಮೇದಿನೀಂ ॥೪೨॥**

**ಇತ್ಯಾಕರ್ಣ್ಯ ವಚಸ್ತಸ್ಯ ಪಿತಾಪುತ್ರಸ್ಯ ಪೇಶಲಂ ।**
**ಪ್ರತ್ಯುವಾಚಾತಿಮುದಿತಸ್ತಂ ಸುತಂ ಪರ್ವತೋಪಮಂ ॥೪೩॥**

---

ಓ ಸ್ವಾಮಿಯೇ, ನನಗೆ ಒಂದು ಹೆಸರನ್ನು ಇಡು. ಓ ನಿಯಮದಿಂದಿರುವ ತಂದೆಯೇ ನೀನು ಏತಕ್ಕೆ ವ್ಯಸನದಿಂದ ಕೊರಗುತ್ತಿರುವೆ. ಹೀಗೆ ವ್ಯಸನವು ಉಂಟಾಗಲು ಕಾರಣವೇನು ? ॥೩೯॥

ನಾನು ಈಗ ನಿನ್ನ ದುಃಖವನ್ನು ನಾಶಗೊಳಿಸುವೆನು ಎಂಬುದು ನನ್ನ ವ್ರತವಾಗಿರುತ್ತದೆ. ಹೀಗೆ ವ್ರತವನ್ನು ಧರಿಸಿಕೊಂಡು ನಾನು ಹುಟ್ಟಿರುವಲ್ಲಿ ತಂದೆಯಾದ ನೀನು ಏತಕ್ಕೆ ದುಃಖವನ್ನು ಹೊಂದಿರಬೇಕು. ? ॥೪೦॥

ನಾನು ಸಮುದ್ರವನ್ನು ಸಮಗ್ರವಾಗಿ ಪಾನಮಾಡಲೆ ? ಬೆಟ್ಟಗಳೆಲ್ಲವನ್ನೂ ಪುಡಿಪುಡಿ ಮಾಡಲೆ ? ಉದಯಿಸುತ್ತಿರುವ ಬಹಳ ತೇಜಶ್ಶಾಲಿಯಾದ ಸೂರ್ಯನನ್ನು ತಡೆದು ನಿಲ್ಲಿಸಲೇ ? ಏನು ಕೆಲಸವನ್ನು ಮಾಡಲಿ ? ॥೪೧॥

ಇಂದ್ರನನ್ನಾಗಲಿ, ವರುಣನನ್ನಾಗಲಿ ಅಥವಾ ಯಮನನ್ನಾಗಲಿ ಯಾವ ದೇವತೆಯನ್ನು ನಿಗ್ರಹಮಾಡಲಿ ? ಸಮಸ್ತವಾದ ಭೂಮಂಡಲವನ್ನು ಈಗ ಇರುವ ಸನ್ನಿವೇಶದಿಂದ ತೆಗೆದು ಸಮುದ್ರದೊಳಗೆ ಮುಳುಗಿಸಲೆ? ಏನನ್ನು ಮಾಡಲಿ ? ॥೪೨॥

ತಂದೆಯಾದ ತ್ವಷ್ಟೃಬ್ರಹ್ಮನು ಮಗನು ಹೇಳುತ್ತಿರುವ ಮೃದುವಾದ ಅಂತಹ ಮಾತುಗಳನ್ನು ಕೇಳಿ, ಬಹಳ ಸಂತೋಷವುಳ್ಳವನಾಗಿ ಬೆಟ್ಟಕ್ಕೆ ಸಮನಾದ ಆಕಾರವುಳ್ಳ ಅವನ ಮಾತಿಗೆ ಪ್ರತ್ಯುತ್ತರವನ್ನು ಹೀಗೆ ಹೇಳಿದನು. ॥೪೩॥

ವೃಜಿನಾತ್ ತ್ರಾತುಮಧುನಾ ಯಸ್ಮಾಚ್ಛಕ್ತೋಽಸಿ ಪುತ್ರಕ ।
ತಸ್ಮಾತ್ ವೃತ್ರ ಇತಿ ಖ್ಯಾತಂ ತವ ನಾಮ ಭವಿಷ್ಯತಿ ॥೪೪॥

ಭ್ರಾತಾ ತವ ಮಹಾಭಾಗ ತ್ರಿಶಿರಾನಾಮ ತಾಪಸಃ ।
ತ್ರೀಣಿ ತಸ್ಯ ಚ ಶೀರ್ಷಾಣಿ ಹ್ಯಭವನ್ ವೀರ್ಯವಂತಿ ಚ ॥೪೫॥

ವೇದವೇದಾಂಗತತ್ವಜ್ಞೋ ಸರ್ವವಿದ್ಯಾವಿಶಾರದಃ ।
ಸಂಸ್ಥಿತಸ್ತಪಸಿ ಪ್ರಾಯಸ್ತ್ರಿಲೋಕೀ ವಿಸ್ಮಯಪ್ರದೇ ॥೪೬॥

ಶಕ್ರೇಣ ತು ಹತಃ ಸೋಽದ್ಯ ವಜ್ರಘಾತೇನ ಸಾಂಪ್ರತಂ ।
ವಿನಾಪರಾಧಂ ಸಹಸಾ ಛಿನ್ನಾನಿ ಮಸ್ತಕಾನಿ ಚ ॥೪೭॥

ತಸ್ಮಾತ್ ತ್ವಂ ಪುರುಷವ್ಯಾಘ್ರ ಜಹಿ ಶಕ್ರಂ ಕೃತಾಗಸಂ ।
ಬ್ರಹ್ಮಹತ್ಯಾಯುತಂ ಪಾಪಂ ನಿಸ್ಪೃಹಂ ದುರ್ಮತಿಂ ಶಠಂ ॥೪೮॥

---

ಎಲೈ ಪುತ್ರನೇ, ನೀನು ಪಾಪ ದುಃಖದಿಂದ ನನ್ನನ್ನು ಕಾಪಾಡಲು ಯಾವ ಕಾರಣದಿಂದ ಶಕ್ತನಾಗಿರುವೆಯೋ ಆ ಕಾರಣದಿಂದ ಈಗ ನಿನ್ನ ಹೆಸರು ವೃತ್ರನೆಂದು ಲೋಕದಲ್ಲಿ ಪ್ರಸಿದ್ಧಿಯಾಗಲಿ ಎಂದು ನಾನು ಹೇಳುವೆನು. ॥೪೪॥

ಎಲೈ ಅದೃಷ್ಟಶಾಲಿಯೇ ನಿನಗೆ ಅಣ್ಣನಾದವನು ತ್ರಿಶಿರಾ ಎಂಬ ಹೆಸರುಳ್ಳವನು ಇದ್ದನು. ಅವನು ತಪಸ್ಸನ್ನು ಮಾಡುತ್ತಿದ್ದನು. ಅವನಿಗೆ ಬಹಳ ಶಕ್ತಿಯುಳ್ಳವುಗಳಾದ ಮೂರು ತಲೆಗಳು ಇದ್ದುವು. ॥೪೫॥

ಆ ತ್ರಿಶಿರಾ ಎಂಬುವನು ವೇದವೇದಾಂಗಗಳನ್ನು ಬಲ್ಲವನಾಗಿ, ಎಲ್ಲಾ ವಿದ್ಯೆಗಳಲ್ಲಿಯೂ ಬುದ್ಧಿವಂತನಾಗಿದ್ದನು. ಮೂರು ಲೋಕಗಳಿಗೂ ಆಶ್ಚರ್ಯವನ್ನುಂಟುಮಾಡುವಂತೆ ತಪಸ್ಸನ್ನು ಮಾಡುವ ಕೆಲಸದಲ್ಲಿ ಯಾವಾಗಲೂ ನಿರತನಾಗಿದ್ದನು. ॥೪೬॥

ಹೀಗೆ ತಪಸ್ಸನ್ನು ಮಾಡುತ್ತಿರುವ ಅವನನ್ನು ಇಂದ್ರನು ಈಗ ತನ್ನ ವಜ್ರಾಯುಧದಿಂದ ಹೊಡೆದು ಕೊಂದಿರುವನು. ಯಾವ ವಿಧವಾದ ತಪ್ಪನ್ನೂ ಮಾಡದಿದ್ದಾಗ್ಯೂ ಅವನನ್ನು ಕೊಂದದ್ದಲ್ಲದೆ ಅವನ ಮೂರು ತಲೆಗಳನ್ನೂ ಸಹ ಕಡಿಸಿರುವನು. ॥೪೭॥

ಎಲೈ ಪುರುಷಶ್ರೇಷ್ಠನೇ, ಹಿಂದಿನ ಸಂಗತಿಯು ಹೀಗೆ ನಡೆದಿರುವುದರಿಂದ ತಪ್ಪು ಕೆಲಸವನ್ನು ಮಾಡಿದ ಕಾರಣ ಬ್ರಹ್ಮಹತ್ಯೆಯಿಂದ ಕೂಡಿದವನಾಗಿ, ಪಾಪಿಷ್ಠ

ಇತ್ಯುಕ್ತ್ವಾ ಚ ತದಾ ತ್ವಷ್ಟಾ ಪುತ್ರಶೋಕಸಮಾಕುಲಃ ।
ಆಯುಧಾನಿ ಚ ದಿವ್ಯಾನಿ ಚಕಾರ ವಿವಿಧಾನಿ ಚ ॥೪೯॥

ದದಾವಸ್ಮೈ ಸಹಸ್ರಾಕ್ಷವಧಾಯ ಪ್ರಬಲಾನಿ ಚ ।
ಖಡ್ಗಶೂಲಗದಾಶಕ್ತಿತೋಮರಪ್ರಮುಖಾನಿ ವೈ ॥೫೦॥

ಶಾರ್ಙ್ಗಂ ಧನುಸ್ತಥಾ ಬಾಣಂ ಪರಿಘಂ ಪಟ್ಟಿಸಂ ತಥಾ ।
ಚಕ್ರಂ ದಿವ್ಯಂ ಸಹಸ್ರಾರಂ ಸುದರ್ಶನಸಮಪ್ರಭಂ ॥೫೧॥

ತೂಣೀರೌ ಚಾಕ್ಷಯೌ ದಿವ್ಯೌ ಕವಚಂ ಚಾತಿಸುಂದರಂ ।
ರಥಂ ಮೇಘಪ್ರತೀಕಾಶಂ ದೃಢಂ ಭಾರಸಹಂ ಜವಂ ॥೫೨॥

---

ನಾಗಿ, ಲಜ್ಜೆಯಿಲ್ಲದೆ, ಕೆಟ್ಟಬುದ್ಧಿಯಿಂದ ಕೂಡಿದವನಾಗಿ, ದುಷ್ಟನಾಗಿರುವ ಇಂದ್ರನನ್ನು ನಿಗ್ರಹಮಾಡು. ॥೪೮॥

ಮಗನು ನಾಶವಾದನೆಂಬ ದುಃಖದಿಂದ ಕೂಡಿರುವನಾದ ತ್ವಷ್ಟೃಬ್ರಹ್ಮನು ಹೀಗೆ ಆ ವೃತ್ರನ ಸಂಗಡ ಮಾತನಾಡುತ್ತಾ ಆ ಕ್ಷಣದಲ್ಲಿ ಉತ್ತಮವಾದ ಅನೇಕ ವಿಧವಾದ ಆಯುಧಗಳನ್ನೂ ನಿರ್ಮಾಣ ಮಾಡಿದನು. ॥೪೯॥

ತ್ವಷ್ಟೃಬ್ರಹ್ಮನು ಇಂದ್ರನನ್ನು ವಧೆಮಾಡುವುದಕ್ಕಾಗಿ ಕತ್ತಿ, ಶೂಲ, ಗದಾ, ಶಕ್ತಿ, ತೋಮರ, ಪರಿಘ, ಪಟ್ಟಸ ಇವೇ ಮೊದಲಾದ ಬಲವಾದ ಆಯುಧಗಳನ್ನೂ ಶಾರ್ಙವೆಂಬ ಧನುಸ್ಸನ್ನೂ, ಬಾಣಗಳನ್ನೂ ಸಹ ವೃತ್ರನಿಗೆ ಒದಗಿಸಿ ಕೊಟ್ಟನು. ॥೫೦॥

ಸಾವಿರ ಅಲಗುಗಳಿಂದ್ಧ ಕೂಡಿರುವ, ಉತ್ತಮವಾದ ಸುದರ್ಶನವೆಂಬ ಚಕ್ರಾಯುಧಕ್ಕೆ ಸಮನಾದ ಚಕ್ರಾಯುಧವನ್ನೂ, ಎಷ್ಟು ಬಾಣಗಳನ್ನು ತೆಗೆದರೂ, ಯಾವಾಗಲೂ ತುಂಬಿರುವ ಎರಡು ಬಾಣದ ಚೀಲಗಳನ್ನೂ, ಯುದ್ಧಕಾಲದಲ್ಲಿ ತೊಡುವುದಾದ, ಸುಂದರವಾದ ಕವಚವನ್ನೂ, ಮೇಘಕ್ಕೆ ಸಮಾನವಾದ, ವೇಗದಿಂದ ಕೂಡಿರುವ, ಘಟ್ಟಿಯಾದ, ಭಾರವನ್ನು ತಡೆಯುವುದಾದ, ವೇಗಶಾಲಿಯಾಗಿರುವ ರಥವನ್ನೂ ಸಹ ಅವನು ನಿರ್ಮಾಣ ಮಾಡಿ ಇಂದ್ರನನ್ನು ವಧೆ ಮಾಡಲೆಂಬ ಉದ್ದೇಶದಿಂದ ವೃತ್ರನಿಗೆ ಕೊಟ್ಟನು ॥೫೧-೫೨॥

ಯುದ್ಧೋಪಕರಣಂ ಸರ್ವಂ ಕೃತ್ವಾ ಯುದ್ಧಾಯ ಪಾರ್ಥಿವ ।
ದತ್ವಾಽಸೌ ಪ್ರೇರಯಾಮಾಸ ತ್ವಷ್ಟಾ ಕ್ರೋಧಸಮನ್ವಿತಃ ॥೫೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ
ದ್ವಿತೀಯೋಽಧ್ಯಾಯಃ.

---

ಎಲೈ ಜನಮೇಜಯರಾಜನೇ ಕೇಳು, ಕೋಪದಿಂದ ಕೂಡಿದವನಾದ ತ್ವಷ್ಟೃಬ್ರಹ್ಮನು ತನ್ನ ಮಗನಾದ ವೃತ್ರನಿಗೆ ಇಂದ್ರನ ಸಂಗಡ ಯುದ್ಧ ಮಾಡುವುದಕ್ಕಾಗಿ ಸಮಸ್ತವಾದ ಯುದ್ಧಸಾಮಗ್ರಿಗಳನ್ನೂ ನಿರ್ಮಾಣ ಮಾಡಿ ಕೊಟ್ಟು ಯುದ್ಧಕ್ಕಾಗಿ ಪ್ರೇರಣೆ ಮಾಡಿ ಕಳುಹಿಸಿದನು. ॥೫೩॥

ಇಲ್ಲಿಗೆ ಶ್ರೀದೇವಿಭಾಗವತದಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಎರಡನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠ ಸ್ಕಂಧೇ

### || ತೃತೀಯೋಽಧ್ಯಾಯಃ ||

### ಮೂರನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಕೃತ ಸ್ವಸ್ತ್ಯಯನೋ ವೃತ್ರೋ ಬ್ರಾಹ್ಮಣೈರ್ವೇದಪಾರಗೈಃ ।**
**ನಿರ್ಜಗಾಮ ರಥಾರೂಢೋ ಹನ್ತುಂ ಶಕ್ರಂ ಮಹಾಬಲಃ ||೧||**

**ತದೈವ ರಾಕ್ಷಸಾಃ ಕ್ರೂರಾಃ ಪುರಾ ದೇವಪರಾಜಿತಾಃ ।**
**ಸಮಾಜಗ್ಮುಶ್ಚ ಸೇವಾರ್ಥಂ ವೃತ್ರಂ ಜ್ಞಾತ್ವಾ ಮಹಾಬಲಂ ||೨||**

**ಇಂದ್ರದೂತಾಸ್ತು ತಂ ದೃಷ್ಟ್ವಾ ಯುದ್ಧಾಯ ತು ಸಮಾಗತಂ ।**
**ವೇಗಾದಾಗತ್ಯ ವೃತ್ತಾಂತಂ ಶಶಂಸುಸ್ತಸ್ಯ ಚೇಷ್ಟಿತಂ ||೩||**

---

ವ್ಯಾಸಋಷಿಯು ಹೇಳಿದನು, ವೇದಗಳನ್ನು ಚೆನ್ನಾಗಿ ಅಭ್ಯಾಸಮಾಡಿಕೊಂಡಿರುವ ಬ್ರಾಹ್ಮಣರಿಂದ ಮಾಡಲ್ಪಟ್ಟ ಮಂಗಳಕರವಾದ ಆಶೀರ್ವಾದವುಳ್ಳವನಾದ ವೃತ್ರನು ಬಹಳ ಬಲವುಳ್ಳವನಾಗಿ, ರಥವನ್ನು ಹತ್ತಿಕೊಂಡು, ಇಂದ್ರನನ್ನು ಕೊಲ್ಲುವ ಉದ್ದೇಶದಿಂದ ಯುದ್ಧಕ್ಕಾಗಿ ಹೊರಟನು. ||೧||

ಹಿಂದೆ ದೇವತೆಗಳಿಂದ ಸೋಲಿಸಲ್ಪಟ್ಟವರಾಗಿ ಓಡಿಹೋಗಿದ್ದ ಕ್ರೂರರಾದ ರಾಕ್ಷಸರು ಎಲ್ಲರೂ, ಈ ವೃತ್ರನು ಮಹಾಬಲಿಷ್ಠನೆಂದು ತಿಳಿದು ಇವನ ಜೊತೆಗೆ ಸೇರಿದವರಾಗಿ, ದೇವತೆಗಳ ಸಂಗಡ ಯುದ್ಧಮಾಡಿ ಇವನಿಗೆ ಸೇವೆಯನ್ನು ಮಾಡುವ ಉದ್ದೇಶದಿಂದ ಆ ಕ್ಷಣದಲ್ಲಿಯೇ ಬಂದು ಸೇರಿದರು. ||೨||

ಇಂದ್ರನ ದೂತರು ಯುದ್ಧಕ್ಕಾಗಿ ಬರುತ್ತಿರುವ ಅವನನ್ನು ನೋಡಿದವರಾಗಿ ಬೇಗನೇ ತಮ್ಮ ಪ್ರಭುವಿನ ಹತ್ತಿರಕ್ಕೆ ಬಂದು ವೃತ್ರನು ಮಾಡುತ್ತಿರುವ ಚೇಷ್ಟೆಗಳನ್ನೂ ಮತ್ತು ಅವನ ವರ್ತಮಾನವೆಲ್ಲವನ್ನೂ ಸಹ ಇಂದ್ರನಿಗೆ ತಿಳಿಸಿದರು. ||೩||

|| ದೂತಾ ಊಚುಃ ||

ಸ್ವಾಮಿನ್ ಶೀಘ್ರಮಿಹಾಯಾತಿ ವೃತ್ರೋನಾಮ ರಿಪುಸ್ತವ |
ಬಲವಾನ್ ಸ್ಯಂದನೇರೂಢಸ್ತ್ವಷ್ಟ್ರಾಚೋತ್ಪಾದಿತಃ ಕಿಲ ||೪||

ಅಭಿಚಾರೇಣ ನಾಶಾರ್ಥಂ ತವ ಕ್ರೋಧಾನ್ವಿತೇನ ವೈ |
ಪುತ್ರಾಘಾತಾಭಿತಪ್ತೇನ ದುಸ್ಸಹೋರಾಕ್ಷಸೈರ್ಯುತಃ ||೫||

ಯತ್ನಂ ಕುರು ಮಹಾಭಾಗ ಶೀಘ್ರಮಾಯಾತಿ ಸಾಂಪ್ರತಂ |
ಮೇರುಮಂದರಸಂಕಾಶೋ ಘೋರಶಬ್ದೋಽತಿದಾರುಣಃ ||೬||

ಏತಸ್ಮಿನ್ನಂತರೇ ತತ್ರ ಭೀತಾ ದೇವಗಣಾ ಭೃಶಂ |
ಆಗತ್ಯೋಚುಸ್ಸುರಪತಿಂ ಶೃಣ್ವಂತಂ ದೂತಭಾಷಿತಮ್ ||೭||

---

ದೂತರು ಹೇಳಿದರು. ಓ ಸ್ವಾಮಿಯೇ, ವೃತ್ರನೆಂಬ ಹೆಸರುಳ್ಳ ನಿನ್ನ ಶತ್ರುವು ತ್ವಷ್ಟ್ರೃಬ್ರಹ್ಮನಿಂದ ಜನ್ಮವನ್ನು ಹೊಂದಿದವನಾಗಿ, ಶಕ್ತಿಯುಳ್ಳವನಾಗಿ ರಥವನ್ನು ಹತ್ತಿಕೊಂಡು ಬರುತ್ತಿರುವನು. ||೪||

ಓ ಅದೃಷ್ಟಶಾಲಿಯಾದ ಇಂದ್ರನೇ, ತನ್ನ ಮಗನಾದ ತ್ರಿಶಿರಸ್ಸೆಂಬವನು ನಿನ್ನಿಂದ ಕೊಲ್ಲಲ್ಪಟ್ಟಕಾರಣ, ಆ ಸಂಕಟದಿಂದಲೂ, ನಿನ್ನ ಮೇಲಿನ ಕೋಪದಿಂದಲೂ ಕೂಡಿರುವ ತ್ವಷ್ಟ್ರೃಬ್ರಹ್ಮನು ನಿನ್ನ ನಾಶಕ್ಕಾಗಿ ಅಭಿಚಾರವನ್ನು ಮಾಡಿರುವನು. ಆಗ ಹುಟ್ಟಿದವನು ಮೇರುಪರ್ವತಕ್ಕೂ ಮಂದರಪರ್ವತಕ್ಕೂ ಸಹ ಸಮಾನನಾಗಿ ಯಾರಿಂದಲೂ ತಡೆಯಲು ಅಸಾಧ್ಯನಾಗಿ ಅನೇಕ ಜನ ರಾಕ್ಷಸರಿಂದ ಕೂಡಿಕೊಂಡು ಬಹಳ ಭಯಂಕರನಾಗಿ, ಆರ್ಭಟಿಸುತ್ತಾ ಬೇಗನೆ ಬರುತ್ತಿರುವನು ! ||೫-೬||

ದೂತರ ಈ ಮಾತುಗಳನ್ನು ಇಂದ್ರನು ಕೇಳುತ್ತಿರುವ ಸಮಯದಲ್ಲಿ, ಅವುಗಳನ್ನು ಕೇಳುತ್ತಿದ್ದ ದೇವತೆಗಳ ಗಣಗಳು ಬಹಳಮಟ್ಟಿಗೆ ಹೆದರಿದವರಾಗಿ ದೇವತೆಗಳಿಗೆ ಅಧಿಪತಿಯಾದ ಇಂದ್ರನ ಹತ್ತಿರಕ್ಕೆ ಬಂದು ಹೀಗೆ ಹೇಳಿದರು. ||೭||

|| ಗಣಾ ಊಚುಃ ||

**ಮಘವನ್ ದುರ್ನಿಮಿತ್ತಾನಿ ಭವಂತಿ ತ್ರಿದಶಾಲಯೇ ।**
**ಬಹೂನಿ ಭಯಶಂಸೀನಿ ಪಕ್ಷಿಣಾಂ ವಿರುತಾನಿ ಚ ॥೮॥**

**ಕಾಕಾಗೃಧ್ರಾಸ್ತಥಾ ಶ್ಯೇನಾಃ ಕಂಕಾದ್ಯಾದಾರುಣಾಃ ಖಗಾಃ ।**
**ರುದನ್ತಿ ವಿಕೃತೈಶ್ಶಬ್ದೈರುತ್ಕಾರೈರ್ಭವನೋಪರಿ ॥೯॥**

**ವೀಚೀಕೂಚೀತಿ ನಿನದಾನ್ ಕುರ್ವಂತಿ ವಿಹಗಾ ಭೃಶಂ ।**
**ವಾಹನಾನಾಂ ಚ ನೇತ್ರೇಭ್ಯೋ ಜಲಧಾರಾಃ ಪತನ್ತ್ಯಧಃ ॥೧೦॥**

**ಶ್ರೂಯತೇಽತಿಮಹಾಞ್ಛಬ್ದೋ ರುದತೀನಾಂ ನಿಶಾಸು ಚ ।**
**ರಾಕ್ಷಸೀನಾಂ ಮಹಾಭಾಗ ಭವನೋಪರಿ ದಾರುಣಃ ॥೧೧॥**

**ಪ್ರಪತಂತಿ ಧ್ವಜಾಸ್ತೂರ್ಣಂ ವಿನಾ ವಾತೇನ ಮಾನದ ।**
**ಪ್ರಭವನ್ತಿ ಮಹೋತ್ಪಾತಾ ದಿವಿಭೂಮ್ಯಂತರಿಕ್ಷಜಾಃ ॥೧೨॥**

---

ದೇವತೆಗಳು ಹೇಳಿದರು— ಓ ಇಂದ್ರನೇ, ಈಗ ಸ್ವರ್ಗದಲ್ಲಿ ಬಹಳ ಮಟ್ಟಿಗೆ ಕೆಟ್ಟ ನಿಮಿತ್ತಗಳು ತೋರುತ್ತಿವೆ. ಹಕ್ಕಿಗಳು ಭಯವನ್ನುಂಟುಮಾಡುವಂತಹ ಶಬ್ದವನ್ನು ಮಾಡುತ್ತಾ ಇರುವುವು. ||೮||

ಓ ಇಂದ್ರನೇ, ಮನೆಯ ಮೇಲುಗಡೆಯಲ್ಲಿ ಕುಳಿತುಕೊಂಡು ಕಾಗೆಗಳು, ರಣಹದ್ದುಗಳು ಇವೇ ಮೊದಲಾದ ಭಯಂಕರವಾದ ಹಕ್ಕಿಗಳು ವಿಕಾರವಾದ ಶಬ್ದವನ್ನು ಮಾಡುತ್ತಾ, ಅಳುತ್ತಿರುವುವು. ಬೇರೆ ಬೇರೆ ಹಕ್ಕಿಗಳು ಬಹಳಮಟ್ಟಿಗೆ ವೀಚೀಕೂಚೀ ಇತ್ಯಾದಿಯಾಗಿ ವಿಕಾರವಾದ ಧ್ವನಿಗಳನ್ನು ಮಾಡುತ್ತಿರುವುವು. ||೯||

ಓ ಅದೃಷ್ಟಶಾಲಿಯಾದ ಇಂದ್ರನೇ, ವಾಹನಗಳ ಕಣ್ಣುಗಳಿಂದ ನೀರು ಧಾರೆಯಾಗಿ ಭೂಮಿಯಲ್ಲಿ ಬೀಳುತ್ತಿರುವುದು. ರಾತ್ರಿಯ ಹೊತ್ತಿನಲ್ಲಿ ಮನೆಯ ಮೇಲುಗಡೆಯ ಭಾಗದಲ್ಲಿ ರಾಕ್ಷಸರ ಹೆಂಗಸರು ಅಳುತ್ತಿರುವ ಭಯಂಕರವಾದ ದೊಡ್ಡ ಧ್ವನಿಯು ಕೇಳಿಬರುತ್ತಿರುವುದು. ||೧೦-೧೧||

ಓ ಮರ್ಯಾದೆಯನ್ನು ಕೊಡುವವನಾದ ಇಂದ್ರನೇ, ಗಾಳಿ ಇಲ್ಲದಿದ್ದಾಗ್ಯೂ, ಮನೆಯ ಮೇಲಿರುವ ಧ್ವಜಗಳು ಮುರಿದು ಬೀಳುತ್ತಲಿವೆ. ಸ್ವರ್ಗದಲ್ಲಿ, ಭೂಮಿ

ರಾತ್ರೌಸ್ವಪ್ನೇಷು ಕಾಂತಾನಾಂ ಸುಪ್ತಾನಾಂ ನಿಜಮಂದಿರೇ ।
ಕೇಶಾನ್ ಲುನಂತಿ ರಾಕ್ಷಸ್ಯೋ ಭೀಷಯಂತೋ ಭೃಶಾತುರಾಃ॥೧೩॥

ಏವಂ ವಿಧಾನಿ ದೇವೇಶ ಭೂಕಮ್ಪೋಲ್ಕಾದಯಸ್ತಥಾ ।
ಗೋಮಾಯವೋರುದಂತಿಸ್ಮ ನಿಶಾಯಾಂ ಭವನಾಂಗಣೇ ॥೧೪॥

ಸರಟಾನಾಂ ಚ ಜಾಲಾನಿ ಪ್ರಭವಂತಿ ಗೃಹೇಗೃಹೇ ।
ಅಂಗಪ್ರಸ್ಫುರಣಾದೀನಿ ದುರ್ನಿಮಿತ್ತಾನಿ ಸರ್ವಶಃ ॥೧೫॥

॥ ವ್ಯಾಸ ಉವಾಚ ॥

ಇತಿ ತೇಷಾಂ ವಚಶ್ಶ್ರುತ್ವಾ ಚಿಂತಾಮಾಪ ಸುರೇಶ್ವರಃ ।
ಬೃಹಸ್ಪತಿಂ ಸಮಾಹೂಯ ಪಪ್ರಚ್ಛ ಚ ಮನೋಗತಂ ॥೧೬॥

---

ಮತ್ತು ಅಂತರಿಕ್ಷ ಇವುಗಳಲ್ಲಿ ಉಂಟಾಗುವ ದೊಡ್ಡದಾದ ಉತ್ಪಾತಗಳು ಕಂಡು ಬರುತ್ತಲಿವೆ. ॥೧೨॥

ಅವರವರ ಮನೆಗಳಲ್ಲಿ ಹೆಂಗುಸರು ಮಲಗಿದ್ದಾಗ ಅವರವರ ಸ್ವಪ್ನಗಳಲ್ಲಿ ರಾಕ್ಷಸಸ್ತ್ರೀಯರು ಬಂದು ಕಾಣಿಸಿಕೊಂಡು, ಬಹಳಮಟ್ಟಿಗೆ ರೋಗಿಷ್ಠರಂತೆ ಕಾಣಿಸಿಕೊಂಡು ಹೆದರಿಸುವುದೂ, ಮತ್ತು ತಲೆಯ ಕೂದಲನ್ನು ಎಳೆಯುವುದು ಇವೇ ಮೊದಲಾದ ಚೇಷ್ಟೆಗಳನ್ನು ಮಾಡುತ್ತಿರುವರು ! ॥೧೩॥

ಓ ದೇವಾಧಿಪನಾದ ಇಂದ್ರನೇ, ಭೂಕಂಪ, ಉಲ್ಕಾಪಾತ ಇವೇ ಮೊದಲಾದ ಉತ್ಪಾತಗಳು ಅನೇಕ ವಿಧಗಳಾಗಿ ಕಾಣುತ್ತಲಿವೆ. ರಾತ್ರಿಯ ಕಾಲದಲ್ಲಿ ನರಿಗಳು ಮನೆಗಳ ಅಂಗಳದಲ್ಲಿ ಬಂದು ಅಳುತ್ತ ಇರುವುವು. ॥೧೪॥

ಪ್ರತಿ ಮನೆಯಲ್ಲಿಯೂ, ಹೆಂಟೆಗೊದ್ದಗಳ ಹಿಂಡುಗಳು ಕಂಡುಬರುತ್ತಾ ಇವೆ, ಮತ್ತು ಎಲ್ಲರಲ್ಲಿಯೂ ಅಂಗಗಳು ಸ್ಫುರಿಸುವುದೇ ಮೊದಲಾದ ಕೆಟ್ಟ ನಿಮಿತ್ತಗಳೂ ಸಹ ಕಂಡುಬರುತ್ತಿವೆಯಾದ್ದರಿಂದ ಇದಕ್ಕೆ ತಕ್ಕ ಪ್ರತೀಕಾರವನ್ನು ಮಾಡಬೇಕೆಂದು ಹೇಳಿದರು. ॥೧೫॥

ವ್ಯಾಸಋಷಿಯು ಹೇಳಿದನು—ಇಂದ್ರನು ಹೀಗೆ ಹೇಳುತ್ತಿರುವ ದೇವತೆಗಳ ಮಾತನ್ನು ಕೇಳಿ ತಮ್ಮ ಗುರುವಾದ ಬೃಹಸ್ಪತಿಯನ್ನು ಕರೆದು ಆತನ ಅಭಿಪ್ರಾಯವನ್ನು ತಿಳಿಯಲು ಹೀಗೆ ಪ್ರಶ್ನೆ ಮಾಡಿದನು. ॥೧೬॥

॥ ಇಂದ್ರ ಉವಾಚ ॥

**ಬ್ರಹ್ಮನ್ ಕಿಮುತ ಘೋರಾಣಿ ನಿಮಿತ್ತಾನಿ ಭವಂತಿ ವೈ ।**
**ವಾತಾಶ್ಚ ದಾರುಣಾ ವಾಂತಿ ಪ್ರಪತಂತ್ಯುಲಕಾಃ ಖತಃ ॥೧೭॥**

**ಸರ್ವಜ್ಞೋಽಸಿ ಮಹಾಭಾಗ ಸಮರ್ಥೋ ವಿಘ್ನನಾಶನೇ ।**
**ಬುದ್ಧಿಮಾಞ್ಛಾಸ್ತ್ರತತ್ತ್ವಜ್ಞೋ ದೇವತಾನಾಂ ಗುರುಸ್ತಥಾ ॥೧೮॥**

**ಕುರು ಶಾಂತಿಂ ವಿಧಾನಜ್ಞ ಶತ್ರುಕ್ಷಯವಿಧಾಯಿನೀಂ ।**
**ಯಥಾ ಮೇ ನ ಭವೇದ್ದುಃಖಂ ತಥಾ ಕಾರ್ಯಂ ವಿಧೀಯತಾಂ ॥೧೯॥**

॥ ಬೃಹಸ್ಪತಿಃ ಉವಾಚ ॥

**ಕಿಂ ಕರೋಮಿ ಸಹಸ್ರಾಕ್ಷ ತ್ವಯಾಽದ್ಯ ದುಷ್ಕೃತಂ ಕೃತಂ ।**
**ಅನಾಗಸಂ ಮುನಿಂ ಹತ್ವಾ ಕಿಂ ಫಲಂ ಸಮುಪಾರ್ಜಿತಂ ॥೨೦॥**

---

ಇಂದ್ರನು ಹೇಳಿದನು—ಓ ಬ್ರಾಹ್ಮಣನಾದ ಬೃಹಸ್ಪತಿಯೇ, ಭಯವನ್ನು ಉಂಟುಮಾಡುವವುಗಳಾದ ಶಕುನಗಳು ಈಗ ಏತಕ್ಕೆ ಉಂಟಾಗುತ್ತಲಿವೆ? ಗಾಳಿಯೂ ಕೂಡ ಭಯಂಕರವಾಗಿ ಬೀಸುತ್ತಿದೆ. ಅಂತರಿಕ್ಷದಿಂದ ಕೂದಲುಗಳು ಬೀಳುತ್ತಿವೆ. ಇವುಗಳೆಲ್ಲಕ್ಕೂ ಏನು ಕಾರಣವೋ ತಿಳಿಯಲಪೇಕ್ಷಿಸುತ್ತೇನೆ. ॥೧೭॥

ಓ ಅದೃಷ್ಟ ಶಾಲಿಯೇ, ನೀನು ಎಲ್ಲವನ್ನೂ ತಿಳಿದಿರುವೆ, ಬುದ್ಧಿವಂತನಾಗಿ ಇರುತ್ತೀಯೆ, ಶಾಸ್ತ್ರಗಳ ನಿಜಸ್ಥಿತಿಯನ್ನು ಬಲ್ಲವನಾಗಿರುತ್ತೀಯೆ, ಮತ್ತು ದೇವತೆಗಳಿಗೆ ಗುರುವಾಗಿಯೂ ವಿಘ್ನಗಳನ್ನು ನಾಶಮಾಡುವುದರಲ್ಲಿ ಸಮರ್ಥನೂ ಆಗಿರುತ್ತೀಯೆ. ॥೧೮॥

ಓ ಬೃಹಸ್ಪತಿಯೇ, ನೀನು ವಿಪತ್ತುಗಳು ಬಂದಾಗ ಅವುಗಳನ್ನು ನಾಶಪಡಿಸುವ ತಕ್ಕ ತಕ್ಕ ಶಾಂತಿಗಳ ಕ್ರಮವನ್ನು ಬಲ್ಲವನಾಗಿರುತ್ತೀಯೆ. ಆದಕಾರಣ ಈಗ ನನಗೆ ಒದಗಿರುವ ಶತ್ರುವು ನಾಶವಾಗಿ, ನನಗೆ ದುಃಖವು ಉಂಟಾಗದೆ ಇರುವಂತೆ ಕೆಲಸವನ್ನು ನೀನು ಮಾಡಬೇಕು. ॥೧೯॥

ಗುರುವು ಹೇಳಿದನು. ಎಲೈ ಸಾವಿರ ಕಣ್ಣುಳ್ಳ ಇಂದ್ರನೇ, ನೀನು ಈಗ ಕೆಟ್ಟ ಕೆಲಸವನ್ನು ಮಾಡಿದೆ. ಯಾವ ಅಪರಾಧವೂ ಇಲ್ಲದಿರುವ ಮುನಿಯನ್ನು ಕೊಂದು ಯಾವ ಪ್ರಯೋಜನವನ್ನು ನೀನು ಹೊಂದಿದೆ? ಅಲ್ಲದೆ ದುಷ್ಫಲವನ್ನೂ ನೀನು

ಅತ್ಯುಗ್ರಪುಣ್ಯಪಾಪಾನಾಂ ಫಲಂ ಭವತಿ ಸತ್ವರಂ ।
ವಿಚಾರ್ಯ ಖಲು ಕರ್ತವ್ಯಂ ಕಾರ್ಯಂ ತದ್ಭೂತಿಮಿಚ್ಛತಾ ॥೨೧॥

ಪರೋಪತಾಪನಂ ಕರ್ಮ ನ ಕರ್ತವ್ಯಂ ಕದಾಚನ ।
ನ ಸುಖಂ ವಿಂದತೇ ಪ್ರಾಣೀ ಪರಪೀಡಾಪರಾಯಣಃ ॥೨೨॥

ಮೋಹಾಲ್ಲೋಭಾದ್ಬ್ರಹ್ಮಹತ್ಯಾ ಕೃತಾ ಶಕ್ರ ತ್ವಯಾಽಧುನಾ ।
ತಸ್ಯ ಪಾಪಸ್ಯ ಸಹಸಾ ಫಲಮೇತದುಪಾಗತಂ ॥೨೩॥

ಅವಧ್ಯಸ್ಸರ್ವದೇವಾನಾಂ ಜಾತೋಽಸೌ ವೃತ್ರಸಂಜ್ಞಿಕಃ ।
ಹಂತುಂ ತ್ವಾಂ ಸಮುಪಾಯಾತಿ ದಾನವೈ ರ್ಬಹುಭಿರ್ವೃತಃ ॥೨೪॥

---

ಹೊಂದಿದೆ ! ಹೀಗೆ ನಿಷ್ಪ್ರಯೋಜನವಾಗಿರುವ ಕೆಟ್ಟ ಕೆಲಸವನ್ನು ಮಾಡಿರುವ ನಿನ್ನ ವಿಷಯದಲ್ಲಿ ನಾನು ಏನನ್ನು ಮಾಡಲಿ ? ॥೨೦॥

ಐಶ್ವರ್ಯವನ್ನು ಅಪೇಕ್ಷಿಸುವವನು ಕೆಲಸವನ್ನು ವಿಚಾರಮಾಡಿ ಮಾಡಬೇಕು. ಇಲ್ಲದಿದ್ದರೆ, ಬಹಳ ಹೆಚ್ಚಾದ ಪುಣ್ಯವನ್ನಾಗಲಿ, ಪಾಪವನ್ನಾಗಲಿ ಉಂಟುಮಾಡುವ ಕಾರ್ಯವು ಬಹು ಜಾಗ್ರತೆಯಾಗಿಯೇ ಫಲವನ್ನು ಕೊಡುವುದಕ್ಕೆ ಪ್ರಾರಂಭಿಸುವುದು. ॥೨೧॥

ಯಾವಾಗಲೂ ಇನ್ನೊಬ್ಬನಿಗೆ ತೊಂದರೆಯನ್ನು ಉಂಟುಮಾಡುವ ಕೆಲಸವನ್ನು ಮಾಡಬಾರದು. ಇನ್ನೊಬ್ಬರಿಗೆ ಸಂಕಟವನ್ನು ಉಂಟುಮಾಡುವುದರಲ್ಲಿ ಆಸಕ್ತಿಯುಳ್ಳ ಪ್ರಾಣಿಯು ಸುಖವನ್ನು ಹೊಂದುವುದಿಲ್ಲ. ॥೨೨॥

ಎಲೈ ಇಂದ್ರನೇ, ನೀನು ಈಗ ಅಜ್ಞಾನದಿಂದಲೂ ಸ್ವರ್ಗವೆಂಬ ರಾಜ್ಯದ ಅತ್ಯಾಸೆಯಿಂದಲೂ ಸಹ ಬ್ರಹ್ಮಹತ್ಯವನ್ನು ಮಾಡಿರುತ್ತೀಯೆ. ನೀನು ಮಾಡಿರುವ ಆ ಕೆಟ್ಟ ಕೆಲಸದ ಫಲವು ಈಗ ಈ ರೀತಿಯಾಗಿ ನಿನಗೆ ಪ್ರಾಪ್ತವಾಗಿರುವುದು. ॥೨೩॥

ಈ ವೃತ್ರನೆಂಬ ಹೆಸರುಳ್ಳವನು ದೇವತೆಗಳೆಲ್ಲರೂ ಒಟ್ಟಾಗಿ ಯುದ್ಧಕ್ಕೆ ಬಂದರೂ ಸೋಲತಕ್ಕವನಲ್ಲವು ಮತ್ತು ಸಾಯುವವನಲ್ಲವು. ಹೀಗಿರುವ ಇವನು ಅನೇಕರಾದ ದಾನವರಿಂದ ಕೂಡಿದವನಾಗಿ ನಿನ್ನನ್ನು ಹೊಡೆಯುವುದಕ್ಕಾಗಿ ಯುದ್ಧಕ್ಕೆ ಬರುತ್ತಿರುವನು. ॥೨೪॥

**ಆಯುಧಾನಿ ಚ ಸರ್ವಾಣಿ ವಜ್ರತುಲ್ಯಾನಿ ವಾಸವ।**
**ತ್ವಷ್ಟ್ರಾ ದತ್ತಾನಿ ದಿವ್ಯಾನಿ ಗೃಹೀತ್ವಾ ಸಮುಪಸ್ಥಿತಃ ॥೨೫॥**

**ಸಮಾಗಚ್ಛತಿ ದುರ್ಧರ್ಷೋ ರಥಾರೂಢಃ ಪ್ರತಾಪವಾನ್ ।**
**ದೇವೇಂದ್ರ ಪ್ರಲಯಂ ಕುರ್ವನ್ ನಾಸ್ಯ ಮೃತ್ಯುರ್ಭವಿಷ್ಯತಿ ॥೨೬॥**

**ಕೋಲಾಹಲಸ್ತದಾಜಾತಸ್ತಥಾ ಬ್ರುವತಿ ವಾಕ್ಪತೌ ।**
**ಗಂಧರ್ವಾಃ ಕಿನ್ನರಾ ಯಕ್ಷಾ ಮುನಯಶ್ಚ ತಪೋಧನಾಃ ॥೨೭॥**

**ಸದನಾನಿ ವಿಹಾಯೈವಾ‌ಮರಾಸ್ಸರ್ವೇ ಪಲಾಯಿತಾಃ ।**
**ತದ್ದೃಷ್ಟ್ವಾ ಮಹದಾಶ್ಚರ್ಯಂ ಶಕ್ರಶ್ಚಿಂತಾಪರಾಯಣಃ ॥೨೮॥**
**ಆಜ್ಞಾಪಯಾಮಾಸ ತದಾ ಸೇನೋದ್ಯೋಗಾಯ ಸೇವಕಾನ್ ।**

---

ಎಲೈ ಇಂದ್ರನೇ, ಆ ವೃತ್ರಾಸುರನಿಗೆ ತ್ವಷ್ಟೃಬ್ರಹ್ಮನು ನಿನ್ನ ವಜ್ರಾಯುಧಕ್ಕೆ ಸಮಾನವಾದ ಆಯುಧಗಳನ್ನು ಎಲ್ಲವನ್ನೂ ಕೊಟ್ಟು ಇರುವನು. ಅವನು ಅವನ್ನು ತೆಗೆದುಕೊಂಡು ಈಗ ಯುದ್ಧಕ್ಕೆ ಬಂದಿರುವನು. ||೨೫||

ಪರಾಕ್ರಮಶಾಲಿಯಾದ ಈ ವೃತ್ರನು ಇತರರು ಯಾರಿಂದಲೂ ತಡೆಯಲು ಅಸಾಧ್ಯನಾಗಿ ಇಂದ್ರನಿಗೆ ಪ್ರಲಯವನ್ನುಂಟುಮಾಡುವವನಾಗಿಯೇ ಬರುತ್ತಿರುವನು. ಇವನಿಗೆ ಈಗ ಮೃತ್ಯುವು ಇಲ್ಲವು. ||೨೬||

ಬೃಹಸ್ಪತಿಯು ಹೀಗೆ ಇಂದ್ರನ ಸಂಗಡ ಮಾತನಾಡುತ್ತಿರುವಾಗ ಬಹಳ ಗಾಬರಿಯ ಗದ್ದಲವಾಯಿತು. ಆಗ ಇದೇನು ಗದ್ದಲವೆಂದು ನೋಡುವಲ್ಲಿ, ಗಂಧರ್ವರೂ, ಕಿನ್ನರರೂ, ಯಕ್ಷರೂ, ಮುನಿಗಳೂ, ಇನ್ನೂ ಇತರರಾದ ತಪಸ್ವಿಗಳೂ ಮತ್ತು ಎಲ್ಲಾ ದೇವತೆಗಳೂ ಸಹ ತಮ್ಮ ತಮ್ಮ ಮನೆಗಳನ್ನು ಬಿಟ್ಟು ತಮ್ಮ ತಮ್ಮ ಇಷ್ಟಬಂದಂತೆ ಬೇರೆ ಬೇರೆ ಕಡೆಗೆ ಓಡುತ್ತಿದ್ದರು. ||೨೭||

ಇಂದ್ರನು ಆಗ ಶತ್ರುವು ಬರುವುದಕ್ಕಿಂತ ಮುಂಚಿತವಾಗಿ ಎಲ್ಲರೂ ಓಡುತ್ತಿರುವ ಹೀಗೆ ಇರುವ ದೊಡ್ಡ ಆಶ್ಚರ್ಯವನ್ನು ತಾನು ತನ್ನ ಕಣ್ಣುಮುಟ್ಟಿ ನೋಡಿ, ಮನಸ್ಸಿನಲ್ಲಿ ತುಂಬಾ ಯೋಚನೆಯನ್ನು ಹೊಂದಿದವನಾದರೂ ತನ್ನ ಸೇನೆಯನ್ನು ಯುದ್ಧಕ್ಕಾಗಿ ಸಿದ್ಧವಾಗಿರಲು ಆಜ್ಞೆಯನ್ನು ಕೊಟ್ಟು ಸೇವಕರನ್ನು ಕಳುಹಿಸಿದನು. ||೨೮||

ಆನಯಧ್ವಂ ವಸೂನ್ ರುದ್ರಾನಶ್ವಿನೌ ಚ ದಿವಾಕರಾನ್ ॥೨೯॥
ಪೂಷಣಂ ಚ ಭಗಂ ವಾಯುಂ ಕುಬೇರಂ ವರುಣಂ ಯಮಮ್ ।
ವಿಮಾನೇಷು ಸಮಾರುಹ್ಯ ಸಾಯುಧಾಃ ಸುರಸತ್ತಮಾಃ ॥೩೯॥

ಸಮಾಗಚ್ಛಂತು ತರಸಾ ಶತ್ರುರಾಯಾತಿ ಸಾಂಪ್ರತಂ।
ಇತ್ಯಾಜ್ಞಾಪ್ಯ ಸುರಪತಿಃ ಸಮಾರುಹ್ಯ ಗಜೋತ್ತಮಂ ॥೩೦॥

ಬೃಹಸ್ಪತಿಂ ಪುರೋಧಾಯ ನಿರ್ಗತೋ ನಿಜಮಂದಿರಾತ್ ।
ತಥೈವ ತ್ರಿದಶಾಸ್ಸರ್ವೇ ಸ್ವಂ ಸ್ವಂ ವಾಹನಮಾಸ್ಥಿತಾಃ ॥೩೨॥

ಯುದ್ಧಾಯ ಕೃತ ಸಂಕಲ್ಪಾಃ ನಿರ್ಯಯುಶ್ಶಸ್ತ್ರಪಾಣಯಃ ।
ವೃತ್ರೋಽಥ ದಾನವೈರ್ಯುಕ್ತಃ ಸಂಪ್ರಾಪ್ತೋಽಮಾನಸೋತ್ತರಂ ॥೩೩॥

---

ಎಲೈ ಸೇವಕರಿರಾ, ನೀವೆಲ್ಲರೂ ಈಗಲೇ ಹೋಗಿ, ಅಷ್ಟವಸುಗಳು, ಏಕಾದಶರುದ್ರರು, ಅಶ್ವಿನೀ ದೇವತೆಗಳು, ದ್ವಾದಶಾದಿತ್ಯರು, ಪೂಷನೆಂಬ ದೇವತೆ, ಭಗನೆಂಬ ದೇವತೆ, ವಾಯು, ಕುಬೇರ, ವರುಣ, ಯಮ ಇವರೆಲ್ಲರನ್ನೂ " ನೀವುಗಳು ನಿಮ್ಮ ವಿಮಾನಾರೂಢರಾಗಿ ನಿಮ್ಮ ಆಯುಧಗಳನ್ನು ಹಿಡಿದುಕೊಂಡು, ಈಗಲೇ ಶತ್ರುವು ಬಂದಿರುವುದರಿಂದ ಯುದ್ಧಕ್ಕಾಗಿ ಸಿದ್ಧವಾಗಿ ಬನ್ನಿರಿ," ಎಂದು ಆಯಾಯ ದೇವತೆಗಳಿಗೆ ನನ್ನ ಅಪ್ಪಣೆಯನ್ನು ತಿಳಿಸಿರಿ. ಇಂದ್ರನು ತನ್ನ ಸೇನೆಯೆಲ್ಲವೂ ಯುದ್ಧಕ್ಕೋಸ್ಕರ ಸಿದ್ಧವಾಗಿ ಬೇಗನೆ ಬರುವಂತೆ ತನ್ನ ದೂತರ ಮುಖದಿಂದ ಅವರವರಿಗೆ ಅಪ್ಪಣೆಯನ್ನು ಕಳುಹಿಸಿ ತಾನು ಉತ್ತಮ ವಾಹನವಾದ ಐರಾವತವೆಂಬ ಆನೆಯನ್ನು ಹತ್ತಿಕೊಂಡು, ತನ್ನ ಪುರೋಹಿತನಾದ ಬೃಹಸ್ಪತಿಯನ್ನು ಮುಂದಿಟ್ಟು ಕೊಂಡು ಯುದ್ಧಕ್ಕಾಗಿ ಹೊರಟನು. ||೨೯-೩೦-೩೧||

ಇಂದ್ರನು ತಾನು ಯುದ್ಧಕ್ಕೆ ಬಂದಂತೆಯೇ ಇತರ ದೇವತೆಗಳೆಲ್ಲರೂ ತಮ್ಮ ತಮ್ಮ ವಾಹನಗಳನ್ನು ಹತ್ತಿಕೊಂಡು, ತಮ್ಮ ಆಯುಧಗಳನ್ನು ಹಿಡಿದುಕೊಂಡು ಯುದ್ಧಕ್ಕಾಗಿ ದೃಢವಾದ ಮನಸ್ಸುಳ್ಳವರಾಗಿ ಯುದ್ಧ ಮಾಡಲು ಹೊರಟರು. ||೩೨||

ದೇವತೆಗಳೆಲ್ಲರೂ ಹೀಗೆ ಯುದ್ಧಕ್ಕೆ ಹೊರಟನಂತರ ವೃತ್ರಾಸುರನು ತನ್ನ ಅನುಚರರಾದ ದಾನವರಿಂದ ಕೂಡಿಕೊಂಡವನಾಗಿ, ಅನೇಕ ಮರಗಳಿಂದ ಮನೋಹರವಾಗಿ ಹೊಳೆಯುತ್ತಿರುವ ದೇವತೆಗಳಿಗೆ ವಾಸಸ್ಥಾನವಾದ ಮಾನಸಸರೋವರದ

ಪರ್ವತಂ ದೇವತಾವಾಸಂ ರಮ್ಯಂ ಪಾದಪ ಶೋಭಿತಂ ।
ಇಂದ್ರೋಽಪ್ಯಾಗಮ್ಯ ಸಂಗ್ರಾಮಂ ಚಕಾರ ಮಾನಸೋತ್ತರೇ ॥೩೪॥

ಪರ್ವತೇ ದೇವತಾಯುಕ್ತೋ ವಾಚಸ್ಪತಿಪುರಸ್ಸರಃ ।
ತತ್ರಾಭೂದ್ದಾರುಣಂ ಯುದ್ಧಂ ವೃತ್ರವಾಸವಯೋಸ್ತದಾ ॥೩೫॥

ಗದಾಸಿಪರಿಘೈಃ ಪಾಶೈರ್ಬಾಣೈಶ್ಶಕ್ತಿಪರಶ್ವಥೈಃ ।
ಮಾನುಷೇಣ ಪ್ರಮಾಣೇನ ಸಂಗ್ರಾಮಶ್ಶರದಾಂ ಶತಂ ॥೩೬॥

ಬಭೂವ ಭಯದೋ ನೄಣಾಂ ಋಷೀಣಾಂ ಭಾವಿತಾತ್ಮನಾಂ ।
ವರುಣಃ ಪ್ರಥಮಂ ಭಗ್ನಸ್ತತೋ ವಾಯುಗಣಃ ಕಿಲ ॥೩೭॥

ಯಮೋ ವಿಭಾವಸುಶ್ಶಕ್ರಸ್ಸರ್ವತೋ ನಿರ್ಗತಾ ರಣಾತ್ ।
ಪಲಾಯನಪರಾನ್ ದೃಷ್ಟ್ವಾ ದೇವಾನಿಂದ್ರಪುರೋಗಮಾನ್ ॥೩೮॥

---

ಉತ್ತರ ತೀರವನ್ನು ಹೊಂದಿದನು. ಇಂದ್ರನೂ ಸಹ ಮಾನಸಸರೋವರದ ಉತ್ತರದ ತೀರವನ್ನು ತನ್ನ ಸೇನೆಯೊಡನೆ ಸೇರಿ ಯುದ್ಧ ಮಾಡಲುಪಕ್ರಮಿಸಿದನು. ||೩೩-೩೪||

ಆ ಮಾನಸೋತ್ತರ ಪರ್ವತದಲ್ಲಿ ಇಂದ್ರನು ಗುರುವಿನೊಡನೆಯೂ, ದೇವತೆಗಳೊಡನೆಯೂ ಇರುವಾಗ, ವೃತ್ರಾಸುರನಿಗೂ, ಇಂದ್ರನಿಗೂ ಸಹ ಗದಾ, ಕತ್ತಿ, ಪರಿಘ, ಪಾಶ, ಬಾಣ, ಶಕ್ತಿ, ಕೊಡಲಿ ಇವೇ ಮೊದಲಾದ ಆಯುಧಗಳಿಂದ ಮನುಷ್ಯಪ್ರಮಾಣದಿಂದ ಒಂದು ನೂರು ವರ್ಷಗಳವರೆಗೂ ಯುದ್ಧವು ನಡೆಯಿತು. ||೩೫-೩೬||

ಆಗ ಯುದ್ಧವು ಮನುಷ್ಯರಿಗೂ, ಜಿತೇಂದ್ರಿಯರಾದ ಋಷಿಗಳಿಗೂ ಸಹ ಭಯವನ್ನುಂಟುಮಾಡುವುದಾಗಿ ನಡೆಯಿತು. ವರುಣನು ಮೊದಲು ಯುದ್ಧದಲ್ಲಿ ಸೋತನು. ಅನಂತರದಲ್ಲಿ ವಾಯುಗಳ ಗುಂಪುಗಳೆಲ್ಲರೂ ಸೋತರು. ಆ ಮೇಲೆ ಯಮ, ಅಗ್ನಿ ಇಂದ್ರ ಇವರೆಲ್ಲರೂ ಸಹ ಯುದ್ಧದಲ್ಲಿ ಸೋತು ಯುದ್ಧರಂಗದಿಂದ ಓಡಿದರು. ||೩೭||

ವೃತ್ರನು ಇಂದ್ರನೇ ಮೊದಲಾದ ದೇವತೆಗಳು ಓಡುತ್ತಿರುವುದನ್ನು ನೋಡಿ ಸಂತೋಷದಿಂದ ಕೂಡಿರುವ, ಆಶ್ರಮದಲ್ಲಿ ಸುಖವಾಗಿರುವ ತಮ್ಮ ತಂದೆಯಾದ

ಆನಯಧ್ವಂ ವಸೂನ್ ರುದ್ರಾನಶ್ವಿನೌ ಚ ದಿವಾಕರಾನ್ ॥೨೮॥
ಪೂಷಣಂ ಚ ಭಗಂ ವಾಯುಂ ಕುಬೇರಂ ವರುಣಂ ಯಮಮ್ ।
ವಿಮಾನೇಷು ಸಮಾರುಹ್ಯ ಸಾಯುಧಾಃ ಸುರಸತ್ತಮಾಃ ॥೨೯॥

ಸಮಾಗಚ್ಛಂತು ತರಸಾ ಶತ್ರುರಾಯಾತಿ ಸಾಂಪ್ರತಂ।
ಇತ್ಯಾಜ್ಞಾಪ್ಯ ಸುರಪತಿಃ ಸಮಾರುಹ್ಯ ಗಜೋತ್ತಮಂ ॥೩೦॥

ಬೃಹಸ್ಪತಿಂ ಪುರೋಧಾಯ ನಿರ್ಗತೋ ನಿಜಮಂದಿರಾತ್ ।
ತಥೈವ ತ್ರಿದಶಾಸ್ಸರ್ವೇ ಸ್ವಂ ಸ್ವಂ ವಾಹನಮಾಸ್ಥಿತಾಃ ॥೩೨॥

ಯುದ್ಧಾಯ ಕೃತ ಸಂಕಲ್ಪಾಃ ನಿರ್ಯಯುಶ್ಶಸ್ತ್ರಪಾಣಯಃ ।
ವೃತ್ರೋಽಥ ದಾನವೈರ್ಯುಕ್ತಃ ಸಂಪ್ರಾಪ್ತೋಽಮಾನಸೋತ್ತರಂ ॥೩೩॥

---

ಎಲೈ ಸೇವಕರಿರಾ, ನೀವೆಲ್ಲರೂ ಈಗಲೇ ಹೋಗಿ, ಅಷ್ಟವಸುಗಳು, ಏಕಾದಶರುದ್ರರು, ಅಶ್ವಿನೀ ದೇವತೆಗಳು, ದ್ವಾದಶಾದಿತ್ಯರು, ಪೂಷನೆಂಬ ದೇವತೆ, ಭಗನೆಂಬ ದೇವತೆ, ವಾಯು, ಕುಬೇರ, ವರುಣ, ಯಮ ಇವರೆಲ್ಲರನ್ನೂ " ನೀವುಗಳು ನಿಮ್ಮ ವಿಮಾನಾರೂಢರಾಗಿ ನಿಮ್ಮ ಆಯುಧಗಳನ್ನು ಹಿಡಿದುಕೊಂಡು, ಈಗಲೇ ಶತ್ರುವು ಬಂದಿರುವುದರಿಂದ ಯುದ್ಧಕ್ಕಾಗಿ ಸಿದ್ಧವಾಗಿ ಬನ್ನಿರಿ," ಎಂದು ಆಯಾಯ ದೇವತೆಗಳಿಗೆ ನನ್ನ ಅಪ್ಪಣೆಯನ್ನು ತಿಳಿಸಿರಿ. ಇಂದ್ರನು ತನ್ನ ಸೇನೆಯೆಲ್ಲವೂ ಯುದ್ಧಕ್ಕೋಸ್ಕರ ಸಿದ್ಧವಾಗಿ ಬೇಗನೆ ಬರುವಂತೆ ತನ್ನ ದೂತರ ಮುಖದಿಂದ ಅವರವರಿಗೆ ಅಪ್ಪಣೆಯನ್ನು ಕಳುಹಿಸಿ ತಾನು ಉತ್ತಮ ವಾಹನವಾದ ಐರಾವತವೆಂಬ ಆನೆಯನ್ನು ಹತ್ತಿಕೊಂಡು, ತನ್ನ ಪುರೋಹಿತನಾದ ಬೃಹಸ್ಪತಿಯನ್ನು ಮುಂದಿಟ್ಟು ಕೊಂಡು ಯುದ್ಧಕ್ಕಾಗಿ ಹೊರಟನು. ||೨೮-೩೦-೩೧||

ಇಂದ್ರನು ತಾನು ಯುದ್ಧಕ್ಕೆ ಬಂದಂತೆಯೇ ಇತರ ದೇವತೆಗಳೆಲ್ಲರೂ ತಮ್ಮ ತಮ್ಮ ವಾಹನಗಳನ್ನು ಹತ್ತಿಕೊಂಡು, ತಮ್ಮ ಆಯುಧಗಳನ್ನು ಹಿಡಿದುಕೊಂಡು ಯುದ್ಧಕ್ಕಾಗಿ ದೃಢವಾದ ಮನಸ್ಸುಳ್ಳವರಾಗಿ ಯುದ್ಧ ಮಾಡಲು ಹೊರಟರು. ||೩೨||

ದೇವತೆಗಳೆಲ್ಲರೂ ಹೀಗೆ ಯುದ್ಧಕ್ಕೆ ಹೊರಟನಂತರ ವೃತ್ರಾಸುರನು ತನ್ನ ಅನುಚರರಾದ ದಾನವರಿಂದ ಕೂಡಿಕೊಂಡವನಾಗಿ, ಅನೇಕ ಮರಗಳಿಂದ ಮನೋಹರವಾಗಿ ಹೊಳೆಯುತ್ತಿರುವ ದೇವತೆಗಳಿಗೆ ವಾಸಸ್ಥಾನವಾದ ಮಾನಸಸರೋವರದ

ಪರ್ವತಂ ದೇವತಾವಾಸಂ ರಮ್ಯಂ ಪಾದಪ ಶೋಭಿತಂ ।
ಇಂದ್ರೋಽಪ್ಯಾಗಮ್ಯ ಸಂಗ್ರಾಮಂ ಚಕಾರ ಮಾನಸೋತ್ತರೇ ॥೩೪॥

ಪರ್ವತೇ ದೇವತಾಯುಕ್ತೋ ವಾಚಸ್ಪತಿಪುರಸ್ಸರಃ ।
ತತ್ರಾಭೂದ್ದಾರುಣಂ ಯುದ್ಧಂ ವೃತ್ರವಾಸವಯೋಸ್ತದಾ ॥೩೫॥

ಗದಾಸಿಪರಿಘೈಃ ಪಾಶೈರ್ಬಾಣೈಶ್ಶಕ್ತಿಪರಶ್ವಥೈಃ ।
ಮಾನುಷೇಣ ಪ್ರಮಾಣೇನ ಸಂಗ್ರಾಮಶ್ಶರದಾಂ ಶತಂ ॥೩೬॥

ಬಭೂವ ಭಯದೋ ನೃಣಾಂ ಋಷೀಣಾಂ ಭಾವಿತಾತ್ಮನಾಂ ।
ವರುಣಃ ಪ್ರಥಮಂ ಭಗ್ನಸ್ತತೋ ವಾಯುಗಣಃ ಕಿಲ ॥೩೭॥

ಯಮೋ ವಿಭಾವಸುಶ್ಶಕ್ರಸ್ಸರ್ವತೋ ನಿರ್ಗತಾ ರಣಾತ್ ।
ಪಲಾಯನಪರಾನ್ ದೃಷ್ಟ್ವಾ ದೇವಾನಿಂದ್ರಪುರೋಗಮಾನ್ ॥೩೮॥

---

ಉತ್ತರ ತೀರವನ್ನು ಹೊಂದಿದನು. ಇಂದ್ರನೂ ಸಹ ಮಾನಸಸರೋವರದ ಉತ್ತರದ ತೀರವನ್ನು ತನ್ನ ಸೇನೆಯೊಡನೆ ಸೇರಿ ಯುದ್ಧ ಮಾಡಲುಪಕ್ರಮಿಸಿದನು. ॥೩೩-೩೪॥

ಆ ಮಾನಸೋತ್ತರ ಪರ್ವತದಲ್ಲಿ ಇಂದ್ರನು ಗುರುವಿನೊಡನೆಯೂ, ದೇವತೆಗಳೊಡನೆಯೂ ಇರುವಾಗ, ವೃತ್ರಾಸುರನಿಗೂ, ಇಂದ್ರನಿಗೂ ಸಹ ಗದಾ, ಕತ್ತಿ, ಪರಿಘ, ಪಾಶ, ಬಾಣ, ಶಕ್ತಿ, ಕೊಡಲಿ ಇವೇ ಮೊದಲಾದ ಆಯುಧಗಳಿಂದ ಮನುಷ್ಯಪ್ರಮಾಣದಿಂದ ಒಂದು ನೂರು ವರ್ಷಗಳವರೆಗೂ ಯುದ್ಧವು ನಡೆಯಿತು. ॥೩೫-೩೬॥

ಆಗ ಯುದ್ಧವು ಮನುಷ್ಯರಿಗೂ, ಜಿತೇಂದ್ರಿಯರಾದ ಋಷಿಗಳಿಗೂ ಸಹ ಭಯವನ್ನುಂಟುಮಾಡುವುದಾಗಿ ನಡೆಯಿತು. ವರುಣನು ಮೊದಲು ಯುದ್ಧದಲ್ಲಿ ಸೋತನು. ಅನಂತರದಲ್ಲಿ ವಾಯುಗಳ ಗುಂಪುಗಳೆಲ್ಲರೂ ಸೋತರು. ಆ ಮೇಲೆ ಯಮ, ಅಗ್ನಿ ಇಂದ್ರ ಇವರೆಲ್ಲರೂ ಸಹ ಯುದ್ಧದಲ್ಲಿ ಸೋತು ಯುದ್ಧರಂಗದಿಂದ ಓಡಿದರು. ॥೩೭॥

ವೃತ್ರನು ಇಂದ್ರನೇ ಮೊದಲಾದ ದೇವತೆಗಳು ಓಡುತ್ತಿರುವುದನ್ನು ನೋಡಿ ಸಂತೋಷದಿಂದ ಕೂಡಿರುವ, ಆಶ್ರಮದಲ್ಲಿ ಸುಖವಾಗಿರುವ ತಮ್ಮ ತಂದೆಯಾದ

ವೃತ್ರೋಽಪಿ ಪಿತರಂ ಪ್ರಾಗಾದಾಶ್ರಮಸ್ಥಂ ಮುದಾನ್ವಿತಂ ।
ಪ್ರಣಮ್ಯ ಪ್ರಾಹ ತ್ವಷ್ಟಾರಂ ಪಿತಃ ಕಾರ್ಯಂ ಮಯಾಕೃತಂ ॥೩೯॥

ದೇವಾ ವಿಸರ್ಜಿತಾಸ್ಸರ್ವೇ ಸೇಂದ್ರಾಸ್ಸಮರ ಸಂಸ್ಥಿತಾಃ ।
ವಿದ್ರುತಾಸ್ತೇ ಕೃತಾಃ ಸ್ಥಾನಂ ಯಥಾ ಸಿಂಹಾನ್ ಮೃಗಾ ಗಜಾಃ ॥೪೦॥

ಇಂದ್ರಃ ಪದಾತಿರಗಮತ್ ಮಯಾನೀತೋ ಗಜೋತ್ತಮಃ ।
ಐರಾವತೋಽಯಂ ಭಗವನ್ ಗೃಹಾಣ ದ್ವಿರದೋತ್ತಮಂ ॥೪೧॥

ನ ಹತಾಸ್ತೇ ಮಯಾ ತಸ್ಮಾದಯುಕ್ತಂ ಭೀತಮಾರಣಂ ।
ಆಜ್ಞಾಪಯ ಪುನಸ್ತಾತ ಕಿಂ ಕರೋಮಿ ತವೇಪ್ಸಿತಂ ॥೪೨॥

ನಿರ್ಗತಾ ನಿರ್ಜರಾಸ್ಸರ್ವೇ ಭಯಭೀತಾಃ ಶ್ರಮಾತುರಾಃ ।
ಇಂದ್ರೋಽಪ್ಯೈರಾವತಂ ತ್ಯಕ್ತ್ವಾ ಭಯಭೀತಃ ಪಲಾಯಿತಃ॥೪೩॥

---

ತ್ವಷ್ಟೃಬ್ರಹ್ಮನನ್ನು ನಮಸ್ಕರಿಸಿ " ನಾನು ಹೀಗೆ ಹೀಗೆ ಕೆಲಸಗಳನ್ನು ಮಾಡಿ ಜಯವನ್ನು ಸಂಪಾದಿಸಿದೆನು," ಎಂದು ಹೇಳಿದನು.॥೩೮-೩೯॥

ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಯುದ್ಧಕ್ಕೆ ಬಂದವರಾಗಿ ಜಯಿಸಲ್ಪಟ್ಟರು. ಮತ್ತು ಸಿಂಹದ ದೆಸೆಯಿಂದ ಮೃಗಗಳೂ, ಆನೆಗಳೂ ಹೆದರಿ ಓಡುವಂತೆ ತಮ್ಮ ತಮ್ಮ ಸ್ಥಾನಗಳನ್ನು ಬಿಟ್ಟು ಓಡಿದರು. ॥೪೦॥

ಇಂದ್ರನು ಕಾಲಾಳಿನಂತೆ ಓಡಿಹೋದನು. ಐರಾವತವೆಂಬ ಶ್ರೇಷ್ಠವಾದ ಆನೆಯನ್ನು ನಾನು ಹಿಡಿದು ತಂದಿದ್ದೇನೆ. ಆ ಐರಾವತವೆಂಬ ಆನೆಯೇ ಇದು! ಓ ಪೂಜ್ಯನೇ ಓ ಷಡ್ಗುಣೈಶ್ವರ್ಯವುಳ್ಳ ತಂದೆಯೇ, ಈ ಉತ್ತಮವಾದ ಆನೆಯನ್ನು ನೀನು ಸ್ವೀಕರಿಸು. ॥೪೧॥

ದೇವತೆಗಳೆಲ್ಲರೂ ಯುದ್ಧದಲ್ಲಿ ಸೋತು ಓಡಿಹೋದರು. ಹೆದರಿದವರನ್ನು ಕೊಲ್ಲುವುದು ನ್ಯಾಯಸಮ್ಮತವಲ್ಲವಾದ್ದರಿಂದ ಅವರನ್ನು ನಾನು ಕೊಲ್ಲಲಿಲ್ಲ. ಓ ತಂದೆಯೇ, ನಿನ್ನ ಇಷ್ಟವು ಇನ್ನೇನಿರುವುದು? ನಾನು ಇನ್ನು ಯಾವ ಕೆಲಸವನ್ನು ಮಾಡಲಿ? ಅಪ್ಪಣೆಯನ್ನು ಮಾಡು. ॥೪೨॥

ಎಲ್ಲಾ ದೇವತೆಗಳೂ ಭಯದಿಂದ ಹೆದರಿದವರಾಗಿ, ಹೆಚ್ಚು ಆಯಾಸದಿಂದ ಆರೋಗ್ಯವಿಲ್ಲದವರಾಗಿ ಓಡಿಹೋದರು. ಇಂದ್ರನೂ ಕೂಡ ಭಯದಿಂದ ಹೆದರಿ ಐರಾವತವನ್ನು ಬಿಟ್ಟು ಓಡಿಹೋಗಿರುವನು. ॥೪೩॥

॥ ವ್ಯಾಸ ಉವಾಚ ॥

**ಇತಿ ಪುತ್ರವಚಶ್ಶ್ರುತ್ವಾತ್ವಷ್ಟಾಪ್ರಾಹ ಮುದಾನ್ವಿತಃ ।**
**ಪುತ್ರವಾನದ್ಯ ಜಾತೋಽಸ್ಮಿ ಸಫಲಂ ಮಮ ಜೀವಿತಂ ॥೪೪॥**

**ತ್ವಯಾಽಹಂ ಪಾಲಿತಃ ಪುತ್ರ ಗತೋಽಯಂ ಮಾನಸೋ ಜ್ವರಃ ।**
**ನಿಶ್ಚಲಂ ಮೇ ಮನೋ ಜಾತಂ ದೃಷ್ಟ್ವಾ ವೀರ್ಯಂ ತವಾದ್ಭುತಂ ॥೪೫॥**

**ಶ್ರುಣು ವಕ್ಷ್ಯಾಮ್ಯಹಂ ಪುತ್ರ ಹಿತಂ ತೇಽದ್ಯ ನಿಶಾಮಯ ।**
**ತಪಃ ಕುರು ಮಹಾಭಾಗ ಸಾವಧಾನಃ ಸ್ಥಿರಾಸನಃ ॥೪೬॥**

**ವಿಶ್ವಾಸೋ ನೈವ ಕರ್ತವ್ಯಃ ಕೇಷಾಂ ಚಿತ್ಪಾಕಶಾಸನಃ ।**
**ಶತ್ರುಸ್ತೇ ಛಲಕರ್ತಾಽಸ್ತಿ ನಾನಾಭೇದ ವಿಶಾರದಃ ॥೪೭॥**
**ತಪಸಾ ಪ್ರಾಪ್ಯತೇ ಲಕ್ಷ್ಮೀಸ್ತಪಸಾ ರಾಜ್ಯಮುತ್ತಮಂ ।**

---

ವ್ಯಾಸಋಷಿಯು ಹೇಳಿದನು—ತ್ವಷ್ಟೃಬ್ರಹ್ಮನು ಹೀಗೆ ತನ್ನ ಮಗನು ಹೇಳುತ್ತಿರುವ ಮಾತುಗಳನ್ನು ಕೇಳಿ ಸಂತೋಷದಿಂದ ಕೂಡಿದವನಾಗಿ ಮಗನ ಸಂಗಡ ಮಾತನಾಡಿದನು. ಈಗ ನಾನು ಮಕ್ಕಳುಳ್ಳವನಾಗಿರುವೆನು! ನನ್ನ ಬದುಕು ಏಕೆಯೂ ಈಗ ಪ್ರಯೋಜನವುಳ್ಳದ್ದಾಗಿರುತ್ತದೆ! ॥೪೪॥

ಎಲೈ ಪುತ್ರನೇ, ನಿನ್ನಿಂದ ನಾನು ಪರಿಶುದ್ಧನಾಗಿ ಮಾಡಲ್ಪಟ್ಟೆನು. ಎಂದರೆ ನನ್ನ ಮನಸ್ಸಿನ ಕೊರಗನ್ನು ನೀನು ನಾಶಮಾಡಿದಯಾದ್ದರಿಂದ ನನ್ನ ಮನಸ್ಸಿನ ಜ್ವರವು ಹೋಯಿತು. ನನ್ನ ಮನಸ್ಸು ನಿನ್ನ ಆಶ್ಚರ್ಯಕರವಾದ ಸಾಮರ್ಥ್ಯವನ್ನು ನೋಡಿ ಈಗ ಸ್ಥಿರವಾಗಿರುತ್ತದೆ. ॥೪೫॥

ಎಲೈ ಮಗನೇ ಕೇಳು, ನಾನು ನಿನಗೆ ಈಗ ಹಿತವಾದ ಮಾತನ್ನು ಹೇಳುವೆನು. ಜಾಗರೂಕತೆಯಿಂದ ಕೇಳು. ಎಲೈ ಅದೃಷ್ಟವಂತನೇ, ನೀನು ಸ್ಥಿರವಾದ ಆಸನವನ್ನು ಹಾಕಿಕೊಂಡು ತಪಸ್ಸನ್ನು ಮಾಡು. ॥೪೬॥

ನಿನ್ನ ಶತ್ರುವಾದ ಇಂದ್ರನು ಯಾರೊಡನೆಯೂ ವಿಶ್ವಾಸದಿಂದಿರಲು ಯೋಗ್ಯನಲ್ಲವು. ಅವನು ತನ್ನ ಹಠವನ್ನು ಸಾಧಿಸುವುದರಲ್ಲಿ ಮೋಸದ ಕೆಲಸವನ್ನಾದರೂ ಮಾಡತಕ್ಕವನು. ಅನೇಕ ವಿಧವಾದ ಭೇದೋಪಾಯಗಳನ್ನು ಮಾಡುವುದರಲ್ಲಿ ನಿಪುಣನಾಗಿರುವನು. ॥೪೭॥

**ತಪಸಾ ಬಲವೃದ್ಧಿಸ್ಸ್ಯಾತ್ ಸಂಗ್ರಾಮೇ ವಿಜಯಸ್ತಥಾ ॥೪೮॥**
**ಆರಾಧ್ಯ ದ್ರುಹಿಣಂ ದೇವಂ ಲಬ್ಧ್ವಾ ವರಮನುತ್ತಮಂ ।**
**ಜಹಿ ಶಕ್ರಂ ದುರಾಚಾರಂ ಬ್ರಹ್ಮಹತ್ಯಾಸಮಾವೃತಂ ॥೪೯॥**

**ಸಾವಧಾನಃ ಸ್ಥಿರೋ ಭೂತ್ವಾ ಧಾತಾರಂ ಭಜ ಶಂಕರಂ ।**
**ವಾಂಛಿತಂ ಸ ವರಂ ದದ್ಯಾತ್ಸಂತುಷ್ಟಶ್ಚತುರಾನನಃ ॥೫೦॥**

**ತೋಷಯಿತ್ವಾ ವಿಶ್ವಯೋನಿಂ ಬ್ರಹ್ಮಾಣಮಮಿತೌಜಸಂ ।**
**ಅವಿನಾಶಿತ್ವಮಾಸಾದ್ಯ ಜಹಿ ಶಕ್ರಂ ಕೃತಾಗಸಂ ॥೫೧॥**

**ವೈರಂ ಮನಸಿ ಮೇ ಪುತ್ರ ವರ್ತತೇ ಸುತಘಾತಜಂ ।**
**ನ ಶಾಂತಿಮನುಗಚ್ಛಾಮಿ ನ ಸ್ವಪಾಮಿ ಸುಖೇನ ಹಿ ॥೫೨॥**

---

ತಪಸ್ಸಿನಿಂದ ಧನವನ್ನು ಪಡೆಯಬಹುದು. ತಪಸ್ಸಿನಿಂದ ಶ್ರೇಷ್ಠವಾದ ರಾಜ್ಯವು ಸಿಕ್ಕುವುದು. ತಪಸ್ಸಿನಿಂದ ಶಕ್ತಿಯು ದಿನೇ ದಿನೇ ಹೆಚ್ಚುವುದು. ಹಾಗೆಯೇ ಯುದ್ಧದಲ್ಲಿ ಜಯವು ತಪಸ್ಸಿನಿಂದಲೇ ಲಭಿಸುವುದು. ॥೪೮॥

ದೇವತೆಯಾಗಿರುವ ಬ್ರಹ್ಮನನ್ನು ತುರಿತು ತಪಸ್ಸನ್ನು ಮಾಡಿ ಸಂತೋಷ ಪಡಿಸಿ ಉತ್ತಮವಾದ ವರವನ್ನು ಪಡೆದುಕೊಂಡು ನೀನು ಕೆಟ್ಟ ನಡತೆಯುಳ್ಳವನಾಗಿಯೂ, ಬ್ರಹ್ಮಹತ್ಯೆಯಿಂದ ಕೂಡಿದವನಾಗಿಯೂ ಇರುವ ಇಂದ್ರನನ್ನು ನಿಗ್ರಹ ಮಾಡು. ॥೪೯॥

ನೀನು ಚಿತ್ತೈಕಾಗ್ರ್ಯವುಳ್ಳವನಾಗಿ, ಸ್ಥಿರವಾದ ಆಸನದಲ್ಲಿ ಇರುವವನಾಗಿ ಸುಖವನ್ನುಂಟುಮಾಡುವವನಾದ ಬ್ರಹ್ಮನನ್ನು ಧ್ಯಾನಮಾಡು. ನಾಲ್ಕು ಮುಖಗಳಿಂದ ಕೂಡಿದವನಾದ ಆ ಬ್ರಹ್ಮನು ನಿನ್ನ ಸೇವೆಯಿಂದ ಸಂತುಷ್ಟನಾಗಿ ನಿನ್ನ ಇಷ್ಟವಾದದ್ದೆಲ್ಲವನ್ನೂ ನಿನಗೆ ಕೊಡುವನು. ॥೫೦॥

ಪ್ರಪಂಚಕ್ಕೆಲ್ಲಕ್ಕೂ ಕಾರಣವಾಗಿರುವ, ಬಹಳಮಟ್ಟಿನ ಸಾಮರ್ಥ್ಯವುಳ್ಳವನಾದ ಬ್ರಹ್ಮನನ್ನು ನೀನು ತಪಸ್ಸಿನಿಂದ ಸಂತೋಷಪಡಿಸಿ ಮರಣವು ಉಂಟಾಗದಿರುವ ವರವನ್ನು ಅವನಿಂದ ಹೊಂದಿ ಕೆಟ್ಟಕೆಲಸವನ್ನು (ತಪ್ಪನ್ನು) ಮಾಡಿರುವವನಾದ ಇಂದ್ರನನ್ನು ನೀನು ನಾಶಮಾಡು. ॥೫೧॥

ಎಲೈ ಮಗನಾದ ವೃತ್ರನೇ, ನನ್ನ ಮನಸ್ಸಿನಲ್ಲಿ ನನ್ನ ಮಗನನ್ನು ಕೊಂದಿರುವ ನಿಮಿತ್ತದಿಂದುಂಟಾದ ಇಂದ್ರನ ಮೇಲಿನ ದ್ವೇಷವು ಇರುವುದು. ಅದರಿಂದ

ತಾಪಸೋ ಮೇ ಹತಃ ಪುತ್ರೋ ನಿರಾಗಾಃ ಪಾಪ್ಮನಾ ಯತಃ ।
ನ ವಿಂದಾಮಿ ಸುಖಂ ವೃತ್ರ ತ್ವಂ ಮಾಮುದ್ಧರ ದುಃಖಿತಂ ॥೫೩॥

॥ ವ್ಯಾಸ ಉವಾಚ ॥

ತದಾಕರ್ಣ್ಯ ಪಿತುರ್ವಾಕ್ಯಂ ವೃತ್ರಃ ಕ್ರೋಧಯುತಸ್ತದಾ ।
ಆಜ್ಞಾಮಾದಾಯಚ ಪಿತುರ್ಜಗಾಮ ತಪಸೇ ಮುದಾ ॥೫೪॥

ಗಂಧಮಾದನಮಾಸಾದ್ಯ ಪುಣ್ಯಾಂ ದೇವಧುನೀಂ ಶುಭಾಂ ।
ಸ್ನಾತ್ವಾ ಕುಶಾಸನಂ ಕೃತ್ವಾ ಸಂಸ್ಥಿತಶ್ಚ ಸ್ಥಿರಾಸನಃ ॥೫೫॥

ತ್ಯಕ್ತ್ವಾಽನ್ನಂ ವಾರಿಪಾನಂ ಚ ಯೋಗಾಭ್ಯಾಸ ಪರಾಯಣಃ ।
ಧ್ಯಾಯನ್ ವಿಶ್ವಸೃಜಂ ಚಿತ್ತೇ ಸೋಽಪವಿಷ್ಟಃ ಸ್ಥಿರಾಸನೇ ॥೫೬॥

---

ನಾನು ಉಪಶಾನ್ತಿಯನ್ನು ಹೊಂದಲಾರೆನು. ಮತ್ತು ಸುಖದಿಂದ ನಿದ್ದೆಯನ್ನೂ ಮಾಡುವುದಿಲ್ಲವು. ॥೫೨॥

ನನ್ನ ಹಿರಿಯ ಮಗನಾದ ತ್ರಿಶಿರಸ್ಸೆಂಬುವನು ತಪಸ್ಸನ್ನು ಮಾಡುತ್ತಿದ್ದನು. ಕೇವಲ ತಪಸ್ಸನ್ನು ಮಾಡುತ್ತಿದ್ದದ್ದೇ ವಿನಾ ಇತರ ವಿಧವಾದ ವ್ಯವಹಾರವನ್ನೇ ನಡೆಸುತ್ತಿರಲಿಲ್ಲವಾದುದರಿಂದ ಅವನು ನಿರಪರಾಧಿಯಾಗಿದ್ದನು. ಹೀಗೆ ಇದ್ದ ನನ್ನ ಮಗನನ್ನು ಇಂದ್ರನು ಯಾವ ಕಾರಣದಿಂದಲೋ, ಕೆಟ್ಟ ಯೋಚನೆಯನ್ನು ಅವನ ವಿಷಯದಲ್ಲಿ ನಿಶ್ಚಯಿಸಿಕೊಂಡು ಕೊಂದಿರುವನು. ಎಲೈ ವೃತ್ರನೇ, ಈ ಕಾರಣ ದಿಂದ ನಾನು ಪುತ್ರಶೋಕದಿಂದಲೂ, ಇಂದ್ರನ ದುರ್ವೃತ್ತತೆಯಿಂದಲೂ ಸಹ ಸುಖ ವಿಲ್ಲದಿರುವೆನು. ನೀನು ಹೀಗಿರುವ ನನ್ನ ದುಃಖಕ್ಕೆ ಕಾರಣನಾದ ಇಂದ್ರನನ್ನು ನಿಗ್ರಹಮಾಡಿ ನನ್ನನ್ನು ಸಂತೋಷಗೊಳಿಸು. ॥೫೩॥

ವ್ಯಾಸಋಷಿಯು ಹೇಳಿದನು, ವೃತ್ರಾಸುರನು ತಂದೆಯ ಆ ಮಾತನ್ನು ಆಗ ಕೇಳಿದವನಾಗಿ ಇಂದ್ರನ ಮೇಲೆ ಕೋಪವುಳ್ಳವನಾಗಿ ತಂದೆಯ ಆಜ್ಞೆಯಂತೆ ತಪಸ್ಸನ್ನು ಮಾಡಲು ಸಂತೋಷದಿಂದ ಹೊರಟನು. ॥೫೪॥

ಆ ವೃತ್ರನು ಗಂಧಮಾದನ ಪರ್ವತಕ್ಕೆ ಹೋಗಿ ಅಲ್ಲಿ ಪವಿತ್ರತರವಾದ, ಮತ್ತು ಮಂಗಳಕರವಾದ ಗಂಗಾನದಿಯಲ್ಲಿ ಸ್ನಾನಮಾಡಿ ದರ್ಭೆಯಿಂದ ಆಸನವನ್ನು ಮಾಡಿಕೊಂಡು ಸ್ಥಿರವಾದ ಆಸನವುಳ್ಳವನಾಗಿ ಕೂತುಕೊಂಡನು. ॥೫೫॥

ಮಘವಾ ತಂ ತಪಸ್ಯಂತಂ ಜ್ಞಾತ್ವಾ ಚಿಂತಾತುರೋಽಭ್ಯಭೂತ್ ।
ಗಂಧರ್ವಾನ್ ಪ್ರೇಷಯಾಮಾಸ ವಿಘ್ನಾರ್ಥಂ ಪಾಕಶಾಸನಃ ॥೫೭॥

ಯಕ್ಷಾಂಶ್ಚ ಪನ್ನಗಾನ್ ಸರ್ಪಾನ್ ಕಿನ್ನರಾನಮಿತೌಜಸಃ ।
ವಿದ್ಯಾಧರಾನಪ್ಸರಸೋ ದೇವದೂತಾನನೇಕಶಃ ॥೫೮॥

ಉಪಾಯಾ ಸ್ತೈಃ ಕೃತಾಃ ಸಮ್ಯಕ್ ತಪೋವಿಘ್ನಾಯ ಮಾಯಿಭಿಃ।
ನ ಚಚಾಲ ತತೋ ಧ್ಯಾನಾತ್ತ್ವಾಷ್ಟ್ರಃ ಪರಮತಾಪಸಃ ॥೫೯॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ
ತೃತೀಯೋಽಧ್ಯಾಯಃ.

---

ಅನ್ನವನ್ನು ತಿನ್ನುವುದನ್ನೂ, ನೀರನ್ನು ಕುಡಿಯುವುದನ್ನೂ ಸಹ ಬಿಟ್ಟು, ಯೋಗಾಭ್ಯಾಸಮಾಡುವುದರಲ್ಲಿ ಆಸಕ್ತಿಯುಳ್ಳವನಾಗಿ, ಸ್ಥಿರವಾದ ಆಸನದಲ್ಲಿ ಕೂತುಕೊಂಡು ಪ್ರಪಂಚವೆಲ್ಲವನ್ನೂ ಸೃಷ್ಟಿಮಾಡಿರುವವನಾದ ಬ್ರಹ್ಮನನ್ನು ತನ್ನ ಮನಸ್ಸಿನಲ್ಲಿ ಧ್ಯಾನಮಾಡುತ್ತಿದ್ದನು. ||೫೬||

ಪಾಕನೆಂಬ ರಾಕ್ಷಸನನ್ನು ನಾಶಪಡಿಸಿದವನಾದ ಇಂದ್ರನು, ಆ ವೃತ್ರಾಸುರನು ತಪಸ್ಸನ್ನು ಮಾಡುತ್ತಿರುವನೆಂಬ ವರ್ತಮಾನವನ್ನು ಕೇಳಿ, ಬಹಳ ಮಟ್ಟಿನ ದುಃಖವುಳ್ಳವನಾದನು, ಮತ್ತು ಅವನ ತಪಸ್ಸನ್ನು ವಿಘ್ನಮಾಡುವುದಕ್ಕಾಗಿ ಬಹಳ ಗಟ್ಟಿಗರಾಗಿರುವ ಗಂಧರ್ವರೂ, ಯಕ್ಷರೂ, ಪನ್ನಗರೂ, ಸರ್ಪಗಳೂ, ಕಿನ್ನರರೂ, ವಿದ್ಯಾಧರರೂ, ಅಪ್ಸರಸ್ತ್ರೀಯರೂ ಮತ್ತು ಅನೇಕ ದೂತರು ಇವರುಗಳಲ್ಲಿ ಅನೇಕ ಜನರನ್ನು, ಅನೇಕಾವೃತ್ತಿ ಕಳುಹಿಸಿದನು. ||೫೭-೫೮||

ಮೋಸದಿಂದ ನಡೆಯುವವರಾದ ಇಂದ್ರನಿಂದ ತನ್ನ ತಪಸ್ಸನ್ನು ಹಾಳು ಮಾಡಲು ಬಂದವರಾದ ಅವರುಗಳಿಂದ ಮಾಡಲ್ಪಟ್ಟ ಉಪಾಯಗಳಿಂದ ಆ ತ್ವಷ್ಟೃ ಬ್ರಹ್ಮನ ಮಗನಾದ ವೃತ್ರನು ಸ್ವಲ್ಪವೂ ಚಂಚಲವಾದ ಮನಸ್ಸುಳ್ಳವನಾಗಲಿಲ್ಲ. ತನ್ನ ಧ್ಯಾನದಲ್ಲಿಯೇ ಮಗ್ನನಾಗಿ ಉತ್ಕೃಷ್ಟವಾದ ತಾಪಸನೆನಿಸಿಕೊಂಡು ದಿನೇ ದಿನೇ ತಪಸ್ಸಿನಲ್ಲಿ ಅಭಿವೃದ್ಧಿಯನ್ನು ಹೊಂದುತ್ತಿದ್ದನು. ||೫೯||

ಇಲ್ಲಿಗೆ ಶ್ರೀದೇವಿಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಃ ಸ್ಕಂಧಃ

### || ಚತುರ್ಥೋಽಧ್ಯಾಯಃ ||

### ನಾಲ್ಕನೆಯ ಅಧ್ಯಾಯವು

|| ವ್ಯಾಸ ಉವಾಚ ||

**ನಿರ್ಗತಾಸ್ತೇ ಪರಾವೃತ್ತಾಸ್ತಪೋವಿಘ್ನಕರಾಸ್ಸುರಾಃ ।**
**ನಿರಾಶಾಃ ಕಾರ್ಯಸಂಸಿದ್ಧ್ಯೈ ತಂದೃಷ್ಟ್ವಾ ದೃಢ ಚೇತಸಂ ||೧||**

**ಜಾತೇ ವರ್ಷಶತೇ ಪೂರ್ಣೇ ಬ್ರಹ್ಮಾ ಲೋಕಪಿತಾಮಹಃ ।**
**ತತ್ರಾಜಗಾಮ ತರಸಾ ಹಂಸಾರೂಢಶ್ಚತುರ್ಮುಖಃ ||೨||**

---

ವ್ಯಾಸಋಷಿಯು ಹೇಳಿದನು—ಅನಂತರದಲ್ಲಿ ವೃತ್ರನು ತನ್ನ ಮನಸ್ಸನ್ನು ದೃಢವಾಗಿ ಇರಿಸಿಕೊಂಡು ಮಾಡುತ್ತಿರುವ ತಪಸ್ಸನ್ನು ಕೆಡಿಸುವುದಕ್ಕಾಗಿ ಬಂದಿದ್ದ ದೇವತೆಗಳೇ ಮೊದಲಾದವರು, ಅವನು ದೃಢವಾದ ಮನಸ್ಸುಳ್ಳವನೆಂಬುದಾಗಿ ತಿಳಿದು, ತಮ್ಮ ಕಾರ್ಯಸಿದ್ಧಿಯ ವಿಷಯದಲ್ಲಿ ನಿರಾಶರಾಗಿ ಹಿಂತಿರುಗಿ ಹೋದರು. ||೧||

ಈ ವೃತ್ರಾಸುರನು ತಪಸ್ಸನ್ನು ಮಾಡುವುದಕ್ಕೆ ಪ್ರಾರಂಭಿಸಿ ಒಂದುನೂರು ವರ್ಷಗಳು ಪೂರ್ಣವಾದ ನಂತರ ಇವನಿಗೆ ವರವನ್ನು ಕೊಡುವುದಕ್ಕಾಗಿ ಎಲ್ಲಾ ಲೋಕಗಳಿಗೂ ಅಜ್ಜನಾಗಿರುವ ನಾಲ್ಕು ಮುಖಗಳುಳ್ಳವನಾದ ಬ್ರಹ್ಮನು ತ್ವರೆಯಿಂದ ಕೂಡಿದವನಾಗಿ ತನ್ನ ವಾಹನವಾದ ಹಂಸವನ್ನು ಹತ್ತಿಕೊಂಡು ಬೇಗನೆ ಅವನು ತಪಸ್ಸನ್ನು ಮಾಡುತ್ತಿರುವ ಪ್ರದೇಶಕ್ಕೆ ಬಂದನು. ||೨||

4

ಆಗತ್ಯ ತಮುವಾಚೇದಂ ತ್ವಷ್ಟೃಪುತ್ರ ಸುಖೀಭವ ।
ತ್ಯಕ್ತ್ವಾ ಧ್ಯಾನಂ ವರಂ ಬ್ರೂಹಿ ವದಾಮಿ ತವ ವಾಂಛಿತಂ ॥೬॥

ತಪಸಾ ತೇಽದ್ಯತುಷ್ಟೋಽಸ್ಮಿ ತ್ವಾಂದೃಷ್ಟ್ವಾಚಾತಿಕರ್ಶಿತಂ ।
ವರಂ ವರಯ ಭದ್ರಂ ತೇ ಮನೋಽಭಿಲಷಿತಂ ತವ ॥೪॥

॥ ವ್ಯಾಸ ಉವಾಚ ॥

ವೃತ್ರಸ್ತದಾತಿವಿಶದಾಂ ಪುರತೋಽ ನಿಶಮ್ಯ
ವಾಚಂ ಸುಧಾ-ಸಮರಸಾಂ ಜಗದೇಕಕರ್ತುಃ ।
ಸಂತ್ಯಜ್ಯ ಯೋಗಕಲನಾಂ ಸಹಸೋದತಿಷ್ಠತ್
ಸಂಜಾತ ಹರ್ಷನಯನಾಶ್ರುಕಲಾ ಕಲಾಪಃ ॥೫॥

ಪಾದೌಪ್ರಣಮ್ಯ ಸಹಸಾ ಪ್ರಣಯಾತ್ ವಿಧಾತುಃ
ಬದ್ಧಾಂಜಲಿಃ ಪುರತಃ ಏವ ಸಮಾಸಸಾದ ।

---

ಎಲೈ ತ್ವಷ್ಟೃಬ್ರಹ್ಮನ ಮಗನಾದ ವೃತ್ರನೇ, ನೀನು ಸುಖವಾಗಿರು. ತಪಸ್ಸಿನಿಂದ ಕಷ್ಟಪಡದೆ ಧ್ಯಾನ ಮಾಡುವುದನ್ನು ಬಿಟ್ಟು ನಿನಗೆ ಬೇಕಾದ ವರವನ್ನು ಕೇಳು, ನಿನ್ನ ಇಷ್ಟಪ್ರಕಾರ ವರವನ್ನು ಕೊಡುವೆನು ಎಂದು ಬ್ರಹ್ಮನುಹೇಳಿದನು. ॥೩॥

ಎಲೈ ವೃತ್ರಾಸುರನೇ, ನಿನಗೆ ಮಂಗಳವಾಗಲಿ, ನೀನು ತಪಸ್ಸನ್ನು ಮಾಡುವುದರಿಂದ ಬಹಳ ಕೃಶನಾಗಿರುತ್ತೀಯೆ. ಈಗ ನೀನು ಮಾಡುತ್ತಿರುವ ತಪಸ್ಸಿನಿಂದ ಸಂತೋಷವುಳ್ಳವನಾಗಿರುತ್ತೇನೆ. ನಿನ್ನ ಮನಸ್ಸಿನ ಅಭಿಲಾಷೆಯನ್ನು ಹೇಳು. ಅದರಂತೆ ನಾನು ನಿನಗೆ ಅನುಗ್ರಹ ಮಾಡುವೆನು. ॥೪॥

ವ್ಯಾಸಋಷಿಯು ಹೇಳಿದನು—ಆಗ ವೃತ್ರಾಸುರನು ತನ್ನ ಮುಂದುಗಡೆಯಲ್ಲಿ ಕೇಳಿ ಬರುತ್ತಿರುವ ಸ್ಫುಟವಾದ ಅಕ್ಷರಗಳಿಂದ ಕೂಡಿಕೊಂಡು ಅಮೃತಕ್ಕೆ ಸಮಾನವಾಗಿ ಹಿತವನ್ನುಂಟುಮಾಡುವುದಾಗಿಯೂ, ಇರುವ ಬ್ರಹ್ಮನ ಆ ಮಾತನ್ನು ಕೇಳಿ ಹೆಚ್ಚಾದ ಆನಂದಬಾಷ್ಪವುಳ್ಳವನಾಗಿ ತಾನು ಮಾಡುತ್ತಿರುವ ಯೋಗಾಭ್ಯಾಸವನ್ನು ನಿಲ್ಲಿಸಿ ಬೇಗನೆ ಎದ್ದು ನಿಂತುಕೊಂಡನು. ॥೫॥

ವೃತ್ರಾಸುರನು ತನ್ನ ತಲೆಯನ್ನು ತಗ್ಗಿಸಿಕೊಂಡು ಭಕ್ತಿಯಿಂದ ಬ್ರಹ್ಮನ ಪಾದಗಳಿಗೆ ನಮಸ್ಕಾರವನ್ನು ಮಾಡಿದನು. ಅನಂತರದಲ್ಲಿ ಎರಡು ಕೈಗಳನ್ನೂ ಜೋಗಸೆ ಕಟ್ಟಿಕೊಂಡು ಬ್ರಹ್ಮನ ಮುಂದುಗಡೆಯಲ್ಲಿ ವಿನಯದಿಂದ ಸಮೀಪಿಸಿದನು.

ಪ್ರೋವಾಚ ತಂ ಸುವರದಂ ತಪಸಾ ಪ್ರಸನ್ನಂ
ಪ್ರೇಮ್ಣಾಽತಿಗದ್ಗದ ಗಿರಾ ವಿನಯೇನ ನಮ್ರಃ ॥೬॥

ಪ್ರಾಪ್ತಂ ಮಯಾ ಸಕಲದೇವಪದಂ ಪ್ರಭೋಽದ್ಯ
ಯದ್ದರ್ಶನಂ ತವ ಸುದುರ್ಲಭಮಾಶು ಜಾತಂ ।
ವಾಂಛಾಽಸ್ತಿ ನಾಥ ಮನಸಿ ಪ್ರವಣೇ ದುರಾಪಾ
ತಾಂ ಪ್ರಬ್ರವೀಮಿ ಕಮಲಾಸನ ವೇತ್ಸಿ ಭಾವಂ ॥೭॥

ಮೃತ್ಯುಶ್ಚ ಮಾ ಭವತು ಮೇ ಕಿಲ ಲೋಹಕಾಷ್ಠ
ಶುಷ್ಕಾರ್ದ್ರವಂಶ ನಿಚಯೈರಪರೈಶ್ಚ ಶಸ್ತ್ರೈಃ ।
ವೃದ್ಧಿಂ ಪ್ರಯಾತು ಮಮ ವೀರ್ಯಮತೀವ ಯುದ್ಧೇ
ಯಸ್ಮಾದ್ಭವಾಮಿ ಸ ಬಲೈರಮರೈರಜೇಯಃ ॥೮॥

---

ತಾನು ಮಾಡುವ ತಪಸ್ಸಿಗೆ ಪ್ರಸನ್ನನಾಗಿ ವರವನ್ನು ಕೊಡುವುದಕ್ಕಾಗಿ ಸಿದ್ಧನಾಗಿ ಬಂದು ನಿಂತಿರುವ ಬ್ರಹ್ಮನ ವಿಷಯದಲ್ಲಿ ವಿನಯದಿಂದ ತಲೆಬಾಗಿಸಿಕೊಂಡು ಇರುವವನಾಗಿ ಪ್ರೀತಿಯಿಂದ ಅಸ್ಫುಟವಾಗಿ ಹೊರಡುತ್ತಿರುವ ಮಾತುಗಳಿಂದ ಅವನ ಸಂಗಡ ಆ ವೃತ್ರನು ಹೀಗೆ ಮಾತನಾಡಿದನು. ॥೬॥

ಓ ಪದ್ಮಾಸನನಾದ ಬ್ರಹ್ಮನೇ, ಓ ಪ್ರಭುವೇ, ಯಾರಿಂದಲೂ ಕಾಣಲು ಅಸಾಧ್ಯವಾದ ನಿನ್ನ ದರ್ಶನವು ಈಗ ಬೇಗನೆ ನನಗೆ ಉಂಟಾದ ಕಾರಣ ಎಲ್ಲ ದೇವತೆಗಳ ಸ್ಥಾನವೂ ನನಗೆ ಈಗಲೇ ಸಿಕ್ಕಿತು! ಓ ಸ್ವಾಮಿಯೇ, ಆಸೆಗೆ ಅಧೀನವಾಗಿರುವ ನನ್ನ ಮನಸ್ಸಿನಲ್ಲಿ ಇತರರು ಯಾರೂ ಪಡೆಯದಿರುವ ಇಷ್ಟವನ್ನು ನಾನು ಹೊಂದಬೇಕೆಂದು ಇಚ್ಛೆಯು ಇರುವುದು. ಸರ್ವಜ್ಞನಾದ ನೀನು ನನ್ನ ಅಭಿಪ್ರಾಯವನ್ನು ತಿಳಿದಿರುತ್ತೀಯೆ. ಆದಾಗ್ಯೂ ನಾನು ಅದನ್ನು ಸ್ಪಷ್ಟವಾಗಿ ಹೇಳುವೆನು. ॥೭॥

ಓ ಬ್ರಹ್ಮನೇ, ನನಗೆ ಲೋಹ, ಕಟ್ಟಿಗೆ, ಹಸಿಯ ಪದಾರ್ಥ, ಒಣಗಿದ ಪದಾರ್ಥ, ಬಿದಿರುಗಳ ಗುಂಪು ಮತ್ತು ಬೇರೆಯಾದ ಇತರ ಆಯುಧಗಳು ಇವುಗಳಲ್ಲಿ ಯಾವುದರಿಂದಲೂ ಮರಣವು ಬರಕೂಡದು. ನಾನು ಯುದ್ಧದಲ್ಲಿ ಸೇನಾಸಮೇತರಾಗಿರುವ ಮತ್ತು ಶಕ್ತರಾದ ದೇವತೆಗಳಿಂದ ಜಯಿಸಲು ಅಶಕ್ಯನಾಗಿರುವಂತೆ ನನ್ನ ಸಾಮರ್ಥ್ಯವು ಬಹಳಮಟ್ಟಿಗೆ ಹೆಚ್ಚಬೇಕು, ಹಾಗೆ ನೀನು ಅನುಗ್ರಹಿಸು. ಎಂದು ವರವನ್ನು ವೃತ್ರನು ಕೇಳಿಕೊಂಡನು. ॥೮॥

|| ವ್ಯಾಸ ಉವಾಚ ||

ಇತ್ಥಂ ಸಂಪ್ರಾರ್ಥಿತೋ ಬ್ರಹ್ಮಾ ತಮುವಾಚ ಪ್ರಹಸನ್ನಿವ ।
ಉತ್ತಿಷ್ಠ ಗಚ್ಛ ಭದ್ರಂ ತೇ ವಾಂಛಿತಂ ಸಫಲಂ ಸದಾ ||೯||

ನ ಶುಷ್ಕೇಣ ನ ಚಾರ್ದ್ರೇಣ ನ ಪಾಷಾಣೇನ ದಾರುಣಾ ।
ಭವಿಷ್ಯತಿ ನ ತೇ ಮೃತ್ಯುರಿತಿ ಸತ್ಯಂ ಬ್ರವೀಮ್ಯಹಂ ||೧೦||

ಇತಿ ದತ್ವಾ ವರಂ ಬ್ರಹ್ಮಾ ಜಗಾಮ ಭವನಂ ಪರಂ ।
ವೃತ್ರಸ್ತು ತಂ ವರಂ ಲಬ್ಧ್ವಾ ಮುದಿತಃ ಸ್ವಗೃಹಂ ಯಯೌ ||೧೧||

ಶಶಂಸ ಪಿತುರಗ್ರೇ ತದ್ವರದಾನಂ ಮಹಾಮತಿಃ ।
ತ್ವಷ್ಟಾ ತು ಮುದಿತಃ ಪ್ರಾಪ್ತಂ ಪುತ್ರಂ ಪ್ರಾಪ್ತವರಂ ತದಾ ||೧೨||

---

ವ್ಯಾಸಋಷಿಯು ಹೇಳಿದನು, ಬ್ರಹ್ಮನು ಹೀಗೆ ಅವನಿಂದ ಪ್ರಾರ್ಥಿಸಲ್ಪಟ್ಟವನಾಗಿ, ಎಲೈ ವೃತ್ರನೇ, ತಪಸ್ಸನ್ನು ಬಿಟ್ಟು ಮೇಲಕ್ಕೆ ಏಳು, ನಿನಗೆ ಒಳ್ಳೆಯದಾಗಲಿ, ನಿನ್ನ ಇಷ್ಟವು ಯಾವಾಗಲೂ ಸಫಲವಾಗಲಿ, ನೀನು ಮನೆಗೆ ಹೋಗು. ನಿನಗೆ ಒಣಗಿದ ಪದಾರ್ಥದಿಂದಲಾಗಲಿ, ಹಸಿಯ ವಸ್ತುವಿನಿಂದಾಗಲಿ, ಕಲ್ಲಿನಿಂದಲಾಗಲಿ ಮರದಿಂದಲಾಗಲಿ ಮರಣವುಂಟಾಗುವುದಿಲ್ಲ. ನಾನು ನಿಜವನ್ನು ಹೇಳುತ್ತೇನೆ. ||೯-೧೦||

ಬ್ರಹ್ಮನು ಹೀಗೆ ಅವನಿಗೆ ವರವನ್ನು ಕೊಟ್ಟು ಉತ್ತಮವಾದ ತನ್ನ ಲೋಕಕ್ಕೆ ಹೊರಟುಹೋದನು. ವೃತ್ರಾಸುರನು ಆ ವರವನ್ನು ಹೊಂದಿ ಸಂತೋಷವುಳ್ಳವನಾಗಿ ತನ್ನ ಮನೆಯನ್ನು ಕುರಿತು ಪ್ರಯಾಣ ಮಾಡಿದನು. ||೧೧||

ಬಹಳ ಮೇಧಾವಿಯಾದ ವೃತ್ರನು ತನ್ನ ತಂದೆಯ ಎದುರಿಗೆ ಬ್ರಹ್ಮನು ತನಗೆ ಕೊಟ್ಟಿರುವ ಆ ಪ್ರಕಾರವಾದ ವರವನ್ನು ಶ್ಲಾಘಿಸಿದನು. ತ್ವಷ್ಟೃಬ್ರಹ್ಮನಾದರೋ ಅದನ್ನು ಕೇಳಿ ಸಂತೋಷವುಳ್ಳವನಾಗಿ ಬ್ರಹ್ಮನಿಂದ ವರವನ್ನು ಪಡೆದುಕೊಂಡು ಬಂದ ಮಗನನ್ನು ತಾನೂ ಹೊಗಳಿದನು. ||೧೨||

ಸ್ವಸ್ತಿ ತೇಽಸ್ತು ಮಹಾಭಾಗ ಜಹಿ ಶಕ್ರಂ ರಿಪುಂ ಮಮ ।
ಹತ್ವಾಽಽಗಚ್ಛ ತ್ರಿಶಿರಸೋ ಹಂತಾರಂ ಪಾಪಸಂಯುತಂ ॥೧೩॥

ಭವ ತ್ವಂ ತ್ರಿದಶಾಧೀಶಃ ಸಂಪ್ರಾಪ್ಯ ವಿಜಯಂ ರಣೇ ।
ಮಮಾಧಿಂ ಛಿಂಧಿ ವಿಪುಲಂ ಪುತ್ರನಾಶಸಮುದ್ಭವಂ ॥೧೪॥

ಜೀವತೋ ವಾಕ್ಯಕರಣಾತ್ ಕ್ಷಯಾಹೇ ಭೂರಿ ಭೋಜನಾತ್ ।
ಗಯಾಯಾಂ ಪಿಂಡದಾನಾಚ್ಚ ತ್ರಿಭಿಃ ಪುತ್ರಸ್ಯ ಪುತ್ರತಾ ॥೧೫॥

ತಸ್ಮಾತ್ಪುತ್ರ ಮಮಾತ್ಯರ್ಥಂ ದುಃಖಂ ನಾಶಿತುಮರ್ಹಸಿ ।
ತ್ರಿಶಿರಾ ಮಮ ಚಿತ್ತಾತ್ತು ನಾಪಸರ್ಪತಿ ಕರ್ಹಿಚಿತ್ ॥೧೬॥

---

ಎಲೈ ಅದೃಷ್ಟಶಾಲಿಯೇ, ನಿನಗೆ ಒಳ್ಳೆಯದಾಗಲಿ, ನನ್ನ ಶತ್ರುವಾದ ಇಂದ್ರನನ್ನು ಯುದ್ಧದಲ್ಲಿ ನೀನು ನಿಗ್ರಹಿಸು. (ನೀನು ಕೊಂದುಹಾಕು). ತ್ರಿಶಿರಸ್ಸೆಂಬ ನನ್ನ ಮಗನನ್ನು ಕೊಂದು ಪಾಪದಿಂದ ಕೂಡಿರುವ ಇಂದ್ರನನ್ನು ನೀನು ಕೊಂದು ಜಯಶೀಲನಾಗಿ ಮನೆಗೆ ಬಾ ॥೧೩॥

ನೀನು ಯುದ್ಧದಲ್ಲಿ ಜಯವನ್ನು ಹೊಂದಿ ದೇವತೆಗಳಿಗೆ ಅಧಿಪತಿಯಾಗಿ ಇರು. ನನಗೆ ಮಗನ ನಾಶದಿಂದ ಉಂಟಾಗಿರುವ ಬಹಳವಾದ ಮನೋವ್ಯಥೆಯನ್ನು ನೀನು ನಾಶಗೊಳಿಸಿ ಸಂತೋಷವನ್ನುಂಟುಮಾಡು. ॥೧೪॥

ಬದುಕಿರುವ ತಂದೆತಾಯಿಗಳು ಹೇಳಿದ ಮಾತುಗಳಿಗೆ ವಿಧೇಯನಾಗಿರುವುದೂ, ಅವರು ಮೃತರಾದ ಅನಂತರದಲ್ಲಿ ಅವರ ಪ್ರತಿವರ್ಷದ ಶ್ರಾದ್ಧದಿನದಲ್ಲಿ ಹೆಚ್ಚಾಗಿ ಅನ್ನದಾನವನ್ನು ಮಾಡುವುದೂ, ಮತ್ತು ಅವರ ತೃಪ್ತಿಗಾಗಿ ಗಯಾ ಮುಂತಾದ ತೀರ್ಥಗಳಲ್ಲಿ ಸ್ನಾನವಾಡಿ (ಪಿಂಡಗಳನ್ನು ಕೊಟ್ಟು) ಶ್ರಾದ್ಧಗಳನ್ನು ಮಾಡುವುದೂ ಈ ಮೂರು ಕೆಲಸಗಳಿಂದ ಮಗನಾದವನಿಗೆ ಸಾರ್ಥಕವಾದ ಪುತ್ರ(ಪುತ್ ಎಂಬ ನರಕದಿಂದ ಪಿತೃಗಳನ್ನು ಕಾಪಾಡುವವ)ನೆಂಬ ಹೆಸರು ಸಲ್ಲುವುದು. ॥೧೫॥

ಮಗನು ಅವಶ್ಯಕವಾಗಿ ಮಾಡಬೇಕಾದ ಕೆಲಸಗಳು ಹೀಗೆ ಇರುವುದರಿಂದ ನೀನು ನನ್ನ ದುಃಖವನ್ನು ನಿಶ್ಶೇಷವಾಗಿ ನಾಶಪಡಿಸು. ನಿನ್ನ ಅಣ್ಣನಾಗಿದ್ದ ತ್ರಿಶಿರಾ ಎಂಬುವನನ್ನು ಮಾತ್ರ ನನ್ನ ಮನಸ್ಸಿನಿಂದ ಹೇಗಾದರೂ ಮರೆತು ಬಿಡಲು ಸಾಧ್ಯವೇ ಇಲ್ಲವಾಗಿರುವುದು. ॥೧೬॥

**ಸುಶೀಲಸ್ಸತ್ಯವಾದೀ ಚ ತಾಪಸೋ ವೇದವಿತ್ತಮಃ ।**
**ಅಪರಾಧಂ ವಿನಾ ತೇನ ನಿಹತಃ ಪಾಪಬುದ್ಧಿನಾ ॥೧೭॥**

**ಇತಿ ತಸ್ಯ ವಚಶ್ಶ್ರುತ್ವಾ ವೃತ್ರಃ ಪರಮದುರ್ಜಯಃ ।**
**ರಥಮಾರುಹ್ಯ ತರಸಾ ನಿರ್ಜಗಾಮ ಪಿತುರ್ಗೃಹಾತ್ ॥೧೮॥**

**ರಣದುಂದುಭಿನಿರ್ಘೋಷಂ ಶಂಖನಾದಂ ಮಹಾಬಲಂ ।**
**ಕಾರಯಿತ್ವಾ ಪ್ರಯಾಣಂ ಸ ಚಕಾರ ರಣದುರ್ಜಯಃ ॥೧೯॥**

**ನಿರ್ಯಯೌ ನಯಸಂಯುಕ್ತಸ್ಸೇವಕಾನಿತಿ ಸಂವದನ್ ।**
**ಹತ್ವಾ ಶಕ್ರಂ ಗ್ರಹೀಷ್ಯಾಮಿ ಸುರರಾಜ್ಯಮಕಂಟಕಂ ॥೨೦॥**

---

ತ್ರಿಶಿರಾ ಎಂಬ ನನ್ನ ಮಗನು ಒಳ್ಳೆಯ ಸ್ವಭಾವದವನಾಗಿದ್ದನು. ಯಾವಾಗಲೂ ನಿಜವನ್ನು ಹೇಳುವವನಾಗಿಯೂ, ವೇದಗಳನ್ನು ಚೆನ್ನಾಗಿ ಅಧ್ಯಯನ ಮಾಡಿದವನಾಗಿಯೂ ತಪಸ್ಸನ್ನು ಮಾಡುತ್ತಿರುವವನಾಗಿಯೂ ಇದ್ದನು. ಹೀಗೆ ಸನ್ಮಾರ್ಗದಲ್ಲಿ ಇದ್ದ ಅವನು ಯಾವ ಅಪರಾಧವನ್ನು ಮಾಡದಿದ್ದಾಗ್ಯೂ ಕೆಟ್ಟಬುದ್ಧಿಯುಳ್ಳವನಾದ ಇಂದ್ರನು ಅವನನ್ನು ಕೊಂದಿರುವನು. ॥೧೭॥

ವ್ಯಾಸಋಷಿಯು ಹೇಳಿದನು—ಹೀಗೆ ತ್ವಷ್ಟೃಬ್ರಹ್ಮನು ಹೇಳಿದ ಮಾತನ್ನು ಕೇಳಿದವನಾಗಿ, ಯಾರಿಂದಲೂ ಯುದ್ಧದಲ್ಲಿ ಜಯಿಸಲು ಅಸಾಧ್ಯನಾದ ವೃತ್ರಾಸುರನು ರಥವನ್ನು ಹತ್ತಿಕೊಂಡು ತನ್ನ ತಂದೆಯ ಮನೆಯಿಂದ ಬೇಗನೆ ಯುದ್ಧಕ್ಕಾಗಿ ಹೊರಟನು. ॥೧೮॥

ಯುದ್ಧದಲ್ಲಿ ಯಾರಿಂದಲೂ ಜಯಿಸಲಸಾಧ್ಯನಾಗಿರುವ ಆ ವೃತ್ರಾಸುರನು ಯುದ್ಧಸೂಚಕವಾದ ರಣಭೇರಿಯ ಧ್ವನಿಯನ್ನು, ಬಹಳವಾಗಿ ಶಬ್ದವಾಗುವ ಶಂಖಗಳ ಧ್ವನಿಯನ್ನೂ ಸಹ ಮಾಡಿಸಿಕೊಂಡು ಇಂದ್ರನ ಸಂಗಡ ಯುದ್ಧ ಮಾಡಲು ಪ್ರಯಾಣ ಹೊರಟನು. ॥೧೯॥

ಆ ವೃತ್ರಾಸುರನು ನೀತಿಯಿಂದ ಕೂಡಿದವನಾಗಿ "ನಾನು ಇಂದ್ರನನ್ನು ಕೊಂದು ನಿಷ್ಕಂಟಕವಾಗಿ ಇರುವ ದೇವರಾಜ್ಯವನ್ನು ನನ್ನ ಅಧೀನದಲ್ಲಿರಿಸಿಕೊಳ್ಳುವೆನು" ಎಂದು ತನ್ನ ದೂತರ ಸಂಗಡ ಹೇಳಿಕೊಳ್ಳುವವನಾಗಿ ಯುದ್ಧಕ್ಕೆ ಪ್ರಯಾಣ ಮಾಡುತ್ತಿದ್ದನು. ॥೨೦॥

ಇತ್ಯುಕ್ತ್ವಾ ನಿರ್ಜಗಾಮಾಶು ಸ್ವಸೈನ್ಯಪರಿವಾರಿತಃ ।
ಮಹತಾಸೈನ್ಯನಾದೇನ ಭೀಷಯನ್ನಮರಾವತೀಂ ॥೨೦॥

ತಮಾಗಚ್ಛಂತಮಾಜ್ಞಾಯ ತುರಾಷಾಡಪಿ ಸತ್ವರಃ ।
ಸೇನೋದ್ಯೋಗಂ ಭಯತ್ರಸ್ತಃ ಕಾರಯಾಮಾಸ ಭಾರತ ॥೨೨॥

ಸರ್ವಾನಾಹೂಯ ತರಸಾ ಲೋಕಪಾಲಾನರಿಂದಮಃ ।
ಯುದ್ಧಾರ್ಥಂ ಪ್ರೇರಯನ್ ಸರ್ವಾನ್ವ್ಯರೋಚತ ಮಹಾದ್ಯುತಿಃ ॥೨೩॥

ಗೃಧ್ರವ್ಯೂಹಂ ತತಃ ಕೃತ್ವಾ ಸಂಸ್ಥಿತಃ ಪಾಕಶಾಸನಃ ।
ತತ್ರಾಜಗಾಮ ವೇಗಾತ್ತು ವೃತ್ರಃ ಪರಬಲಾರ್ದನಃ ॥೨೪॥

ದೇವದಾನವಯೋಸ್ತಾವತ್ ಸಂಗ್ರಾಮಸ್ತುಮುಲೋಽಭವತ್ ।
ವೃತ್ರವಾಸವಯೋಸ್ಸಂಖ್ಯೇ ಮನಸಾ ವಿಜಯೈಷಿಣೋಃ ॥೨೫॥

---

ವೃತ್ರಾಸುರನು ತನ್ನ ಸೇನೆಯಿಂದ ಕೂಡಿದವನಾಗಿ, ಆ ಕಾಲಕ್ಕೆ ಅನುಗುಣವಾಗಿ, ದೊಡ್ಡದಾಗಿ ಧ್ವನಿಮಾಡುತ್ತಿರುವ ಸೇನೆಯ ಆರ್ಭಟದಿಂದ ಅಮರಾವತಿಯನ್ನು ಹೆದರಿಸುವವನಾಗಿ ಪ್ರಯಾಣ ಮಾಡಿದನು. ॥೨೦॥

ಎಲೈ ಜನಮೇಜಯರಾಜನೇ ಕೇಳು, ಇಂದ್ರನೂ ಕೂಡ, ವೃತ್ರನು ಯುದ್ಧ ಮಾಡಲು ಸಿದ್ಧನಾಗಿ ಬರುತ್ತಿರುವನೆಂದು ತಿಳಿದು, ಭಯದಿಂದ ಹೆದರಿದವನಾಗಿ, ತಾನೂ ಕೂಡ ಬೇಗನೆ ಯುದ್ಧಕ್ಕಾಗಿ ಸೇನೆಗಳನ್ನು ಸಿದ್ಧಗೊಳಿಸಿದನು. ॥೨೨॥

ಬಹಳ ತೇಜಶ್ಶಾಲಿಯಾಗಿಯೂ, ಶತ್ರುಗಳನ್ನು ನಾಶಮಾಡುವವನಾಗಿಯೂ, ಇರುವ ಇಂದ್ರನು, ಲೋಕಪಾಲಕರೆಲ್ಲರನ್ನೂ ಕರೆದು, ಅವರೆಲ್ಲರನ್ನೂ ಯುದ್ಧಕ್ಕಾಗಿ ಪ್ರೇರಿಸುವವನಾಗಿ ಪ್ರಕಾಶಿಸುತ್ತಿದ್ದನು. ॥೨೩॥

ಇಂದ್ರನು ಲೋಕಪಾಲಕರೆಲ್ಲರೂ ತಮ್ಮ ತಮ್ಮ ಬಲದೊಡನೆ ಯುದ್ಧಕ್ಕೆ ಸಿದ್ಧರಾಗಿ ಬಂದನಂತರ ಹದ್ದಿನ ಆಕಾರದಲ್ಲಿ ಸೇನೆಯನ್ನು ನಿಲ್ಲಿಸಿಕೊಂಡು ಇದ್ದನು. ಆಗ ಶತ್ರುಸೇನೆಯನ್ನು ನಾಶಮಾಡುವ ವೃತ್ರನು ಬಹಳ ವೇಗದಿಂದ ಯುದ್ಧಕ್ಕಾಗಿ ಅಲ್ಲಿಗೆ ಬಂದು ಸೇರಿದನು. ॥೨೪॥

ದೇವತೆಗಳೂ ಮತ್ತು ದಾನವರೂ ಇವರಿಬ್ಬರಿಗೂ ಸಹ ಯುದ್ಧದಲ್ಲಿ ಪರಸ್ಪರವಾಗಿ ತಮ್ಮ ತಮ್ಮ ಮನಸ್ಸಿಗೆ ಅನುಸಾರವಾಗಿ ಜಯವನ್ನು ಅಪೇಕ್ಷಿಸುತ್ತಿರುವ

ಏವಂ ಪರಸ್ಪರಂ ಯುದ್ಧೇ ಸಂದೀಪ್ತೇ ಭಯದೇ ಭೃಶಂ ।
ಆಕೂತಂ ದೇವತಾಃ ಪ್ರಾಪುರ್ದೈತ್ಯಾಶ್ಚ ಪರಮಾಂ ಮುದಂ ॥೨೬॥

ತೋಮರೈರ್ಭಿಂಡಿವಾಲೈಶ್ಚ ಖಡ್ಗೈಃ ಪರಶು ಪಟ್ಟಿಶೈಃ ।
ಜಘ್ನುಃ ಪರಸ್ಪರಂ ದೇವದೈತ್ಯಾಃ ಸ್ವಸ್ವವರಾಯುಧೈಃ ॥೨೭॥

ಏವಂ ಯುದ್ಧೇ ವರ್ತಮಾನೇ ದಾರುಣೇ ಲೋಮಹರ್ಷಣೇ ।
ಶಕ್ರಂ ಜಗ್ರಾಹ ಸಹಸಾ ವೃತ್ರಃ ಕ್ರೋಧಸಮನ್ವಿತಃ ॥೨೮॥

ಅಪಾವೃತ್ತ್ಯ ಮುಖೇ ಕ್ಷಿಪ್ತ್ವಾ ಸ್ಥಿತೋ ವೃತ್ರಶ್ಶತಕ್ರತುಂ ।
ಮುದಿತೋಽಭೂನ್ಮಹಾರಾಜ ಪೂರ್ವವೈರಮನುಸ್ಮರನ್ ॥೨೯॥

---

ವೃತ್ರನೂ ಮತ್ತು ಇಂದ್ರನೂ ಇವರಿಗೂ ಪರಾಕ್ರಮದಿಂದ ಭಯಂಕರವಾಗಿ ನಡೆಯಿತು. ||೨೫||

ಹೀಗೆ ಅನ್ಯೋನ್ಯವಾಗಿ ನಡೆಯುತ್ತಿರುವ ಯುದ್ಧವು ತೇಜಸ್ವಿಯಾಗಿ ಮುಂದು ವರಿದು ಬಹಳಮಟ್ಟಿಗೆ ಭಯವನ್ನುಂಟುಮಾಡುವಷ್ಟು ಮಟ್ಟಿನ ಸ್ಥಿತಿಯನ್ನು ಹೊಂದುತ್ತಿರುವಾಗ, ದೇವತೆಗಳು ಜಯಿಸಬೇಕೆಂಬ ಅಭಿಪ್ರಾಯವನ್ನು ಹೊಂದಿದರು. ರಾಕ್ಷಸರಾದರೋ ಯುದ್ಧ ಮಾಡುವುದರಲ್ಲಿ ಹೆಚ್ಚಾದ ಸಂತೋಷವನ್ನು ಹೊಂದಿದರು. ||೨೬||

ದೇವತೆಗಳೂ ಮತ್ತು ದೈತ್ಯರೂ ಸಹ ತಮ್ಮ ತಮ್ಮ ಉತ್ತಮವಾದ ಆಯುಧಗಳಿಂದಲೂ, ತೋಮರ, ಭಿಂಡಿವಾಲ, ಕತ್ತಿ ಕೊಡಲಿ ಮತ್ತು ಪಟ್ಟಸ ಎಂಬ ಆಯುಧಗಳಿಂದಲೂ ಅನ್ಯೋನ್ಯವಾಗಿ ಹೊಡೆದಾಡಿದರು. ||೨೭||

ಹೀಗೆ ಭಯಂಕರವಾದ ರೋಮಾಂಚವನ್ನು ಹುಟ್ಟಿಸುವಷ್ಟು ಮಟ್ಟಿನ ಯುದ್ಧವು ನಡೆಯುತ್ತಿರುವಾಗ, ವೃತ್ರಾಸುರನು ಕೋಪದಿಂದ ಕೂಡಿದವನಾಗಿ ಇಂದ್ರನನ್ನು ಬೇಗನೆ ಹಿಡಿದುಕೊಂಡನು. ||೨೮||

ವೃತ್ರಾಸುರನು ಇಂದ್ರನನ್ನು ಹಿಡಿದುಕೊಂಡು ಅವನ ಕವಚ-ಕುಂಡಲಾದಿಗಳೆಲ್ಲವನ್ನೂ ಅವನ ಶರೀರದಿಂದ ಬೇರೆ ಮಾಡಿ, ಮೊದಲು ತನ್ನ ತಂದೆಯು ತನಗೆ ಹೇಳಿದ್ದ ಇಂದ್ರನ ದ್ವೇಷಕಾರಣವನ್ನು ಸ್ಮರಿಸಿಕೊಳ್ಳುತ್ತಾ ಆ ಇಂದ್ರನನ್ನು ತನ್ನ (ಮುಖದಲ್ಲಿ) ಬಾಯಿಯಲ್ಲಿ ಹಾಕಿಕೊಂಡನು. ||೨೯||

**ಶಕ್ರೇ ಗ್ರಸ್ತೇಽಥ ವೃತ್ರೇಣ ಸಂಭ್ರಾನ್ತಾ ನಿರ್ಜರಾಸ್ತಥಾ ।**
**ಚುಕ್ರುಶುಃ ಪರಮಾರ್ತಾಸ್ತೇ ಹಾ ಶಕ್ರೇತಿ ಮುಹುರ್ಮುಹುಃ ॥೩೦॥**

**ಅಪಾವೃತಂ ಮುಖೇ ಶಕ್ರಂ ಜ್ಞಾತ್ವಾ ಸರ್ವೇ ದಿನೌಕಸಃ ।**
**ಬೃಹಸ್ಪತಿಂ ಪ್ರಣಮ್ಯೋಚು ರ್ದೀನಾ ವ್ಯಥಿತ-ಚೇತಸಃ ॥೩೧॥**

**ಕಿಂ ಕರ್ತವ್ಯಂ ದ್ವಿಜಶ್ರೇಷ್ಠ ತ್ವಮಸ್ಮಾಕಂ ಗುರುಃ ಪರಃ ।**
**ಶಕ್ರೋ ಗ್ರಸ್ತಸ್ತು ವೃತ್ರೇಣ ರಕ್ಷಿತೋ ದೇವತಾಂತರೈಃ ॥೩೨॥**

**ವಿನಾ ಶಕ್ರೇಣ ಕಿಂ ಕುರ್ಮಃ ಸರ್ವೇ ಹೀನಪರಾಕ್ರಮಾಃ ।**
**ಅಭಿಚಾರಂ ಕುರು ವಿಭೋ ಸತ್ವರಶ್ಶಕ್ರಮುಕ್ತಯೇ ॥೩೩॥**

---

ವೃತ್ರಾಸುರನು ಇಂದ್ರನನ್ನು ತನ್ನ ಬಾಯಿಯಲ್ಲಿ ಹಾಕಿಕೊಂಡು ನುಂಗಿದುದನ್ನು ನೋಡಿದ ನಂತರ, ದೇವತೆಗಳು ಸಂಭ್ರಮವುಳ್ಳವರಾಗಿ, ಬಹಳ ಸಂಕಟದಿಂದ, ಆಗ, "ಅಯ್ಯೋ, ಇಂದ್ರನು ಹೋದನಲ್ಲಾ, ಇಂದ್ರನ ಗತಿಯು ಹೀಗಾಯಿತಲ್ಲಾ," ಎಂದು ಬಾರಿ ಬಾರಿಗೂ ಕಿರಿಚಿಕೊಂಡರು. ॥೩೦॥

ಆಗ ದೇವತೆಗಳೆಲ್ಲರೂ, ಇಂದ್ರನು ವೃತ್ರನ ಮುಖದಲ್ಲಿ ಕಣ್ಣಿಗೆ ಕಾಣಿಸದಂತೆ ಆದದ್ದನ್ನು ನೋಡಿ, ಎಲ್ಲರೂ ಒಗ್ಗಟ್ಟಾಗಿ, ಸಂಕಟವುಳ್ಳವರಾಗಿ, ವ್ಯಸನಪಡುತ್ತಿರುವ ಮನಸ್ಸುಳ್ಳವರಾಗಿ, ಬೃಹಸ್ಪತಿಯ ಸಮೀಪಕ್ಕೆ ಬಂದು ಅವನಿಗೆ ನಮಸ್ಕಾರಮಾಡಿ ಅವನ ಸಂಗಡ ಮಾತನಾಡಿದರು. ॥೩೧॥

ಓ ಬ್ರಾಹ್ಮಣಶ್ರೇಷ್ಠನೇ, ನೀನು ನಮಗೆಲ್ಲರಿಗೂ ಶ್ರೇಷ್ಠನಾದ ಗುರುವಾಗಿ ಇರುತ್ತೀಯೆ. ಇಂದ್ರನಾದರೋ ಅನೇಕರಾದ ಬೇರೆ ಬೇರೆ ದೇವತೆಗಳಿಂದ ರಕ್ಷಿಸಲ್ಪಟ್ಟಿದ್ದಾಗ್ಯೂ ವೃತ್ರಾಸುರನಿಂದ ನುಂಗಲ್ಪಟ್ಟಿರುವನು ! ಈಗ ನಾವೆಲ್ಲರೂ ಏನನ್ನು ಮಾಡೋಣ ? ॥೩೨॥

ಓ ಬೃಹಸ್ಪತಿಯೇ, ನಾವೆಲ್ಲರೂ ಇಂದ್ರನಿಂದ ಬಿಡಲ್ಪಟ್ಟವರಾಗಿ, ಕಡಿಮೆಯಾದ ಪರಾಕ್ರಮವುಳ್ಳವರಾಗಿ, ಏನನ್ನು ಮಾಡೋಣ ? ಓ ಗುರುವೇ, ನೀನು ತ್ವರೆಯುಳ್ಳವನಾಗಿ ಇಂದ್ರನ ಬಿಡುಗಡೆಗೋಸ್ಕರ ಅಭಿಚಾರವನ್ನಾದರೂ ಎಂದರೆ ಮಂತ್ರಯಂತ್ರತಂತ್ರಗಳಿಂದ ಸಿದ್ಧಿಯುಂಟಾಗುವ ಕೆಲಸವನ್ನಾದರೂ ಮಾಡು.॥೩೩॥

|| ಬೃಹಸ್ಪತಿರುವಾಚ ||

ಕಿಂ ಕರ್ತವ್ಯಂ ಸುರಾಃ ಕ್ಷಿಪ್ತೋ ಮುಖಮಧ್ಯೇsಸ್ತಿ ವಾಸವಃ ।
ವೃತ್ರೇಣೋತ್ಸಾದಿತೋ ಜೀವನ್ನಸ್ತಿ ಕೋಷ್ಠಾಂತರೇ ರಿಪೋಃ ॥೩೪॥

ದೇವಾಶ್ಚಿಂತಾತುರಾಸ್ಸರ್ವೇ ತುರಾಷಾಹಂ ತಥಾ ಕೃತಂ ।
ದೃಷ್ಟ್ವಾ ವಿಮೃಶ್ಯ ತರಸಾ ಚಕ್ರುರ್ಯತ್ನಂ ವಿಮುಕ್ತಯೇ ॥೩೫॥

|| ವ್ಯಾಸ ಉವಾಚ ||

ಅಸೃಜಂತ ಮಹಾಸತ್ವಾಂ ಜೃಂಭಿಕಾಂ ರಿಪುನಾಶಿನೀಂ ।
ತತೋ ವಿಜೃಂಭಮಾಣಸ್ಸವ್ಯಾವೃತಾಸ್ಯೋ ಬಭೂವಹ ॥೩೬॥

ವಿಜೃಂಭಮಾಣಸ್ಯ ತತೋ ವೃತ್ರಸ್ಯಾಸ್ಯಾದವಾಪತತ್ ।
ಸ್ವಾನ್ಯಂಗಾನ್ಯಪಿ ಸಂಕ್ಷಿಪ್ಯ ನಿಷ್ಕ್ರಾಂತೋ ಬಲಸೂದನಃ ॥೩೭॥

---

ಬೃಹಸ್ಪತಿಯು ಹೇಳಿದನು, ಎಲೈ ದೇವತೆಗಳಿರಾ, ನಾವು ಈಗ ಏನನ್ನು ಮಾಡ ತಕ್ಕದ್ದು? ಇಂದ್ರನು ವೃತ್ರಾಸುರನ ಬಾಯಿನ ಮಧ್ಯದಲ್ಲಿ ಸಿಕ್ಕಿಕೊಂಡವನಾಗಿ ಇರು ವನು. ವೃತ್ರಾಸುರನಿಂದ ತಿರಸ್ಕರಿಸಲ್ಪಟ್ಟವನಾಗಿ, ಶತ್ರುವಿನ ದವಡೆಯೊಳಗೆ ಜೀವಿಸಿಕೊಂಡು ಇರುವನು. ||೩೪||

ವ್ಯಾಸಋಷಿಯು ಹೇಳಿದನು, ದೇವತೆಗಳೆಲ್ಲರೂ ಇಂದ್ರನ ಸ್ಥಿತಿಯು ಹೀಗಿರು ವುದನ್ನು ನೋಡಿ, ಬಹಳ ವ್ಯಸನವುಳ್ಳವರಾಗಿ ಎಲ್ಲರೂ ಒಟ್ಟಾಗಿ ಸೇರಿ, ವಿಮರ್ಶೆ ಮಾಡಿ ಅವನ ಬಿಡುಗಡೆಗಾಗಿ ಬೇಗನೆ ಯತ್ನಮಾಡಿದರು. ||೩೫||

ಆಗ ದೇವತೆಗಳು ಶತ್ರುವನ್ನು ನಾಶಮಾಡತಕ್ಕದ್ದಾದ, ಬಹಳ ಸಾಮರ್ಥ್ಯ ದಿಂದ ಕೂಡಿರುವ ಜೃಂಭಿಕಾ ಎಂಬ ಹೆಸರುಳ್ಳ ದೇವತೆಯನ್ನು ಸೃಷ್ಟಿಮಾಡಿದರು. ಆ ದೇವತೆಯ ಮಹಿಮೆಯಿಂದ ಆ ವೃತ್ರಾಸುರನು ಆಕಳಿಸುವವನಾಗಿ ತನ್ನ ಬಾಯನ್ನು ದೊಡ್ಡದಾಗಿ ತೆರೆದನು. ||೩೬||

ಬಲನೆಂಬ ರಾಕ್ಷಸನನ್ನು ನಾಶಪಡಿಸಿದವನಾದ ಇಂದ್ರನು ಆಕಳಿಸುತ್ತಿರುವ ವೃತ್ರಾಸುರನ ಬಾಯಿನಿಂದ ತನ್ನ ಅಂಗಗಳನ್ನು ಸಣ್ಣನಾಗಿ ಮಾಡಿಕೊಂಡು ಹೊರಕ್ಕೆ ಹೊರಟನು. ||೩೭||

ತತಃ ಪ್ರಭೃತಿ ಲೋಕೇಷು ಜೃಂಭಿಕಾ ಪ್ರಾಣಿಸಂಸ್ಥಿತಾ ।
ಜಹೃಷುಶ್ಚ ಸುರಾಸ್ಸರ್ವೇ ಶಕ್ರಂ ದೃಷ್ಟ್ವಾ ವಿನಿರ್ಗತಮ್ ॥೩೮॥

ತತಃ ಪ್ರವವೃತೇ ಯುದ್ಧಂ ತಯೋರ್ಲೋಕಭಯಪ್ರದಮ್ ।
ವರ್ಷಾಣಾಮಯುತಂ ಯಾವದ್ದಾರುಣಂ ಲೋಮಹರ್ಷಣಮ್ ॥೩೯॥

ಏಕತಶ್ಚ ಸುರಾಸ್ಸರ್ವೇ ಯುದ್ಧಾಯ ಸಮುಪಸ್ಥಿತಾಃ ।
ಏಕತೋ ಬಲವಾನ್ ತ್ವಾಷ್ಟ್ರಸ್ಸಂಗ್ರಾಮೇ ಸಮವರ್ತತ ॥೪೦॥

ಯದಾ ವ್ಯವರ್ಧತ ರಣೇ ವೃತ್ರೋ ವರಮದಾವೃತಃ ।
ಪರಾಜಿತಸ್ತದಾ ಶಕ್ರಸ್ತೇಜಸಾ ತಸ್ಯ ಧರ್ಷಿತಃ ॥೪೧॥

---

ಆಗಿನ ಕಾಲಮೊದಲುಗೊಂಡು ಪ್ರಪಂಚದಲ್ಲಿ ಪ್ರಾಣಿಗಳಿಗೆಲ್ಲರಿಗೂ ಆಕಳಿಕೆಯು ಉಂಟಾಯಿತು. ದೇವತೆಗಳೆಲ್ಲರೂ ಇಂದ್ರನು ವೃತ್ರನ ಮುಖದಿಂದ ಬಿಡುಗಡೆಯನ್ನು ಹೊಂದಿ, ಬಂದದ್ದನ್ನು ನೋಡಿ ಸಂತೋಷಪಟ್ಟರು. ॥೩೮॥

ಅನಂತರದಲ್ಲಿ ಆ ಇಂದ್ರನಿಗೂ, ವೃತ್ರಾಸುರನಿಗೂ ಸಹ ಯುದ್ಧವು ನಡೆಯಿತು. ಆ ಯುದ್ಧವು ಲೋಕದಲ್ಲಿ ಎಲ್ಲರಿಗೂ ಬಹಳ ಭಯವನ್ನುಂಟುಮಾಡುತ್ತಿದ್ದಿತು. ನೋಡಿದವರೆಲ್ಲರಿಗೂ ರೋಮಾಂಚವುಂಟಾಗುತ್ತಿತ್ತು. ಮತ್ತು ಆ ಯುದ್ಧವು ಹತ್ತು ಸಾವಿರ ವರ್ಷಗಳವರೆಗೂ ನಡೆಯಿತು. ॥೩೯॥

ಒಂದು ಕಡೆಯಲ್ಲಿ ದೇವತೆಗಳೆಲ್ಲರೂ ಯುದ್ಧಕ್ಕೆ ಸಿದ್ಧರಾಗಿ ನಿಂತರು. ಇನ್ನೊಂದು ಕಡೆಯಲ್ಲಿ ತ್ವಷ್ಟೃಬ್ರಹ್ಮನ ಮಗನಾದ ವೃತ್ರಾಸುರನು ತುಂಬಾ ಬಲಿಷ್ಠನಾಗಿ ಯುದ್ಧಕ್ಕೆ ಸಿದ್ಧನಾಗಿ ನಿಂತನು. ॥೪೦॥

ಬ್ರಹ್ಮನು ಕೊಟ್ಟಿರುವ ವರದ ಕೊಬ್ಬಿನಿಂದ ಕೂಡಿರುವ ವೃತ್ರಾಸುರನು ಯಾವಾಗ ಯುದ್ಧದಲ್ಲಿ ವೃದ್ಧಿಯನ್ನು ಹೊಂದುತ್ತಿದ್ದನೋ ಅಷ್ಟುಕಾಲಕ್ಕೆ ಸರಿಯಾಗಿ ಅವನ ತೇಜಸ್ಸಿನಿಂದ ತಿರಸ್ಕರಿಸಲ್ಪಟ್ಟವನಾಗಿ ಇಂದ್ರನು ಯುದ್ಧದಲ್ಲಿ ಸೋಲುವುದಕ್ಕೆ ಅನುವಾದನು. (ಸೋತನು) ॥೪೧॥

ಇಂದ್ರನು ಯುದ್ಧದಲ್ಲಿ ವೃತ್ರಾಸುರನಿಂದ ಅಪಜಯವನ್ನು ಹೊಂದಿ ವ್ಯಸನಪಟ್ಟನು. ದೇವತೆಗಳು, ಇಂದ್ರನು ಸೋತುಹೋದದ್ದನ್ನು ನೋಡಿ ದುಃಖವನ್ನು ಹೊಂದಿದರು. ॥೪೨॥

ವಿವ್ಯಥೇ ಮಘವಾ ಯುದ್ಧೇ ತತಃ ಪ್ರಾಪ್ಯ ಪರಾಜಯಂ ।
ವಿಷಾದಮಗಮನ್ ದೇವಾ ದೃಷ್ಟ್ವಾ ಶಕ್ರಂ ಪರಾಜಿತಂ ॥೪೨॥

ಜಗ್ಮುಸ್ತ್ಯಕ್ತ್ವಾ ರಣಂ ಸರ್ವೇ ದೇವಾ ಇಂದ್ರಪುರೋಗಮಾಃ ।
ಗೃಹೀತಂ ದೇವಸದನಂ ವೃತ್ರೇಣಾಗತ್ಯ ರಂಹಸಾ ॥೪೩॥

ದೇವೋದ್ಯಾನಾನಿ ಸರ್ವಾಣಿ ಭುಜ್ಯಂತೇಽಸೌ ದಾನವೋ ಬಲಾತ್ ।
ಐರಾವತೋಽಪಿ ದೈತ್ಯೇನ ಗೃಹೀತೋ ಗಜಸತ್ತಮಃ ॥೪೪॥

ವಿಮಾನಾನಿ ಚ ಸರ್ವಾಣಿ ಗೃಹೀತಾನಿ ವಿಶಾಂಪತೇ ।
ಉಚ್ಚೈಃಶ್ರವಾ ಹಯವರೋ ಜಾತಸ್ತಸ್ಯ ವಶೇ ತದಾ ॥೪೫॥

ಕಾಮಧೇನುಃ ಪಾರಿಜಾತೋ ಗಣಶ್ಚಾಪ್ಸರಸಾಂ ತಥಾ ।
ಗೃಹೀತಂ ರತ್ನಮಾತ್ರಂ ತು ತೇನ ತ್ವಷ್ಟೃಸುತೇನ ಹ ॥೪೬॥

---

ಇಂದ್ರನೇ ಮುಂದಾಳಾಗಿರುವ ದೇವತೆಗಳೆಲ್ಲರೂ ಯುದ್ಧರಂಗವನ್ನು ಬಿಟ್ಟು ಹೊರಟು ಹೋದರು. ವೃತ್ರಾಸುರನು ಬೇಗನೆ ಬಂದು ದೇವತೆಗಳ ಲೋಕದಲ್ಲಿರುವ ಅವರವರ ಸ್ಥಾನಗಳನ್ನು ಆಕ್ರಮಿಸಿಕೊಂಡನು. ॥೪೩॥

ಈ ವೃತ್ರಾಸುರನು ದೇವತೆಗಳ ಉದ್ಯಾನವನಗಳೆಲ್ಲವನ್ನೂ ಆಕ್ರಮಿಸಿಕೊಂಡು ತನ್ನ ಮನಸ್ಸು ಬಂದಂತೆ ಅವುಗಳಲ್ಲಿ ವಿಹರಿಸುತ್ತಿದ್ದನು. ಆನೆಗಳಲ್ಲಿ ಶ್ರೇಷ್ಠವಾದ ಐರಾವತವೆಂಬ ಆನೆಯೂ ಕೂಡ ಆ ವೃತ್ರಾಸುರನಿಂದ ಆಕ್ರಮಿಸಲ್ಪಟ್ಟಿತು. ॥೪೪॥

ಎಲೈ ಜನಮೇಜಯರಾಜನೇ ಕೇಳು, ದೇವತೆಗಳ ವಿಮಾನಗಳೆಲ್ಲವನ್ನೂ ಅವನು ಆಕ್ರಮಿಸಿಕೊಂಡನು.

ಉಚ್ಚೈಃಶ್ರವಸ್ಸೆಂಬ ಶ್ರೇಷ್ಠವಾದ ಕುದುರೆಯು ಆಗ ಅವನ ಅಧೀನಕ್ಕೆ ಬಂದಿತು. ತ್ವಷ್ಟೃಬ್ರಹ್ಮನ ಮಗನಾದ ಆ ವೃತ್ರಾಸುರನು ಕಾಮಧೇನು, ಪಾರಿಜಾತವೇ ಮೊದಲಾದ ಕಲ್ಪವೃಕ್ಷಗಳು, ಅಪ್ಸರಸ್ತ್ರೀಯರು, ಇವೇ ಮುಂತಾದುದೆಲ್ಲವನ್ನೂ ತನ್ನ ಹತೋಟಿಯಲ್ಲಿಟ್ಟುಕೊಂಡದ್ದಲ್ಲದೆ, ದೇವಲೋಕದಲ್ಲಿ ಯಾವುದು ಉತ್ತಮವಾದ ಪದಾರ್ಥವೋ ಅದೆಲ್ಲವನ್ನೂ ತಾನು ತೆಗೆದುಕೊಂಡನು. ॥೪೫-೪೬॥

ಸ್ಥಾನಭ್ರಷ್ಟಾಸ್ಸುರಾಸ್ಸರ್ವೇ ಗಿರಿದುರ್ಗೇಷು ಸಂಸ್ಥಿತಾಃ ।
ದುಃಖಮಾಪುಃ ಪರಿಭ್ರಷ್ಟಾ ಯಜ್ಞಭಾಗಾತ್ಸುರಾಲಯಾತ್ ॥೪೭॥

ವೃತ್ರಃ ಸುರಪದಂಪ್ರಾಪ್ಯ ಬಭೂವ ಮದಗರ್ವಿತಃ ।
ತ್ವಷ್ಟಾಽತೀವ ಸುಖಂಪ್ರಾಪ್ಯ ಮುಮೋದ ಸುತಸಂಯುತಃ ॥೪೮॥

ಆಮಂತ್ರಯನ್ ಹಿತಂ ದೇವಾ ಮುನಿಭಿಸ್ಸಹ ಭಾರತ ।
ಕಿಂ ಕರ್ತವ್ಯಮಿತಿ ಪ್ರಾಪ್ತೇ ವಿಚಿಂತ್ಯ ಭಯಮೋಹಿತಾಃ ॥೪೯॥

ಜಗ್ಮುಃ ಕೈಲಾಸಮಚಲಂ ಸ್ಸುರಾಶ್ಶಕ್ರಸಮನ್ವಿತಾಃ ।
ಮಹಾದೇವಂ ಪ್ರಣಮ್ಯೋಚುಃ ಪ್ರಹ್ವಾಃ ಪ್ರಾಂಜಲಯೋ ಭೃಶಂ ॥೫೦॥

---

ದೇವತೆಗಳೆಲ್ಲರೂ ತಮ್ಮ ತಮ್ಮ ವಾಸಸ್ಥಳಗಳನ್ನು ಬಿಟ್ಟು, ತಮ್ಮ ತಮ್ಮ ಯಜ್ಞಭಾಗಗಳನ್ನೂ ಕಳೆದುಕೊಂಡು ಸ್ಥಾನಭ್ರಷ್ಟರಾಗಿ, ಆಹಾರವಿಲ್ಲದವರಾಗಿ, ಬೆಟ್ಟಗಳ ದುರ್ಗಮವಾದ ಪ್ರದೇಶಗಳಲ್ಲಿ ಸೇರಿಕೊಂಡು ಕಷ್ಟಗಳನ್ನು ಅನುಭವಿಸುತ್ತಿದ್ದರು. ॥೪೭॥

ವೃತ್ರಾಸುರನು ದೇವತೆಗಳ ಸ್ಥಾನವನ್ನು ಹೊಂದಿ ಬಹಳಮಟ್ಟಿಗೆ ಮದದಿಂದ ಅಹಂಕಾರವುಳ್ಳವನಾದನು. ವೃತ್ರಾಸುರನ ತಂದೆಯಾದ ತ್ವಷ್ಟೃಬ್ರಹ್ಮನು ಹೆಚ್ಚಿನ ಸುಖವನ್ನು ಹೊಂದಿ ತನ್ನ ಮಗನೊಡನೆ ಸಂತೋಷದಿಂದ ಇದ್ದನು. ॥೪೮॥

ಎಲೈ ಜನಮೇಜಯ ರಾಜನೇ ಕೇಳು, ದೇವತೆಗಳು ಋಷಿಗಳೊಡನೆ ಸೇರಿಕೊಂಡು ತಾವುಗಳು ವೃತ್ರಾಸುರನಿಂದುಂಟಾದ ಭಯದಿಂದ ಮೋಹವುಳ್ಳವರಾದಾಗ್ಯೂ ಆ ಕಾಲಕ್ಕೆ ಒದಗುವ ದುಃಖವು ಪರಿಹಾರವಾಗುವುದಕ್ಕೆ ಏನನ್ನು ಮಾಡತಕ್ಕದ್ದು ಎಂಬುದನ್ನು ಯೋಚನೆ ಮಾಡಿದರು. ॥೪೯॥

ಇಂದ್ರನಿಂದ ಕೂಡಿದವರಾಗಿ ದೇವತೆಗಳು ಕೈಲಾಸಪರ್ವತಕ್ಕೆ ಹೋದರು. ಅಲ್ಲಿ ವಿನಯದಿಂದ ಎಲ್ಲರೂ ನಮ್ರರಾಗಿ, ಬಹಳ ಮಟ್ಟಿಗೆ ತಗ್ಗಿ ನಡೆಯುವವರಾಗಿ ಬೊಗಸೆ ಕಟ್ಟಿಕೊಂಡು ಈಶ್ವರನನ್ನು ಕುರಿತು ನಮಸ್ಕರಿಸಿ ತಾವು ಹೇಳಬೇಕಾದ ಅರಿಕೆಯನ್ನು ವಿಜ್ಞಾಪಿಸಿದರು. ॥೫೦॥

ದೇವದೇವ ಮಹಾದೇವ ಕೃಪಾಸಿಂಧೋ ಮಹೇಶ್ವರ ।
ರಕ್ಷಾಸ್ಮಾನ್ ಭಯಭೀತಾಂಸ್ತು ವೃತ್ರೇಣಾತಿಪರಾಜಿತಾನ್ ॥೫೧॥

ಗೃಹೀತಂ ದೇವ-ಸದನಂ ತೇನ ದೇವ ಬಲೀಯಸಾ ।
ಕಿಂ ಕರ್ತವ್ಯಮತಶ್ಶಂಭೋ ಬ್ರೂಹಿ ಸತ್ಯಂ ಶಿವಾದ್ಯನಃ ॥೫೨॥

ಕಿಂ ಕುರ್ಮಃ ಕ್ವಚ ಗಚ್ಛಾಮಃ ಸ್ಥಾನಭ್ರಷ್ಟಾ ಮಹೇಶ್ವರ ।
ದುಃಖಸ್ಯ ನಾಧಿಗಚ್ಛಾಮೋ ವಿನಾಶೋಪಾಯ ಮೀಶ್ವರ ॥೫೩॥

ಸಾಹಾಯ್ಯಂ ಕುರು ಭೂತೇಶ ವ್ಯಥಿತಾಃಸ್ಮಃ ಕೃಪಾನಿಧೇ ।
ವೃತ್ರಂ ಜಹಿ ಮದೋತ್ಸಿಕ್ತಂ ವರದಾನಬಲಾದ್ವಿಭೋ ॥೫೪॥

---

ದೇವತೆಗಳೆಲ್ಲರಿಗೂ ದೊಡ್ಡ ದೇವನಾಗಿರುವ ಮಹಾದೇವನೇ, ದಯಾಸಮುದ್ರನೇ, ಓ ಮಹೇಶ್ವರನೇ, ನೀನು ವೃತ್ರಾಸುರನಿಂದ ಬಹಳಮಟ್ಟಿಗೆ ಸೋತು ಹೋಗಿರುವ ಭಯದಿಂದ ಹೆದರಿರುವವರಾದ ನಮ್ಮನ್ನು ಕಾಪಾಡು. ॥೫೧॥

ಓ ದೇವನೇ ಬಲಿಷ್ಠನಾದ ಅವನಿಂದ ದೇವತೆಗಳ ಮನೆಯು ಆಕ್ರಮಿಸಲ್ಪಟ್ಟಿತು. ಓ ಶಂಭುವೇ, ನಾವೆಲ್ಲರೂ ನಮ್ಮ ವಾಸಸ್ಥಾನಗಳನ್ನು ಕಳೆದುಕೊಂಡು ತಿರುಗುತ್ತಿರುವೆವು. ಈ ಕಾರಣದಿಂದ ನಾವು ಅವನಿಗೆ ಏನನ್ನು ಮಾಡತಕ್ಕದ್ದು ? ಈಗ ನೀನು ನಮಗೆ ನಿಜವಾದ ಮಾತನ್ನು ಹೇಳು. ॥೫೨॥

ಓ ಮಹೇಶ್ವರನೇ, ನಾವೆಲ್ಲರೂ ನಮ್ಮ ಸ್ಥಾನಗಳನ್ನು ಕಳೆದುಕೊಂಡಿರುವ ಕಾರಣ ಏನನ್ನು ಮಾಡೋಣ ? ಎಲ್ಲಿಗೆ ಹೋಗೋಣ ? ಓ ಈಶ್ವರನೇ, ನಾವು ನಮಗೆ ಬಂದಿರುವ ದುಃಖವು ಹೇಗೆ ನಾಶವಾಗುವುದೋ ಆ ಉಪಾಯವನ್ನು ತಿಳಿಯದೇ ಇರುತ್ತೇವೆ. ॥೫೩॥

ಓ ದಯಾನಿಧಿಯೇ, ಭೂತಪತಿಯೇ ಓ ಸ್ವಾಮಿಯೇ, ನಾವು ಸಂಕಟಕ್ಕೊಳಗಾಗಿರುವೆವು. ನಮಗೆ ಸಹಾಯವನ್ನು ಮಾಡು. ಬ್ರಹ್ಮನ ವರದ ಬಲದಿಂದ ಅಹಂಕಾರವುಳ್ಳವನಾಗಿ ಗರ್ವದಿಂದಿರುವ ವೃತ್ರಾಸುರನನ್ನು ನಿಗ್ರಹಮಾಡು. ॥೫೪॥

|| ಶಿವ ಉವಾಚ ||

ಬ್ರಹ್ಮಾಣಂ ಪುರತಃ ಕೃತ್ವಾ ವಯಂ ಸರ್ವೇ ಹರೇಃ ಕ್ಷಯಂ ।
ಗತ್ವಾ ಸಮೇತ್ಯ ತಂ ವಿಷ್ಣುಂ ಚಿಂತಯಾಮೋ ವಧೋಧ್ಯಮಂ ॥೫೫॥

ಸ ಶಕ್ತಶ್ಚ ಛಲಜ್ಞಶ್ಚ ಬಲವಾನ್ ಬುದ್ಧಿಮತ್ತರಃ ।
ಶರಣ್ಯಶ್ಚ ದಯಾಬ್ಧಿಶ್ಚ ವಾಸುದೇವೋ ಜನಾರ್ದನಃ ॥೫೬॥

ವಿನಾ ತಂ ದೇವದೇವೇಶಂ ನಾರ್ಥಸಿದ್ಧಿರ್ಭವಿಷ್ಯತಿ ।
ತಸ್ಮಾತ್ತತ್ರ ಚ ಗಂತವ್ಯಂ ಸರ್ವಕಾರ್ಯಾರ್ಥಸಿದ್ಧಯೇ ॥೫೭॥

|| ವ್ಯಾಸ ಉವಾಚ ||

ಇತಿ ಸಂಚಿಂತ್ಯ ತೇ ಸರ್ವೇ ಬ್ರಹ್ಮಾ ಶಕ್ರಸ್ಸಶಂಕರಃ ।
ಜಗ್ಮುರ್ವಿಷ್ಣೋಃ ಕ್ಷಯಂ ದೇವಾಃ ಶರಣ್ಯಂ ಭಕ್ತವತ್ಸಲಂ ॥೫೮॥

---

ಶಿವನು ಹೇಳಿದನು—ನಾವೆಲ್ಲರೂ ಬ್ರಹ್ಮನನ್ನು ಮುಂದಿಟ್ಟುಕೊಂಡು ವಿಷ್ಣುವಿನ ಮನೆಗೆ ಹೋಗಿ ಅಲ್ಲಿ ಅವನನ್ನು ಸೇರಿಸಿಕೊಂಡು ವೃತ್ರಾಸುರನನ್ನು ಕೊಲ್ಲುವ ಉಪಾಯವನ್ನು ಯೋಚಿಸೋಣ. ||೫೫||

ಆ ವಿಷ್ಣುವು ವಾಸುದೇವ ಎಂದರೆ ಎಲ್ಲಾ ಪ್ರಾಣಿಗಳ ಅಂತರಂಗದಲ್ಲಿಯೂ, ಬೆಳಗುತ್ತಿರುವವನು. ಜನಗಳನ್ನು ಪ್ರೀತಿಯಿಂದ ನೋಡುತ್ತಿರುವವನು. ಶತ್ರುಗಳನ್ನು ನಿಗ್ರಹ ಮಾಡಲು ಸಮರ್ಥನು. ಮೋಸವನ್ನು ತಿಳಿದವನು ಬಲಿಷ್ಠನು. ಬಹಳ ಮಟ್ಟಿನ ಬುದ್ಧಿವಂತನು. ಶರಣು ಬಂದವರನ್ನು ಉಪೇಕ್ಷೆ ಮಾಡುವವನಲ್ಲವು, ಮತ್ತು ಇತರರ ಸಂಕಟಗಳನ್ನು ಪರಿಹರಿಸಬಲ್ಲಷ್ಟು ದಯಾಶಾಲಿಯಾಗಿರುವನು.||೫೬||

ಇಷ್ಟುಮಟ್ಟಿನ ಗುಣಗಳಿಂದ ಕೂಡಿರುವವನಾದ, ದೇವತೆಗಳಿಗೂ ಅಧಿಪತಿಯಾಗಿರುವ ಆ ವಿಷ್ಣುವನ್ನು ಬಿಟ್ಟು ಕೆಲಸ ಮಾಡುವುದಾದರೆ, ಆ ಕೆಲಸವು ಸರಿಯಾಗಿ ಫಲಕಾರಿಯಾಗಲಾರದು. ಆದ್ದರಿಂದ ನಾವೆಲ್ಲರೂ ನಮ್ಮೆಲ್ಲ ಕಾರ್ಯವು ಸಿದ್ಧಿಸುವುದಕ್ಕಾಗಿ ಆ ವಿಷ್ಣುವು ಇರುವ ಸ್ಥಳಕ್ಕೆ ಹೋಗೋಣವೆಂದು ಶಿವನು ದೇವತೆಗಳಿಗೆ ಹೇಳಿದನು. ||೫೭||

ವ್ಯಾಸಮಹರ್ಷಿಯು ಹೇಳಿದನು—ಬ್ರಹ್ಮನೂ, ಇಂದ್ರನೂ, ಶಿವನೂ ಇವರೇ ಮೊದಲಾದ ದೇವತೆಗಳೆಲ್ಲರೂ ಹೀಗೆ ಯೋಚನೆಯನ್ನು ಮಾಡಿಕೊಂಡು, ಶರಣಾ

**ಗತ್ವಾ ವಿಷ್ಣುಪದಂ ದೇವಾಸ್ತುಷ್ಟುವುಃ ಪರಮೇಶ್ವರಂ ।**
**ಹರಿಂ ಪುರುಷಸೂಕ್ತೇನ ವೇದೋಕ್ತೇನ ಜಗದ್ಗುರುಂ ॥೫೯॥**

**ಪ್ರತ್ಯಕ್ಷೋಽಭೂಜ್ಜಗನ್ನಾಥಸ್ತೇಷಾಂ ಸ ಕಮಲಾಪತಿಃ ।**
**ಸಮ್ಮಾನ್ಯ ಚ ಸುರಾನ್ ಸರ್ವಾನ್ ಇತ್ಯುವಾಚ ಪುರಃ ಸ್ಥಿತಃ ॥೬೦॥**

**ಕಿಮಾಗತಾಸ್ಸ್ಥ ಲೋಕೇಶಾ ಪರಬ್ರಹ್ಮಸಮನ್ವಿತಾಃ ।**
**ಕಾರಣಂ ಕಥಯಧ್ವಂ ವಃ ಸರ್ವೇಷಾಂ ಸುರಸತ್ತಮಾಃ ॥೬೧॥**

॥ ವ್ಯಾಸ ಉವಾಚ ॥

**ಇತಿ ಶ್ರುತ್ವಾ ಹರೇರ್ವಾಕ್ಯಂ ನೋಚುರ್ದೇವಾ ರಮಾಪತಿಂ ।**
**ಚಿಂತಾವಿಷ್ಟಾಃ ಸ್ಥಿತಾಃ ಸರ್ವೇ ಪ್ರಾಯಃಪ್ರಾಂಜಲಯಸ್ತಥಾ ॥೬೨॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ ಚತುರ್ಥೋಽಧ್ಯಾಯಃ.**

---

ಗತರಿಗೆ ರಕ್ಷಕನಾದ, ಭಕ್ತರಲ್ಲಿ ಬಹಳ ವಿಶ್ವಾಸವುಳ್ಳವನಾದ ವಿಷ್ಣುವಿನ ವಾಸಸ್ಥಳವನ್ನು ದೇವತೆಗಳೆಲ್ಲರೂ ಹೋಗಿ ಸೇರಿದರು. ॥೫೮॥

ದೇವತೆಗಳು ವೈಕುಂಠಕ್ಕೆ ಹೋಗಿ, ಲೋಕಕ್ಕೆಲ್ಲಕ್ಕೂ ಗುರುವಾಗಿರುವ ಉತ್ಕೃಷ್ಟವಾದ ಐಶ್ವರ್ಯವನ್ನು ಹೊಂದಿರುವ ವಿಷ್ಣುವನ್ನು ವೇದಪ್ರತಿಪಾದ್ಯವಾದ ಪುರುಷಸೂಕ್ತವೇ ಮೊದಲಾದ ಅನೇಕ ಮಂತ್ರಗಳಿಂದ ಸ್ತೋತ್ರ ಮಾಡಿದರು. ॥೫೯॥

ಲಕ್ಷ್ಮಿಗೆ ಸ್ವಾಮಿಯಾಗಿರುವ ಜಗತ್ಪತಿಯಾದ ವಿಷ್ಣುವು ಅವರೆಲ್ಲರೂ ಮಾಡುವ ಸ್ತೋತ್ರಕ್ಕೆ ಪ್ರತ್ಯಕ್ಷನಾಗಿ ಎಲ್ಲಾ ದೇವತೆಗಳ ಎದುರಿನಲ್ಲಿ ನಿಂತಿರುವವನಾಗಿ ಅವರೆಲ್ಲರಿಗೂ ಮರ್ಯಾದೆಯನ್ನು ಮಾಡಿ ಮಾತನಾಡಿದನು. ॥೬೦॥

ಲೋಕಪಾಲಕರಾದ ಇಂದ್ರನೇ ಮೊದಲಾದ ದೇವತೆಗಳೂ, ಮತ್ತು ದೇವಶ್ರೇಷ್ಠರಾದ ಹರ, ಬ್ರಹ್ಮ ಇವರೂ ಸಹ ಇಲ್ಲಿಗೆ ಬರಲು ಕಾರಣವೇನು? ಅದನ್ನು ನನಗೆ ತಿಳಿಸಿರಿ. ॥೬೧॥

ವ್ಯಾಸಋಷಿಯು ಹೇಳಿದನು, ವಿಷ್ಣುವು ಹೀಗೆ ಮಾತನಾಡುತ್ತಿರಲು, ಅವನ ಮಾತನ್ನು ಕೇಳಿ, ದೇವತೆಗಳೆಲ್ಲರೂ ವಿಷ್ಣುವಿಗೆ ಯಾವ ಉತ್ತರವನ್ನೂ ಹೇಳದೇ

ಯೋಚನೆಯುಳ್ಳವರಾಗಿ ಸುಮ್ಮನಿದ್ದರು. ಆದರೆ ಎಲ್ಲರೂ ಪ್ರಾಯಿಕವಾಗಿ ಬೊಗಸೆ ಗಟ್ಟಿಕೊಂಡು, ಯಾಚಕರ ಮುಖದಲ್ಲಿರುವ (ಚಿಹ್ನೆಯನ್ನು) ಮುದ್ರೆಯನ್ನು ಧರಿಸಿ ಕೊಂಡಿದ್ದರು. ಇದರಿಂದ ಇವರು ಮಾತನಾಡದಿದ್ದಾಗ್ಯೂ ಇವರು ಇರುವ ಸ್ಥಿತಿ ಯಿಂದ ಇವರು ಅಭಯಾರ್ಥಿಗಳೆಂದು ತಿಳಿಯುವಂತೆ ನಿಂತಿದ್ದರು. ||೬೨||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ

ನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠ ಸ್ಕಂಧೇ

### || ಪಂಚಮೋಽಧ್ಯಾಯಃ ||

### ಐದನೆಯ ಅಧ್ಯಾಯವು

|| ವ್ಯಾಸ ಉವಾಚ ||

**ತಥಾ ಚಿಂತಾತುರಾನ್ ವೀಕ್ಷ್ಯ ಸರ್ವಾನ್ ಸರ್ವಾರ್ಥತತ್ತ್ವವಿತ್ ।**
**ಪ್ರಾಹ ಪ್ರೇಮಭರೋದ್ಭ್ರಾಂತಾನ್ ಮಾಧವೋ ಮೇದಿನೀಪತೇ ||೧||**

|| ವಿಷ್ಣುರುವಾಚ ||

**ಕಿಂ ಮೌನಮಾಶ್ರಿತಾ ಯೂಯಂ ಬ್ರುವಂತು ಕಾರಣಂ ಸುರಾಃ ।**
**ಸದಸದ್ವಾಪಿ ಯಚ್ಛ್ರುತ್ವಾ ಯತಿಷ್ಯೇ ತನ್ನಿವಾರಣೇ ||೨||**

---

ವ್ಯಾಸಋಷಿಯು ಹೇಳಿದನು—ಎಲೈ ಜನಮೇಜಯರಾಜನೇ ಕೇಳು, ಎಲ್ಲಾ ವಿಧವಾದ ಕಾರ್ಯಗಳನ್ನೂ ಮತ್ತು ಎಲ್ಲರ ಮನೋಭಿಪ್ರಾಯಗಳ ನಿಜಸ್ಥಿತಿಯನ್ನೂ ಸಂಪೂರ್ಣವಾಗಿ ತಿಳಿದಿರುವ ವಿಷ್ಣುವು ಆ ಪ್ರಕಾರವಾಗಿ ಬಹಳ ಯೋಚನೆಯಿಂದ ಕೂಡಿಕೊಂಡು ವ್ಯಸನಪಡುತ್ತಿರುವ ಆ ದೇವತೆಗಳೆಲ್ಲರನ್ನೂ ನೋಡಿ, ಪ್ರೀತಿಯಿಂದ ನಮಗೆಲ್ಲರಿಗೂ ಸರಿಯಾದ ಪ್ರತ್ಯುತ್ತರವು ದೊರಕುವುದೆಂದು ನಿರೀಕ್ಷಿಸುತ್ತಿರುವ ಆ ದೇವತೆಗಳಿಗೆ ತಕ್ಕುದಾದ ಮಾತನ್ನು ಹೇಳಿದನು. ||೧||

ವಿಷ್ಣುವು ಹೇಳಿದನು—ಎಲೈ ದೇವತೆಗಳಿರಾ, ನೀವೆಲ್ಲರೂ ಏತಕ್ಕಾಗಿ ಮೌನವನ್ನು ಹೊಂದಿರುವಿರಿ. ಹೀಗೆ ನಾನು ಕೇಳಿದಾಗ್ಯೂ ನೀವುಗಳು ಮಾತನಾಡದೆ ಸುಮ್ಮನೆ ಇರಲು ಕಾರಣವೇನು? ಆ ಕಾರಣವನ್ನು ನೀವು ಬಂದಿರುವ ಕೆಲಸವು ಒಳ್ಳೆಯದಾಗಲಿ ಅಥವಾ ಕೆಟ್ಟದ್ದಾಗಲಿ, ನೀವುಗಳು ಹೇಳಿರಿ. ಅದನ್ನು ಕೇಳಿ ನಾನು ನಿಮ್ಮ ತೊಂದರೆಯನ್ನು ತಪ್ಪಿಸುವುದಕ್ಕೆ ಸಾಧ್ಯವಾದಷ್ಟು ಪ್ರಯತ್ನಪಡುವೆನು. ||೨||

|| ದೇವಾಃ ಊಚುಃ ||

**ಕಿಮಜ್ಞಾತಂ ತವ ವಿಭೋ ತ್ರಿಷುಲೋಕೇಷು ವರ್ತತೇ ।**
**ಸರ್ವಂ ವೇದ ಭವಾನ್ ಕಾರ್ಯಂ ಕಿಂ ಪೃಚ್ಛಸಿ ಪುನಃ ಪುನಃ ॥೩॥**

**ತ್ವಯಾ ಪೂರ್ವಂ ಬಲಿರ್ಬದ್ಧಃ ಶಕ್ರೋದೇವಾಧಿಪಃ ಕೃತಃ ।**
**ವಾಮನಂ ವಪುರಾಸ್ಥಾಯ ಕ್ರಾಂತಂ ತ್ರಿಭುವನಂ ಪದೈಃ ॥೪॥**

**ಅಮೃತಂ ತ್ವಾಹೃತಂ ವಿಷ್ಣೋ ದೈತ್ಯಾಶ್ಚ ವಿನಿಪಾತಿತಾಃ ।**
**ತ್ವಂ ಪ್ರಭುಸ್ಸರ್ವದೇವಾನಾಂ ಸರ್ವಾಪದ್ವಿನಿವಾರಣೇ ॥೫॥**

---

ದೇವತೆಗಳು ಹೇಳಿದರು—ಓ ಸ್ವಾಮಿಯೇ, ನಿನಗೆ ಮೂರು ಲೋಕಗಳಲ್ಲಿಯೂ ತಿಳಿಯದಿರುವುದು ಯಾವುದು ಇರುತ್ತದೆ? ನೀನು ಎಲ್ಲ ಕಾರ್ಯವನ್ನೂ ತಿಳಿದಿರುತ್ತೀಯೆ. ಹೀಗಿದ್ದಾಗ್ಯೂ ಬದಲಾಗಿ ನಮ್ಮನ್ನು ಏನುಕಾರಣ ಪ್ರಶ್ನೆಮಾಡುತ್ತಿರುವೆಯೋ ತಿಳಿಯದು. ||೩||

ನೀನು ಪೂರ್ವದಲ್ಲಿ (ವಾಮನನ ಅವತಾರ) ಕುಳ್ಳಾಗಿರುವ ಮನುಷ್ಯನ ಆಕಾರವನ್ನು ಹೊಂದಿ, ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನೂ ಅಳತೆ ಮಾಡಿದೆ. ಬಲಿ ಎಂಬ ರಾಕ್ಷಸನನ್ನು ನಿರ್ಬಂಧದಲ್ಲಿರಿಸಿದೆ. ಈ ಕೆಲಸಗಳಿಂದ ಇಂದ್ರನು ಪುನಃ ದೇವತೆಗಳಿಗೆ ಅಧಿಪತಿಯಾದನು. ||೪||

ಅಮೃತವನ್ನು ದೇವತೆಗಳಿಗಾಗಿ ತಂದು ಕೊಟ್ಟು ರಾಕ್ಷಸರೆಲ್ಲರನ್ನೂ ನೀನು ನಿಗ್ರಹಮಾಡಿರುತ್ತೀಯೆ. ನೀನು ಎಲ್ಲಾ ದೇವತೆಗಳಿಗೂ ಪ್ರಭುವಾಗಿರುತ್ತೀಯೆ ಮತ್ತು ದೇವತೆಗಳ ಎಲ್ಲಾ ವಿಧವಾದ ವಿಪತ್ತುಗಳನ್ನೂ ನಾಶಮಾಡಲು ಶಕ್ತನಾಗಿರುತ್ತೀಯೆ, ಎಂದು ದೇವತೆಗಳು ಹೇಳುವ ವಾಕ್ಯಗಳಿಂದ ನಿನ್ನಿಂದುಪಕೃತರಾದ ನಾವು ನಮ್ಮ ವಿಪತ್ಕಾಲದಲ್ಲಿ ನಿನ್ನನ್ನೇ ರಕ್ಷಕನೆಂಬುದಾಗಿ ತಿಳಿದಿರುವೆವು. ಈಗ ನಾವೆಲ್ಲರೂ ಅರ್ಥಿಮುದ್ರೆಯಿಂದ ನಿನ್ನ ಹತ್ತಿರಕ್ಕೆ ಬಂದಿರುವುದೇ ನಮ್ಮ ವಿಪತ್ತಿಗೆ ಸೂಚಕವಾಗಿ ಇರುವುದು.

ದೇವತೆಗಳ ದುಸ್ಥಿತಿಯನ್ನು ತಿಳಿದು, ಅದನ್ನು ಪರಿಹರಿಸಬಲ್ಲವನ ಸಂಗಡ ತಮ್ಮ ವಿಪತ್ತುಗಳನ್ನು ಹೇಳುವುದಲ್ಲದೆ, ಅದನ್ನು ಪರಿಹರಿಸಬೇಕೆಂದು ಕೇಳುವುದು ಅನಾವಶ್ಯಕವಾಗಿರುವುದು. ಆದ್ದರಿಂದಲೇ ಇಲ್ಲಿ ದೇವತೆಗಳು ತಮ್ಮ ವಿಪತ್ತುಗಳನ್ನು ಹೇಳದೆ ವಿಷ್ಣುವು ಹಿಂದೆ ವಿಪತ್ತಿನಿಂದ ದೇವತೆಗಳನ್ನು ಉದ್ಧಾರಮಾಡಿದ ವಿಷಯ

|| ವಿಷ್ಣುರುವಾಚ ||

ನ ಭೇತವ್ಯಂ ಸುರವರಾ ವೇದ್ಮ್ಯುಪಾಯಂ ಸುಸಮ್ಮತಂ ।
ತದ್ವಧಾಯ ಪ್ರವಕ್ಷ್ಯಾಮಿ ಯೇನ ಸೌಖ್ಯಂ ಭವಿಷ್ಯತಿ ||೬||

ಅವಶ್ಯಂ ಕರಣೀಯಂ ಮೇ ಭವತಾಂ ಹಿತಮಾತ್ಮನಾ ।
ಬುದ್ಧ್ಯಾ ಬಲೇನ ಚಾರ್ಥೇನ ಯೇನ ಕೇನ ಛಲೇನ ವಾ ||೭||

ಉಪಾಯಾಃ ಖಲು ಚತ್ವಾರಃ ಕಥಿತಾಸ್ತತ್ತ್ವದರ್ಶಿಭಿಃ ।
ಸಾಮಾದಯಸ್ಸುಹೃತ್ಸ್ವೇವ ದುರ್ಹೃದೇಷು ವಿಶೇಷತಃ ||೮||

---

ವನ್ನು ಮಾತ್ರ ಹೇಳಿ ಇರುವರು. ಇದರಿಂದಲೇ ಅವರ ವಿಪತ್ತನ್ನು ಹಿಂದೆ ನಾಶ ಮಾಡಿ ಅವರನ್ನು ರಕ್ಷಿಸಿದ ಹಾಗೆ ಈಗಲೂ ಅವರನ್ನು ರಕ್ಷಿಸುವ ಕೆಲಸವು ವಿಷ್ಣುವಿಗೆ ಸೇರಿರುವುದು, ಎಂದು ವ್ಯಕ್ತವಾಗುವುದು. ||೫||

ವಿಷ್ಣುವು ಹೇಳಿದನು, ಎಲೈ ದೇವತೆಗಳಿರಾ, ನೀವು ಹೆದರಬೇಡಿ, ನಿಮ್ಮ ಶತ್ರುವನ್ನು ನಾಶಮಾಡುವ ಶಾಸ್ತ್ರಸಮ್ಮತವಾದ ಉಪಾಯವನ್ನು ನಾನು ತಿಳಿದಿರುತ್ತೇನೆ. ಅದನ್ನು ನಿಮಗೆ ಹೇಳುವೆನು. ನಾನು ಹೇಳುವ ಉಪಾಯವನ್ನು ನೀವು ಆಚರಿಸಿದರೆ ನಿಮಗೆ ಸುಖವು ಖಂಡಿತವಾಗಿಯೂ ಆಗುವುದು. ||೬||

ನಿಮಗೆ ಹಿತವನ್ನು (ಸೌಖ್ಯವನ್ನು) ಉಂಟುಮಾಡುವ ಕೆಲಸವು, ನನ್ನ ಮನಃಪೂರ್ವಕವಾಗಿ ಅವಶ್ಯಕವಾಗಿಯೂ ಮಾಡತಕ್ಕದ್ದು, ಆ ಕೆಲಸವನ್ನು ನನ್ನ ಬುದ್ಧಿಯ ಶಕ್ತಿಯಿಂದಲಾಗಲಿ, ದುಡ್ಡಿನ ಬಲದಿಂದಲಾಗಲಿ, ಅಥವಾ ಯಾವುದೋ ಒಂದು ವಿಧವಾದ ಮೋಸದಿಂದಲಾದರೂ, ನಾನು ಸಾಧಿಸಿ ಕೊಡಲೇಬೇಕಾಗಿರುವುದು. ||೭||

ಕಾರ್ಯಗಳನ್ನು ಸಾಧಿಸಬೇಕಾದರೆ, ಲೋಕದಲ್ಲಿ ವ್ಯವಹಾರವನ್ನು ತಿಳಿದಿರುವ ಬುದ್ಧಿವಂತರು, ಸಾಮ, ದಾನ, ಭೇದ, ದಂಡ ಎಂಬ ನಾಲ್ಕು ಉಪಾಯಗಳು ಇರುವುವೆಂದು ಹೇಳುವರು. ಇವುಗಳಲ್ಲಿ ಸಾಮಾದ್ಯುಪಾಯಗಳನ್ನು, ಶತ್ರುಮಿತ್ರರುಗಳನ್ನು ವಿವೇಚನೆ ಮಾಡಿಕೊಂಡು ಅವರವರ ಯೋಗ್ಯತಾನುಸಾರವಾಗಿ ಉಪಯೋಗಿಸಬೇಕು. ಮಿತ್ರರಲ್ಲಿ ಕೆಲವರಲ್ಲಿ ಸಾಮದಾನಾದ್ಯುಪಾಯಗಳನ್ನೂ, ಶತ್ರುಗಳಲ್ಲಿ ಹೆಚ್ಚಾಗಿ ಭೇದದಂಡೋಪಾಯಗಳನ್ನೇ ಉಪಯೋಗಿಸಬೇಕೆಂದು ನೀತಿಶಾಸ್ತ್ರಜ್ಞರು ಹೇಳಿರುವರು. ||೮||

ಬ್ರಹ್ಮಣಾಽಸ್ಯ ವರೋದತ್ತಸ್ತಪಸಾರಾಧಿತೇನ ಚ ।
ದುರ್ಜಯತ್ವಂ ಚ ಸಂಪ್ರಾಪ್ತಂ ವರದಾನ ಪ್ರಭಾವತಃ ॥೯॥

ಅಜೇಯಸ್ಸರ್ವಭೂತಾನಾಂ ತ್ವಷ್ಟ್ರಾ ಸಮುಪಪಾದಿತಃ ।
ತತೋ ಬಲೇನ ವೃದ್ಧಿಂ ಸ ಪ್ರಾಪ್ತಃ ಪರಪುರಂಜಯಃ ॥೧೦॥

ದುಃಸಾಧ್ಯೋಽಸೌ ಸುರಾಶ್ಶತ್ರುರ್ವಿನಾ ಸಾಮಪ್ರತಾರಣಂ ।
ಪ್ರಲೋಭ್ಯ ವಶಮಾನೇಯೋ ಹಂತವ್ಯಸ್ತು ತತಃ ಪರಂ ॥೧೧॥

ಗಚ್ಛಧ್ವಂ ಸರ್ವಗಂಧರ್ವಾ ಯತ್ರಾಸೌ ಬಲವತ್ತರಃ ।
ಸಾಮ ತಸ್ಯ ಪ್ರಯುಂಜಧ್ವಂ ತತ ಏನಂ ವಿಜೇಷ್ಯಥ ॥೧೨॥

---

ತಪಸ್ಸಿನಿಂದ ಪೂಜಿಸಿ ಸಂತೋಷಪಡಿಸಲ್ಪಟ್ಟ ಬ್ರಹ್ಮನಿಂದ ಇವನಿಗೆ ವರವು ಕೊಡಲ್ಪಟ್ಟಿರುತ್ತದೆ. ವರದ ಮಹಿಮೆಯಿಂದ ಈ ವೃತ್ರಾಸುರನು ಯಾರಿಂದಲೂ ಜಯಿಸಲಸಾಧ್ಯನಾಗಿರುವನು. ॥೯॥

ಇವನ ತಂದೆಯಾದ ತ್ವಷ್ಟೃಬ್ರಹ್ಮನು ಇವನನ್ನು ಎಲ್ಲ ಪ್ರಾಣಿಗಳಿಂದಲೂ ಜಯಿಸಲಾಗದವನನ್ನಾಗಿ ಮಾಡಿರುವನು. ಆದ್ದರಿಂದ ಆ ವೃತ್ರಾಸುರನು ಶತ್ರುಗಳ ಪಟ್ಟಣವನ್ನೆಲ್ಲವನ್ನೂ ಜಯಿಸುವ ಮಟ್ಟಿನ ಬಲವುಳ್ಳವನಾಗಿ ವೃದ್ಧಿಯನ್ನು ಹೊಂದಿರುವನು. ॥೧೦॥

ಎಲೈ ದೇವತೆಗಳಿರಾ, ಈ ವೃತ್ರಾಸುರನು ಈಗ ನಿಮ್ಮಿಂದ, ಯಾರಿಂದಲೂ ಜಯಿಸಲಸಾಧ್ಯನು. ಆದ್ದರಿಂದ ಅಸಾಧ್ಯವಾದ ಶತ್ರುವಿನ ವಿಷಯದಲ್ಲಿ ಮೃದುವಾದ ಮಾತುಗಳನ್ನು ಹೇಳಿ ನಟನೆಯುಳ್ಳ ರೀತಿಯಿಂದ ನಡೆದುಕೊಂಡು ಅವನಿಗೆ ಮಿತ್ರರಾಗಿದ್ದುಕೊಂಡಿರಬೇಕು. ಹೀಗೆ ಅವನನ್ನು ನೀವು ಚನ್ನಾಗಿ ವಶಪಡಿಸಿಕೊಂಡು, ಅನಂತರದಲ್ಲಿ ಅವನನ್ನು ಆಕರ್ಷಣೀಯ ವಂಚನೆಯಿಂದ ನಿಗ್ರಹ ಮಾಡಬೇಕೇ ಹೊರತು, ಬೇರೆ ಯಾವರೀತಿಯಿಂದಲೂ, ಬ್ರಹ್ಮನ ವರದ ಬಲವುಳ್ಳ ಅವನನ್ನು ನಿಗ್ರಹಮಾಡಲು ಸಾಧ್ಯವಿರುವುದಿಲ್ಲ. ॥೧೧॥

ಎಲೈ ಗಂಧರ್ವರಿರಾ, ನೀವೆಲ್ಲರೂ ಇಲ್ಲಿಂದ ಹೋಗಿರಿ. ಮಹಾಬಲಿಷ್ಠನಾದ ಆ ವೃತ್ರನು ಇರುವಲ್ಲಿಗೆ ಹೋಗಿ ಅವನನ್ನು ವಶಪಡಿಸಿಕೊಳ್ಳುವುದಕ್ಕಾಗಿ ಸಾಮೋಪಾಯವನ್ನು ಪ್ರಯೋಗ ಮಾಡಿರಿ. ಕೆಲವು ಕಾಲವು ಕಳೆದ ಅನಂತರದಲ್ಲಿ ಅವನನ್ನು ಜಯಿಸುವಿರಿ. ॥೧೨॥

**ಸಂಗಮ್ಯ ಶಪಥಾನ್ ಕೃತ್ವಾ ವಿಶ್ವಾಸ್ಯ ಸಮಯೇನ ಹಿ ।**
**ಮಿತ್ರತ್ವಂ ಚ ಸಮಾಧಾಯ ಹಂತವ್ಯಃ ಪ್ರಬಲೋ ರಿಪುಃ ॥೧೩॥**

**ಅದೃಶ್ಯ ಸ್ಸಂಪ್ರವೇಕ್ಷ್ಯಾಮಿ ವಜ್ರಮಸ್ಯ ವರಾಯುಧಂ ।**
**ಸಾಹಾಯ್ಯಂ ಚ ಕರಿಷ್ಯಾಮಿ ಶಕ್ರಸ್ಯಾಹಂ ಸುರೋತ್ತಮಾಃ ॥೧೪॥**

**ಸಮಯಂ ಚ ಪ್ರತೀಕ್ಷಧ್ವಂ ಸರ್ವಥೈವಾಯುಷಃ ಕ್ಷಯೇ ।**
**ಮರಣಂ ವಿಬುಧಾಸ್ತಸ್ಯ ನಾನ್ಯಥಾ ಸಂಭವಿಷ್ಯತಿ ॥೧೫॥**

---

ನೀವೆಲ್ಲರೂ (ಸಾಮೋಪಾಯದಿಂದ) ಒಳ್ಳೆಯ ಮಾತನಾಡುವುದರಿಂದಲೂ, ವಿನಯದಿಂದ ಕೂಡಿದ ನಡೆವಳಿಯಿಂದಲೂ, ಸಹ ಅವನ ಸಂಗಡ ಇರುವುದರಿಂದ ಅವನಲ್ಲಿ ಸ್ನೇಹವನ್ನು ಬೆಳೆಯಿಸಿ, ಅವನಿಗೆ ಯಾವ ವಿಧವಾಗಿಯೂ ತೊಂದರೆಯನ್ನು ಕೊಡುವುದಿಲ್ಲವೆಂದು ಪ್ರತಿಜ್ಞೆ ಮಾಡಿಕೊಟ್ಟು, ನೀವೆಲ್ಲರೂ ಅವನ ಸ್ನೇಹಿತರೆಂದು ಅವನು ಚೆನ್ನಾಗಿ ನಿಮ್ಮಲ್ಲಿ ನಂಬಿಕೆಯನ್ನಿಡುವಂತೆ, ಅವನ ಸಂಗಡ ಇರಬೇಕು. ಹೀಗೆ ಸ್ನೇಹದಿಂದ ಇರುವಲ್ಲಿ ಕೆಲವು ಕಾಲ ಕಳೆದ ಅನಂತರದಲ್ಲಿ ಅವನು ಸಹಾಯವಿಲ್ಲದ ಇಕ್ಕಟ್ಟಿನಲ್ಲಿ ಸಿಕ್ಕುವ ಕಾಲವನ್ನೂ ಅವನ ವಿಪತ್ಕಾಲವನ್ನೂ ಸಹ ನೋಡಿಕೊಂಡು, ಅವನ ನಿಗ್ರಹವನ್ನು ಮಾಡಬೇಕು. ಹೀಗೆಯೇ ಪ್ರಬಲನಾದ ಶತ್ರುವನ್ನು ನಿಗ್ರಹಿಸುವ ಉಪಾಯವಾಗಿರುವುದು. ||೧೩||

ಎಲೈ ಶ್ರೇಷ್ಠರಾದ ದೇವತೆಗಳೇ ಕೇಳಿರಿ, ನಾನು ಇಂದ್ರನ ವಜ್ರಾಯುಧದಲ್ಲಿ ಸೇರಿಕೊಂಡು, ಇತರರು ಯಾರೂ ಕಾಣದಂತೆ ಇರುವವನಾಗಿ, ಆ ವೃತ್ರಾಸುರನ ವಧೆಯ ವಿಷಯದಲ್ಲಿ ಸಹಾಯವನ್ನು ಮಾಡುವೆನು. ||೧೪||

ಎಲೈ ದೇವತೆಗಳಿರಾ, ನೀವು ಈಗ ತ್ವರೆ ಮಾಡಬೇಡಿರಿ. ಅವನ ಜೀವಿತಕಾಲವು ಪೂರ್ತಿಯಾಗಿ ಮುಗಿಯುವವರೆಗೂ ಅವನನ್ನು ಯಾರೂ ಏನನ್ನೂ ಮಾಡಲಾಗುವುದಿಲ್ಲ. ಆದ್ದರಿಂದ ಅವನ ಜೀವಿತಕಾಲವು ಇರುವವರೆಗೂ ನೀವು ಸುಮ್ಮನೆ ನಿರೀಕ್ಷಿಸುತ್ತಿರುವುದು ಉತ್ತಮವು. ಅವನ ಆ ಕಾಲವು ಒದಗಿದ ಕೂಡಲೇ, ನೀವುಗಳೆಲ್ಲರೂ ಅವನ ವಿಷಯದಲ್ಲಿ ಮಾಡಬೇಕಾದ ಕೆಲಸವನ್ನು ಮಾಡಿರಿ. ಹೀಗಲ್ಲದೆ ಅವನಿಗೆ ಮರಣವು ಬೇರೆಯ ರೀತಿಯಿಂದ ಹೇಗೂ ಸಂಭವಿಸುವುದಿಲ್ಲವು. ||೧೫||

**ಗಚ್ಛಧ್ವಮೃಷಿಭಿಸ್ಸಾರ್ಧಂ ಗಂಧರ್ವಾಃ ಕಪಟಾವೃತಾಃ ।**
**ಇಂದ್ರೇಣ ಸಹ ಮಿತ್ರತ್ವಂ ಕುರುಧ್ವಂ ವಾಕ್ಯದಾನತಃ ॥೧೬॥**

**ಯಥಾ ಸ ಯಾತಿ ವಿಶ್ವಾಸಂ ತಥಾ ಕಾರ್ಯಂ ಪ್ರತಾರಣಮ್ ।**
**ಗುಪ್ತೋಽಹಂ ಸಂಪ್ರವೇಕ್ಷ್ಯಾಮಿ ಪವಿಂ ಸಂಭಾವಿತಂ ದೃಢಂ ॥೧೭॥**

**ವಿಶ್ವಸ್ತಂ ಮಘವಾ ಶತ್ರುಂ ಹನಿಷ್ಯತಿ ನ ಚಾನ್ಯಥಾ ।**
**ವಿಶ್ವಾಸಸ್ಯ ಕೃತೇ ಪಾಪಂ ಕೃತ್ವಾ ಶಕ್ರಸ್ತು ಪೃಷ್ಠತಃ ॥೧೮॥**

**ಮತ್ಸಹಾಯೋಽಥ ವಜ್ರೇಣ ಶಾತಯಿಷ್ಯತಿ ಪಾಪಿನಂ ।**
**ನ ದೋಷೋಽತ್ರ ಶಠೇ ಶತ್ರೌ ಶಾಠ್ಯಮೇವ ಪ್ರಕುರ್ವತಃ ॥೧೯॥**

---

ಓ ಗಂಧರ್ವರೇ, ವೇಷಾಂತರದಿಂದ ನಿಮ್ಮ ಆಕಾರವನ್ನು ಮರೆಮಾಡಿಕೊಂಡು ಋಷಿಗಳೊಡನೆ ವೃತ್ರಾಸುರನ ಹತ್ತಿರಕ್ಕೆ ಹೋಗಿ, ಅವನಿಗೆ ನಂಬಿಕೆಯು ಹುಟ್ಟುವಂತೆ ಮಾತುಗಳನ್ನು ಹೇಳಿ, ಅವನಿಗೆ ಪ್ರತಿಜ್ಞೆಮಾಡಿಕೊಟ್ಟು, ಇಂದ್ರನೊಡನೆ ಅವನು ಸ್ನೇಹವನ್ನು ಬೆಳಸುವಂತೆ ಮಾಡತಕ್ಕದ್ದು. ॥೧೬॥

ಹೇಗೆ ಮಾತನ್ನು ಹೇಳಿದರೆ ಆ ವೃತ್ರನು ವಿಶ್ವಾಸವನ್ನು ಹೊಂದುವನೋ ಹಾಗೆಯೇ ಆ ವೃತ್ರನ ಸಂಗಡ ಮಾತನಾಡಿ ವಿಶ್ವಾಸವನ್ನು ಹುಟ್ಟಿಸಿ ಮೋಸವನ್ನು ಮಾಡಬೇಕು. ನಾನೂ ಬಲವಾಗಿರುವ ಮತ್ತು ಗೂಢವಾಗಿ ಇರಿಸಿಕೊಂಡಿರುವ ವಜ್ರಾಯುಧದಲ್ಲಿ ಯಾರಿಗೂ ಕಾಣದಂತೆ ಪ್ರವೇಶಿಸುವೆನು. ॥೧೭॥

ಇಂದ್ರನು ವಿಶ್ವಾಸದಿಂದ ಇರುವ ತನ್ನ ಶತ್ರುವನ್ನು ನಾನು ಹೇಳಿದ ರೀತಿಯಿಂದ ಕೊಲ್ಲುವನು. ವಿಶ್ವಾಸಘಾತುಕತನವೆಂಬ ದೊಡ್ಡದಾದ ಪಾತಕವನ್ನು ಇಂದ್ರನು ಲೆಕ್ಕಿಸುವಹಾಗಿಲ್ಲವು. ಏಕೆಂದರೆ ನಂಬಿಕೊಂಡು ಸ್ನೇಹದಿಂದಿರುವವನ ದೋಷಗಳನ್ನು ಬಿಟ್ಟು ಗುಣವಿಷಯದಲ್ಲಿ ಸ್ನೇಹವೊಂದನ್ನೇ ಎಣಿಸುತ್ತಾ ಬಂದರೆ ಧರ್ಮದ ಕಾರ್ಯಸಿದ್ಧಿಯು ಆಗಲಾರದು. ॥೧೮॥

ಇಂದ್ರನು ನನ್ನ ಸಹಾಯದಿಂದ ತನ್ನ ಶತ್ರುವನ್ನು ವಜ್ರಾಯುಧದಿಂದ ಕೊಲ್ಲುವನು. ದುಷ್ಟನಾಗಿರುವ ಶತ್ರುವು ತನ್ನ ದೌಷ್ಟ್ಯವನ್ನು ಬಲವಾಗಿ ತೋರಿಸುತ್ತಿರುವಾಗ, ಅವನನ್ನು ದೌಷ್ಟ್ಯಮಾರ್ಗದಿಂದ ಕೊಂದರೆ ಯಾವ ದೋಷವೂ ಇರಲಾರದು. ॥೧೯॥

ನಾನ್ಯಥಾ ಬಲವಾನ್ ವಧ್ಯಃ ಶೂರಧರ್ಮೇಣ ಜಾಯತೇ ।
ವಾಮನಂ ರೂಪಮಾಧಾಯ ಮಯಾsಯಂ ವಂಚಿತೋ ಬಲಿಃ॥೨೦॥

ಕೃತ್ವಾ ಚ ಮೋಹಿನೀವೇಷಂ ದೈತ್ಯಾಸ್ಸರ್ವೇsಪಿ ವಂಚಿತಾಃ ।
ಭವಂತ ಸ್ಸಹಿತಾ ಸ್ಸರ್ವೇ ದೇವೀಂ ಭಗವತೀಂ ಶಿವಾಂ ॥೨೧॥

ಗಚ್ಛಧ್ವಂ ಶರಣಂ ಭಾವ್ಯೈಃ ಸ್ತೋತ್ರಮಂತ್ರೈಃ ಸುರೋತ್ತಮಾಃ ।
ಸಾಹಾಯ್ಯಂ ಸಾ ಯೋಗಮಾಯಾ ಭವತಾಂ ಸಂವಿಧಾಸ್ಯತಿ ॥೨೨॥

ವಂದಾಮಹೇ ಸದಾದೇವೀಂ ಸಾತ್ವಿಕೀಂ ಪ್ರಕೃತಿಂ ಪರಾಂ ।
ಸಿದ್ಧಿದಾಂ ಕಾಮದಾಂ ಕಾಮ್ಯಾಂ ದುರಾಪಾಮಕೃತಾತ್ಮಭಿಃ ॥೨೩॥

---

ಶೂರನಾಗಿ ಅವಧ್ಯನಾಗಿರುವ ಈ ಶತ್ರುವನ್ನು ಶೌರ್ಯದಿಂದ ವಧೆ ಮಾಡುವುದು ಹೇಗಾದರೂ ಅಸಾಧ್ಯವಾಗಿರುವುದು. ಆದ್ದರಿಂದ ಈ ಪ್ರಕಾರವಾಗಿ ಬೇರೆಯಾದ ಮಾರ್ಗವನ್ನು ಅವಲಂಬಿಸಬೇಕಾಗಿರುವುದು. ನಾನೂ ಕೂಡ ಹಿಂದೆ ಬಲಿಯೆಂಬ ದಾನವನನ್ನು ನನ್ನ ಶೌರ್ಯದಿಂದ ನಿಗ್ರಹಮಾಡಲಾರದೆ ವಾಮನನ ವೇಷವನ್ನು ಅವಲಂಬಿಸಿ, ಬಲಿಯನ್ನು ಮೋಸದಿಂದ ನಿಗ್ರಹಮಾಡಿದೆನು. ||೨೦||

ನಾನು ಅಮೃತಮಥನಕಾಲದಲ್ಲಿ ಮೋಹಿನೀರೂಪವನ್ನು ಧರಿಸಿ, ಎಲ್ಲಾ ರಾಕ್ಷಸರನ್ನೂ ವಂಚಿಸಿದ್ದೇನೆ. ಶತ್ರುವನ್ನು ನಿಗ್ರಹಮಾಡುವ ಉಪಾಯವು ನ್ಯಾಯವಾದದ್ದಾಗಲಿ, ಅನ್ಯಾಯವಾದದ್ದಾಗಲಿ, ಹೇಗಾದಾಗ್ಯೂ ಕಾರ್ಯಸಿದ್ಧಿಯು ಉಂಟಾಗಬೇಕಾದರೆ ದೇವಿಯ ಅನುಗ್ರಹವು ಅವಶ್ಯವಾಗಿ ಬೇಕಾಗಿರುವುದು. ಆದ್ದರಿಂದ ಎಲೈ ದೇವತೆಗಳಿರಾ, ನೀವೆಲ್ಲರೂ ದೇವಿಯ ಸ್ತೋತ್ರಗಳನ್ನು ಮತ್ತು ಮಂತ್ರಗಳನ್ನು ಸಹ ಪಾರಾಯಣಮಾಡುವವರಾಗಿ, ಷಡ್ಗುಣೈಶ್ವರ್ಯಸಂಪನ್ನಳಾದ, ಸರ್ವಕ್ಕೂ ಕಾರಣಳಾದ,ಎಲ್ಲರೂ ಅಪೇಕ್ಷಿಸುವ, ಜ್ಞಾನರೂಪಿಣಿಯಾದ, ಭಕ್ತರಿಗೆ ಮಂಗಳವನ್ನು ಕೊಡುವ ದೇವಿಯನ್ನು ಸರಿಯಾದ ಭಾವದಿಂದ ಆರಾಧನೆ ಮಾಡಿರಿ. ||೨೧-೨೨||

ನಾವೆಲ್ಲರೂ ಯಾವಾಗಲೂ, ಎಲ್ಲಕ್ಕೂ ಮಿಗಿಲಾಗಿ ಪೂಜ್ಯಳಾಗಿರುವ, ಸತ್ವಗುಣಪ್ರಧಾನಳಾಗಿರುವ, ಪರಾಶಕ್ತಿಯೆಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿರುವ, ಪ್ರಪಂಚಕ್ಕೆಲ್ಲಕ್ಕೂ ಮೂಲಕಾರಣಳಾದ, ಸಕಲಕಾರ್ಯಗಳಿಗೂ ಸಿದ್ಧಿಯನ್ನುಂಟು ಮಾಡುವವಳಾದ, ನಮ್ಮ ಇಷ್ಟಾರ್ಥಗಳನ್ನು ಕೊಡುವವಳಾದ, ನಮಗೆಲ್ಲರಿಗೂ ಭಕ್ತಿಯಿಂದ ಸೇವಿಸಲು ಯೋಗ್ಯಳಾಗಿರುವ ದೇವಿಯನ್ನು ನಮಸ್ಕಾರ ಮಾಡೋಣ.

ಇಂದ್ರೋಽಪಿ ತಾಂ ಸಮಾರಾಧ್ಯ ಹನಿಷ್ಯತಿ ರಣೇ ರಿಪುಂ ।
ಮೋಹಿನೀ ಸಾ ಮಹಾಮಾಯಾ ಮೋಹಯಿಷ್ಯತಿ ದಾನವಂ ॥೨೪॥

ಮೋಹಿತೋ ಮಾಯಯಾ ವೃತ್ರಃಸುಖಸಾಧ್ಯೋ ಭವಿಷ್ಯತಿ।
ಪ್ರಸನ್ನಾಯಾಂ ಪರಾಂಬಾಯಾಂ ಸರ್ವಂ ಸಾಧ್ಯಂ ಭವಿಷ್ಯತಿ ॥೨೫॥

ನೋಚೇನ್ಮನೋರಥಾವಾಪ್ತಿರ್ನಕಸ್ಯಾಪಿ ಭವಿಷ್ಯತಿ ।
ಅಂತರ್ಯಾಮಿ ಸ್ವರೂಪಾಸಾ ಸರ್ವಕಾರಣ ಕಾರಣಾ ॥೨೬॥

ತಸ್ಮಾತ್ತಾಂ ವಿಶ್ವಜನನೀಂ ಪ್ರಕೃತಿಂ ಪರಮಾದೃತಾಃ ।
ಭಜಧ್ವಂ ಸಾತ್ವಿಕೈರ್ಭಾವೈಶ್ಶತ್ರುನಾಶಾಯ ಸತ್ತಮಾಃ ॥೨೭॥

---

ಏಕೆಂದರೆ ಈ ದೇವಿಯು ಜಿತೇಂದ್ರಿಯರಲ್ಲದೆ ಇರುವ ಎಲ್ಲಜನರಿಂದ ಸೇವೆಯನ್ನು ಮಾಡಿ ಪಡೆಯಲು ಅಶಕ್ಯಳಾಗಿರುವಳು. ॥೨೩॥

ಇಂದ್ರನೂ ಕೂಡ ಆ ದೇವಿಯನ್ನು ಚೆನ್ನಾಗಿ ಭಕ್ತಿಯಿಂದ ಪೂಜೆಯನ್ನು ಮಾಡಿ ಶತ್ರುವನ್ನು ನಾಶಮಾಡುವನು. ಮಹಾಮಾಯೆಯೆಂದು ಪ್ರಸಿದ್ಧಳಾದ ಮೋಹನ ದಕ್ಷಳಾದ ಆ ದೇವಿಯು ವೃತ್ರಾಸುರನನ್ನೂ ಮೋಹಗೊಳಿಸುವಳು. ॥೨೪॥

ದೇವಿಯಿಂದ ವೃತ್ರಾಸುರನು ಮೋಹಗೊಳಿಸಲ್ಪಟ್ಟವನಾಗಿ ಸುಖದಿಂದ ನಮಗೆ ನಿಗ್ರಹ ಮಾಡಲು ಸಾಧ್ಯನಾಗುವನು, ಮತ್ತು ಪರಾಶಕ್ತಿ ಎನಿಸಿಕೊಂಡಿರುವ ಈ ದೇವಿಯು ಪ್ರಸನ್ನಳಾದರೆ, ಎಲ್ಲಕಾರ್ಯವೂ ಸುಖಸಾಧ್ಯವಾಗುವುದು. ॥೨೫॥

ಬ್ರಹ್ಮನು ವರವನ್ನು ಅವನಿಗೆ ಕೊಟ್ಟಿರುವ ಕಾರಣ ನಮ್ಮ ಶತ್ರುವು ನಾಶವಾಗುವ ಉಪಾಯವು ನಮಗೆ ಈಗ ಗೋಚರವಾಗುತ್ತಿಲ್ಲವು. ಮತ್ತು ಅವನು ಅವಧ್ಯನಾಗಿರುವನು. ಹೀಗೆ ಇರುವುದರಿಂದಲೇ ಸರ್ವೋತ್ತಮಳಾದ ದೇವಿಯನ್ನು ನಾವೆಲ್ಲರೂ ಸೇವೆ ಮಾಡಲೇಬೇಕು. ನಾವೆಲ್ಲರೂ ದೇವಿಯನ್ನು ಸೇವೆ ಮಾಡಿದರೆ ಆ ದೇವಿಯು ಎಲ್ಲಾ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿದ್ದುಕೊಂಡು ಪ್ರತಿಯೊಂದು ಪ್ರಾಣಿಯನ್ನೂ ಅವನವನು ಮಾಡತಕ್ಕ ಕಾರ್ಯಗಳಿಗೆ ಅನುಕೂಲವಾಗಿ ಪ್ರೇರಿಸುವಳಾದ್ದರಿಂದ ನಮಗೆ ಅನುಕೂಲವಾಗಿ ಹೇಗೆ ಮಾಡಿದರೆ ನಮ್ಮ ಶತ್ರುವು ನಾಶವಾಗುವನೋ ಆ ಉಪಾಯವನ್ನು ನಮಗೆ ಅನುಗ್ರಹ ಮಾಡುವಳು. ಇದರಿಂದ ನಮಗೆ ಕಾರ್ಯ ಸಿದ್ಧಿಯುಂಟಾಗುವುದು. ಮತ್ತು ಈ ದೇವಿಯು ಎಲ್ಲಕ್ಕೂ ಕಾರಣವಾಗಿಯೂ ಇರುವಳು. ಆದ್ದರಿಂದ ಎಲೈ ದೇವತೆಗಳಿರಾ, ನೀವುಗಳು ಜಗ

ಪುರಾ ಮಯಾऽಪಿ ಸಂಗ್ರಾಮಂ ಕೃತ್ವಾ ಪರಮದಾರುಣಂ ।
ಪಂಚವರ್ಷಸಹಸ್ರಾಣಿ ನಿಹತೌ ಮಧುಕೈಟಭೌ ॥೨೮॥

ಸ್ತುತಾ ಮಯಾ ತದಾऽತ್ಯರ್ಥಂ ಪ್ರಸನ್ನಾ ಪ್ರಕೃತಿಃ ಪರಾ ।
ಮೋಹಿತೌ ತೌ ತದಾ ದೈತ್ಯೌ ಛಲೇನ ಚ ಮಯಾ ಹತೌ ॥೨೯॥

ವಿಪ್ರಲಬ್ಧೌ ಮಹಾಬಾಹೂ ದಾನವೌ ಮದಗರ್ವಿತೌ ।
ತಥಾ ಕುರುಧ್ವಂ ಭಜನಂ ಪ್ರಕೃತೇರ್ಭಾವಸಂಯುತಾಃ ॥೩೦॥

---

ನ್ಮಾತೆಯಾದ, ಸರ್ವಕ್ಕೂ ಕಾರಣಳಾದ ಆ ದೇವಿಯನ್ನು ಬಹಳವಾದ ಆದರದಿಂದಲೂ ಸಾತ್ವಿಕವಾದ ಲೋಕಧರ್ಮರಕ್ಷಣೆಯ ಮನೋವೃತ್ತಿಯಿಂದಲೂ ಸಹ ವೃತ್ರಾಸುರನನ್ನು ನಾಶಮಾಡುವುದಕ್ಕಾಗಿ ಸೇವಿಸಿರಿ. ||೨೬-೭೭||

ಪೂರ್ವದಲ್ಲಿ ನಾನೂ ಸಹ ಐದು ಸಾವಿರ ವರ್ಷಗಳವರೆಗೂ ಮಧುಕೈಟಭರೆಂಬ ಇಬ್ಬರು ರಾಕ್ಷಸರ ಸಂಗಡ ಬಹಳ ಭಯಂಕರವಾದ ಯುದ್ಧವನ್ನು ಮಾಡಿದೆನು. ಅನಂತರ ಅವರಿಬ್ಬರನ್ನೂ ದೇವಿಯ ಕೃಪೆಯಿಂದ ನಾಶಮಾಡಿದೆನು. ||೨೮||

ಐದು ಸಾವಿರ ವರ್ಷಗಳವರೆಗೂ ನಾನು ಮಧುಕೈಟಭರ ಸಂಗಡ ಯುದ್ಧವನ್ನು ಮಾಡಿದರೂ ಅವರ ನಿಗ್ರಹವು ಆಗದಿರುವಾಗ, ನಾನು ಜಗನ್ಮಾತೆಯಾದ, ಪೂಜ್ಯಳಾದ ದೇವಿಯನ್ನು ಬಹಳಮಟ್ಟಿಗೆ ಸ್ತೋತ್ರ ಮಾಡಿದೆನು. ಸರ್ವೋತ್ತಮಳಾಗಿರುವ, ಸರ್ವಕಾರಣಳಾದ ಆ ದೇವಿಯು ನನಗೆ ಪ್ರಸನ್ನಳಾದಳು. ಆ ದೇವಿಯ ಅನುಗ್ರಹವು ನನಗೆ ಉಂಟಾದುದರಿಂದಲೂ, ಆಗ ಆ ದೈತ್ಯರಿಬ್ಬರನ್ನೂ ಆ ದೇವಿಯು ಮೋಹಗೊಳಿಸಿದುದರಿಂದಲೂ ಸಹ ನಾನು ವಂಚನೆಯಿಂದ ಆ ದೈತ್ಯರಿಬ್ಬರನ್ನೂ ಕೊಂದೆನು. ||೨೯||

ಆ ದಾನವರಿಬ್ಬರೂ ಬಹಳ ಬಲಶಾಲಿಗಳಾಗಿಯೂ, ಮದದಿಂದ ಅಹಂಕಾರವುಳ್ಳವರಾಗಿಯೂ ಇದ್ದರು. ಅಂಥಾ ಶೂರರನ್ನು ಮೋಸವಿಲ್ಲದೆ ನಾಶಮಾಡಲು ಸಾಧ್ಯವಾಗುತ್ತಿರಲಿಲ್ಲ. ಈಗ ನೀವೂ ಸಹ ನಿಮ್ಮ ಮನಸ್ಸನ್ನು ದೃಢಮಾಡಿಕೊಂಡು ದೇವಿಯ ವಿಷಯದಲ್ಲಿ ಸರಿಯಾದ ಭಕ್ತಿಭಾವದಿಂದ ಕೂಡಿದವರಾಗಿ ಆ ದೇವಿಯ ಸೇವೆಯನ್ನು ನಾನು ಹೇಳಿದಂತೆ ಮಾಡಿರಿ. ||೩೦||

ಸರ್ವಥಾ ಕಾರ್ಯಸಿದ್ಧಿಂ ಸಾ ಕರಿಷ್ಯತಿ ಸುರೋತ್ತಮಾಃ ।
ಏವಂ ತೇ ದತ್ತಮತಯೋ ವಿಷ್ಣುನಾ ಪ್ರಭುವಿಷ್ಣುನಾ ॥೩೧॥

ಜಗ್ಮುಸ್ತೇ ಮೇರುಶಿಖರಂ ಮಂದಾರದ್ರುಮಮಂಡಿತಂ ।
ಏಕಾಂತೇ ಸಂಸ್ಥಿತಾ ದೇವಾಃ ಕೃತ್ವಾ ಧ್ಯಾನಂ ಜಪಂತಪಃ ॥೩೨॥

ತುಷ್ಟುವು ರ್ಜಗತಾಂ ಧಾತ್ರೀಂ ಸೃಷ್ಟಿಸಂಹಾರಕಾರಿಣೀಂ ।
ಭಕ್ತಕಾಮದುಘಾಮಂಬಾಂ ಸಂಸಾರಕ್ಲೇಶನಾಶಿನೀಂ ॥೩೩॥

॥ ದೇವಾ ಊಚುಃ ॥

ದೇವಿ ಪ್ರಸೀದ ಪರಿಪಾಹಿ ಸುರಾನ್ ಪ್ರತಪ್ತಾನ್
ವೃತ್ರಾಸುರೇಣ ಸಮರೇ ಪರಿಪೀಡಿತಾಂಶ್ಚ ।
ದೀನಾರ್ತಿನಾಶನಪರೇ ಪರಮಾರ್ಥತತ್ವೇ
ಪ್ರಾಪ್ತಾಂ ಸ್ತ್ವದಂಘ್ರಿಕಮಲಂ ಶರಣಂ ಸದೈವ ॥೩೪॥

---

ಎಲೈ ದೇವತೆಗಳಿರಾ ಕೇಳಿರಿ, ಆ ದೇವಿಯು ನಿಮಗೆ ಸರ್ವಪ್ರಕಾರದಿಂದಲೂ ಕಾರ್ಯಸಿದ್ಧಿಯನ್ನುಂಟುಮಾಡುವಳು ಎಂದು ಮಹಾಮಹಿಮನಾದ ವಿಷ್ಣುವಿನಿಂದ ಉಪದೇಶವನ್ನು ಹೊಂದಿದವರಾಗಿ ದೇವತೆಗಳು ತಮ್ಮ ಮನಸ್ಸನ್ನು ದೃಢಮಾಡಿಕೊಂಡು ಮಂದಾರಕಲ್ಪವೃಕ್ಷದಿಂದ ಕೂಡಿರುವ ಮೇರುಪರ್ವತದ ಶಿಖರವನ್ನು ಕುರಿತು ಪ್ರಯಾಣಮಾಡಿದರು. ॥೩೧॥

ದೇವತೆಗಳು ಮೇರುಪರ್ವತದಲ್ಲಿ ಶಾಂತವಾಗಿ ಜನಸಂಚಾರವಿಲ್ಲದಿರುವ ಪ್ರದೇಶದಲ್ಲಿದ್ದುಕೊಂಡು ದೇವಿಯಧ್ಯಾನವನ್ನೂ, ದೇವಿಯ ಸಂಬಂಧವಾದ ಮಂತ್ರ ಜಪವನ್ನೂ, ದೇವಿಯ ಮಂತ್ರವು ಸಿದ್ಧಿಸಲು ತಕ್ಕ ಅನುಷ್ಠಾನವನ್ನೂ ಸಹ ಮಾಡಿಕೊಂಡು ಇದ್ದರು. ಅನಂತರದಲ್ಲಿ ಜಗನ್ಮಾತೆಯಾದ, ಜಗತ್ತನ್ನುಸೃಷ್ಟಿಮಾಡಿ ತಕ್ಕ ಕಾಲದಲ್ಲಿ ಸಂಹಾರವನ್ನೂ ಮಾಡುತ್ತಿರುವ, ಸಂಸಾರದಲ್ಲಿ ಕ್ಲೇಶಗಳನ್ನು ನಾಶ ಮಾಡುವವಳಾದ, ಭಕ್ತರ ಇಷ್ಟಾರ್ಥಗಳೆಲ್ಲವನ್ನೂ ಕೊಡುವವಳಾದ ದೇವಿಯನ್ನು ಹೀಗೆ ಸ್ತೋತ್ರಮಾಡಿದರು. ॥೩೨-೩೩॥

ದೇವತೆಗಳು ದೇವಿಯನ್ನು ಸ್ತೋತ್ರಮಾಡಿದರು—ಓ ದೇವಿಯೇ, ನೀನು ದುಃಖದಿಂದ ಕೊರಗುತ್ತಿರುವವರನ್ನು ನೋಡಿ, ಅವರ ಕಷ್ಟವನ್ನು ನಾಶಪಡಿಸುವುದರಲ್ಲಿ ಆಸಕ್ತಳು. ಎಲ್ಲಕ್ಕಿಂತಲೂ ಉತ್ತಮತತ್ವಸ್ವರೂಪಳಾದ ಬ್ರಹ್ಮಸ್ವರೂಪಿಣಿಯಾಗಿ

ತ್ವಂ ಸರ್ವವಿಶ್ವಜನನೀ ಪರಿಪಾಲಯಾಸ್ಮಾನ್
ಪುತ್ರಾನಿವಾತಿಪತಿತಾನ್ ರಿಪುಸಂಕಟೇಽಸ್ಮಿನ್ ।
ಮಾತರ್ನ ತೇಽಸ್ತ್ಯವಿದಿತಂ ಭುವನತ್ರಯೇಽಪಿ
ಕಸ್ಮಾದುಪೇಕ್ಷಸಿ ಸುರಾನಸುರಪ್ರತಪ್ತಾನ್ ॥೩೫॥

ತ್ರೈಲೋಕ್ಯಮೇತದಖಿಲಂ ವಿಹಿತಂ ತ್ವಯೈವ
ಬ್ರಹ್ಮಾ ಹರಿಃ ಪಶುಪತಿಸ್ತವ ವಾಸನೋತ್ಥಾಃ ।
ಕುರ್ವಂತಿ ಕಾರ್ಯಮಖಿಲಂ ಸ್ವವಶಾ ನ ತೇ ತೇ
ಭ್ರೂಭಂಗಚಾಲನವಶಾತ್ ವಿಹರಂತಿ ಕಾಮಂ ॥೩೬॥

---

ಇರುತ್ತೀಯೆ. ಹೀಗಿರುವ ನಿನ್ನ ಪಾದಕಮಲದಲ್ಲಿ ಶರಣಾಗತರಾಗಿ ಬಂದಿರುವ, ವೃತ್ರಾಸುರನಿಂದ ಯುದ್ಧದಲ್ಲಿಯೂ ಈಚೆಗೂ ಹಿಂಸೆಯನ್ನು ಅನುಭವಿಸಿದವರಾಗಿರುವ, ದೇವತೆಗಳಾಗಿರುವ, ಸಂಕಟಕ್ಕೊಳಗಾಗಿರುವ ನಮ್ಮ ವಿಷಯದಲ್ಲಿ ಪ್ರಸನ್ನಳಾಗು. ನಮ್ಮನ್ನು ವೃತ್ರಾಸುರನ ಭಯದಿಂದ ರಕ್ಷಿಸು. ||೩೪||

ಓ ತಾಯಿಯೇ, ನೀನು ಸಮಸ್ತವಾದ ಪ್ರಪಂಚಕ್ಕೂ ಸಹ ತಾಯಿಯಂತೆ ರಕ್ಷಣೆಯ ಕೆಲಸವನ್ನು ನಿಜವಾಗಿಯೂ ಮಾಡುತ್ತಿರುವುದರಿಂದ ಜಗನ್ಮಾತೆಯೆಂಬ ಹೆಸರು ನಿನಗೆ ಅನ್ವರ್ಥವಾಗಿರುವುದು. ಆದುದರಿಂದ ಶತ್ರುವಿನಿಂದುಂಟಾಗಿರುವ ಸಂಕಟದಲ್ಲಿ ಬಿದ್ದು ನರಳುತ್ತಿರುವ ನಮ್ಮನ್ನು ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನು ಕಾಪಾಡುವಂತೆ ರಕ್ಷಿಸು. ಸರ್ವಜ್ಞಳಾಗಿರುವ ನಿನಗೆ ತಿಳಿಯದೇ ಇರುವ ಅಂಶವು ಯಾವುದೂ ಇರುವುದಿಲ್ಲ. ನಾವಾಗಿ ನಮ್ಮ ವಿಷಯವನ್ನು ನಿನ್ನಲ್ಲಿ ಹೇಳಿದರೇ ತಿಳಿಯಬರುತ್ತದೆಂಬ ನಿಯಮವೇ ಇಲ್ಲ. ಈ ಅಂಶವೂ ನಮ್ಮ ವಿಷಯಕ್ಕೆ ಮಾತ್ರವಲ್ಲ. ಮೂರು ಲೋಕಗಳಲ್ಲಿ ಎಲ್ಲಿ ಯಾವ ಪ್ರಾಣಿಯ ವಿಷಯವು ಹೇಗಿದೆ ಎಂಬುದೆಲ್ಲವೂ ಸಹ ನಿನಗೆ ತಿಳಿಯುತ್ತದೆಯಾದ್ದರಿಂದ, ರಾಕ್ಷಸರ ಬಾಧೆಗೆ ಸಿಕ್ಕಿ ನರಳುವ ನಮ್ಮನ್ನು ಯಾವ ಕಾರಣದಿಂದ ಉಪೇಕ್ಷೆಮಾಡಿರುವೆಯೋ, ಅದು ನಮಗೆ ತಿಳಿಯದಿರುವ ಅಂಶವಾಗಿರುತ್ತದೆ. ||೩೫||

ಓ ದೇವಿಯೇ, ಮೂರು ಲೋಕವೂ ಎಲ್ಲವೂ ಕೂಡ ನಿನ್ನಿಂದಲೇ ಸೃಷ್ಟಿಸಲ್ಪಟ್ಟಿರುವುದು. ಬ್ರಹ್ಮನೂ, ವಿಷ್ಣುವೂ, ಈಶ್ವರನೂ ಕೂಡ ನಿನ್ನ ಸಂಕಲ್ಪಮಾತ್ರದಿಂದ ಸೃಷ್ಟಿಯಾದವರು. ಅವರೂ ಕೂಡ ನಿನ್ನ ಅಧೀನರಾಗಿ ಕೆಲಸಗಳನ್ನೆಲ್ಲವನ್ನೂ ಮಾಡುತ್ತಿರುವರು. ಅವರೆಲ್ಲರೂ ಕೂಡ ತಮ್ಮ ವಿಷಯದಲ್ಲಿ ಸ್ವಾತಂತ್ರ್ಯವನ್ನು

ಮಾತಾ ಸುತಾನ್ ಪರಿಭವಾತ್ ಪರಿಪಾತಿ ದೀನಾನ್
ನೀತಿಸ್ತ್ವಯೈವ ರಚಿತಾ ಪ್ರಕಟಾಪರಾಧಾನ್ ।
ಕಸ್ಮಾನ್ನ ಪಾಲಯಸಿ ದೇವಿ ವಿನಾಪರಾಧಾನ್
ಅಸ್ಮಾಂಸ್ತ್ವದಂಘ್ರಿ ಶರಣಾನ್ ಕರುಣಾರಸಾಬ್ಧೇ ॥೩೭॥

ನೂನಂ ಮದಂಘ್ರಿ ಭಜನಾಪ್ತಪದಾಃ ಕಿಲೈತೇ
ಭಕ್ತಿಂ ವಿಹಾಯ ವಿಭವೇ ಸುಖಭೋಗಲುಬ್ಧಾಃ ।
ನೇಮೇ ಕಟಾಕ್ಷವಿಷಯಾ ಇತಿ ಚೇನ್ನ ಚೈಷಾ
ರೀತಿಸ್ಸುತೇ ಜನನಕರ್ತರಿ ಚಾಪಿ ದೃಷ್ಟಾ ॥೩೮॥

---

ಹೊಂದಿಲ್ಲವು. ನಿನ್ನ ಹುಬ್ಬಿನ ಸಂಜ್ಞಾಮಾತ್ರದಿಂದ ಅವರೆಲ್ಲರೂ ಕೂಡ ವಿಹರಿಸಿಕೊಂಡು ನೆಮ್ಮದಿಯಿಂದ ತಮ್ಮ ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತಾ ಇರುವರು. ॥೩೬॥

ತಾಯಿಯು ತನ್ನ ಮಕ್ಕಳನ್ನು ಹೆಚ್ಚಾದ ಮತ್ತು ಪ್ರಸಿದ್ಧವಾದ ತಪ್ಪುಗಳುಳ್ಳವರನ್ನಾದಾಗ್ಗೂ ಇತರರಿಂದ ತಿರಸ್ಕಾರವು ಬಂದೀತೆಂದು ಕಾಪಾಡುವಳು. ಇದು ಲೋಕದಲ್ಲಿ ಪ್ರಸಿದ್ಧವಾದ ನೀತಿಯಾಗಿ ನಿನ್ನಿಂದಲೇ ಉಪದೇಶಮಾಡಲ್ಪಟ್ಟಿರುತ್ತದೆ. ಓ ದೇವಿಯೇ, ನಾವೆಲ್ಲರೂ ಈಗ ಯಾವ ತಪ್ಪನ್ನೂ ಮಾಡದವರಾಗಿರುವೆವು. ನೀನು ತುಂಬಾ ದಯವುಳ್ಳವಳಾಗಿರುತ್ತೀಯೆ. ನಾವೆಲ್ಲರೂ ನಿನ್ನ ಕಾಲುಗಳಿಗೆ ನಮಸ್ಕಾರ ಮಾಡಿ ನಿನ್ನನ್ನು ರಕ್ಷಕಳನ್ನಾಗಿ ಹೊಂದಿರುವೆವು, ನಿನ್ನ ಮಕ್ಕಳಾಗಿರುವೆವು. ನೀನು ನಮ್ಮ ತಾಯಿಯಾಗಿರುವೆ. ಹೀಗೆ ಇರುವಾಗ ನೀನು ನಮ್ಮನ್ನು ಯಾವ ಕಾರಣದಿಂದ ರಕ್ಷಿಸದಿರುತ್ತೀಯೆ ? ॥೩೭॥

ಒಂದು ವೇಳೆ ನೀನು " ದೇವತೆಗಳೆಲ್ಲರೂ ನನ್ನ ಪಾದಸೇವೆಯಿಂದ ಹೊಂದಿದ ವಿಭವವುಳ್ಳವರಾಗಿ, ಮಹಿಮೆಯನ್ನು ಹೊಂದಿ, ಅನಂತರದಲ್ಲಿ ಆ ಭಕ್ತಿಯಿಂದ ನನ್ನ ಸೇವೆಯನ್ನು ಬಿಟ್ಟು, ಸುಖ ಮತ್ತು ಭೋಗ ಇವುಗಳಲ್ಲಿ ಆಸಕ್ತರಾಗಿದ್ದವರು. ಆದ್ದರಿಂದ ಇವರೆಲ್ಲರೂ ನನ್ನ ಕಟಾಕ್ಷಕ್ಕೆ ಯೋಗ್ಯರಾದವರಲ್ಲವು. ಅಲ್ಲದೆ ಮತ್ತರಾದ ಮತ್ತು ಭೋಗಾಶಾಬದ್ಧರಾದ ಇವರಿಗೆ ಸಹಾಯ ಮಾಡಬಾರದು " ಎಂದು ತಿಳಿದು, ಕಷ್ಟಕ್ಕೆ ಸಿಕ್ಕಿರುವ ನಮ್ಮನ್ನು ಉಪೇಕ್ಷೆ ಮಾಡುವುದಾದರೆ, ಈ ರೀತಿಯು ಲೋಕದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲವು. ತಾಯಿಯಾದವಳು ಮಕ್ಕಳ ಅಪರಾಧವನ್ನು ಕ್ಷಮಿಸಿ, ಕಾಪಾಡುವಳೇ ಹೊರತು, ಅವರನ್ನು ಉಪೇಕ್ಷೆ ಮಾಡುವು

ದೋಷೋ ನ ನೋಽತ್ರ ಜನನಿ ಪ್ರತಿಭಾತಿ ಚಿತ್ತೇ
ಯತ್ತೇ ವಿಹಾಯ ಭಜನಂ ವಿಭವೇ ನಿಮಗ್ನಾಃ ।
ಮೋಹಸ್ತ್ವಯಾ ವಿರಚಿತಃ ಪ್ರಭವತ್ಯಸೌ ನಃ
ತಸ್ಮಾತ್ಸ್ವಭಾವ ಕರುಣೇ ದಯಸೇ ಕಥಂ ನ ॥೩೯॥

ಪೂರ್ವಂ ತ್ವಯಾ ಜನನಿ ದೈತ್ಯಪತಿರ್ಬಲಿಷ್ಠೋ
ವ್ಯಾಪಾದಿತೋ ಮಹಿಷರೂಪಧರಃ ಕಿಲಾಜೌ ।
ಅಸ್ಮತ್ಕೃತೇ ಸಕಲಲೋಕ ಭಯಾವಹೋಽಸೌ
ವೃತ್ರಂ ಕಥಂ ನ ಭಯದಂ ವಿಧುನೋಷಿ ಮಾತಃ ॥೪೦॥

---

ದಿಲ್ಲ. ಈ ನ್ಯಾಯವು ಲೋಕಸಿದ್ಧವಾಗಿರುವುದು. ಹೀಗೆ ಉಪೇಕ್ಷೆ ಮಾಡುವುದು ಎಲ್ಲಿಯೂ ಕಂಡುಬರುತ್ತಿಲ್ಲವಾದುದರಿಂದ ಪ್ರಕೃತದಲ್ಲಿ ನೀನು ಹಿಂದಿನ ತಪ್ಪಿಗೆ ಶಿಕ್ಷೆ ಯಾದ ದುಃಖವನ್ನು ಅನುಭವಿಸಿ, ಈಚೆಗೆ ಪಶ್ಚಾತ್ತಾಪ ತಪಸ್ಸುಗಳಿಂದ ಶುದ್ಧರಾ ಗಿರುವ ನಮ್ಮನ್ನು ಕಾಪಾಡು. ॥೩೮॥

ನಾವೆಲ್ಲರೂ ನಿನ್ನ ಸೇವೆಯನ್ನು ಭಕ್ತಿಯಿಂದ ಮಾಡದೆ ವಿಭವದಲ್ಲಿ ಆಸಕ್ತ ರಾಗಿದ್ದವರು ಎಂಬುದೂ ನಮ್ಮ ದೋಷವಾಗಿ ನಮ್ಮ ಮನಸ್ಸಿನಲ್ಲಿ ಕಾಣುವುದಿಲ್ಲವು. ಆ ಪ್ರಕಾರವಾಗಿ ನಾವೆಲ್ಲರೂ ನಡೆದುದು, ನೀನು ನಮ್ಮ ಮನಸ್ಸನ್ನು ಮೋಹಗೊಳಿಸಿ ಪ್ರೇರಿಸಿದ್ದರಿಂದಲ್ಲವೇ ? ಆದ್ದರಿಂದ ನಾವುಗಳು ಮೋಹದಿಂದ ವಿಷಯಾನುಭವದಲ್ಲಿ ಮಗ್ನರಾಗಿ ನಿನ್ನ ಸೇವೆಯಲ್ಲಿ ವಿಮುಖರಾಗಿದ್ದೆವು. ನಮ್ಮನ್ನು ಹೀಗೆ ವಿಷಯಭೋಗಾ ಸಕ್ತರನ್ನಾಗಿ ಮಾಡಿ ಮೋಹಗೊಳಿಸಿದ ಕೆಲಸವೂ ನಿನ್ನದೇ ಆಗಿರುವ ನಿಮಿತ್ತ, ನಮ್ಮ ದೋಷವಲ್ಲವು. ಆದ್ದರಿಂದ ದಯಾಸ್ವಭಾವವುಳ್ಳ ನೀನು ನಮ್ಮ ವಿಷಯದಲ್ಲಿ ನೀನು ಮಾಡಿರುವ ಮೋಹವನ್ನು ತಪ್ಪಿಸಿ ನಮ್ಮನ್ನು ಕಾಪಾಡು ॥೩೯॥

ಈಚೆಗೆ ತಪಸ್ಸಿನಿಂದ ಶುದ್ಧರಾಗಿ ನಿನ್ನ ಸೇವೆಯಲ್ಲೂ ಧರ್ಮದಲ್ಲೂ ಆಸಕ್ತ ರಾಗಿರುವ ನಮ್ಮ ರಕ್ಷಣೆಯು ಈಗಿನದು ಮಾತ್ರ ಅಲ್ಲವು. ಇದು ಹಿಂದಿನಿಂದಲೂ ನಿನ್ನ ರೀತಿಯಾಗಿ ಇರುವುದು. ಓ ತಾಯಿಯೇ, ಮೊದಲು ನೀನು ಬಲಿಷ್ಠನಾದ ಮಹಿಷಾಸುರನೆಂಬ ರಾಕ್ಷಸಶ್ರೇಷ್ಠನನ್ನು ಯುದ್ಧದಲ್ಲಿ ನಮಗೋಸ್ಕರವಾಗಿ ನಿಗ್ರಹ ಮಾಡಿರುತ್ತೀಯೆ. ಆ ಮಹಿಷಾಸುರನು ಎಲ್ಲಾ ಲೋಕಗಳಿಗೂ ಭಯವನ್ನುಂಟು ಮಾಡುವವನಾಗಿದ್ದನು. ಅಷ್ಟುಮಟ್ಟಿನವನಾದ ರಾಕ್ಷಸನನ್ನು ನಮಗೋಸ್ಕರ ನಿಗ್ರಹ ಮಾಡಿರುವ ನೀನು ಈಗ ನಮಗೆ ಭಯವನ್ನುಂಟುಮಾಡುತ್ತಿರುವ ವೃತ್ರಾಸುರನನ್ನು

ಶುಂಭಸ್ತಥಾಽತಿಬಲವಾನನುಜೋ ನಿಶುಂಭಃ
ತೌ ಭ್ರಾತರೌ ತದನುಗಾ ನಿಹತಾ ಹತೌ ಚ ।
ವೃತ್ರಂ ತಥಾ ಜಹಿ ಖಲಂ ಪ್ರಬಲಂ ದಯಾರ್ದ್ರೇ
ರ್ಮತ್ರಂ ವಿಮೋಹಯ ತಥಾ ನಭವೇದ್ಯಥಾಽಸೌ ॥೪೦॥

ತ್ವಂ ಪಾಲಯಾದ್ಯ ವಿಬುಧಾನಸುರೇಣ ಮಾತಃ
ಸಂತಾಪಿತಾನತಿತರಾಂ ಭಯವಿಹ್ವಲಾಂಶ್ಚ ।
ನಾನ್ಯೋಽಸ್ತಿ ಕೋಽಪಿ ಭುವನೇಷು ಸುರಾರ್ತಿಹಂತಾ
ಯಃ ಕ್ಲೇಶ ಜಾಲಮಖಿಲಂ ನಿದಹೇತ್ ಸ್ವಶಕ್ತ್ಯಾ ॥೪೨॥

---

ಏತಕ್ಕೆ ನಿಗ್ರಹ ಮಾಡಿ, ಹಿಂದೆಯೂ ತಪ್ಪುಮಾಡಿದ್ದರೂ ನಮ್ಮನ್ನು ಕಾಪಾಡಿದಂತೆ ಈಗಲೂ ನಮ್ಮ ಕಷ್ಟವನ್ನು ನಾಶಮಾಡದಿರುವೆ? ॥೪೦॥

ಮಹಿಷಾಸುರನಂತೆಯೇ ಶುಂಭನೆಂಬುವನೂ ಬಲಿಷ್ಠನು. ಅವನ ಹಾಗೆಯೇ ಅವನ ತಮ್ಮನಾದ ನಿಶುಂಭನೆಂಬುವನೂ ಬಹಳ ಬಲಿಷ್ಠನು. ಅವರಿಬ್ಬರೂ ಅಣ್ಣ ತಮ್ಮಂದಿರು. ಇವರೆಲ್ಲರೂ ನಮ್ಮನ್ನು ನಿಗ್ರಹಿಸಿ ಅಧಾರ್ಮಿಕರಾಗಿದ್ದುದರಿಂದ ತಮ್ಮ ತಮ್ಮ ಪರಿವಾರದವರೊಡನೆ ನಿನ್ನಿಂದ ಕೊಲ್ಲಲ್ಪಟ್ಟರು! ಓ ದಯಾಶಾಲಿನಿಯಾದ ದೇವಿಯೇ, ನೀನು ಶುಂಭ ನಿಶುಂಭರನ್ನು ಮತ್ತು ಮಹಿಷಾಸುರನನ್ನು ನಿಗ್ರಹ ಮಾಡಿದಂತೆಯೇ ದುಷ್ಟನಾದ ಮತ್ತು ಬಲಿಷ್ಠನಾದ ವೃತ್ರಾಸುರನನ್ನು ಈಗಲೂ ನಿಗ್ರಹ ಮಾಡು. ಈ ವೃತ್ರಾಸುರನು ಪುನಃ ಉಂಟಾಗದಿರುವಂತೆ ಇವನನ್ನು ಮೋಹಗೊಳಿಸು. ॥೪೧॥

ಓ ತಾಯಿಯೇ, ನೀನು ಈಗ ವೃತ್ರಾಸುರನಿಂದ ಬಹಳಮಟ್ಟಿಗೆ ಸಂಕಟಪಡಿಸಲ್ಪಟ್ಟವರಾಗಿ, ಭಯದಿಂದ ನಡಗುತ್ತಿರುವ ಚಿತ್ತಸ್ಥೈರ್ಯವಿಲ್ಲದವರಾದ ನಮ್ಮ ದೇವತೆಗಳನ್ನು ರಕ್ಷಿಸು. (ಲೋಕಗಳಲ್ಲಿ ನಿನ್ನಂತೆ ದೇವತೆಗಳ ಸಂಕಟವನ್ನು ನಾಶಮಾಡುವವರು ನಿನ್ನನ್ನು ಬಿಟ್ಟು ಬೇರೆ ಯಾರೂ ಇಲ್ಲವು.) ನೀನು ನಿನ್ನ ಸಾಮರ್ಥ್ಯದಿಂದ ಸಮಸ್ತವಾದ ಕ್ಲೇಶಗಳ ಸಮೂಹವೆಲ್ಲವನ್ನೂ ಸಮೂಲವಾಗಿ ನಾಶಮಾಡುತ್ತೀಯೆ. ನಾವೆಲ್ಲರೂ ದೇವತೆಗಳೆಂದನಿಸಿಕೊಂಡು, ಇತರರ ಕ್ಲೇಶಗಳನ್ನು ನಾಶಮಾಡುವುದರಲ್ಲಿ ಸಮರ್ಥರಿದ್ದಾಗ್ಯೂ ನಮಗೆ ಒದಗಿರುವ ಕ್ಲೇಶಗಳನ್ನು ನಾಶಮಾಡುವುದರಲ್ಲಿ ನೀನೇ ಸಮರ್ಥಳೇ ಹೊರತು ಇನ್ನು ಯಾರೂ ಶಕ್ತರಲ್ಲವು. ॥೪೨॥

ವೃತ್ರೇ ದಯಾ ತವ ಯದಿ ಪ್ರಥಿತಾ ತಥಾಽಪಿ
ಜಹ್ಯೇನ ಮಾಶು ಜನದುಃಖಕರಂ ಖಲಂ ಚ ।
ಪಾಪಾತ್ಸಮುದ್ಧರ ಭವಾನಿ ಶರೈಃ ಪುನಾನಾ
ನೋಚೇತ್ಪ್ರಯಾಸ್ಯತಿ ತಮೋ ನನು ದುಷ್ಟಬುದ್ಧಿಃ ॥೪೩॥

ತೇ ಪ್ರಾಪಿತಾಃ ಸುರವನಂ ವಿಬುಧಾರಯೋ ಯೇ
ಹತ್ವಾ ರಣೇಽಪಿ ವಿಶಿಖೈಃ ಕಿಲ ಪಾಲಿತಾಸ್ತೇ ।
ತ್ರಾತಾ ನ ಕಿಂ ನಿರಯಪಾತ ಭಯಾದ್ದಯಾರ್ದ್ರೇ
ಯಚ್ಛತ್ರವೋಽಪಿ ನ ಹಿ ಕಿಂ ವಿನಿಹಂಸಿ ವೃತ್ರಂ ॥೪೪॥

---

ದೇವತೆಗಳಾದ ನಮ್ಮಂತೆ ರಾಕ್ಷಸರೂ ಸಹ ನಿನಗೆ ಮಕ್ಕಳಾಗಿರುವ ಕಾರಣ ಅವರನ್ನೂ ನಮ್ಮನ್ನು ರಕ್ಷಿಸುವಂತೆ ರಕ್ಷಣೆಮಾಡುವುದು ನಿನ್ನ ಕರ್ತವ್ಯವಾಗಿರುವುದಾದರೆ, ಆ ವೃತ್ರಾಸುರನ ವಿಷಯದಲ್ಲಿ ನಿನಗೆ ತುಂಬಾ ದಯವು ಇದ್ದು ಅವನನ್ನು ರಕ್ಷಣೆಮಾಡುವುದೂ ಸಹ ನಿನಗೆ ಪ್ರಸಿದ್ಧವಾದ ಕಾರ್ಯವಾಗಿರುತ್ತದೆ. (ದೇ. ಭಾ. ಸ್ಕಂ. ೫, ಪು. ೨, ೨೭೯-೨೮೦) ಆದರೂ ದುಷ್ಟರನ್ನು ರಕ್ಷಣೆಮಾಡುವುದೆಂದರೆ ಅವರು ಮಾಡುತ್ತಿರುವ ಪ್ರಾಣಿಗಳ ಹಿಂಸೆಯನ್ನು ಅವರು ಮಾಡದಂತೆ ತಪ್ಪಿಸುವುದು. ಇದರಿಂದ ಇವರ ಮನೋವೃತ್ತಿಯು ಬೇರೆಯ ವಿಧವಾಗಿ, ಕ್ರಮವಾಗಿ ತಮೋಗುಣವು ಕಡಿಮೆಯಾಗುತ್ತಾ ಇವರೆಲ್ಲರೂ ಉತ್ತಮಗತಿಯನ್ನು ಹೊಂದುವರು. ಈಗ ವೃತ್ರಾಸುರನನ್ನು ನೀನು ರಕ್ಷಣೆಮಾಡಬೇಕಾದರೆ, ಅವನು ದುಷ್ಟನಾಗಿ ಜನರಿಗೆ ತುಂಬಾ ತೊಂದರೆಯನ್ನುಂಟುಮಾಡುತ್ತಿರುವನು. ಆದ್ದರಿಂದ ಅವನನ್ನು ಸಂಹಾರಮಾಡಿ, ಅವನನ್ನು ನೀನು ನಿನ್ನ ಬಾಣದಿಂದ ಕೊಲ್ಲುವುದರಿಂದ ಅವನ ಪಾಪಕರ್ಮವು ತನ್ನ ಫಲವನ್ನು ಕೊಟ್ಟು ನಾಶವಾಗುವಂತೆ ಮಾಡಬೇಕು. ಇಲ್ಲದಿದ್ದರೆ, ದುಷ್ಟಬುದ್ಧಿಯುಳ್ಳವನಾದ ಆ ವೃತ್ರಾಸುರನು ಇನ್ನೂ ಹೆಚ್ಚಿನ ತಮೋಗುಣವನ್ನು ಹೊಂದಿ, ನರಕವನ್ನು ಮುಂದಕ್ಕೂ ಹೊಂದುವನು. ಆದ್ದರಿಂದ ನೀನು ನಿನ್ನ ಶಸ್ತ್ರದಿಂದ ಅವನನ್ನು ಕೊಂದು, ಪವಿತ್ರನನ್ನಾಗಿ ಮಾಡಿ, ಅವನನ್ನು ರಕ್ಷಿಸು. ಹೀಗೆ ಮಾಡಿದಲ್ಲಿ ನಮ್ಮಿಬ್ಬರ ರಕ್ಷಣೆಯೂ ಆಗುವುದು. ॥೪೩॥

ಯಾರು ದೇವತೆಗಳ ಶತ್ರುಗಳಾಗಿ ನಿನ್ನಿಂದ ರಣದಲ್ಲಿ ನಿನ್ನ ಆಯುಧದಿಂದ ನಾಶವನ್ನು ಹೊಂದಿರುವರೋ, ಅವರೆಲ್ಲರೂ ವೀರಸ್ವರ್ಗದ ನಂದನವನವನ್ನು ಹೊಂದಿಯೇ ಇರುವರು. ನಿನ್ನ ಬಾಣಗಳಿಂದ ಯುದ್ಧದಲ್ಲಿ ನಾಶವನ್ನು ಹೊಂದಿದವರೆಲ್ಲರೂ ಹೀಗೆ ಕಾಪಾಡಲ್ಪಟ್ಟವರೇ ಆಗಿರುವರು. ಓ ದಯಾಶಾಲಿನಿಯೇ, ನರಕದಲ್ಲಿ

ಜಾನೀಮಹೇ ರಿಪುರಸೌ ತವ ಸೇವಕೇನ
ಪ್ರಾಯೇಣ ಪೀಡಯತಿ ನಃ ಕಿಲ ಪಾಪಬುದ್ಧಿಃ ।
ಯ ಸ್ತಾವಕಸ್ತ್ವಿಹ ಭವೇದಮರಾನಸೌ ಕಿಂ
ತ್ವತ್ಪಾದಪಂಕಜರತಾನ್ನನು ಪೀಡಯೇದ್ವಾ ॥೪೫॥

ಕುರ್ಮಃ ಕಥಂ ಜನನಿ ಪೂಜನಮದ್ಯ ತೇಽಂಬ
ಪುಷ್ಪಾದಿಕಂ ತವ ವಿನಿರ್ಮಿತಮೇವ ಯಸ್ಮಾತ್ ।
ಮಂತ್ರಾ ವಯಂ ಚ ಸಕಲಂ ಪರಶಕ್ತಿರೂಪಂ
ತಸ್ಮಾದ್ಭವಾನಿ ಚರಣೇ ಪ್ರಣತಾಃಸ್ಮ ನೂನಂ ॥೪೬॥

---

ಬೀಳುವ ಭಯದಿಂದ ನಿನ್ನ ಶತ್ರುಗಳೂ ಕೂಡ ನಿನ್ನಿಂದಲೇ ರಕ್ಷಿಸಲ್ಪಟ್ಟಿಲ್ಲವೇ? ಹೀಗಿರುವಾಗ ನೀನು ವೃತ್ರಾಸುರನನ್ನು ಯಾವ ಕಾರಣದಿಂದಕೊಲ್ಲುವುದಿಲ್ಲ? ॥೪೪॥

ಭಕ್ತನಾದವನಿಗೆ ಅನುಗ್ರಹವೂ, ಇತರನಾದ ಶತ್ರುವಿಗೆ ನಿಗ್ರಹವೂ ನಿಯತವು. ಹೀಗಿರುವಲ್ಲಿ ಈ ವೃತ್ರಾಸುರನು ನಿನ್ನನ್ನು ಭಕ್ತಿಭಾವದಿಂದ ಸೇವಿಸುವ ಸೇವಕನಾಗಿಲ್ಲವು. ಕೆಟ್ಟಬುದ್ಧಿಯುಳ್ಳವನಾದ ಇವನು ನಮ್ಮನ್ನು ವಿಶೇಷವಾಗಿ ಪೀಡಿಸುವ ನಿಮಿತ್ತ, ಇವನನ್ನು ನಾವೆಲ್ಲರೂ ಶತ್ರುವೆಂದು ತಿಳಿದಿರುತ್ತೇವೆ. ನಿನ್ನ ಭಕ್ತನಾದವನು ಯಾವನೇ ಆದರೂ, ಅವನು ನಿನ್ನ ಪಾದಕಮಲದ ಸೇವೆಯಲ್ಲಿ ಆಸಕ್ತರಾಗಿರುವ, ದೇವತೆಗಳಾದ ನಮ್ಮನ್ನು ಪೀಡಿಸುತ್ತಿದ್ದನೇನು? ಆದ್ದರಿಂದ ಇವನಿಗೆ ನಿಗ್ರಹರೂಪದಿಂದ ಅನುಗ್ರಹವು ಉಂಟಾಗಲೆಂತ ನಾವುಗಳು ಕೇಳುತ್ತೇವೆ. ॥೪೫॥

ಓ ಜಗನ್ಮಾತೆಯೇ, ಈಗ ನಾವಾದರೋ ನಿನ್ನ ಪೂಜೆಯನ್ನು ಹೇಗೆ ಮಾಡುವುದು? ಪೂಜೆಮಾಡುವುದರಲ್ಲಿ ಇರಬೇಕಾದ ಪೂಜಕ, ಪೂಜ್ಯ, ಪೂಜಾ ಎಂಬ ಈ ಮೂರೂ ಸಹ ನಿನ್ನಿಂದ ನಿರ್ಮಿತವಾದುವು. ನೀನು ಈ ವ್ಯವಹಾರವು ನಡೆಯುವುದಕ್ಕಾಗಿ ರೂಪಾಂತರಗಳಿಂದ ಬೇರೆ ಬೇರೆ ಪದಾರ್ಥಗಳನ್ನು ಕಲ್ಪಿಸಿರುತ್ತೀಯೆ. ವಸ್ತುತಃ ನಿನ್ನ ಪೂಜಾರ್ಥವಾದ ಪದಾರ್ಥಗಳೂ, ಪೂಜೆಯನ್ನು ಮಾಡುವ ನಾವೆಲ್ಲರೂ, ಪೂಜೆಗೆ ಅತ್ಯವಶ್ಯಕವಾದ ಮಂತ್ರಗಳು, ಇವೆಲ್ಲವೂ ಪರಾಶಕ್ತಿಯ ಸ್ವರೂಪವಾಗಿಯೇ ಇರುವುವು. ಅಲ್ಲದೆ ಆ ಪರಮಾರ್ಥವಾದ, ಕೇವಲ ಚಿದ್ರೂಪದಲ್ಲಿ ಪ್ರಕಾಶಿಸುತ್ತಿರುವ ನಿನ್ನ ಪೂಜೆಯನ್ನು ನಿನ್ನ ರೂಪಾಂತರದಿಂದ ನಡೆಸುವುದರಲ್ಲಿ ನಮಗೆ ಅಷ್ಟುಮಟ್ಟಿನ ಮನಸ್ಸಿನ ಪರಿಪಕ್ವದಶೆಯು ಇಲ್ಲದಿರುವ ಕಾರಣ, ನಾವೆಲ್ಲರೂ ನಿನ್ನ ಪಾದಕಮಲದಲ್ಲಿ ನಮಸ್ಕಾರವನ್ನು ಮಾತ್ರ ಅರ್ಪಿಸಿ ಇದರಿಂದಲೇ ಕೃತಾರ್ಥರಾಗುವೆವು! ॥೪೬॥

ಧನ್ಯಾಸ್ತ ಏವ ಮನುಜಾ ಹಿ ಭಜಂತಿ ಭಕ್ತ್ಯಾ
ಪಾದಾಂಬುಜಂ ತವ ಭವಾಬ್ಧಿಜಲೇಷು ಪೋತಂ ।
ಯಂ ಯೋಗಿನೋಽಪಿ ಮನಸಾ ಸತತಂ ಸ್ಮರಂತಿ
ಮೋಕ್ಷಾರ್ಥಿನೋ ವಿಗತರಾಗ ವಿಕಾರಮೋಹಾಃ ॥೪೭॥

ಯೇ ಯಾಜ್ಞಿಕಾಸ್ಸಕಲವೇದವಿದೋಽಪಿ ನೂನಂ
ತ್ವಾಂ ಸಂಸ್ಮರಂತಿ ಸತತಂ ಕಿಲ ಹೋಮಕಾಲೇ ।
ಸ್ವಾಹಾಂ ತು ತೃಪ್ತಿಜನನೀಂ ಅಸುರೇಶ್ವರಾಣಾಂ
ಭೂಯಃ ಸ್ವಧಾಂ ಪಿತೃಗಣಸ್ಯ ಚ ತೃಪ್ತಿಹೇತುಂ ॥೪೮॥

ಮೇಧಾಽಸಿ ಕಾಂತಿರಸಿ ಶಾಂತಿರಪಿ ಪ್ರಸಿದ್ಧಾ
ಬುದ್ಧಿಸ್ತ್ವಮೇವ ವಿಶದಾರ್ಥಕರೀ ನರಾಣಾಂ ।

---

ಓ ದೇವಿಯೇ, ಜನನಮರಣಗಳ ಪರಂಪರೆ ಎಂಬ ಅನಾದಿಯಾದ ಪ್ರವಾಹದಿಂದ ಕೂಡಿದ ಅಪಾರವಾಗಿರುವ ಈ ಸಂಸಾರವೆಂಬ ಸಾಗರವನ್ನು ದಾಟಿಸಲು ಸಮರ್ಥವಾದ ಹಡಗಿನಂತಿರುವ ನಿನ್ನ ಪಾದಕಮಲವನ್ನು ಯಾವ ಮನುಷ್ಯರು ಭಕ್ತಿಯಿಂದ ಪೂಜಿಸುವರೋ, ಆ ಮನುಷ್ಯರೇ ಲೋಕದಲ್ಲಿ ಧನ್ಯರಾಗಿರುವರು. ಮೋಕ್ಷವನ್ನು ಅಪೇಕ್ಷಿಸುವವರಾದ ಯೋಗಿಗಳು ಕಾಮಕ್ರೋಧಗಳ ವಿಕಾರವನ್ನು ನಿಗ್ರಹಿಸಿ ಅಜ್ಞಾನವನ್ನೂ ನಿವಾರಿಸಿಕೊಂಡು, ಅಷ್ಟುಮಟ್ಟಿನ ಶಕ್ತಿಯನ್ನು ಕೊಡುವ ಅಂಥಾ ಮಹಿಮೆಯುಳ್ಳ, ನಿನ್ನ ಪಾದಕಮಲವನ್ನು ಮನಸ್ಸಿನಿಂದ ಯಾವಾಗಲೂ ಸ್ಮರಿಸುತ್ತಿರುವರು (ಧ್ಯಾನಮಾಡುತ್ತಿರುವರು). ॥೪೭॥

ವೇದಗಳೆಲ್ಲವನ್ನೂ ಚೆನ್ನಾಗಿ ಅಭ್ಯಾಸಮಾಡಿ ಅರ್ಥವನ್ನೂ ತಿಳಿದಿರುವ ಜ್ಞಾನಿಗಳು ಯಾಗಮಾಡುವ ಕಾಲದಲ್ಲಿ, ಹೋಮವನ್ನು ಮಾಡುವಾಗ, ಯಾವಾಗಲೂ ಸ್ವಾಹಾ ಎಂಬ ಶಬ್ದರೂಪದಿಂದಿರುವ ನಿನ್ನನ್ನು ಧ್ಯಾನಮಾಡುತ್ತಾ ಇರುವರು, ಮತ್ತು ಪಿತೃಗಳ ಸಂಘಕ್ಕೂ ತೃಪ್ತಿಯನ್ನು ಉಂಟುಮಾಡುವ ಸ್ವಧಾ ಎಂಬ ನಿನ್ನ ಶಬ್ದರೂಪವನ್ನೂ ಸಹ ಧ್ಯಾನ ಮಾಡುತ್ತಿರುವರು. ॥೪೮॥

ಓ ದೇವಿಯೇ, ನೀನು ಲೋಕದಲ್ಲಿ ಎಲ್ಲಾ ಮನುಷ್ಯರಲ್ಲಿಯೂ ಮೇಧಾ, ಶಾಂತಿ ಈ ರೂಪದಿಂದ ಪ್ರಸಿದ್ಧಳಾಗಿರುವುದಲ್ಲದೆ, ಪದಾರ್ಥಜ್ಞಾನವನ್ನು ಸ್ಫುಟವಾಗಿ ಉಂಟುಮಾಡಿಕೊಡುವ ಬುದ್ಧಿಯಾಗಿರುತ್ತೀಯೆ. ಮೂರು ಲೋಕಗಳಲ್ಲಿಯೂ

**ಸರ್ವಂ ತ್ವಮೇವ ವಿಭವಂ ಭುವನತ್ರಯೇಽಸ್ಮಿನ್**
**ಕೃತ್ವಾ ದದಾಸಿ ಭಜತಾಂ ಕೃಪಯಾ ಸದೈವ ॥೪೯॥**

**ಏವಂ ಸ್ತುತಾ ಸುರೈರ್ದೇವೀ ಪ್ರತ್ಯಕ್ಷಾ ಸಾಽಭವತ್ತದಾ ।**
**ಚಾರುರೂಪಧರಾ ತನ್ವೀ ಸರ್ವಾಭರಣಭೂಷಿತಾ ॥೫೦॥**

**ಪಾಶಾಂಕುಶವರಾಭೀತಿ ಲಸದ್ಬಾಹು ಚತುಷ್ಟಯಾ ।**
**ರಣತ್ಕಿಂಕಿಣಿಕಾ ಜಾಲ ರಶನಾ ಬದ್ಧಸತ್ಕಟಿಃ ॥೫೧॥**

**ಕಲಕಂಠೀರವಾಕಾಂತಾ ಕ್ವಣತ್ಕಂಕಣ ನೂಪುರಾ ।**
**ಚಂದ್ರಖಂಡಸಮಾಬದ್ಧ ರತ್ನಮೌಲಿವಿರಾಜಿತಾ ॥೫೨॥**

---

ಕಂಡುಬರುವ ಮಹಿಮೆಯೆಲ್ಲವೂ ನೀನಾಗಿರುವುದರಿಂದ ನಿನ್ನನ್ನು ಸೇವೆ ಮಾಡುವ ಪ್ರಾಣಿಗಳಿಗೆ ದಯೆಯಿಂದ ನಿನ್ನ ಸ್ವರೂಪವಾಗಿರುವ ಆ ಮಹಿಮೆಯನ್ನು ತೋರಿಸಿ ಕೊಟ್ಟು, ಎಲ್ಲರನ್ನೂ ಕಾಪಾಡುತ್ತೀಯೆ. ಆದ್ದರಿಂದ ವೃತ್ರಾಸುರನ ಕಡೆಯಿಂದ ಕಷ್ಟವನ್ನು ಅನುಭವಿಸುತ್ತಿರುವ ನಮ್ಮನ್ನು ನೀನು ಕಾಪಾಡು. ॥೪೯॥

ವ್ಯಾಸಋಷಿಯು ಹೇಳಿದನು, ದೇವತೆಗಳು ಸ್ತುತಿಯನ್ನು ಹೀಗೆ ಮಾಡಿದ ನಂತರ, ಆ ದೇವಿಯು ಆ ದೇವತೆಗಳಿಗೆ ಅಗ ಪ್ರತ್ಯಕ್ಷಳಾದಳು. ದೇವತೆಗಳಿಗೆ ಪ್ರತ್ಯಕ್ಷಳಾದಾಗ, ದೇವಿಯು ಸುಂದರವಾದ ಆಕಾರವುಳ್ಳ ಶರೀರವನ್ನು ಧರಿಸಿ ಕೊಂಡು, ಕೃಶಾಂಗಿಯಾಗಿ, ಎಲ್ಲಾ ವಿಧವಾದ ಆಭರಣವನ್ನೂ ಧರಿಸಿಕೊಂಡು ಅಲಂಕೃತಳಾಗಿ ಸಂತೋಷದಿಂದಿದ್ದಳು. ಪಾಶ, ಅಂಕುಶ, ವರ, ಅಭಯ ಇವು ಗಳಿಂದ ಕೂಡಿದ ನಾಲ್ಕು ಕೈಗಳುಳ್ಳವಳಾಗಿ, ಧ್ವನಿಯನ್ನುಂಟುಮಾಡುವ ಚಿನ್ನದ ಚಿಕ್ಕಗೆಜ್ಜೆಗಳಿಂದ ಕೂಡಿದ ಚಿನ್ನದ ಡಾಬಿನಿಂದ ಕಟ್ಟಲ್ಪಟ್ಟ ನಡುವುಳ್ಳವಳಾಗಿ ಪ್ರಕಾಶಿಸುತ್ತಿದ್ದಳು. ॥೫೦-೫೧॥

ಮನೋಹರವಾದ ಕಂಠಧ್ವನಿಯುಳ್ಳ ನವಿಲಿನಂತೆ ಮನೋಹರಳಾಗಿಯೂ, ಸದ್ದು ಮಾಡುತ್ತಿರುವ ಕಂಕಣವೂ, ಕಾಲಂದಿಗೆಯೂ, ಇವುಗಳುಳ್ಳವಳಾಗಿಯೂ, ಚಂದ್ರನ ಕಲೆಯಿಂದ ಕೂಡಿರುವ ನವರತ್ನಮಯವಾದ ಕಿರೀಟವನ್ನು ತಲೆಯಲ್ಲಿ ಧರಿಸಿಕೊಂಡು ಪ್ರಕಾಶಿಸುತ್ತಿದ್ದಳು. ॥೫೨॥

**ಮಂದಸ್ಮಿತಾರವಿಂದಾಸ್ಯಾ ನೇತ್ರತ್ರಯವಿಭೂಷಿತಾ ।**
**ಪಾರಿಜಾತಪ್ರಸೂನಾಚ್ಛನಾಲವರ್ಣಸಮಪ್ರಭಾ ॥೫೩॥**

**ರಕ್ತಾಂಬರಪರೀಧಾನಾ ರಕ್ತಚಂದನಚರ್ಚಿತಾ ।**
**ಪ್ರಸಾದಸುಮುಖೀ ದೇವೀ ಕರುಣಾರಸಸಾಗರಾ ॥೫೪॥**

**ಸರ್ವಶೃಂಗಾರವೇಷಾಢ್ಯಾ ಸರ್ವದ್ವೈತಾರಣಿಃ ಪರಾ ।**
**ಸರ್ವಜ್ಞಾ ಸರ್ವಕರ್ತ್ರೀ ಚ ಸರ್ವಾಧಿಷ್ಠಾನರೂಪಿಣೀ ॥೫೫॥**

**ಸರ್ವವೇದಾಂತ ಸಂಸಿದ್ಧಾ ಸಚ್ಚಿದಾನಂದರೂಪಿಣೀ ।**
**ಪ್ರಣೇಮುಸ್ತಾಂ ಸಮಾಲೋಕ್ಯ ಸುರಾ ದೇವೀಂ ಪುರಸ್ಥಿತಾಂ॥೫೬॥**

---

ಮಂದಹಾಸದಿಂದ ಕೂಡಿದ ಕಮಲದಂತಿರುವ ಮುಖವುಳ್ಳವಳಾಗಿ ಮೂರು ಕಣ್ಣುಗಳಿಂದ ಪ್ರಕಾಶಿಸುತ್ತ, ಪಾರಿಜಾತದ ಹೂವಿನ ಮಧ್ಯದಲ್ಲಿರುವ ಕಾವಿನಂತಿರುವ ಕೆಂಪು ಬಣ್ಣವುಳ್ಳವಳಾಗಿ ಹೊಳೆಯುತ್ತಿದ್ದಳು. ||೫೩||

ಅಪಾರವಾದ ದಯೆಯಿಂದ ಕೂಡಿರುವ ಮನಸ್ಸುಳ್ಳವಳಾಗಿಯೂ, ಕೆಂಪಾದ ರೇಷ್ಮೆ-ಜರತಾರಿ ಸೀರೆಯನ್ನು ಧರಿಸಿರುವ ಕೆಂಪು ಗಂಧದಿಂದ ಲೇಪಿಸಲ್ಪಟ್ಟ ಶರೀರ ವುಳ್ಳವಳಾಗಿ, ತನ್ನನ್ನು ಸೇವೆಮಾಡಿದ ದೇವತೆಗಳಿಗೆ ದೇವಿಯು ಅನುಗ್ರಹವನ್ನು ಮಾಡಲು ಸುಮುಖಳಾಗಿದ್ದಳು. ||೫೪||

ತನ್ನ ವಾಸ್ತವಸ್ವರೂಪದಲ್ಲಿ ಎಲ್ಲಾ ವೇದಾಂತಗಳಿಂದಲೂ ಪ್ರತಿಪಾದ್ಯವಾದ ನಿತ್ಯವಾದ ಜ್ಞಾನರೂಪದಿಂದಲೂ ಆನಂದರೂಪದಿಂದಲೂ ಕೂಡಿ ಇರುವ, ಎಲ್ಲವನ್ನೂ ತಿಳಿದವಳಾಗಿಯೂ, ಎಲ್ಲವನ್ನೂ ನಿರ್ಮಿಸುವವಳಾಗಿಯೂ, ಎಲ್ಲಕ್ಕೂ ಆಧಾರ ಳಾಗಿಯೂ ಎಲ್ಲಾವಿಧವಾದ ಭೇದಪ್ರಪಂಚಕ್ಕೆಮೂಲಕಾರಣಳಾಗಿ ಇರುವ, ದೇವಿಯು ದೇವತೆಗಳಿಗೆ ಪ್ರತ್ಯಕ್ಷವಾದಾಗ ಎಲ್ಲಾ ವಿಧವಾದ ಶೃಂಗಾರವೇಷದಿಂದ ಕೂಡಿದ್ದಳು. ದೇವತೆಗಳು ತಮ್ಮ ಎದುರಿಗೆ ಪ್ರತ್ಯಕ್ಷವಾಗಿ ನಿಂತಿರುವ ದೇವಿಯನ್ನು ನೋಡಿ ನಮಸ್ಕಾರ ಮಾಡಿದರು. ಆಗ ದೇವಿಯು ನಮಸ್ಕರಿಸಿದ ಅವರನ್ನು ಕುರಿತು, ನಿಮಗೆ ಆಗಬೇಕಾಗಿರುವ ಕಾರ್ಯವು ಏನಿರುವುದು ? ಅದನ್ನು ನನಗೆ ಹೇಳಿ. ಎಂದು ಪ್ರಶ್ನೆ ಮಾಡಿದಳು. ||೫೫-೫೬||

ತಾನಾಹ ಪ್ರಣತಾನಂಬಾ ಕಿಂ ವಃ ಕಾರ್ಯಂ ಬ್ರುವಂತು ಮಾಂ ।

॥ ದೇವಾ ಊಚುಃ ॥

ಮೋಹಯೈನಂ ರಿಪುಂ ವೃತ್ರಂ ದೇವಾನಾಮತಿದುಃಖದಂ ॥೫೭॥

ಯಥಾ ವಿಶ್ವಸತೇ ದೇವಾಂಸ್ತಥಾ ಕುರು ವಿಮೋಹಿತಂ ।
ಆಯುಧೇ ಚ ಬಲಂ ದೇಹಿ ಹತಃ ಸ್ಯಾದ್ಯೇನ ವಾ ರಿಪುಃ ॥೫೮॥

॥ ವ್ಯಾಸ ಉವಾಚ ॥

ತಥೇತ್ಯುಕ್ತ್ವಾ ಭಗವತೀ ತತ್ರೈವಾಂತರಧೀಯತ ।
ಸ್ವಾನಿ ಸ್ವಾನಿ ನಿಕೇತಾನಿ ಜಗ್ಮುರ್ದೇವಾ ಮುದಾನ್ವಿತಾಃ ॥೫೯॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ
ಪಂಚಮೋಽಧ್ಯಾಯಃ.

---

ದೇವತೆಗಳು ಹೇಳಿದರು—ಓ ದೇವಿಯೇ, ದೇವತೆಗಳಗೆ ಬಹಳ ಮಟ್ಟಿನ ದುಃಖವನ್ನು ಕೊಟ್ಟಿರುವ ವೃತ್ರಾಸುರನು ದೇವತೆಗಳೊಡನೆ ಸಂಧಿಯ ಪ್ರಯತ್ನಕ್ಕೆ ಒಲಿದು ಬರುವಂತೆಯೂ ದೇವತೆಗಳಲ್ಲಿ ವಿಶ್ವಾಸದಿಂದಿರುವ ಹಾಗೂ ನೀನು ಅವನನ್ನು ಮೋಹಗೊಳಿಸು. ಮತ್ತು ಶತ್ರುವಾದ ಈ ವೃತ್ರಾಸುರನು ಎಂತಹ ನಮ್ಮ ಆಯುಧಗಳಿಂದ ನಾಶವನ್ನು ಹೊಂದುವನೋ ಆ ಆಯುಧಗಳಿಗೆ ಅಂತಹ ಬಲವನ್ನು ಕೊಡು. ಎಂದು ಕೇಳಿಕೊಂಡರು. ॥೫೮॥

ವ್ಯಾಸಋಷಿಯು ಹೇಳಿದನು—ಹಾಗೆಯೇ ಆಗಲೆಂದು ಷಡ್ಗುಣೈಶ್ವರ್ಯ ಸಂಪನ್ನಳಾದ ದೇವಿಯು ಹೇಳಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದಳು. ದೇವತೆಗಳು ತಮ್ಮ ಇಷ್ಟದಂತೆ ವರವನ್ನು ಪಡೆದು ಸಂತೋಷದಿಂದ ತಮ್ಮ ತಮ್ಮ ಮನೆಗಳಿಗೆ ಬಂದು ಸೇರಿದರು. ॥೫೯॥

ಇಲ್ಲಿಗೆ ಮಹಾಪುರಾಣವಾದ ದೇವೀಭಾಗವತದ ಆರನೆಯ ಸ್ಕಂಧದಲ್ಲಿ
ಐದನೆಯ ಅಧ್ಯಾಯವು ಮುಗಿದಿರುವುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಷಷ್ಠಃ ಸ್ಕಂಧಃ

### || ಷಷ್ಠೋಽಧ್ಯಾಯಃ ||

### ಆರನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಏವಂ ಪ್ರಾಪ್ತವರಾ ದೇವಾ ಋಷಯಶ್ಚ ತಪೋಧನಾಃ ।**
**ಜಗ್ಮುಸ್ಸರ್ವೇ ಚ ಸಂಮಂತ್ರ್ಯ ವೃತ್ರಸ್ಯಾಶ್ರಮ ಮುತ್ತಮಂ ॥೧॥**

**ದದೃಶುಸ್ತತ್ರ ತಂ ವೃತ್ರಂ ಜ್ವಲಂತಮಿವ ತೇಜಸಾ ।**
**ಭಕ್ಷ್ಯಂತಮಿವ ಲೋಕಾಂಸ್ತ್ರೀನ್ ಗ್ರಸಂತಮಿವ ಚಾಮರಾನ್ ॥೨॥**
**ಋಷಯೋಽಥ ತತೋಽಭ್ಯೇತ್ಯ ವೃತ್ರಮೂಚುಃ ಪ್ರಿಯಂ ವಚಃ ।**

---

ವ್ಯಾಸಋಷಿಯು ಹೇಳಿದನು—ದೇವತೆಗಳು ದೇವಿಯನ್ನು ಸಂತೋಷಪಡಿಸಿ ಹೀಗೆ ವರವನ್ನು ಪಡೆದನಂತರ ತಪೋಧನರಾದ ಋಷಿಗಳೂ, ದೇವತೆಗಳೂ ಈ ಎಲ್ಲರೂ ಕೂಡಿಕೊಂಡು ಆಲೋಚನೆಮಾಡಿ ಶ್ರೇಷ್ಠವಾದ ವೃತ್ರಾಸುರನ ಆಶ್ರಮಕ್ಕೆ ಬಂದರು. ||೧||

ಮೊದಲು ವಿಷ್ಣುವು ವೃತ್ರನ ಸಂಗಡ ಕಪಟ ಸ್ನೇಹವನ್ನು ಮಾಡಿಕೊಂಡು ಅನಂತರ ಅವನನ್ನು ಕೊಲ್ಲಬೇಕೆಂದು ಹೇಳಿರುವ ಪ್ರಕಾರ ಋಷಿಗಳು ವೃತ್ರಾಸುರನ ಹತ್ತಿರಕ್ಕೆ ಬಂದು ಸಾಮೋಪಾಯವನ್ನು ಉಪಯೋಗಿಸುವರು. ಋಷಿಗಳು ವೃತ್ರಾಸುರನ ಆಶ್ರಮಕ್ಕೆ ಬಂದು ಅಲ್ಲಿ ಮೂರು ಲೋಕಗಳನ್ನೂ ಸುಡುವಂತೆಯೂ, ದೇವತೆಗಳನ್ನು ನುಂಗುವಂತೆಯೂ, ತೇಜಸ್ಸಿನಿಂದ ಉರಿಯುತ್ತಿರುವಂತೆಯೂ ತಪೋಮಹಿಮೆಯಿಂದ ಕೂಡಿ ಇರುವ ವೃತ್ರಾಸುರನನ್ನು ನೋಡಿ, ಅವನ ಹತ್ತಿರಕ್ಕೆ ಬಂದು, ಮೃದುವಾದ ಮಾತುಗಳನ್ನು ಹೀಗೆ ಹೇಳಿದರು. ||೨||

ದೇವಕಾರ್ಯಾರ್ಥಸಿದ್ಧ್ಯರ್ಥಂ ಸಾಮಯುಕ್ತಂ ರಸಾತ್ಮಕಂ ॥೩॥

॥ ಋಷಯ ಊಚುಃ ॥

ವೃತ್ರ ವೃತ್ರ ಮಹಾಭಾಗ ಸರ್ವಲೋಕ ಭಯಂಕರ ।
ವ್ಯಾಪ್ತಂ ತ್ವಯೈತತ್ಸಕಲಂ ಬ್ರಹ್ಮಾಂಡಮಖಿಲಂ ಕಿಲ ।
ಶಕ್ರೇಣ ತವ ವೈರಂ ಯತ್ ತತ್ತು ಸೌಖ್ಯವಿಘಾತಕಂ ॥೪॥

ಯುವಯೋರ್ದುಃಖದಂ ಕಾಮಚಿಂತಾ ವೃದ್ಧಿಕರಂ ಪರಂ ।
ನ ತ್ವಂ ಸ್ವಪಿಷಿ ಸಂತುಷ್ಟೋ ನ ಚಾಪಿ ಮಘವಾ ತಥಾ ॥೫॥

ಸುಖಂ ಸ್ವಪಿತಿ ಚಿಂತಾರ್ತೋ ದ್ವಯೋರ್ಯದ್ವೈರಿಜಂ ಭಯಂ ।
ಯುವಯೋರ್ಯುದ್ಧ್ಯತಃ ಕಾಲೋ ವ್ಯತೀತಸ್ತು ಮಹಾನಿಹ ॥೬॥

---

ದೇವಕಾರ್ಯವು ಈಡೇರಲು ಋಷಿಗಳು ವೃತ್ರಾಸುರನ ಸಂಗಡ ಹೇಳಿದ ಮಾತುಗಳು ಸಾಮೋಪಾಯದಿಂದ ಕೂಡಿದ್ದಾಗಿ, ಕೇಳಲು ಹಿತಕರವಾಗಿದ್ದುವು. ಋಷಿಗಳು ಹೇಳಿದರು, ಎಲೈ ಅದೃಷ್ಟಶಾಲಿಯಾದ ವೃತ್ರಾಸುರನೇ, ನಿನ್ನನ್ನು ನೋಡಿದ ಕೂಡಲೇ, ಲೋಕವೆಲ್ಲವೂ ಭಯಪಡುವುದು. ನೀನು ಈ ಸಮಸ್ತವಾದ ಬ್ರಹ್ಮಾಂಡವೆಲ್ಲವನ್ನೂ ತಪೋಮಹಿಮೆಯಿಂದ ಆಕ್ರಮಿಸಿಕೊಂಡಿರುತ್ತೀಯೆ. ಆದರೂ ನಿನಗೂ ಇಂದ್ರನಿಗೂ ಇರುವ ವೈರವು ಯಾವುದುಂಟೋ, ಅದು ಎಲ್ಲರ ಸೌಖ್ಯವನ್ನೂ ನಾಶಪಡಿಸುವುದು. ॥೩-೪॥

ಏಕೆಂದರೆ ಈ ವೈರವು ನಿಮ್ಮಿಬ್ಬರಿಗೂ ದುಃಖವನ್ನುಂಟುಮಾಡುತ್ತಲಿದೆ. ಆಶೆಯನ್ನೂ ಮತ್ತು ಮನಸ್ಸಿಗೆ ಹೆಚ್ಚಾದ ಯೋಚನೆಯನ್ನೂ ಸಹ ಹೆಚ್ಚಿಸುವುದಾಗಿರುವುದು. ನೀನು ಸಂತೋಷದಿಂದ ನಿದ್ದೆಮಾಡುತ್ತಾ ಮಲಗಿರುವುದಿಲ್ಲ. ನಿನ್ನಂತೆಯೇ ಇಂದ್ರನೂ ನಿದ್ರೆಮಾಡುವಂತಿಲ್ಲ. ॥೫॥

ಇಂದ್ರನೂ ಸಹ ದಿನೇ ದಿನೇ ವೈರವನ್ನು ಬೆಳಸುತ್ತಿರುವ ಕಾರಣ, ನಿಮ್ಮಿಬ್ಬರಿಗೂ ವೈರದಿಂದ ಉಂಟಾದ ಭಯವು ಹೆಚ್ಚುತ್ತಾ, ಇಂದ್ರನೂ ನೀನೂ ಸಹ ಆಲೋಚನೆಯನ್ನು ಮಾಡುವವರಾಗಿ ಸುಖದಿಂದ ನಿದ್ದೆಯನ್ನು ಮಾಡುವುದಿಲ್ಲ. ನೀವಿಬ್ಬರೂ ಯುದ್ಧಮಾಡುವುದರಿಂದ ಬಹಳ ಕಾಲವು ಕಳೆಯುತ್ತಿರುವುದು. ಎಂದರೆ ನಿಮ್ಮಿಬ್ಬರಿಗೂ ಬಹಳ ಕಾಲದಿಂದ ಯುದ್ಧವು ನಡೆಯುತ್ತಿರುವುದು. ॥೬॥

ಪೀಡ್ಯಂತೇ ಚ ಪ್ರಜಾಸ್ಸರ್ವಾಃ ಸದೇವಾಸುರಮಾನವಾಃ ।
ಸಂಸಾರೇಽತ್ರ ಸುಖಂ ಗ್ರಾಹ್ಯಂ ದುಃಖಂ ಹೇಯಮಿತಿ ಸ್ಥಿತಿಃ ॥೭॥

ನ ಸುಖಂ ಕೃತವೈರಸ್ಯ ಭವತೀತಿ ವಿನಿರ್ಣಯಃ ।
ಸಂಗ್ರಾಮ ರಸಿಕಾಶ್ಶೂರಾಃ ಪ್ರಶಂಸಂತಿ ನ ಪಂಡಿತಾಃ ॥೮॥

ಯುದ್ಧಂ ಶೃಂಗಾರ ಚತುರಾ ಇಂದ್ರಿಯಾರ್ಥವಿಘಾತಕಂ ।
ಪುಷ್ಪೈರಪಿ ನ ಯೋದ್ಧವ್ಯಂ ಕಿಂ ಪುನರ್ನಿರ್ಮಿತೈಶ್ಶರೈಃ ॥೯॥

ಯುದ್ಧೇ ವಿಜಯಸಂದೇಹೋ ನಿಶ್ಚಯಂ ಬಾಣತಾಡನಂ ।
ದೈವಾಧೀನಮಿದಂ ವಿಶ್ವಂ ತಥಾ ಜಯಪರಾಜಯೌ ॥೧೦॥
ದೈವಾಧೀನಾವಿತಿ ಜ್ಞಾತ್ವಾ ನ ಯೋದ್ಧವ್ಯಂ ಕದಾಚನ ।

---

ನೀವಿಬ್ಬರೂ ಯುದ್ಧಮಾಡುತ್ತಿರುವಾಗ, ದೇವತೆಗಳೂ, ಅಸುರರೂ, ಮನುಷ್ಯರೂ ಇವರುಗಳಿಂದ ಕೂಡಿರುವ ಎಲ್ಲ ಪ್ರಜೆಗಳೂ ತೊಂದರೆಗೆ ಒಳಗಾಗಿರುವರು. ಈ ಸಂಸಾರದಲ್ಲಿ ಸುಖವನ್ನು ಹೊಂದಬೇಕು. ದುಃಖವನ್ನು ಬಿಡಬೇಕು ಮತ್ತು ನಾಶಗೊಳಿಸಬೇಕು ಎಂದು ನಿಯತವಾಗಿರುವುದು. ॥೭॥

ಚೆನ್ನಾಗಿ ವೈರವನ್ನು ಬೆಳಸಿದಂತೆಲ್ಲ ಸುಖವಿರುವುದಿಲ್ಲವೆಂಬುದು ನಿಶ್ಚಯವು. ಯುದ್ಧ ಮಾಡುವುದರಲ್ಲಿ ನಿಪುಣರಾದವರು ಯುದ್ಧವನ್ನು ಉತ್ತಮವೆಂತ ಹೊಗಳುವರು. ಆದರೆ ತಿಳಿವಳಿಕೆಯುಳ್ಳವರಾದರೋ ಯುದ್ಧದಿಂದ ಜನಗಳಿಗೆ ತೊಂದರೆಯು ಹೆಚ್ಚಾಗುವುದರಿಂದ ಯುದ್ಧವನ್ನು ಹೊಗಳುವುದಿಲ್ಲ. ॥೮॥

ಶೃಂಗಾರರಸಾನುಭವ ಮಾಡುವರು ಯುದ್ಧವು ಇಂದ್ರಿಯಗಳ ಸುಖವನ್ನು ನಾಶಪಡಿಸುವುದು. ಹೂವುಗಳಿಂದಲೂ ಹೊಡೆದಾಡಬಾರದು. ಹೀಗಿರುವಲ್ಲಿ ನಾವೇ ನಿರ್ಮಿಸಿದ ಹರಿತವಾದ ಬಾಣಗಳಿಂದ ಯುದ್ಧವನ್ನು ಖಂಡಿತವಾಗಿಯೂ ಮಾಡಲೇ ಕೂಡದು. ಎಂದು ಹೇಳುವರು. ॥೯॥

ಯುದ್ಧದಲ್ಲಿ ಜಯವಾಗುವುದು ಸಂದೇಹವಾಗಿರುವುದು. ಬಾಣದಿಂದ ಏಟುಗಳು ಮಾತ್ರ ನಿಶ್ಚಯವಾಗಿರುತ್ತವೆ. ಈ ಪ್ರಪಂಚವೆಲ್ಲವೂ ದೇವರ ಅಧೀನದಲ್ಲಿ ನಡೆಯುವಾಗ ಯುದ್ಧದ ವಿಷಯವಾದ ಜಯವೂ ಮತ್ತು ಸೋಲೂ ಇವುಗಳೂ ದೇವರ ಅಧೀನಕ್ಕೆ ಒಳಪಟ್ಟವುಗಳೆಂದು ತಿಳಿದು ಯಾವಾಗಲೂ ಯುದ್ಧವನ್ನು ಮಾಡಬಾರದು. ॥೧೦॥

ಕಾಲೇಽಥ ಭೋಜನಂ ಸ್ನಾನಂ ಶಯ್ಯಾಯಾಂ ಶಯನಂ ತಥಾ ॥೧೧॥
ಪರಿಚರ್ಯಾಪರಾ ಭಾರ್ಯಾ ಸಂಸಾರೇ ಸುಖಸಾಧನಂ ।
ಕಿಂ ಸುಖಂ ಯುದ್ಧ್ಯತಃ ಸಂಖ್ಯೇ ಬಾಣವೃಷ್ಟಿ ಭಯಂಕರೇ ॥೧೨॥

ಖಡ್ಗಪಾತಾದಿ ರೌದ್ರೇ ಚ ತಥಾರಾತಿ ಸುಖಪ್ರದೇ ।
ಸಂಗ್ರಾಮೇ ಮರಣಾತ್ ಸ್ವರ್ಗಸುಖಪ್ರಾಪ್ತಿರಿತಿ ಸ್ಫುಟಂ ॥೧೩॥

ಪ್ರಲೋಭನಪರಂ ವಾಕ್ಯಂ ನೋದನಾರ್ಥಂ ನಿರರ್ಥಕಂ ।
ಛಿತ್ವಾ ದೇಹಂ ವ್ಯಥಾಂ ಪ್ರಾಪ್ಯ ಶೃಗಾಲ ಕರಟಾದಿಭಿಃ ॥೧೪॥

ಪಶ್ಚಾತ್ ಸ್ವರ್ಗಸುಖಾವಾಪ್ತಿಂ ಕೋಽವಾ ವಾಂಛತಿ ಮಂದಧೀಃ ।
ಸಖ್ಯಂ ಭವತು ತೇ ವೃತ್ರ ಶಕ್ರೇಣ ಸಹ ನಿತ್ಯದಾ ॥೧೫॥

---

ಆಯಾಯ ಕಾಲಕ್ಕೆ ಸರಿಯಾಗಿ ಸ್ನಾನಮಾಡಿ ಭೋಜನ ಮಾಡುವುದು. ಪ್ರತಿದಿನವೂ ನೆಮ್ಮದಿಯಾಗಿ ಹಾಸಿಗೆಯಲ್ಲಿ ಮಲಗುವುದು, ತನ್ನ ಹೆಂಡಿತಿಯಿಂದ ತಾನು ಶುಶ್ರೂಷೆಯನ್ನು ಮಾಡಿಸಿಕೊಳ್ಳುವುದು, ಇವುಗಳೆಲ್ಲವೂ ಸಂಸಾರದಲ್ಲಿ ಸುಖಕರವಾದುವುಗಳು. ಯುದ್ಧಮಾಡುವುದು ಸುಖಕರವಲ್ಲವು. ॥೧೧॥

ಬಾಣಗಳನ್ನು ಮಳೆಯ ಧಾರೆಗಳಂತೆ ಭಯಂಕರವಾಗಿ ಸುರಿಸುತ್ತಿರುವ, ಕತ್ತಿಯ ಏಟೇ ಮೊದಲಾದುವುಗಳಿಂದ ಭಯವನ್ನುಂಟುಮಾಡುವ, ಶತ್ರುಗಳಿಗೆ ಸುಖಕರವಾದ ಯುದ್ಧದಲ್ಲಿ ಯುದ್ಧಮಾಡುವವನಿಗೆ ತಾನೇ ಏನು ಸುಖವು. ॥೧೨॥

ಯುದ್ಧದಲ್ಲಿ ಸಾಯುವುದರಿಂದ ಸ್ವರ್ಗಸುಖವು ಉಂಟಾಗುವುದೆಂತ ಹೇಳುವ ಸ್ಪಷ್ಟಾರ್ಥವುಳ್ಳ ವಾಕ್ಯವು ಜನಗಳಿಗೆ ತುಂಬಾ ಆಸೆಯನ್ನು ಹುಟ್ಟಿಸುವ ವಾಕ್ಯವು. ಮತ್ತು ಯುದ್ಧಕ್ಕಾಗಿ ಜನಗಳನ್ನು ಪ್ರೇರಿಸುವ ವಾಕ್ಯವು. ಅಷ್ಟೇ ಹೊರತು ಈ ವಾಕ್ಯವು ನಿಜವಾಗಿಯೂ ಸ್ವರ್ಗವು ಉಂಟೆಂದು ಹೇಳುವುದಿಲ್ಲ. ತಕ್ಕ ಪ್ರಯೋಜನ ವಿಲ್ಲದ ಮಾತನ್ನು ಹೇಳುವುದು ! ॥೧೩॥

ಬಾಣಗಳಿಂದ ದೇಹವನ್ನು ಚೂರು ಚೂರು ಮಾಡಿಕೊಂಡು, ನರಿ, ಆನೆ ಇವೇ ಮೊದಲಾದವುಗಳಿಂದ ಸಂಕಟವನ್ನು ಅನುಭವಿಸಿದನಂತರ, ಮರಣವನ್ನು ಹೊಂದಿದ ಮೇಲೆ, ಉಂಟಾಗಬಹುದಾದ ಸ್ವರ್ಗಸುಖದ ಹೊಂದುವಿಕೆಯನ್ನು ಯಾವ ದಡ್ಡನು ತಾನೇ ಆಶಿಸುವನು? ಆದ್ದರಿಂದ ನಿನಗೂ ವೃತ್ರಾಸುರನಿಗೂ ಸಹ ಯಾವಾಗಲೂ ಸ್ನೇಹವು ಉಂಟಾಗಿರಲಿ ! ॥೧೫॥

ಅವಾಪ್ಸ್ಯಸಿ ಸುಖಂ ತ್ವಂ ಚ ಶಕ್ರಶ್ಚಾಪಿ ನಿರಂತರಂ ।
ವಯಂ ಚ ತಾಪಸಾ ಸ್ಸರ್ವೇ ಗಂಧರ್ವಾಶ್ಚ ನಿಜಾಶ್ರಮೇ ॥೧೬॥

ಸುಖವಾಸಂ ಗಮಿಷ್ಯಾಮಃ ಶಾಂತೇವೈರೇಽಥುನೈವ ವಾಂ ।
ಸಂಗ್ರಾಮೇ ಯುವಯೋರ್ಧೀರ ವರ್ತಮಾನೇ ದಿವಾನಿಶಂ ॥೧೭॥

ಪೀಡ್ಯಂತೇ ಮುನಯಸ್ಸರ್ವೇ ಗಂಧರ್ವಾಃ ಕಿನ್ನರಾ ನರಾಃ ।
ಸರ್ವೇಷಾಂ ಶಾಂತಿಕಾಮಾನಾಂ ಸಖ್ಯಮಿಚ್ಛಾಮಹೇ ವಯಂ ॥೧೮॥

ಮುನಯಸ್ತ್ವಂಚ ಶಕ್ರಶ್ಚ ಪ್ರಾಪ್ನುವಂತು ಸುಖಂ ಕಿಲ ।
ಮಧ್ಯಸ್ಥಾಶ್ಚ ವಯಂ ವೃತ್ರ ಯುವಯೋ ಸ್ಸಖ್ಯಕಾರಣೇ ॥೧೯॥

ಶಪಥಂ ಕಾರಯಿತ್ವಾತ್ರ ಯೋಜಯಾವೋ ಮಿಥಃ ಪ್ರಿಯಂ ।
ಶಕ್ರಸ್ತು ಶಪಥಾನ್ ಕೃತ್ವಾ ಯಥೋಕ್ತಾಂಶ್ಚ ತವಾಗ್ರತಃ ॥೨೦॥

---

ನೀನೂ ಕೂಡ ಸುಖವನ್ನು ಹೊಂದು. ಇಂದ್ರನೂ ಯಾವಾಗಲೂ ಸುಖವಾಗಿರಲಿ. ಗಂಧರ್ವರೂ ಮತ್ತು ತಪಸ್ಸನ್ನು ಮಾಡಿಕೊಂಡಿರುವ ಋಷಿಗಳಾದ ನಾವೆಲ್ಲರೂ ನಮ್ಮ ನಮ್ಮ ಆಶ್ರಮದಲ್ಲಿ ಸುಖದಿಂದ ಇರುವೆವು. ನಿಮ್ಮಿಬ್ಬರ ವೈರವು ಶಾಂತವಾದನಂತರ ನಮ್ಮೆಲ್ಲರಿಗೂ ಸುಖವೂ ಸಂತೋಷವೂ ಉಂಟಾಗುವುದು. ||೧೬||

ಎಲೈ ಧೀರನಾದ ವೃತ್ರಾಸುರನೇ, ನಿಮ್ಮಿಬ್ಬರಿಗೂ ಯುದ್ಧವು ಹಗಲೂ ರಾತ್ರಿಯೂ ಸಹ ನಡೆಯುತ್ತಾ ಬಂದರೆ, ಮುನಿಗಳೂ, ಗಂಧರ್ವರೂ, ಕಿನ್ನರರೂ, ಮನುಷ್ಯರೂ, ಇವರೆಲ್ಲರೂ ಸಹ ತೊಂದರೆಯನ್ನು ಅನುಭವಿಸಬೇಕಾಗಿರುತ್ತದೆ. ನಾವೆಲ್ಲರೂ ಉಪಶಾಂತಿಸುಖವನ್ನು ಅಪೇಕ್ಷಿಸುವವರಾಗಿ ಸಂತೋಷವನ್ನುಂಟುಮಾಡುವ ನಿಮ್ಮಿಬ್ಬರ ಸ್ನೇಹವನ್ನು ಅಪೇಕ್ಷಿಸುತ್ತಿರುವೆವು. ||೧೮||

ಮುನಿಗಳೂ, ನೀನೂ, ಮತ್ತು ಇಂದ್ರನೂ ಎಲ್ಲರೂ ಸುಖವನ್ನು ಹೊಂದಲಿ. ಎಲೈ ವೃತ್ರಾಸುರನೇ, ನಾವುಗಳು ನಿಮ್ಮಿಬ್ಬರ ಸ್ನೇಹವು ಉಂಟಾಗುವ ನಿಮಿತ್ತವಾಗಿ ಇಲ್ಲಿಗೆ ಬಂದಿರುತ್ತೇವೆ. ಆದ್ದರಿಂದ ಮಧ್ಯಸ್ಥಕ್ಕಾಗಿ ಬಂದು ಮಾತನಾಡುವ ನಮ್ಮ ಮಾತಿಗೆ ಬೆಲೆಯನ್ನು ಕೊಟ್ಟು ನೀವುಗಳು ಸ್ನೇಹವನ್ನು ಹೊಂದಿರಿ. ||೧೯||

ನಿಮ್ಮಿಬ್ಬರಿಗೂ ಸ್ನೇಹದ ವಿಷಯದಲ್ಲಿ ತಕ್ಕದ್ದಾದ ಪ್ರತಿಜ್ಞೆಗಳನ್ನು ಇಂದ್ರನಿಂದ ಮಾಡಿಸಿ, ನಿಮ್ಮಿಬ್ಬರಿಗೂ ಹಿತವಾಗುವಂತೆ, ನಿಮ್ಮಿಬ್ಬರನ್ನೂ ಸ್ನೇಹದಿಂದ

ಚಿತ್ತಂ ತೇ ಪ್ರೀತಿಸಂಯುಕ್ತಂ ಕರಿಷ್ಯತಿ ತು ಸಾಂಪ್ರತಂ ।
ಸತ್ಯಾಧಾರಾ ಧರಾ ನೂನಂ ಸತ್ಯೇನ ಚ ದಿವಾಕರಃ ॥೨೧॥

ತಪತ್ಯಯಂ ಯಥಾಕಾಲಂ ವಾಯುಸ್ಸತ್ಯೇನ ವಾತ್ಯಥ ।
ಉದನ್ವಾನಪಿ ಮರ್ಯಾದಾಂ ಸತ್ಯೇನೈವ ನ ಮುಂಚತಿ ॥೨೨॥

ತಸ್ಮಾತ್ ಸತ್ಯೇನ ಸಖ್ಯಂ ವಾ ಭವತ್ವದ್ಯ ಯಥಾ ಸುಖಂ ।
ಏಕತ್ರ ಶಯನಂ ಕ್ರೀಡಾ ಜಲಕೇಳಿಃ ಸುಖಾಸನಂ ॥೨೩॥

ಯುವಾಭ್ಯಾಂ ಸರ್ವಥಾ ಕಾರ್ಯಂ ಕರ್ತವ್ಯಂ ಸತ್ಯಮೇವ ಚ ।

॥ ವ್ಯಾಸ ಉವಾಚ ॥

ಮಹರ್ಷಿವಚನಂ ಶ್ರುತ್ವಾ ತಾನುವಾಚ ಮಹಾಮತಿಃ ॥೨೪॥

ಅವಶ್ಯಂ ಭಗವಂತೋ ಮೇ ಮಾನನೀಯಾಸ್ತಪಸ್ವಿನಃ ।
ಭವಂತೋ ಮುನಯಃ ಕ್ವಾಪಿ ನ ಮಿಥ್ಯಾವಾದಿನೋ ಭೃಶಂ ॥೨೫॥

---

ಸೇರಿಸುತ್ತೇವೆ. ಇಂದ್ರನೂ ಕೂಡ ನಿನ್ನ ಎದುರಿಗೆ ಶಾಸ್ತ್ರಗಳಲ್ಲಿ ಹೇಳಿರುವ ಕ್ರಮದಂತೆ ಸ್ನೇಹವು ದಿನೇ ದಿನೇ ಹೆಚ್ಚುತ್ತಾ ಬಂದು ಇರುವುದಕ್ಕೆ ತಕ್ಕದ್ದಾದ ಪ್ರಮಾಣಗಳನ್ನು ಮಾಡಿ, ಈ ಕ್ಷಣದಲ್ಲಿ ನಿನ್ನ ಮನಸ್ಸನ್ನು ಸಂತೋಷದಿಂದ ಕೂಡಿರುವುದಕ್ಕೆ ತಕ್ಕುದಾದ ಕೆಲಸಗಳನ್ನು ಮಾಡುವನು. ॥೨೦॥

ಭೂಮಿಯು ನಿಜವಾಗಿಯೂ ಸತ್ಯವೆಂಬ ಒಂದು ವಿಧವಾದ ಕಟ್ಟಿನಲ್ಲಿ ನಿಂತಿರುವುದು. ಸೂರ್ಯನೂ ಸಹ ಸತ್ಯದಿಂದಲೇ ಪ್ರಪಂಚದಲ್ಲಿ ಬೆಳಗುತ್ತಿರುವನು. ವಾಯುವೂ ತನ್ನ ಕಾಲಕ್ಕನುಗುಣವಾಗಿ ತಾನು ಬೀಸುವುದು. ಸಮುದ್ರವೂ ಕೂಡ ಸತ್ಯಕ್ಕೆ ಕಟ್ಟು ಬಿದ್ದು ತನ್ನ ಎಲ್ಲೆಯನ್ನು ಮೀರುವುದಿಲ್ಲ. ಆದ್ದರಿಂದ ಈಗ ನಿಮ್ಮಿಬ್ಬರಿಗೂ ಸತ್ಯದಿಂದ ನಿಮ್ಮ ಸುಖಕ್ಕನುಗುಣವಾಗಿ ಸ್ನೇಹವು ಉಂಟಾಗಲಿ.॥೨೧-೨೨॥

ನೀವಿಬ್ಬರೂ ಸತ್ಯಕ್ಕನುಗುಣವಾಗಿ ಪ್ರತಿಜ್ಞೆಯನ್ನು ಮಾಡಿಕೊಂಡು ಸ್ನೇಹವನ್ನು ಹೊಂದಿ ಒಂದೇ ಕಡೆಯಲ್ಲಿ ಶಯನ, ಆಹಾರ ವಿಹಾರ, ಜಲಕೇಳಿ, ಸುಖದಿಂದ ಇರುವುದು ಇವುಗಳನ್ನು ಆಚರಿಸಬೇಕಾಗಿ ನಾವುಗಳು ಕೋರುತ್ತೇವೆ. ॥೨೩॥

ವ್ಯಾಸಋಷಿಯು ಹೇಳಿದನು. ಬಹಳ ಬುದ್ಧಿಶಾಲಿಯಾದ ವೃತ್ರಾಸುರನು ಮಹರ್ಷಿಗಳ ಮಾತನ್ನು ಕೇಳಿ ಅವರ ಸಂಗಡ ಹೇಳಿದನು. ತಪಸ್ಸನ್ನು ಮಾಡು

ಸದಾಚಾರಾಃ ಸುಶಾಂತಾಶ್ಚ ನವಿದುಶ್ಛಲ ಕಾರಣಂ ।
ಕೃತವ್ವೈರೇ ಶಠೇ ಸ್ತಬ್ಧೇ ಕಾಮುಕೇ ಚ ಗತತ್ರಿಷಿ ॥೨೬॥

ನಿರ್ಲಜ್ಜೇ ನೈವ ಕರ್ತವ್ಯಂ ಸಖ್ಯಂ ಮತಿಮತಾ ಸದಾ।
ನಿರ್ಲಜ್ಜೋಽಯಂ ದುರಾಚಾರೋ ಬ್ರಹ್ಮಹಾ ಲಂಪಟಶ್ಶಠಃ ॥೨೭॥

ನ ವಿಶ್ವಾಸಸ್ತು ಕರ್ತವ್ಯಃ ಸರ್ವಥೈವೇದೃಶೇ ಜನೇ ।
ಭವಂತೋ ನಿಪುಣಾಸ್ಸರ್ವೇ ನ ದ್ರೋಹಮತಯಸ್ಸದಾ ॥೨೮॥

॥ ಮುನಯ ಊಚುಃ ॥

ಅನಭಿಜ್ಞಾಸ್ತು ಶಾಂತತ್ವಾಚಿತ್ತಾನಾ ಮತಿವಾದಿನಾಂ ।
ಜಂತುಃ ಕೃತಸ್ಯ ಭೋಕ್ತಾ ವೈ ಶುಭಸ್ಯತ್ವಶುಭಸ್ಯ ಚ ॥೨೯॥

---

ತ್ತಿರುವ ನೀವೆಲ್ಲರೂ ನನಗೆ ಪೂಜೆಗೆ ಯೋಗ್ಯರೇ ಹೌದು. ಇದು ಖಂಡಿತವು. ನೀವೆಲ್ಲರೂ ಋಷಿಗಳಾಗಿದ್ದುಕೊಂಡು ಎಲ್ಲಿಯೂ ಯಾವಾಗಲೂ ಸುಳ್ಳನ್ನು ಹೇಳಿದವರಲ್ಲ. ॥೨೪-೨೫॥

ಅಲ್ಲದೆ ನೀವು ಯಾವಾಗಲೂ ಒಳ್ಳೆಯ ಆಚಾರಶೀಲರು. ಉಪಶಾಂತರಾಗಿರುವವರು. ಆದ್ದರಿಂದ ನಿಮಗೆ ಮೋಸದ ಕಾರಣಗಳೂ ಕಾರ್ಯಗಳೂ ಸಹ ಗೊತ್ತಿಲ್ಲವು. ಯಾವಾಗಲೂ ದ್ವೇಷವನ್ನು ಸಾಧಿಸುವವನ ಸಂಗಡ, ದುಷ್ಟನ ಸಂಗಡ, ಬುದ್ಧಿಯಿಲ್ಲದವನ ಸಂಗಡ, ಅತಿ ಕಾಮವುಳ್ಳವನ ಸಂಗಡ, ತೇಜಸ್ಸನ್ನು ಕೆಡಿಸಿಕೊಂಡಿರುವವನ ಸಂಗಡ ಮತ್ತು ನಾಚಿಕೆಯಿಲ್ಲದವನ ಸಂಗಡ ಬುದ್ಧಿವಂತನು ಸ್ನೇಹವನ್ನು ಮಾಡಬಾರದು. ॥೨೬॥

ಈ ಇಂದ್ರನು ನಾಚಿಕೆಯಿಲ್ಲದವನು, ಕೆಟ್ಟ ನಡತೆಯವನು, ಬ್ರಹ್ಮಹತ್ಯೆಯನ್ನು ಮಾಡಿದವನು, ಅತಿ ಕಾಮುಕನು ಮತ್ತು ದುಷ್ಟನೂ ಆಗಿರುವನು. ಇಂತಹ ಜನರ ಸಂಗಡ ಯಾವಾಗಲೂ ಯಾವ ಪ್ರಕಾರದಿಂದಲೂ ವಿಶ್ವಾಸವನ್ನು ಮಾಡಬಾರದು. ನೀವೆಲ್ಲರೂ ಬುದ್ಧಿವಂತರೇ ಹೌದು. ಯಾವಾಗಲೂ ಇನ್ನೊಬ್ಬರಿಗೆ ದ್ರೋಹವನ್ನು ಮಾಡುವ ಬುದ್ಧಿಯವರಲ್ಲವು. ನೀವಾದರೂ ಉಪಶಾಂತರಾಗಿರುವುದರಿಂದ ದಾರಿತಪ್ಪಿ ಹೋಗಿ ಮಾತನಾಡುವವರ ವಿಷಯದಲ್ಲಿ ಮಾತ್ರ ಈ ಮಧ್ಯಸ್ಥಕ್ಕೆ ಬರಬೇಡಿ. ಸ್ನೇಹವು ಈಗ ನನಗೆ ಹಿತಕರವಾಗಿಲ್ಲ. ॥೨೮॥

ಮುನಿಗಳು ಹೇಳಿದರು, ನಿನ್ನ ಸ್ನೇಹವನ್ನು ಹೊಂದುವುದಕ್ಕಾಗಿ ನೀನು ಹೇಳಿದಂತೆ ಪ್ರತಿಜ್ಞೆಯನ್ನು ಮಾಡಿಕೊಟ್ಟು ಆ ಮೇಲೆ ಅದಕ್ಕೆ ತಪ್ಪಿ ನಡೆದರೆ

ದೇಹಂಕೃತ್ವಾ ಕುತಃಶಾಂತಿಮಾಪ್ನುಯಾನ್ನಷ್ಟಚೇತನಃ ।
ವಿಶ್ವಾಸಘಾತಕರ್ತಾರೋ ನರಕಂ ಯಾಂತಿ ನಿಶ್ಚಯಂ ॥೩೦॥

ದುಃಖಂ ಚ ಸಮವಾಪ್ನೋತಿ ನೂನಂ ವಿಶ್ವಾಸಘಾತುಕಃ ।
ನಿಷ್ಕೃತಿರ್ಬ್ರಹ್ಮಹಂತ್ಯಾಣಾಂ ಸುರಾಪಾನಾಂ ಚ ನಿಷ್ಕೃತಿಃ ॥೩೧॥

ವಿಶ್ವಾಸಘಾತಿನಾಂ ನೈವ ಮಿತ್ರದ್ರೋಹಕೃತಾಮಪಿ ।
ಸಮಯಂ ಬ್ರೂಹಿ ಸರ್ವಜ್ಞ ಯಥಾ ತೇ ಚೇತಸಿ ಧ್ರುವಂ ॥೩೨॥

---

ತಾನು ಮಾಡಿದ ಒಳ್ಳೆಯದೋ, ಕೆಟ್ಟದೋ ಆಗಿರುವ ಕರ್ಮದ ಫಲವನ್ನು ಆ ದ್ರೋಹಮಾಡಿದ ಪ್ರಾಣಿಯು ಅವಶ್ಯವಾಗಿ ಅನುಭವಿಸುವನು. ಅವಿವೇಕಿಯಾದ ಅವನು ದ್ರೋಹವನ್ನು ಮಾಡಿ ಯಾವ ಪುಣ್ಯದಿಂದ ಅವನು ಉಪಶಾಂತಿಯನ್ನು ಹೊಂದತಕ್ಕವನು? ವಿಶ್ವಾಸಕ್ಕೆ ತಪ್ಪಿ ನಡೆದು ದ್ರೋಹ ಮಾಡುವವರು ನಿಜ ವಾಗಿಯೂ ನರಕವನ್ನು ಹೊಂದುವರು. ॥೨೯-೩೦॥

ಸ್ನೇಹವನ್ನು ಮಾಡುವುದಕ್ಕೆ ಪ್ರತಿಜ್ಞೆಯನ್ನು ಮಾಡಿಕೊಟ್ಟು, ಅದಕ್ಕೆ ತಪ್ಪಿ ನಡೆಯುವವನು ವಿಶ್ವಾಸಘಾತಕನಾಗುವನು. ಅಂಥವನು ನಿಜವಾಗಿಯೂ ದುಃಖವನ್ನೂ ಹೊಂದುವನು. ಬ್ರಹ್ಮಹತ್ಯ ಮಾಡಿದವರಿಗೂ, ಮದ್ಯಪಾನ ಮಾಡಿದವರಿಗೂ ಸಹ ಓ ವೃತ್ರನೇ, ಆಯಾಯ ಪಾತಕಗಳು ನಾಶವಾಗುವುದಕ್ಕೆ ತಕ್ಕ ಪ್ರಾಯಶ್ಚಿತ್ತಗಳು ಇರುತ್ತವೆ. ಆದರೆ ವಿಶ್ವಾಸಘಾತಕರಿಗೂ, ಮಿತ್ರದ್ರೋಹವನ್ನು ಮಾಡುವವರಿಗೂ ಸಹ ಪ್ರಾಯಶ್ಚಿತ್ತಗಳು ಇಲ್ಲವೇ ಇಲ್ಲ. ಆದ್ದರಿಂದ ಹಾಗೇನಾದರೂ ಅವನು ದ್ರೋಹ ಮಾಡಿದಲ್ಲಿ ಅದರ ಫಲವನ್ನು ತಪ್ಪದೆ ಅವನು ಅನುಭವಿಸಲೇ ಬೇಕಾಗಿರುವುದು. ॥೩೧॥

ಎಲೈ ಸರ್ವಜ್ಞನಾದ ವೃತ್ರಾಸುರನೇ, ನಿಮ್ಮಿಬ್ಬರ ಸ್ನೇಹದ ವಿಷಯದಲ್ಲಿ ನೀನು ಯಾವ ವಿಧವಾದ ಪ್ರತಿಜ್ಞೆಯನ್ನು ನಿನ್ನ ಮನಸ್ಸಿನಲ್ಲಿರಿಸಿಕೊಂಡಿರುವೆ? ಅದನ್ನು ನಿಜವಾಗಿಯೂ ನಮ್ಮ ಸಂಗಡ ಹೇಳು. ನೀನು ಹೇಳುವ ಪ್ರತಿಜ್ಞೆಯನ್ನು ಅನುಸರಿಸಿಕೊಂಡು ಈಗ ನಿಮ್ಮಿಬ್ಬರಿಗೂ ಸಂಧಿಯಾಗಲೆಂತ ನಮ್ಮ ಅಭಿಪ್ರಾಯ ವಿರುವುದು. ॥೩೨॥

**ತೇನೈವ ಸಮಯೇನಾದ್ಯ ಸಂಧಿಃ ಸ್ಯಾದುಭಯೋಃ ಕಿಲ ।**

॥ ವೃತ್ರ ಉವಾಚ ॥

**ನ ಶುಷ್ಕೇಣ ನ ಚಾರ್ದ್ರೇಣ ನಾಶ್ಮನಾ ನ ಚ ದಾರುಣಾ ॥೩೩॥**

**ನ ವಜ್ರೇಣ ಮಹಾಭಾಗ ನ ದಿವಾ ನಿಶಿ ನೈವ ಚ ।**
**ವಧ್ಯೋ ಭವೇಯಂ ವಿಪ್ರೇಂದ್ರಾಃ ಶಕ್ರಸ್ಯ ಸಹ ದೈವತೈಃ ॥೩೪॥**

**ಏವಂ ಮೇ ರೋಚತೇ ಸಂಧಿಃ ಶಕ್ರೇಣ ಸಹ ನಾನ್ಯಥಾ ।**

॥ ವ್ಯಾಸ ಉವಾಚ ॥

**ಋಷಯಸ್ತಂ ತದಾ ಪ್ರಾಹುರ್ಬಾಢಮಿತ್ಯೇವ ಚಾದೃತಾಃ ॥೩೫॥**

**ಸಮಯಂ ಶ್ರಾವಯಾಮಾಸುಸ್ತತ್ರಾನೀಯ ಸುರೇಶ್ವರಂ ।**
**ಇಂದ್ರೋಽಪಿ ಶಪಥಾಂಸ್ತತ್ರ ಚಕಾರ ವಿಗತಜ್ವರಃ ॥೩೬॥**

---

ವೃತ್ರಾಸುರನು ಹೇಳಿದನು—ನಾನು ದೇವತೆಗಳೊಡನೆ ಇರುವ ಇಂದ್ರನಿಂದಲಾಗಲಿ, ಯಾರಿಂದಲೇ ಆಗಲಿ, ಒಣಗಿರುವ, ಹಸಿಯದಾದ ಪದಾರ್ಥದಿಂದಲೂ, ಕಲ್ಲು ಮತ್ತು ಮರ ಇವುಗಳಿಂದಲೂ, ವಜ್ರಾಯುಧದಿಂದಲೂ ಸಹ ನಾನು ವಧ್ಯನಾಗಕೂಡದು ಮತ್ತು ನನ್ನನ್ನು ವಧೆ ಮಾಡುವ ಕಾಲವು ಹಗಲೂ ರಾತ್ರಿಯೂ ಸಹ ಆಗಬಾರದು. ಓ ಬ್ರಾಹ್ಮಣೋತ್ತಮರೇ ಕೇಳಿರಿ, ಈಗ ನಾನು ಹೇಳಿದಂತೆ ಪ್ರತಿಜ್ಞೆಗೆ ಅವನೂ ನೀವೆಲ್ಲರೂ ಒಪ್ಪುವುದಾದರೆ ಸಂಧಿಯಾಗಬಹುದು ಎಂದು ನನಗೆ ಇಷ್ಟವು ಉಂಟು. ಇಲ್ಲದಿದ್ದರೆ ಸಂಧಿಯು ಆಗಲಾರದು. ॥೩೩-೩೪॥

ವ್ಯಾಸಋಷಿಯು ಹೇಳಿದನು, ಋಷಿಗಳೆಲ್ಲರೂ ಆಗ ಆ ವೃತ್ರಾಸುರನನ್ನು ಹಾಗೆಯೇ ಆಗಲಿ, ನೀನು ಹೇಳಿದಂತೆಯೇ ಮಾತಿಗೆ ತಪ್ಪುವುದಿಲ್ಲವೆಂದು ಆದರದಿಂದ ಹೇಳಿದರು. ಅನಂತರ ಇಂದ್ರನ ಹತ್ತಿರಕ್ಕೆ ಹೋಗಿ ಅವನಿಗೆ ವೃತ್ರಾಸುರನು ಹೇಳಿದ ಮಾತನ್ನು ಹೇಳಿ ಇವನ ಪ್ರತಿಜ್ಞೆಯನ್ನು ತಿಳಿಸಿದರು. ಇಂದ್ರನೂ ಸಹ ಈ ಪ್ರತಿಜ್ಞೆಯನ್ನು ಕೇಳಿ ಮನಸ್ಸಿನಲ್ಲಿರುವ ಕಳಕಳವನ್ನು ಬಿಟ್ಟು ಋಷಿಗಳು ಹೇಳಿದಂತೆ ವೃತ್ರಾಸುರನ ಇಷ್ಟಪ್ರಕಾರ ಪ್ರತಿಜ್ಞೆಯನ್ನು ಮಾಡಿಕೊಟ್ಟನು. ॥೩೫-೩೬॥

ಸಾಕ್ಷಿಣಂ ಪಾವಕಂ ಕೃತ್ವಾ ಮುನೀನಾಂ ಸನ್ನಿಭೌ ಕಿಲ ।
ವೃತ್ರಸ್ತು ವಚನೈಸ್ತಸ್ಯ ವಿಶ್ವಾಸಮುಗಮತ್ತದಾ ॥೩೭॥

ಬಭೂವ ಮಿತ್ರವಚ್ಛಕ್ರೇ ಸಹಚರ್ಯಾಪರಾಯಣಃ ।
ಕದಾಚಿನ್ನಂದನೇ ಚೋಭೌ ಕದಾಚಿದ್ಗಂಧಮಾದನೇ ॥೩೮॥

ಕದಾಚಿದುದಧೇಸ್ತೀರೇ ಮೋದಮಾನೌ ವಿಚೇರತುಃ ।
ಏವಂ ಕೃತೇ ಚ ಸಂಧಾನೇ ವೃತ್ರಃ ಪ್ರಮುದಿತೋಽಭವತ್ ॥೩೯॥

ಶಕ್ರೋಽಪಿ ವಧಕಾಮಸ್ತು ತದುಪಾಯಾನಚಿಂತಯನ್ ।
ರಂಧ್ರಾನ್ವೇಷೀ ಸಮುದ್ವಿಗ್ನಸ್ತದಾಸೀನ್ಮಘವಾ ಭೃಶಂ ॥೪೦॥

---

ಇಂದ್ರನು ಅಗ್ನಿಯನ್ನು ಸಾಕ್ಷಿಯನ್ನಾಗಿ ಮಾಡಿಕೊಂಡು ಮುನಿಗಳ ಎದುರಿಗೆ ವೃತ್ರಾಸುರನು ಹೇಳಿದಂತೆ ಪ್ರತಿಜ್ಞೆ ಮಾಡಿಕೊಟ್ಟನು ಮತ್ತು ಸ್ನೇಹವನ್ನು ಮಾಡಿಕೊಂಡನು. ವೃತ್ರಾಸುರನು ಇಂದ್ರನ ಮಾತನ್ನು ಕೇಳಿ ವಿಶ್ವಾಸವನ್ನು ಹೊಂದಿದನು. ॥೩೭॥

ವೃತ್ರಾಸುರನು ಇಂದ್ರನ ವಿಷಯದಲ್ಲಿ ಸ್ನೇಹಿತನಂತೆ ಜೊತೆಯಲ್ಲಿ ತಿರುಗಾಡುವುದು ಮೊದಲು ಮಾಡಿಕೊಂಡು ಆಹಾರ ವಿಹಾರಗಳಲ್ಲಿ ಬಹಳಮಟ್ಟಿಗೆ ಹೊಂದಿಕೊಂಡಿದ್ದನು. ಒಂದೊಂದು ಕಾಲದಲ್ಲಿ ಗಂಧಮಾದನ ಪರ್ವತದಲ್ಲಿಯೂ, ಮತ್ತೊಂದು ಕಾಲದಲ್ಲಿ ನಂದನವನದಲ್ಲಿಯೂ, ಒಂದೊಂದು ಕಾಲದಲ್ಲಿ ಸಮುದ್ರ ತೀರದಲ್ಲಿಯೂ, ಸಹ ವೃತ್ರಾಸುರನೂ, ಇಂದ್ರನೂ ಜೊತೆಯಾಗಿ ಸ್ನೇಹಿತರಂತೆ ಸಂತೋಷದಿಂದ ವಿಹರಿಸುವವರಾಗಿ ತಿರುಗಾಡುತ್ತಿದ್ದರು. ॥೩೯॥

ಹೀಗೆ ಸಂಧಿಯು ನಡೆದ ನಂತರ ವೃತ್ರಾಸುರನು ಸಂತೋಷವುಳ್ಳವನಾದನು. ಇಂದ್ರನಾದರೋ ವೃತ್ರಾಸುರನ ವಧೆಯನ್ನು ಅಪೇಕ್ಷಿಸುವವನಾಗಿ ತಾನು ಅವನಿಗೆ ಪ್ರತಿಜ್ಞೆಮಾಡಿಕೊಟ್ಟದ್ದಕ್ಕಿಂತಲೂ ಬೇರೆಯಾದ ಅವನ ವಧೋಪಾಯವನ್ನು ಕಂಡುಹಿಡಿಯಲೋಸ್ಕರ (ಅವನ ಪ್ರತಿಜ್ಞೆಗೆ ವಿರೋಧವಾಗದಿರುವಂತೆ) ಅವನ ವಧೆಯು ನಡೆಯುವಂಥ ಉಪಾಯವನ್ನು ಹುಡುಕುವವನಾಗಿ ಯಾವಾಗಲೂ ಬಹಳಮಟ್ಟಿಗೆ ಯೋಚನೆಯುಳ್ಳವನಾಗಿದ್ದನು. ॥೩೯-೪೦॥

**ಏವಂ ಚಿಂತಯತಸ್ತಸ್ಯ ಕಾಲಸ್ಸಮಭಿವರ್ತತ ।**
**ವಿಶ್ವಾಸಂ ಪರಮಂ ಪ್ರಾಪ ವೃತ್ರಶ್ಶಕ್ರೇಽತಿದಾರುಣೇ ॥೪೧॥**

**ಏವಂ ಕತಿಚಿದಬ್ದಾನಿ ಗತಾನಿ ಸಮಯೇ ಕೃತೇ ।**
**ವೃತ್ರಸ್ಯ ಮರಣೋಪಾಯಾನ್ ಮನಸೀಂದ್ರೋಽಪ್ಯಚಿಂತಯತ್ ॥೪೨॥**

**ತ್ವಷ್ಟೈಕದಾ ಸುತಂ ಪ್ರಾಹ ವಿಶ್ವಸ್ತಂ ಪಾಕಶಾಸನೇ ।**
**ಪುತ್ರ ವೃತ್ರ ಮಹಾಭಾಗ ಶೃಣು ಮೇ ವಚನಂ ಹಿತಂ ॥೪೩॥**

**ನ ವಿಶ್ವಾಸಸ್ತ್ವ ಕರ್ತವ್ಯಃ ಕೃತ ವೈರೇ ಕಥಂಚನ ।**
**ಮಘವಾ ಕೃತವೈರಸ್ತೇ ಸದಾಽಸೂಯಾಪರಃ ಪರೈಃ ॥೪೪॥**

---

ಇಂದ್ರನು ಹೀಗೆ ಯೋಚನೆಯನ್ನು ಮಾಡುತ್ತಿರುವಾಗ ಬಹಳಮಟ್ಟಿನ ಕಾಲವು ಕಳೆದುಹೋಯಿತು. ವೃತ್ರಾಸುರನಾದರೋ ಬಹಳ ವಂಚಕನಾದ ಮತ್ತು ತನ್ನ ವಿಷಯದಲ್ಲಿ ಗೂಢವಾಗಿ ಕ್ರೂರನಾಗಿ ಇರುವ ಇಂದ್ರನಲ್ಲಿ ಬಹಳ ಮಟ್ಟಿನ ವಿಶ್ವಾಸವನ್ನು ಹೊಂದಿದನು. ॥೪೧॥

ಇಂದ್ರನು ವೃತ್ರಾಸುರನ ವಧೆಗಾಗಿ ಉಪಾಯವನ್ನು ಯೋಚನೆ ಮಾಡುವುದರಲ್ಲಿ ಬಹಳ ವರ್ಷಗಳು ಕಳೆದು ಹೋದುವು. ಅವನ ಸಂಗಡ ಸ್ನೇಹಕ್ಕಾಗಿ ಮಾಡಿದ ಪ್ರತಿಜ್ಞೆಯು ಬಹಳ ವರ್ಷಗಳವರೆಗೆ ನಡೆದುಬಂದಿತು. ಇಂದ್ರನೂ ಕೂಡ ವೃತ್ರಾಸುರನ ವಧೆಗಾಗಿ ಉಪಾಯವನ್ನು ಮನಸ್ಸಿನಲ್ಲಿ ಯೋಚಿಸಿದನು. ॥೪೨॥

ತ್ವಷ್ಟೃಬ್ರಹ್ಮನು ಇಂದ್ರನ ವಿಷಯದಲ್ಲಿ ನಂಬಿಕೆಯಿಂದಿರುವ ತನ್ನ ಮಗನನ್ನು ಕುರಿತು ಒಂದಾವೃತ್ತಿ ಹೀಗೆ ಹೇಳಿದನು. ಎಲೈ ಅದೃಷ್ಟಶಾಲಿಯೇ, ಮಗನಾದ ವೃತ್ರಾಸುರನೇ, ನೀನು ನಿನಗೆ ಹಿತವನ್ನುಂಟುಮಾಡುವ ನನ್ನ ಮಾತನ್ನು ಕೇಳು. ॥೪೩॥

ಎಲೈ ವೃತ್ರನೇ ಕೇಳು, ನಿನ್ನ ವಿಷಯದಲ್ಲಿ ಯಾವಾಗಲೂ ದ್ವೇಷದಿಂದಿರುವ ಇಂದ್ರನ ಸಂಗಡ ನೀನು ಸ್ನೇಹವನ್ನು ಹೆಚ್ಚಿಸಬೇಡ. ಇಂದ್ರನು ನಿನ್ನ ಸಂಗಡ ಮೊದಲಿನಿಂದಲೂ ದ್ವೇಷದಿಂದಿರುವವನು, ಮತ್ತು ಅವನು ಯಾವಾಗಲೂ ಶತ್ರುಗಳ ಅಭಿವೃದ್ಧಿಯ ವಿಷಯದಲ್ಲಿ ಅಸೂಯೆಯಿಂದಿರುವವನು. ॥೪೪॥

ಲೋಭಾನ್ಮತ್ತೋ ದ್ವೇಷರತಃ ಪರದುಃಖೋತ್ಸವಾನ್ವಿತಃ ।
ಪರದಾರಲಂಪಟಸ್ಸ ಪಾಪಬುದ್ಧಿಃ ಪ್ರತಾರಕಃ ॥೪೫॥

ರಂಧ್ರಾನ್ವೇಷೀ ದ್ರೋಹಪರೋ ಮಾಯಾವೀ ಮದಗರ್ವಿತಃ ।
ಯಃ ಪ್ರವಿಶ್ಯೋದರೇ ಮಾತುರ್ಗರ್ಭಚ್ಛೇದಂ ಚಕಾರ ಹ ॥೪೬॥

ಸಪ್ತಕೃತ್ವಃ ಸಪ್ತಕೃತ್ವಃ ಕ್ರಂದಮಾನ ಮನಾತುರಃ ।
ತಸ್ಮಾತ್ಪುತ್ರ ನ ಕರ್ತವ್ಯೋ ವಿಶ್ವಾಸಸ್ತು ಕಥಂಚನ ॥೪೭॥
ಕೃತಪಾಪಸ್ಯ ಕಾ ಲಜ್ಜಾ ಪುನಃ ಪುತ್ರ ಪ್ರಕುರ್ವತಃ ।

---

ಇಂದ್ರನು ಅತ್ಯಾಸೆಯಿಂದ ಮದಿಸಿರುವನು. ಇತರರ ಮೇಲೆ ದ್ವೇಷವನ್ನು ಸಾಧಿಸುವವನು. ಇನ್ನೊಬ್ಬರು ದುಃಖಪಡುವುದನ್ನು ನೋಡಿ ಸಂತೋಷಪಡುವವನು. ಇನ್ನೊಬ್ಬರ ಹೆಂಡತಿಯಲ್ಲಿ ಆಸಕ್ತಿಯುಳ್ಳವನು. ಕೆಟ್ಟ ಬುದ್ಧಿಯುಳ್ಳವನು, ಮತ್ತು ವಂಚಕನು. ಇನ್ನೊಬ್ಬರ ಕೊಲೆಯನ್ನು ಮಾಡುವುದಕ್ಕಾಗಿ ಅವರ ಮರ್ಮಗಳನ್ನು ಹುಡುಕುತ್ತಿರುವವನು. ಇನ್ನೊಬ್ಬರಿಗೆ ದ್ರೋಹಮಾಡುವುದರಲ್ಲಿ ಆಸಕ್ತನು. ಮೋಸಗಾರನು. ಅಹಂಕಾರದಿಂದ ಹೆಮ್ಮೆಯುಳ್ಳವನು. ॥೪೫॥

ಇಷ್ಟು ದುರ್ಗುಣಗಳಿಂದ ಕೂಡಿದ್ದುದರಿಂದಲೇ ಇಂದ್ರನು ತನ್ನ ತಾಯಿಯ ಗರ್ಭದಲ್ಲಿ ಪ್ರವೇಶಿಸಿ, ಆ ಮಗುವು ಗರ್ಭದಲ್ಲಿಯೇ ಅಳುತ್ತಿದ್ದಾಗ್ಯೂ ಯಾವ ವಿಧವಾದ ಮನಸ್ಸಿನ ಯೋಚನೆಯೂ ಇಲ್ಲದವನಾಗಿ ಏಳುಸಾರಿ ಗರ್ಭವನ್ನು ಸೀಳಿದನು. ಅನಂತರ ಪ್ರತಿಯೊಂದು ಭಾಗವೂ ಏಳು ಏಳು ಭಾಗಗಳಾಗುವಂತೆ ಕತ್ತರಿಸಿದನು. (ಇವುಗಳೇ ಏಕೋನಪಂಚಾಶನ್ಮರುತ್ತುಗಳು) ತಾಯಿಯ ಗರ್ಭದಲ್ಲಿಯೇ ಪ್ರವೇಶಿಸಿ ಗರ್ಭವನ್ನು ಸೀಳಿದವನಿಗೆ, ಇತರ ಕೆಟ್ಟಕಾರ್ಯಗಳನ್ನು ಮಾಡಲು ಯೋಚನೆ ಯಾವುದೂ ಇಲ್ಲವಾದ್ದರಿಂದ ಓ ವೃತ್ರನೇ, ಇವನ ಸ್ನೇಹವನ್ನು ಬಿಡು. ॥೪೬॥

ಇಂದ್ರನು ಮೊದಲೇ ಪಾಪವನ್ನು ಮಾಡಿದವನು. ಆಗಲೇ ಅವನಿಗೆ ನಾಚಿಕೆಯಾಗಲಿಲ್ಲವು. ಈಗ ಬದಲಾಗಿ ಕೆಟ್ಟಕೆಲಸವನ್ನು ಮಾಡುವ ಅವನಿಗೆ ಲಜ್ಜೆಯೆಲ್ಲಿಂದ ಬಂದೀತು. ಆದಕಾರಣ ಇಂದ್ರನಲ್ಲಿ ವಿಶ್ವಾಸವನ್ನು ಹೇಗಾದರೂ ಮಾಡಲೇಕೂಡದೆಂದು ನನ್ನ ಅಭಿಪ್ರಾಯವು. ॥೪೭॥

॥ ವ್ಯಾಸ ಉವಾಚ ॥

ಏವಂ ಪ್ರಬೋಧಿತಃ ಪಿತ್ರಾ ವಚನೈರ್ಹೇತು ಸಂಯುತೈಃ ॥೪೮॥

ನ ಬುಬೋಧ ತದಾ ವೃತ್ರಃ ಆಸನ್ನ ಮರಣಃ ಕಿಲ ।
ಸ ಕದಾಚಿತ್ಸಮುದ್ರಾಂತೇ ತಮಪಶ್ಯನ್ಮಹಾಸುರಂ ॥೪೯॥

ಸಂಧ್ಯಾಕಾಲ ಉಪಾವೃತ್ತೇ ಮುಹೂರ್ತೇಽತೀವ ದಾರುಣೇ ।
ತತಸ್ಸಂಚಿಂತ್ಯ ಮಘವಾ ವರದಾನಂ ಮಹಾತ್ಮನಾಂ ॥೫೦॥

ಸಂಧ್ಯೇಯಂ ವರ್ತತೇ ರೌದ್ರಾ ನ ರಾತ್ರಿರ್ದಿವಸೋ ನ ಚ ।
ಹಂತವ್ಯೋಽಯಂ ಮಯಾ ಚಾದ್ಯ ಬಲೇನೈವ ನ ಸಂಶಯಃ ॥೫೧॥

ಏಕಾಕೀ ವಿಜನೇ ಚಾತ್ರ ಸಂಪ್ರಾಪ್ತಸ್ಸಮಯೋಚಿತಃ ।
ಏವಂ ವಿಚಾರ್ಯ ಮನಸಾ ಸಸ್ಮಾರ ಹರಿ ಮವ್ಯಯಂ ॥೫೨॥

---

ವ್ಯಾಸಋಷಿಯು ಹೇಳಿದನು—ತಂದೆಯು ಸಕಾರಣವಾಗಿ ಇಂದ್ರನ ಸಂಗಡ ಸ್ನೇಹವು ಬೇಡವೆಂದು ವೃತ್ರಾಸುರನಿಗೆ ಹೇಳಿದರೂ ಅವನು ಸ್ವಲ್ಪಕಾಲದಲ್ಲಿಯೇ ಮರಣವನ್ನು ಹೊಂದುವವನಾಗಿದ್ದುದರಿಂದ ತಂದೆಯ ಮಾತು ಅವನಿಗೆ ಹಿತಕರವಾಗಲಿಲ್ಲವು. ||೪೮||

ಇಂದ್ರನು ಒಂದಾನೊಂದು ಕಾಲದಲ್ಲಿ ಸಮುದ್ರದ ತೀರದಲ್ಲಿದ್ದ ಮಹಾಸುರನಾದ ಆ ವೃತ್ರಾಸುರನನ್ನು ನೋಡಿದನು. ಆಗ ಸಂಧ್ಯಾಕಾಲವು ಒದಗಿ ಬಂದಿತ್ತು. (ಭಯಂಕರವಾದ) ಕ್ರೂರವಾದ ಮುಹೂರ್ತವೂ ಆಗ ಬಂದಿತ್ತು. ಇಂಥ ಸಮಯದಲ್ಲಿ ಇಂದ್ರನು ಮಹಾಮಹಿಮೆಯುಳ್ಳ ದೊಡ್ಡವರು ವೃತ್ರನಿಗೆ ವರವನ್ನು ಕೊಟ್ಟಿರುವುದನ್ನು ನೆನಪಿನಲ್ಲಿಟ್ಟುಕೊಂಡು ಹೀಗೆ ಆಲೋಚನೆಯನ್ನು ಮಾಡಿದನು. ||೫೦||

ಈಗ ಪ್ರಾಪ್ತವಾಗಿರುವ ಕಾಲವು ಸಂಧ್ಯಾಕಾಲವಾಗಿರುತ್ತದೆ. ಇದು ಹಗಲೂ ಅಲ್ಲವು. ರಾತ್ರಿಯೂ ಅಲ್ಲವು. ಈ ವೇಳೆಯು ಭಯಂಕರವಾಗಿರುತ್ತದೆ. ಈಗ ನಾನು ನನ್ನ ಸಾಮರ್ಥ್ಯದಿಂದ ಈ ವೃತ್ರಾಸುರನನ್ನು ಕೊಲ್ಲಬೇಕು. ಈ ವಿಷಯದಲ್ಲಿ ನಾನು ಸಂಶಯವನ್ನು ಇಟ್ಟುಕೊಳ್ಳಬಾರದು. ||೫೧||

ಈ ವೃತ್ರಾಸುರನು ಒಬ್ಬಂಟಿಗನಾಗಿ, ಈ ಜನಸಂಚಾರವಿಲ್ಲದಿರುವ ಪ್ರದೇಶದಲ್ಲಿ ಈ ಭಯಂಕರವಾದ ವೇಳೆಯಲ್ಲಿ ಸಿಕ್ಕಿರುವನು. ಹೀಗೆ ಮನಸ್ಸಿನಲ್ಲಿ ಯೋಚಿಸಿಕೊಂಡು ಇಂದ್ರನು ನಿತ್ಯನಾಗಿರುವ ವಿಷ್ಣುವನ್ನು ಸ್ಮರಿಸಿದನು. ||೫೨||

ತತ್ರಾಜಗಾಮ ಭಗವಾನದೃಶ್ಯಃ ಪುರುಷೋತ್ತಮಃ ।
ವಜ್ರಮಧ್ಯೇ ಪ್ರವಿಶ್ಯಾಸೌ ಸಂಸ್ಥಿತೋ ಭಗವಾನ್ ಹರಿಃ ॥೫೩॥

ಇಂದ್ರೋ ಬುದ್ಧಿಂ ಚಕಾರಾಶು ತದಾ ವೃತ್ರವಧಂ ಪ್ರತಿ ।
ಇತಿ ಸಂಚಿಂತ್ಯ ಮನಸಾ ಕಥಂ ಹನ್ಯಾಂ ರಿಪುಂ ರಣೇ ॥೫೪॥

ಅಜೇಯಂ ಸರ್ವಥಾ ಸರ್ವ ದೇವೈಶ್ಚ ದಾನವೈಸ್ತಥಾ ।
ಯದಿ ವೃತ್ರಂ ನ ಹನ್ಮ್ಯದ್ಯ ವಂಚಯಿತ್ವಾ ಮಹಾಬಲಂ ॥೫೫॥

ನ ಶ್ರೇಯೋ ಮಮ ನೂನಂ ಸ್ಯಾತ್ ಸರ್ವಥಾ ರಿಪುರಕ್ಷಣಾತ್ ।
ಅಪಾಂ ಫೇನಂ ತದಾಽಪಶ್ಯತ್ಸಮುದ್ರೇ ಪರ್ವತೋಪಮಂ ॥೫೬॥

ನಾಯಂ ಶುಷ್ಕೋ ನ ಚಾರ್ದ್ರೋಽಯಂ ನ ಚ ಶಸ್ತ್ರಮಿದಂತಥಾ ।
ಅಪಾಂ ಫೇನಂ ತದಾ ಶಕ್ರೋ ಜಗ್ರಾಹ ಕಿಲ ಲೀಲಯಾ ॥೫೭॥

---

ಪುರುಷಶ್ರೇಷ್ಠನಾದ ಷಡ್ಗುಣೈಶ್ವರ್ಯಸಂಪನ್ನನಾದ ಆ ಪೂಜ್ಯನಾದ ವಿಷ್ಣುವು ಇಂದ್ರನ ಸ್ಮರಣಮಾತ್ರದಿಂದ ಯಾರಿಗೂ ಕಾಣಿಸಿಕೊಳ್ಳದಂತೆ ಅಲ್ಲಿಗೆ ಬಂದವನಾಗಿ, ಅವನ ಆಯುಧವಾದ ವಜ್ರಾಯುಧದ ಮಧ್ಯದಲ್ಲಿ ತನ್ನ ಅಂಶದಿಂದ ಪ್ರವೇಶಿಸಿದನು. ॥೫೩॥

ಈ ವೃತ್ರಾಸುರನು ಸರ್ವಪ್ರಕಾರದಿಂದಲೂ ಎಲ್ಲಾ ದೇವತೆಗಳೂ ಮತ್ತು ರಾಕ್ಷಸರೂ ಒಟ್ಟಾಗಿ ಯುದ್ಧಮಾಡಿದಾಗ್ಯೂ ಜಯಿಸಲು ಅಸಾಧ್ಯನಾಗಿರುವನು. ಇಂತಹ ಶತ್ರುವಾದ ಈ ವೃತ್ರನನ್ನು ನಾನು ಹೇಗೆ ತಾನೇ ಕೊಲ್ಲಲಿ ಎಂದು ಮನಸ್ಸಿನಲ್ಲಿ ಯೋಚಿಸುತ್ತಾ, ಇಂದ್ರನು ಈ ವೃತ್ರಾಸುರನನ್ನು ಹೇಗಾದರೂ ಕೊಲ್ಲಬೇಕೆಂದು ಆಗ ನಿಶ್ಚಯಮಾಡಿಕೊಂಡನು. ॥೫೪॥

ಈ ದಾರುಣವಾದ ವೇಳೆಯಲ್ಲಿ, ವಿಜನಪ್ರದೇಶದಲ್ಲಿ, ಏಕಾಕಿಯಾಗಿ ಸಿಕ್ಕಿರುವಾಗ ತುಂಬಾ ಬಲಿಷ್ಠನಾದ ವೃತ್ರಾಸುರನನ್ನು ಮೋಸಮಾಡಿ ನಾನು ಕೊಲ್ಲದಿದ್ದರೆ, ನನಗೆ ನಿಜವಾಗಿಯೂ ಶತ್ರುವನ್ನು ಉಪೇಕ್ಷಿಸಿದ ಕಾರಣ ಶ್ರೇಯಸ್ಸುಂಟಾಗಲಾರದು! ಆದ್ದರಿಂದ ಇವನನ್ನು ಈಗಲೇ ಕೊಲ್ಲಬೇಕು ಎಂದು ನಿಶ್ಚಯಿಸಿದನು. ॥೫೫॥

ಇಂದ್ರನು ಸಮುದ್ರದಲ್ಲಿ ಪರ್ವತಕ್ಕೆ ಸಮನಾಗಿರುವ ನೀರಿನ ನೊರೆಯನ್ನು ನೋಡಿದನು. ಈ ನೊರೆಯು ಒಣಗಿರುವ ಪದಾರ್ಥವೂ ಅಲ್ಲ. ಹಸಿಯ ಪದಾರ್ಥವೂ ಅಲ್ಲವು. ಮತ್ತು ಇದು ಯಾವ ವಿಧವಾದ ಆಯುಧಕ್ಕೆ ಸೇರಿದ್ದೂ ಅಲ್ಲವು. ಆದುದ

**ಪರಾಂ ಶಕ್ತಿಂ ಚ ಸಂಸ್ಮಾರ ಭಕ್ತ್ಯಾ ಪರಮಯಾ ಯುತಃ ।**
**ಸ್ಮೃತಮಾತ್ರಾ ತದಾ ದೇವೀ ಸ್ವಾಂಶಂ ಫೇನೇ ನ್ಯಧಾಪಯತ್॥೫೮॥**

**ವಜ್ರಂ ತದಾವೃತಂ ತತ್ರ ಚಕಾರ ಹರಿಸಂಯುತಂ ।**
**ಫೇನಾವೃತಂ ಪವಿಂ ತತ್ರ ಶಕ್ರಶ್ಚಿಕ್ಷೇಪ ತಂ ಪ್ರತಿ ॥೫೯॥**

**ಸಹಸಾ ನಿಪಪಾತಾಶು ವಜ್ರಾಹತ ಇವಾಚಲಃ ।**
**ವಾಸವಸ್ತು ಪ್ರಹೃಷ್ಟಾತ್ಮಾ ಬಭೂವ ನಿಹತೇ ತದಾ ॥೬೦॥**

**ಋಷಯಶ್ಚ ಮಹೇಂದ್ರಂ ತಮಸ್ತುವನ್ ವಿವಿಧೈಃ ಸ್ತವೈಃ ।**
**ಹತಶತ್ರುಃ ಪ್ರಹೃಷ್ಟಾತ್ಮಾ ವಾಸವಸ್ಸಹ ದೇವತೈಃ ॥೬೧॥**

---

ರಿಂದ ಇವನನ್ನು ಹೊಡೆಯಬೇಕೆಂದು ನೀರಿನ ನೊರೆಯನ್ನು ಲೀಲೆಯಿಂದ (ಅವನಿಗೆ ಹೊಡೆಯುವುದಕ್ಕೆ ತೆಗೆದುಕೊಂಡಂತೆ ತೋರದಿರುವುದಕ್ಕಾಗಿ) ಕೈಗೆ ತೆಗೆದು ಕೊಂಡನು. ॥೫೬-೫೭॥

ಇಂದ್ರನು ನೀರಿನ ನೊರೆಯ ರಾಶಿಯನ್ನು ಕೈಯಲ್ಲಿ ಹಿಡಿದುಕೊಂಡು ಬಹಳ ಹೆಚ್ಚಾದ ಭಕ್ತಿಯಿಂದ ಪರಾಶಕ್ತಿಯನ್ನು ಸ್ಮರಿಸಿದನು. ಆಗ ದೇವಿಯು ಇಂದ್ರನಿಂದ ಸ್ಮರಣಮಾಡಲ್ಪಟ್ಟ ಕ್ಷಣದಲ್ಲಿಯೇ ತನ್ನ ಅಂಶವನ್ನು ನೊರೆಯಲ್ಲಿರಿಸಿದಳು. ॥೫೮॥

ಇಂದ್ರನು ವಿಷ್ಣುವಿನಿಂದ ಕೂಡಿರುವ ತನ್ನ ವಜ್ರಾಯುಧವನ್ನು ಆ ನೊರೆಯಲ್ಲಿ ಅಡಗಿಸಿ ಕಾಣದಿರುವಂತೆ ಮರೆಮಾಡಿದನು. ಅನಂತರದಲ್ಲಿ ಆ ನೊರೆಯಿಂದ ಮುಚ್ಚಲ್ಪಟ್ಟ ವಜ್ರಾಯುಧವನ್ನು, ಆ ವೃತ್ರಾಸುರನನ್ನು ಕುರಿತು ನಾಶಕ್ಕಾಗಿ ಪ್ರಯೋಗಮಾಡಿದನು. ॥೫೯॥

ಶಕ್ತಿಯ ಅಂಶದಿಂದಲೂ, ವಿಷ್ಣುವಿನಿಂದಲೂ ಕೂಡಿ ಕಠಿನವಾದ, ವಜ್ರಾಯುಧದಿಂದ ಸಹಿತವಾದ, ನೊರೆಯು ಏಟು ವೃತ್ರಾಸುರನಿಗೆ ಬಿದ್ದ ಕ್ಷಣದಲ್ಲಿಯೇ, ಅವನು ವಜ್ರಾಯುಧದಿಂದ ಮುರಿದ ಬೆಟ್ಟದ ಹಾಗೆ ಬೇಗನೆ ಭೂಮಿಯಲ್ಲಿ ಬಿದ್ದು ಪ್ರಾಣವನ್ನು ಬಿಟ್ಟನು. ಆಗ ಇಂದ್ರನು ಅವನ ಸಂಹಾರವಾದದ್ದನ್ನು ನೋಡಿ ಸಂತೋಷಪಟ್ಟ ಮನಸ್ಸುಳ್ಳವನಾಗಿ ಇದ್ದನು. ॥೬೦॥

ಋಷಿಗಳು ಆ ಮಹೇಂದ್ರನನ್ನು ಅನೇಕ ವಿಧವಾದ ಸ್ತುತಿಗಳಿಂದ ಹೊಗಳಿದರು. ಶತ್ರುವನ್ನು ನಾಶಮಾಡಿದವನಾದ ಇಂದ್ರನು ದೇವತೆಗಳೊಡನೆ ಯಾವ ದೇವಿಯ ಅನುಗ್ರಹದಿಂದ ಶತ್ರುನಾಶವು ಉಂಟಾಯಿತೋ ಅಂಥಾ ದೇವಿಯನ್ನು

**ದೇವೀಂ ಸಂಪೂಜಯಾಮಾಸ ಯತ್ಪ್ರಸಾದಾದ್ಧತೋ ರಿಪುಃ ।**
**ಪ್ರಸಾದಯಾಮಾಸ ತದಾ ಸ್ತೋತ್ರೈರ್ನಾನಾವಿಧೈರಪಿ ॥೬೨॥**

**ದೇವೋದ್ಯಾನೇ ಪರಾಶಕ್ತೇಃ ಪ್ರಾಸಾದಮಕರೋದ್ಧರಿಃ ।**
**ಪದ್ಮರಾಗಮಯೀಂ ಮೂರ್ತಿಂ ಸ್ಥಾಪಯಾಮಾಸ ವಾಸವಃ ॥೬೩॥**

**ತ್ರಿಕಾಲಂ ಮಹತೀಂ ಪೂಜಾಂ ಚಕ್ರುಸ್ಸರ್ವೇಽಪಿ ನಿರ್ಜರಾಃ ।**
**ತದಾ ಪ್ರಭೃತಿ ದೇವಾನಾಂ ಶ್ರೀದೇವೀ ಕುಲದೈವತಂ ॥೬೪॥**

**ವಿಷ್ಣುಂ ತ್ರಿಭುವನಶ್ರೇಷ್ಠಂ ಪೂಜಯಾಮಾಸ ವಾಸವಃ ।**
**ತತೋ ಹತೇ ಮಹಾವೀರ್ಯೇ ವೃತ್ರೇ ದೇವಭಯಂಕರೇ ॥೬೫॥**

---

ಸಂತೋಷವುಳ್ಳ ಮನಸ್ಸಿನಿಂದ ಪೂಜಿಸಿದನು. ಮತ್ತು ನಾನಾವಿಧವಾದ ಸ್ತೋತ್ರಗಳಿಂದ ಸ್ತುತಿಸಿ ಪ್ರಸನ್ನಳನ್ನಾಗಿ ಮಾಡಿಕೊಂಡನು. ॥೬೧-೬೨॥

ಇಂದ್ರನು ದೇವತೆಗಳ ಉದ್ಯಾನವನವಾದ ನಂದನವನದಲ್ಲಿ ಇಂದ್ರನು ದೇವಿಯಲ್ಲಿ ಕೃತಜ್ಞತೆಯ ಗುರುತಿಗಾಗಿಯೂ, ತನ್ನಂತೆಯೇ ಇತರರಿಗೂ ದೇವಿಯಲ್ಲಿ ಭಕ್ತಿಯುಂಟಾಗಿ ಅವರೂ ಪೂಜಿಸಿ ಕೃತಾರ್ಥರಾಗಲೆಂದೂ, ಪರಾಶಕ್ತಿಯ ಅಂಶರೂಪಳಾದ ಭುವನೇಶ್ವರೀದೇವಿಯು ಅಂಕಿತದಿಂದ ದೊಡ್ಡದಾದ ಒಂದು ದೇವಸ್ಥಾನವನ್ನು ಕಟ್ಟಿಸಿದನು. ಆ ದೇವಸ್ಥಾನದಲ್ಲಿ ತಾನು ಮೊದಲಾಗಿ ಎಲ್ಲಾ ದೇವತೆಗಳೂ ದೇವಿಯನ್ನು ಕುರಿತು ತಪಸ್ಸನ್ನು ಮಾಡಿದಾಗ, ದೇವಿಯು ತಮಗೆ ಯಾವ ವಿಧವಾದ ಆಕಾರದಿಂದ ಪ್ರತ್ಯಕ್ಷಳಾಗಿದ್ದಳೋ ಆ ಆಕಾರವನ್ನು ನೆನಪಿನಲ್ಲಿಟ್ಟುಕೊಂಡು ಪದ್ಮರಾಗ ರತ್ನದಿಂದ ಆ ಆಕಾರವುಳ್ಳಂತೆ ಮೂರ್ತಿಯನ್ನು ಮಾಡಿಸಿ, ಅಲ್ಲಿ ಭುವನೇಶ್ವರೀ ದೇವಿಯ ಮೂರ್ತಿಯನ್ನು ಪ್ರತಿಷ್ಠೆಮಾಡಿದನು. ॥೬೩॥

ಎಲ್ಲಾ ದೇವತೆಗಳೂ ಆ ದೇವಿಯ ಪೂಜೆಯನ್ನು ಪ್ರಾತರ್ಮಧ್ಯಾಹ್ನ ಸಾಯಾಹ್ನವೆಂಬ ಮೂರುಕಾಲಗಳಲ್ಲಿಯೂ ಹೆಚ್ಚಾಗಿ ಮಾಡುತ್ತಿದ್ದರು. ಆ ಕಾಲ ಮೊದಲುಗೊಂಡು ಶ್ರೀಭುವನೇಶ್ವರೀದೇವಿಯು ದೇವತೆಗಳಿಗೆ ಕುಲದೇವತೆಯಾಗಿರುವಳು. ॥೬೪॥

ಇಂದ್ರನು ಮೂರು ಲೋಕಕ್ಕೂ (ಶ್ರೇಷ್ಠನಾದ) ಪೂಜ್ಯನಾದ ವಿಷ್ಣುವನ್ನು ತಾನು ಪೂಜೆಮಾಡಿದನು. ದೇವತೆಗಳಿಗೆಲ್ಲರಿಗೂ ಭಯಂಕರನಾದ ಬಹಳ ಶೂರನಾಗಿದ್ದ ಆ ವೃತ್ರಾಸುರನು ನಾಶವನ್ನು ಹೊಂದಲು, ವಾಯುವು ಎಲ್ಲರಿಗೂ ಹಿತಕರ

ಪ್ರವವೌ ಚ ಶಿವೋ ವಾಯುರ್ಜಹೃಷುರ್ದೇವತಾಸ್ತಥಾ ।
ಹತೇ ತಸ್ಮಿನ್ ಸಗಂಧರ್ವಾ ಯಕ್ಷರಾಕ್ಷಸ ಕಿನ್ನರಾಃ ॥೬೬॥

ಇತ್ಥಂ ವೃತ್ರಃ ಪರಾಶಕ್ತಿಪ್ರವೇಶಯುತಫೇನತಃ ।
ತಯಾ ಕೃತ ವಿಮೋಹಾಚ್ಚ ಶಕ್ರೇಣ ಸಹಸಾ ಹತಃ ॥೬೭॥

ತತೋ ವೃತ್ರನಿಹಂತ್ರೀತಿ ದೇವೀ ಲೋಕೇಷು ಗೀಯತೇ ।
ಶಕ್ರೇಣ ನಿಹತತ್ವಾಚ್ಚ ಶಕ್ರೇಣ ಹತ ಉಚ್ಯತೇ ॥೬೮॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ
ಷಷ್ಠೋಽಧ್ಯಾಯಃ.

---

ವಾಗಿ ಬೀಸಿತು. ದೇವತೆಗಳು ಎಲ್ಲರೂ ಸಂತೋಷದಿಂದ ಇದ್ದರು. ವೃತ್ರಾಸುರನು ನಾಶವಾದನಂತರ ಗಂಧರ್ವರೂ, ಯಕ್ಷರೂ, ರಾಕ್ಷಸರೂ, ಕಿನ್ನರರೂ ಸಹ ಸಂತೋಷ ವನ್ನು ಹೊಂದಿದರು. ॥೬೫-೬೬॥

ವೃತ್ರಾಸುರನು ಹೀಗೆ ಮೊದಲು ಈ ಗ್ರಂಥದಲ್ಲಿ ಹೇಳಿದಂತೆ ಪರಾಶಕ್ತಿಯು ಮಾಡಿದ ಮೋಹದಿಂದ ಶತ್ರುವಾದ ಇಂದ್ರನ ಸಂಗಡ ಸಂಧಿಯನ್ನು ಮಾಡಿಕೊಂಡು ಪರಾಶಕ್ತಿಯ ಅಂಶಪ್ರವೇಶದಿಂದ ಕಠಿನವಾದ ನೊರೆಯಿಂದ ಇಂದ್ರನಿಂದ ಹತನಾದನು. ॥೬೭॥ (ಈ ಅಂಶವನ್ನು ವೇದದಲ್ಲೂ ತಮೋನಾಶಸಂಕೇತದ ರೀತಿಯಲ್ಲಿ ವಿವರಿಸಿದೆ.)

ಇಂದ್ರನ ವಜ್ರಾಯುಧವನ್ನು ಮುಚ್ಚಿಕೊಂಡಿರುವ ನೀರಿನ ನೊರೆಯಲ್ಲಿ ದೇವಿಯು ತನ್ನ ಅಂಶದಿಂದ ಸಹಾಯಮಾಡಿ ಇರುವಕಾರಣ ವೃತ್ರನು ಅದರಿಂದ ಹತ ನಾದುದರಿಂದ ದೇವಿಯೂ ವೃತ್ರನಿಹಂತ್ರೀ ಎಂಬ ಹೆಸರಿನಿಂದ ಪ್ರಸಿದ್ಧಳಾಗಿರುವಳು. ವೃತ್ರನು ಇಂದ್ರನಿಂದ ಕೊಲ್ಲಲ್ಪಟ್ಟಕಾರಣ ಶಕ್ರನಿಂದ ಹತನಾದನೆಂದೂ ಹೇಳುವರು. ಮುಖ್ಯವಾಗಿ ದೇವಿಯ ಅನುಗ್ರಹವು ಇಲ್ಲದೇ ಕೇವಲ ಇಂದ್ರನಿಂದ ವೃತ್ರಾಸುರನ ನಾಶವು ನೆರವೇರಲಾಗದೆ ಹೋದುದರಿಂದ ಇಂದ್ರನು ವೃತ್ರನನ್ನು ನಿಗ್ರಹಮಾಡಿದ ನೆಂಬುದು ಲೋಕದಲ್ಲಿ ಕೇವಲ ಔಪಚಾರಿಕವಾಗಿರುವುದು. ದೇವಿಯು ಮಾತ್ರ ರಾಗ ದ್ವೇಷಗಳಿಗೆ ಅಧೀನಳಾಗದೆ ಧರ್ಮರಕ್ಷಣೆಗಾಗಿ ಸಹಕರಿಸಿರುವದರಿಂದ ಪಾಪಭಾಗಿ ಯಲ್ಲವು. ॥೬೮॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಆರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಷಷ್ಠ ಸ್ಕಂಧೇ

### || ಸಪ್ತಮೋಽಧ್ಯಾಯಃ ||

### ಏಳನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಅಥ ತಂ ಪತಿತಂ ದೃಷ್ಟ್ವಾ ವಿಷ್ಣುರ್ವಿಷ್ಣುಪುರೀಂ ಯಯೌ ।**
**ಮನಸಾ ಶಂಕಮಾನಸ್ತು ತಸ್ಯ ಹತ್ಯಾಕೃತಂ ಭಯಂ ॥೧॥**

**ಇಂದ್ರೋಽಪಿ ಭಯಸಂತ್ರಸ್ತೋ ಯಯಾವಿಂದ್ರಪುರೀಂ ತತಃ ।**
**ಮುನಯೋ ಭಯಸಂವಿಗ್ನಾ ಹ್ಯಭವನ್ನಿಹತೇ ರಿಪೌ ॥೨॥**

---

ವೃತ್ರಾಸುರನನ್ನು ಇಂದ್ರನು ಗಟ್ಟಿಯಾದ ನೊರೆಯಿಂದ ಹೊಡೆದ ನಂತರ ಅವನು ಭೂಮಿಯಲ್ಲಿ ಬಿದ್ದನು. ವೃತ್ರಾಸುರನು ಹತನಾಗಿ ಬಿದ್ದುದನ್ನು ನೋಡಿ ವಿಷ್ಣುವು ತನ್ನ ಪಟ್ಟಣವಾದ ವೈಕುಂಠಕ್ಕೆ ಪ್ರಯಾಣಮಾಡಿದನು. ಆದರೆ ವಿಷ್ಣುವಿಗೆ ವೃತ್ರಾಸುರನನ್ನು ನಾಶಮಾಡಲು ತಾನೂ ಸೇರಿದ್ದಕಾರಣ ತನಗೂ ಅವನ ಕೊಲೆಯಿಂದುಂಟಾದ ಪಾತಕವು, ಬ್ರಹ್ಮಹತ್ಯೆಯು, ಉಂಟೋ ಏನೋ ಎಂಬುದಾಗಿ ಆತಂಕವು ಬಂದಿತು. ||೧||

ಇಂದ್ರನಾದರೋ ವೃತ್ರನು ನೆಲಕ್ಕೆ ಬಿದ್ದುದನ್ನು ನೋಡಿಕೊಂಡು ಅವನ ಕೊಲೆಯಿಂದುಂಟಾದ ಬ್ರಹ್ಮಹತ್ಯೆಯ ಭಯದಿಂದ ನಡುಗಿದವನಾಗಿ ತನ್ನ ಪಟ್ಟಣಕ್ಕೆ ಹೋದನು. (ಯಾರು ಯಾರ ಸಂಬಂಧವಾದ ನಾಶದಿಂದ ತನಗೆ ಹರ್ಷಾದಿಗಳುಂಟಾಗುವುದೆಂದು ಪೂರ್ಣವಾದ ನಂಬಿಕೆಯನ್ನು ಇಟ್ಟುಕೊಂಡು ಕೇವಲ ದುಷ್ಕಾರ್ಯದಲ್ಲಿ ಆಸಕ್ತರಾಗಿರುವರೋ, ಮತ್ತು ಆಯಾಯ ಕರ್ಮಗಳಲ್ಲಿ ಭಾಗಿಗಳಾಗಿ ಆಯಾಯ ಕೆಲಸಗಳನ್ನು ಮಾಡುವರೋ, ಅವರಿಗೆಲ್ಲರಿಗೂ ಆಯಾಯ ಕರ್ಮಫಲಗಳು ಬರುವುವು. ಆದ್ದರಿಂದ ಆ ವೃತ್ರನ ಮತ್ತು ವಿಶ್ವರೂಪನ ವಧೆಯಿಂದ ಬ್ರಹ್ಮ

ಕಿಮಸ್ಮಾಭಿಃ ಕೃತಂ ಪಾಪಂ ಯದಸೌ ನಿಹತಃ ಕಿಲ ।
ಮುನಿಶಬ್ದೋ ವೃಥಾ ಜಾತಸ್ಸುರೇಶಸ್ಯ ಚ ಸಂಗಮಾತ್ ॥೩॥

ಅಸ್ಮಾಕಂ ವಚನಾತ್ ವೃತ್ರೋ ವಿಶ್ವಾಸಮಗಮತ್ಕಿಲ ।
ವಿಶ್ವಾಸಘಾತಿನಃ ಸಂಗಾತ್ ವಯಂ ವಿಶ್ವಾಸಘಾತಕಾಃ ॥೪॥

ಧಿಗಿಯಂ ಮಮತಾ ಪಾಪಮೂಲಮೇವಮನರ್ಥಕೃತ್ ।
ಯದಸ್ಮಾಭಿಶ್ಛಲಂ ಕೃತ್ವಾ ಶಪಥೈರ್ವಂಚಿತೋಽಸುರಃ ॥೫॥

---

ಹತ್ಯೆಯು ಬಂದಿತು.) ಇಂದ್ರನಿಗೂ, ವೃತ್ರಾಸುರನಿಗೂ, ಸಂಧಿಯನ್ನು ಮಾಡಿಸುವುದಕ್ಕಾಗಿ ಸೇರಿದ್ದ ಋಷಿಗಳು ಇಂದ್ರನ ಶತ್ರುವು ಹತನಾದ ನಂತರ ತಾವೆಲ್ಲರೂ ಇಂದ್ರನೊಡನೆ ಸಹಕರಿಸಿದ್ದಕಾರಣ ತಮ್ಮ ವಿಷಯದಲ್ಲೂ ಪಾಪದ ಸಂದೇಹದಿಂದ ಭಯದಿಂದ ಉದ್ವಿಗ್ನರಾದರು ! ॥೨॥

ನಾವುಗಳೆಲ್ಲರೂ ಸೇರಿ ವೃತ್ರಾಸುರನು ನಾಶವಾಗುವುದಕ್ಕೆ ತಕ್ಕ ಕೆಲಸವನ್ನು ಮಾಡಿದೆವೇನು? ಇದೇನು ? ನಾವೆಲ್ಲರೂ ಮಾಡಿದ ಕೆಲಸವೇನು ? ಈಗ ಇವನನ್ನು ಇಂದ್ರನು ಕೊಂದದ್ದೇನು ? ಈ ಇಂದ್ರನ ಸಹವಾಸದಿಂದ ನಮಗೆ ಇರುವ ಮುನಿಗಳೆಂಬ ಹೆಸರು ವ್ಯರ್ಥವಾಯಿತು ! ನಾವೆಲ್ಲರೂ, ಇವರಿಬ್ಬರೂ ಸ್ನೇಹದಿಂದ ಸುಖವಾಗಿ ಇರಲಿ ಎಂದು ಮಾಡಿದ ಕೆಲಸವು ಹೀಗೆ ಅನರ್ಥದಲ್ಲಿ ಪರಿಣಮಿಸಿತು ! ॥೩॥

ವೃತ್ರಾಸುರನು ನಮ್ಮ ಮಾತಿನಲ್ಲಿ ನಂಬಿಕೆಯನ್ನಿಟ್ಟುಕೊಂಡು ಇಂದ್ರನಲ್ಲೂ ವಿಶ್ವಾಸವನ್ನು ಹೊಂದಿದನು. ನಂಬಿಕೆಯನ್ನು ಹುಟ್ಟಿಸಿ ಕೊಲ್ಲುವವನಾದ ಈ ಇಂದ್ರನ ಸಂಗದಿಂದ ನಾವೆಲ್ಲರೂ ವಿಶ್ವಾಸಘಾತುಕರಾದೆವು ! ॥೪॥

ಇಂದ್ರನು ವಂಚಕನಲ್ಲವೆಂದು ನಾವುಗಳು ಮೋಸದ ಕೂಟವನ್ನು ಮಾಡಿಕೊಂಡು ಪ್ರತಿಜ್ಞೆಯನ್ನು ಮಾಡಿಸಿದೆವು. ವೃತ್ರಾಸುರನಿಗೆ ಈಗ ಮೋಸವಾಯಿತು. ಹೀಗೆ ಮೋಸವು ಉಂಟಾಗಲು ಇಂದ್ರನಲ್ಲಿ ನಮಗಿದ್ದ ನಾನು, ನನ್ನದು ಎಂಬ ಅಹಂಕಾರ ಮಮಕಾರಗಳು ಕಾರಣವು. ಇದರಿಂದ ಮೋಸದ ಪಾತಕಕ್ಕೆ ಕಾರಣವು ಉಂಟಾಗಿರುವುದು. ಈಗ ಈ ತೊಂದರೆಯೋ ಹೀಗೆ ಒದಗಿರುವುದು. ಆದ್ದರಿಂದ ಈ ಅಹಂಕಾರ ಮಮಕಾರಗಳಿಗೆ ಧಿಕ್ಕಾರವು ಇರಲಿ. ॥೫॥

ಮಂತ್ರಕೃದ್ಬುದ್ಧಿದಾತಾ ಚ ಪ್ರೇರಕಃ ಪಾಪಕಾರಿಣಾಮ್ ।
ಪಾಪಭಾಕ್ಸಭವೇನ್ನೂನಂ ಪಕ್ಷಕರ್ತಾ ತಥೈವ ಚ ॥೬॥

ವಿಷ್ಣುನಾಪಿ ಕೃತಂ ಪಾಪಂ ಯತ್ಸಾಹಾಯ್ಯಮವಾಪ್ತವಾನ್ ।
ವಜ್ರಂ ಪ್ರವಿಶ್ಯ ಯೇನಾಸೌ ಪಾತಿತಸ್ಸತ್ವಮೂರ್ತಿನಾ ॥೭॥

ನೂನಂ ಸ್ವಾರ್ಥಪರಃ ಪ್ರಾಣೀ ನ ಪಾಪಾತ್ ತ್ರಾಸಮಶ್ನುತೇ ।
ಹರಿಣಾ ಹರಿಸಂಗೇನ ಸರ್ವಥಾ ದುಷ್ಕೃತಂ ಕೃತಂ ॥೮॥

ದ್ವಾವೇವಸ್ತಃ ಪದಾರ್ಥಾನಾಂ ದ್ವಾವೇವ ನಿಧನಂ ಗತೌ ।
ಪ್ರಥಮಶ್ಚ ತುರೀಯಶ್ಚ ಯೌ ತ್ರೈಲೋಕ್ಯಾಂ ತು ದುರ್ಲಭೌ ॥೯॥

---

ಪಾತಕವನ್ನು ಎಂದರೆ ಪಾಪವುಂಟಾಗುವ ಕೆಲಸವನ್ನು ಮಾಡಲು ಆಲೋಚನೆಯನ್ನು ಹೇಳಿಕೊಡುವವನೂ, ಹೀಗೆಯೇ ಮಾಡಬೇಕೆಂದು ನಿರ್ಧರಿಸುವವನೂ, ಕೆಟ್ಟಕೆಲಸವನ್ನು ಮಾಡುವವರನ್ನು ಪ್ರೇರಿಸುವವನೂ, ಹೇಗೆ ಪಾಪದ ಫಲಕ್ಕೆ ಭಾಗಿಗಳಾಗುವರೋ, ಅದರಂತೆ ಮೋಸಗಾರರ ಜೊತೆಯಲ್ಲಿ ಸೇರಿರುವವನೂ, ಪಾಪದ ಫಲವನ್ನು ಅನುಭವಿಸುವನು! ಇದು ಖಂಡಿತವು. ॥೬॥

ಸತ್ವಗುಣದಿಂದ ಕೂಡಿರುವ ದೇವತೆಯಾದ ಯಾವ ವಿಷ್ಣುವೂ ವಜ್ರಾಯುಧವನ್ನು ಪ್ರವೇಶಿಸಿ ವೃತ್ರಾಸುರನ ವಧೆಗೆ ಸಹಾಯಮಾಡಿ, ವೃತ್ರಾಸುರನನ್ನು ಕೊಲ್ಲಲು ನೆರವಾದನೋ, ಆ ಕಾರಣದಿಂದ ಪಾಪವನ್ನು ಅವನೂ ಮಾಡಿದವನಾದನು! ॥೭॥

ಕೇವಲ ಸ್ವಪ್ರಯೋಜನಕ್ಕಾಗಿಯೇ ಕೆಲಸಮಾಡುವವನು ದುಷ್ಟವಾದ ಕೆಲಸದ ಮಾಡುವಿಕೆಯಿಂದ ಭಯವನ್ನು ಹೊಂದಲಾರನು. ಇಂದ್ರನ ಸಹವಾಸದಿಂದ ವಿಷ್ಣುವು ಈಗ ಸರ್ವಪ್ರಕಾರದಿಂದಲೂ ಕೆಟ್ಟಕೆಲಸವನ್ನು ಮಾಡಿದನು. ॥೮॥

ಲೋಕದಲ್ಲಿ ಮನುಷ್ಯರು ಸಾಮಾನ್ಯವಾಗಿ ಹೊಂದಬಹುದಾಗಿರುವ, ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕರಲ್ಲಿ ಅರ್ಥ, ಕಾಮಗಳೆಂಬ ಎರಡು ಪುರುಷಾರ್ಥಗಳೇ ಉಳಿಯುವಂತಾಗುವುವು. ಮೊದಲನೆಯದಾದ ಧರ್ಮವೂ, ನಾಲ್ಕನೆಯದಾದ ಮೋಕ್ಷವೂ ಸಹ ಮೂರು ಲೋಕದಲ್ಲಿಯೂ ಜನರಿಂದ ಸಾಮಾನ್ಯವಾಗಿ ಹೊಂದಲು ಅಸಾಧ್ಯವಾಗಿರುವುದು. ಈಗಲಾದರೋ

ಅರ್ಥಕಾಮೌ ಪ್ರಶಸ್ತೌ ದ್ವೌ ಸರ್ವೇಷಾಂ ಸಮ್ಮತೌ ಪ್ರಿಯೌ ।
ಧರ್ಮಧರ್ಮೇತಿ ವಾಗ್ವಾದೋ ದಂಭೋಽಯಂ ಮಹತಾಮಪಿ ॥೧೦॥

ಮುನಯೋಽಪಿ ಮನಸ್ತಾಪಮೇವಂ ಕೃತ್ವಾ ಪುನಃ ಪುನಃ ।
ಜಗ್ಮುಃ ಸ್ವಾನಾಶ್ರಮಾನೇವ ವಿಮನಸ್ಕಾ ಹತೋದ್ಯಮಾಃ ॥೧೧॥

ತ್ವಷ್ಟಾ ತು ನಿಹತಂ ಶ್ರುತ್ವಾ ಪುತ್ರಮಿಂದ್ರೇಣ ಭಾರತ ।
ರುರೋದ ದುಃಖಸಂತಪ್ತೋ ನಿರ್ವೇದಮಗಮತ್ಪುನಃ ॥೧೨॥

---

ಇಂದ್ರನು ಮಾಡಿದ ವೃತ್ರಾಸುರನ ವಧೆಯಲ್ಲಿ ಆ ಪ್ರಕಾರವಾದ ಇವೆರಡೂ ನಾಶವನ್ನು ಹೊಂದಿದುವು. ||೯||

ಅರ್ಥ, ಕಾಮವೆಂಬ ಪುರುಷಾರ್ಥಗಳು ಲೋಕದಲ್ಲಿ ಎಲ್ಲರಿಗೂ ಪ್ರಶಸ್ತಗಳಾಗಿ ತೋರುತ್ತಾ ಪ್ರೀತಿಪಾತ್ರವಾಗಿರುವುವು. ದೊಡ್ಡವರಾದರೂ ಕೂಡ ಧರ್ಮವು ಶ್ರೇಷ್ಠವು. ಧರ್ಮದ ಕೆಲಸವನ್ನು ಮಾಡಬೇಕು. ಧರ್ಮವನ್ನು ಆಚರಿಸಬೇಕು. ಎಂದು ವಾಗ್ವಾದವನ್ನು ಮಾಡುತ್ತಾ ದಾಂಭಿಕರಾಗಿ ನಡೆಯುತ್ತಿರುವರು ! ||೧೦||

ಇಂದ್ರನು ಅರ್ಥ ಮತ್ತು ಕಾಮ ಇವೆರಡರಲ್ಲಿ ಆಸಕ್ತನಾಗಿ, ಇವೆರಡನ್ನು ಮುಖ್ಯವೆಂದೆಣಿಸಿಕೊಂಡಿರುವನು. ವಿಷ್ಣುವು ಇದಕ್ಕೆ ಸಹಾಯಕನಾಗಿರುವನು. ಇದರಿಂದ ಎಲ್ಲರೂ ಕಾಮಪರಾಯಣರಾಗುತ್ತಿರುವರು. ಧರ್ಮವೆಂಬುದಕ್ಕೆ ಆಕಾರವಿಲ್ಲದೆ ಇರುವುದು. ಧರ್ಮವನ್ನು ಹೊಂದುವುದು ಇದನ್ನು ಆಚರಿಸಿಕೊಂಡು ಹೋಗುವುದು, ಎಂದು ಬಾಯಿನಲ್ಲಿ ಮಾತ್ರ ಎಲ್ಲರೂ ಹೇಳುತ್ತಾ ದಾಂಭಿಕರಾಗಿರುವರು, ಎಂದು ಋಷಿಗಳು ಪದೇ ಪದೇ ಮಾತನಾಡಿಕೊಳ್ಳುತ್ತಾ ಮನಸ್ಸಿನಲ್ಲಿ ಸಂಕಟವುಳ್ಳವರಾಗಿ, ಯಾವ ಕೆಲಸವನ್ನು ಮಾಡುವುದಕ್ಕೂ ಉತ್ಸಾಹವಿಲ್ಲದವರಾಗಿಯೂ, ವ್ಯರ್ಥವಾದ ಪ್ರಯತ್ನಗಳುಳ್ಳವರಾಗಿಯೂ ಪಶ್ಚಾತ್ತಾಪ ಪಡುವವರಾಗಿ ತಮ್ಮ ತಮ್ಮ ಆಶ್ರಮಗಳನ್ನು ಕುರಿತು ಹೊರಟುಹೋದರು. ||೧೧||

ಎಲೈ ಜನಮೇಜಯರಾಜನೇ ಕೇಳು, ತ್ವಷ್ಟೃಬ್ರಹ್ಮನಾದರೋ ಇಂದ್ರನಿಂದ ತನ್ನ ಮಗನಾದ ವೃತ್ರನು ಹತನಾದುದನ್ನು ಕೇಳಿ ದುಃಖದಿಂದ ಬಹಳ ಸಂಕಟವುಳ್ಳವನಾಗಿ ಅತ್ತನು. ಮತ್ತು ಹೆಚ್ಚಾದ ವೈರಾಗ್ಯ ಬೇಸರವನ್ನು ಹೊಂದಿದನು. ||೧೨||

ಯತ್ರಾಸೌ ಪತಿತಸ್ತತ್ರ ಗತ್ವಾ ವೀಕ್ಷ್ಯ ತಥಾಗತಂ ।
ಸಂಸ್ಕಾರಂ ಕಾರಯಾಮಾಸ ವಿಧಿವತ್ ಪಾರಲೌಕಿಕಂ ॥೧೩॥

ಸ್ನಾತ್ವಾಽಸ್ಯ ಸಲಿಲಂ ದತ್ವಾ ಕೃತ್ವಾ ಚೈವೌರ್ಧ್ವ ದೈಹಿಕಂ ।
ಶಶಾಪೇಂದ್ರಂ ಸ ಶೋಕಾರ್ತಃ ಪಾಪಿಷ್ಠಂ ಮಿತ್ರಘಾತುಕಂ ॥೧೪॥

ಯಥಾ ಮೇ ನಿಹತಃ ಪುತ್ರಃ ಪ್ರಲೋಭ್ಯ ಶಪಥೈರ್ಭೃಶಂ ।
ತಥೇಂದ್ರೋಽಪಿ ಮಹದ್ದುಃಖಂ ಪ್ರಾಪ್ನೋತು ವಿಧಿನಿರ್ಮಿತಂ ॥೧೫॥

ಇತಿ ಶಪ್ತ್ವಾ ಸುರೇಶಾನಂ ತ್ವಷ್ಟಾ ತಾಪಸಸನ್ನಿತಃ ।
ಮೇರೋಃ ಶಿಖರಮಾಸ್ಥಾಯ ತಪಸ್ತೇಪೇ ಸುದುಷ್ಕರಂ ॥೧೬॥

॥ ಜನಮೇಜಯ ಉವಾಚ ॥

ಹತ್ವಾ ತ್ವಾಷ್ಟ್ರಂ ಸುರೇಶೋಽಥ ಕಾಮವಸ್ಥಾಮವಾಪ್ತವಾನ್ ।
ಸುಖಂ ವಾ ದುಃಖಮೇವಾಗ್ರೇ ತನ್ಮೇ ಬ್ರೂಹಿ ಪಿತಾಮಹ ॥೧೭॥

---

ಯಾವ ಪ್ರದೇಶದಲ್ಲಿ ಆ ವೃತ್ರನು ಹತನಾಗಿ ಬಿದ್ದಿದ್ದನೋ ಆ ಸ್ಥಳಕ್ಕೆ ಹೋಗಿ ಅವನು ಹಾಗೆ ಶೋಚನೀಯನಾಗಿರುವುದನ್ನು ನೋಡಿ, ಅವನಿಗೆ ಪರಲೋಕ ಸಂಬಂಧವಾದ ಔರ್ಧ್ವದೈಹಿಕಸಂಸ್ಕಾರಗಳನ್ನು ತ್ವಷ್ಟೃವು ಮಾಡಿಸಿದನು. ||೧೩||

ತ್ವಷ್ಟೃಬ್ರಹ್ಮನು ಸ್ನಾನಮಾಡಿ, ವೃತ್ರನಿಗೆ ಅಂತ್ಯಸಂಸ್ಕಾರಗಳನ್ನು ಮಾಡಿ, ತರ್ಪಣಾದಿಗಳನ್ನು ಕೊಟ್ಟನು. ಅನಂತರದಲ್ಲಿ ವ್ಯಸನದಿಂದ ಸಂಕಟವುಳ್ಳವನಾಗಿ ಪಾಪಿಯಾಗಿಯೂ, ಮಿತ್ರನನ್ನು ಕೊಂದವನಾಗಿಯೂ ಇರುವ ಇಂದ್ರನನ್ನು ಕುರಿತು ಹೀಗೆ ಶಾಪವನ್ನು ಕೊಟ್ಟನು. ||೧೪||

ಇಂದ್ರನು ನನ್ನ ಮಗನನ್ನು ಅನೇಕ ಪ್ರಕಾರವಾದ ಪ್ರತಿಜ್ಞೆಗಳಿಂದ ನಂಬಿಕೆಯನ್ನು ಉಂಟುಮಾಡಿ ಹೇಗೆ ಕೊಂದನೋ, ಹಾಗೆಯೇ ವಿಧಿಯು ಬಹಳವಾದ ದುಃಖವನ್ನು ಉಂಟುಮಾಡಿ ಅದನ್ನು ಇಂದ್ರನೂ ಅನುಭವಿಸುವಂತೆ ಮಾಡಲಿ. ||೧೫||

ತ್ವಷ್ಟೃಬ್ರಹ್ಮನು ದುಃಖದಿಂದ ಕೂಡಿದವನಾಗಿ, ಇಂದ್ರನಿಗೆ ಹೀಗೆ ಶಾಪವನ್ನು ಕೊಟ್ಟು, ಮೇರುಪರ್ವತದ ಶಿಖರಕ್ಕೆ ಹೋಗಿ, ಅಲ್ಲಿ ಯಾರೂ ಮಾಡದಿರುವ ಕಠಿನವಾದ ತಪಸ್ಸನ್ನು ಚಿತ್ತಶಾಂತಿಗೋಸ್ಕರ ಮಾಡಲುಪಕ್ರಮಿಸಿದನು. ||೧೬||

ಜನಮೇಜಯರಾಜನು ಹೇಳಿದನು, ಓ ಪಿತಾಮಹನಾದ ವ್ಯಾಸಋಷಿಯೇ, ಇಂದ್ರನು ತ್ವಷ್ಟೃಬ್ರಹ್ಮನ ಮಗನಾದ ವೃತ್ರಾಸುರನನ್ನು ಕೊಂದನಂತರ, ಸುಖವನ್ನು

|| ವ್ಯಾಸ ಉವಾಚ ||

**ಕಿಂ ಪೃಚ್ಛಸಿ ಮಹಾಭಾಗ ಸಂದೇಹಃ ಕೀದೃಶಸ್ತವ ।**
**ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮಶುಭಾಶುಭಂ ॥೧೮॥**

**ಬಲಿಷ್ಠೈರ್ದುರ್ಬಲೈರ್ವಾಽಪಿ ಸ್ವಲ್ಪಂವಾ ಬಹುವಾ ಕೃತಂ ।**
**ಸರ್ವಥೈವ ಹಿ ಭೋಕ್ತವ್ಯಂ ಸದೇವಾಸುರಮಾನುಷೈಃ ॥೧೯॥**

**ಶಕ್ರಾಯೇತ್ಥಂ ಮತಿರ್ದತ್ತಾ ಹರಿಣಾ ವೃತ್ರಘಾತನೇ ।**
**ಪ್ರವಿಷ್ಟೋಽಥ ಪವಿಂ ವಿಷ್ಣುಸ್ಸಹಾಯಃ ಪ್ರತ್ಯಪದ್ಯತ ॥೨೦॥**

---

ಅನುಭವಿಸಿದನೋ, ಅಥವಾ ದುಃಖವನ್ನು ಅನುಭವಿಸಿದನೋ, ಎಂಬ ವಿಷಯವನ್ನು ಇನ್ನು ಮುಂದೆ ನನಗೆ ತಿಳಿಯ ಹೇಳು. ||೧೭||

ವ್ಯಾಸಋಷಿಯು ಹೇಳಿದನು— ಎಲೈ ಅದೃಷ್ಟಶಾಲಿಯಾದ ಜನಮೇಜಯ ರಾಜನೇ, ಇದೇನು? ಹೀಗೆ ನೀನು ಪ್ರಶ್ನೆಮಾಡುತ್ತೀಯೆ? ನಿನ್ನ ಮನಸ್ಸಿನಲ್ಲಿ ಸಂದೇಹವು ತಾನೇ ಹೇಗೆ ಉಂಟಾಯಿತು? ಏಕೆಂದರೆ ಯಾವ ಪ್ರಾಣಿಯೇ ಆದಾಗ್ಯೂ ತಾನು ಮಾಡಿದ ಕರ್ಮವು ಕೆಟ್ಟದ್ದೋ ಅಥವಾ ಒಳ್ಳೆಯದೋ, ಅದರ ಫಲವನ್ನು ಆ ಪ್ರಾಣಿಯು ಅವಶ್ಯಕವಾಗಿ ಅನುಭವಿಸಿಯೇ ತೀರಬೇಕಾಗಿರುವುದು! ||೧೮||

ಬಲವುಳ್ಳವರಾಗಲಿ, ಬಲವಿಲ್ಲದವರಾಗಲಿ ದೇವತೆಗಳು, ರಾಕ್ಷಸರು, ಮನುಷ್ಯರು ಇವರುಗಳಲ್ಲಿ ಯಾರೇ ಆಗಲಿ, ಅವರು ಮಾಡಿದ ಕೆಲಸವು ಕೊಂಚವಾಗಲಿ, ಹೆಚ್ಚಾದುದಾಗಿರಲಿ ತಾವು ಮಾಡಿದ ಕರ್ಮದ ಫಲವನ್ನು ಸರ್ವಪ್ರಕಾರದಿಂದಲೂ ಅನುಭವಿಸಿಯೇ ತೀರಬೇಕು. ||೧೯||

ವೃತ್ರಾಸುರನನ್ನು ಕೊಲ್ಲಬೇಕೆಂದಿರುವ ಇಂದ್ರನಿಗೆ ವಿಷ್ಣುವಿನಿಂದ ಹಾಗೆ ಕೊಲ್ಲಲು ತಕ್ಕ ಉಪಾಯದ ತಿಳುವಳಿಕೆಯು ಹೇಳಿ ಕೊಡಲ್ಪಟ್ಟಿತು. ಅಲ್ಲದೆ ವಿಷ್ಣುವೂ ಕೂಡ ವಜ್ರಾಯುಧದಲ್ಲಿ ಪ್ರವೇಶಿಸಿದ್ದನು. ವೃತ್ರಾಸುರನನ್ನು ಕೊಲ್ಲುವುದಕ್ಕೆ ವಿಷ್ಣುವೂ ಹೀಗೆ ಸಹಾಯಕನೂ ಆದನು! ||೨೦||

ನ ಚಾಪಾದಿಸಹಾಯೋಽಭೂದ್ವಾಸುದೇವಃ ಕಥಂಚನ ।
ಸಮಯೇ ಸ್ವಜನಸ್ಸರ್ವಃ ಸಂಸಾರೇಽಸ್ಮಿನ್ ನರಾಧಿಪ ॥೨೦॥

ದೈವೇ ವಿಮುಖತಾಂ ಪ್ರಾಪ್ತೇ ನ ಕೋಽಪ್ಯಸ್ತಿ ಸಹಾಯವಾನ್ ।
ಪಿತಾ ಮಾತಾ ತಥಾ ಭಾರ್ಯಾ ಭ್ರಾತಾ ವಾಥ ಸಹೋದರಃ ॥೨೨॥

ಸೇವಕೋ ವಾಽಪಿ ಮಿತ್ರಂ ವಾ ಪುತ್ರಶ್ಚೈವ ತಥೌರಸಃ ।
ಪ್ರತಿಕೂಲೇ ಗತೇ ದೈವೇ ನ ಕೋಽಪ್ಯೇತಿ ಸಹಾಯತಾಂ ॥೨೩॥

ಭೋಕ್ತಾ ಪಾಪಸ್ಯ ಪುಣ್ಯಸ್ಯ ಕರ್ತಾ ಭವತಿ ಸರ್ವಥಾ ।
ವೃತ್ರಂ ಹತ್ವಾ ಗತಾಸ್ಸರ್ವೇ ನಿಸ್ತೇಜಸ್ಕಶ್ಶಚೀಪತಿಃ ॥೨೪॥
ಶೇಪುಸ್ತಂ ತ್ರಿದಶಾಸ್ಸರ್ವೇ ಬ್ರಹ್ಮಹೇತ್ಯಬ್ರುವನ್ ಶನೈಃ ।

---

ವಿಷ್ಣುವು ಹೀಗೆ ವೃತ್ರನ ಕೊಲೆಯಲ್ಲಿ ಸಹಾಯಕನಾದರೂ, ಅದರಿಂದ ಉಂಟಾದ ಇಂದ್ರನ ವಿಪತ್ಕಾಲದಲ್ಲಿ, ವಿಷ್ಣುವೂ ಆ ವಿಪತ್ತನ್ನು ಇಂದ್ರನು ಅನುಭವಿಸುವುದನ್ನು ತಪ್ಪಿಸಲು ಹೇಗೂ ಸಹಾಯಕನಾಗಲಿಲ್ಲ! ಎಲೈ ರಾಜನೇ ಕೇಳು, ಈ ಸಂಸಾರದಲ್ಲಿ ದೈವಗತಿಯು ಪ್ರತಿಕೂಲವಾದರೆ, ಅಂಥಾ ಕಾಲದಲ್ಲಿ ಸ್ವಜನರೆಲ್ಲರೂ ಎಂದರೆ, ತಂದೆ, ತಾಯಿ, ಹೆಂಡಿತಿ, ಅಣ್ಣತಮ್ಮಂದಿರು, ಒಡಹುಟ್ಟಿದವರು ಇವರು ಯಾರೇ ಆಗಲಿ ಸಹಾಯಕರಾಗುವುದಿಲ್ಲವು! ॥೨೧-೨೨॥

ದೈವಗತಿಯು ಪ್ರತಿಕೂಲವಾಗಿರುವಾಗ ವಿಪತ್ತುಗಳನ್ನು ಹೊಂದಿದವನಿಗೆ ಆಳಾಗಲಿ, ಸ್ನೇಹಿತನಾಗಲಿ, ಹೊಟ್ಟೆಯಲ್ಲಿ ಹುಟ್ಟಿದ ಮಗನೇ ಆಗಲಿ ಯಾರೂ ಕೂಡ ಆ ವಿಪತ್ತನ್ನು ತಪ್ಪಿಸಲು ಸಹಾಯವನ್ನು ಮಾಡಲಾರರು. ॥೨೩॥

ಪುಣ್ಯಕರವಾದ ಅಥವಾ ಪಾಪಕರವಾದ ಕರ್ಮವನ್ನು ಮಾಡಿದವನು ಅದರ ಫಲವನ್ನು ಸರ್ವಪ್ರಕಾರದಿಂದಲೂ ಅನುಭವಿಸಿಯೇ ತೀರುವನು. ವೃತ್ರನನ್ನು ಕೊಂದನಂತರ ಎಲ್ಲರೂ ಹೊರಟುಹೋದರು. ಸ್ವರ್ಗದಲ್ಲಿರುವ ದೇವತೆಗಳು ಎಲ್ಲರೂ ಇಂದ್ರನ ಪಕ್ಷದವರೇ ಆಗಿದ್ದರೂ ಶಚೀದೇವಿಗೆ ಪತಿಯಾಗಿದ್ದರೂ, ಇಂದ್ರನು ಮಾತ್ರ ತೇಜೋಹೀನನಾಗುತ್ತಾ ಬಂದನು! ನುತ್ತು ಇವನು ಬ್ರಹ್ಮಹತ್ಯವನ್ನು ಮಾಡಿದವನು ಎಂದು ಪರಸ್ಪರವಾಗಿ ದೇವತೆಗಳೇ ಹಳಿದು ಮಾತನಾಡಲುಪಕ್ರಮಿಸಿದರು. ॥೨೪॥

**ಕೋ ನಾಮ ಶಪಥಾನ್ ಕೃತ್ವಾ ಸತ್ಯಂ ದತ್ವಾ ವಚಃ ಪುನಃ ॥೨೫॥**

**ಜಿಘಾಂಸತಿ ಸುವಿಶ್ವಸ್ತಂ ಮುನಿಂ ಮಿತ್ರತ್ವಮಾಗತಂ ।**
**ದೇವಗೋಷ್ಠ್ಯಾಂ ಸುರೋದ್ಯಾನೇ ಗಂಧರ್ವಾಣಾಂ ಸಮಾಗಮೇ ॥೨೬॥**

**ಸರ್ವತ್ರೈವ ಕಥಾ ತಸ್ಯ ವಿಸ್ತಾರಮಗಮತ್ಕಿಲ ।**
**ಕಿಂ ಕೃತಂ ದುಷ್ಕೃತಂ ಕರ್ಮ ಶಕ್ರೇಣಾದ್ಯ ಜಿಘಾಂಸತಾ ॥೨೭॥**

**ವೃತ್ರಂ ಛಲೇನ ವಿಶ್ವಸ್ತಂ ಮುನಿಭಿಶ್ಚ ಪ್ರತಾರಿತಂ ।**
**ವೇದಪ್ರಮಾಣಮುತ್ಸೃಜ್ಯ ಸ್ವೀಕೃತಂ ಸೌಗತಂ ಮತಂ ॥೨೮॥**
**ಯದಯಂ ನಿಹತ ಶ್ಶತ್ರುರ್ವಂಚಯಿತ್ವಾಽತಿಸಾಹಸಾತ್ ।**

---

ನಿಜವಾದ ಪ್ರತಿಜ್ಞೆಯನ್ನು ಮಾಡಿಕೊಟ್ಟು ನಂಬಿಕೆಗೆ ಅರ್ಹವಾದ ಮಾತುಗಳನ್ನು ಅನೇಕಸಾರಿ ಹೇಳಿ ನಂಬಿಕೆಯನ್ನುಂಟುಮಾಡಿ, ಸ್ನೇಹಿತನೆಂದು ಪೂರ್ಣವಾದ ನಂಬಿಕೆಯನ್ನು ಹೊಂದಿದ್ದ ಮುನಿಯಾದ ವೃತ್ರನನ್ನು ಯಾವನುತಾನೇ ಕೊಲ್ಲಲು ಇಚ್ಛೆಯನ್ನು ಮಾಡುವನು? ಎಂಬುದಾಗಿ ದೇವಸಭೆಯಲ್ಲಿಯೂ, ನಂದನವನದಲ್ಲಿಯೂ, ಗಂಧರ್ವರ ಗುಂಪಿನಲ್ಲಿಯೂ ಸಹ ಎಲ್ಲ ಕಡೆಗಳಲ್ಲಿಯೂ ಆ ಇಂದ್ರನ ಕೆಟ್ಟ ಹೆಸರು ದಿನೇ ದಿನೇ ಹೆಚ್ಚುತ್ತಾ ಬಂದಿತು. ॥೨೬॥

ಈ ಸಂದರ್ಭದಲ್ಲಿ ಮುನಿಗಳೂ ಬಹಳಮಟ್ಟಿಗೆ ನಂಬಿಕೆಯನ್ನು ಹೇಳಿದುದರಿಂದ ಇಂದ್ರನಲ್ಲಿ ಪೂರ್ಣವಾದ ನಂಬಿಕೆಯನ್ನು ಇರಿಸಿಕೊಂಡಿದ್ದ ವೃತ್ರಾಸುರನನ್ನು ಮೋಸದಿಂದ ಕೊಲ್ಲಲೆಳಸಿದ ಇಂದ್ರಸಿಂದ ಎಂಥಾ ವಿಶ್ವಾಸಘಾತಕತನದ, ದ್ರೋಹದ ಕೆಟ್ಟಕೆಲಸವು ಮಾಡಲ್ಪಟ್ಟಿತು! ಈ ವಿಷಯದಲ್ಲಿ ಮುನಿಗಳೂ ಮೋಸಮಾಡಿದ ಹಾಗೆಯೇ ಆಯಿತು! ॥೨೭॥

ಇಂದ್ರನು ಬಹಳ ಸಾಹಸವನ್ನು ಮಾಡಿ ಶತ್ರುವಾದ ವೃತ್ರಾಸುರನನ್ನು ಮೋಸದಿಂದ ಕೊಂದಿರುವುದು, ವೇದವು ಪ್ರಮಾಣವು ಎಂಬ ನಂಬಿಕೆಯನ್ನು ಬಿಟ್ಟು ಅಲ್ಲಿ ಹೇಳಿ ಇರುವ ಧರ್ಮಕರ್ಮಗಳಿಗೆ ಬದ್ಧವಾಗದಿರುವ ಬೌದ್ಧಮತವನ್ನು ಅವಲಂಬಿಸಿಕೊಂಡವನು ಮಾಡಿದ ಕೆಲಸದಂತಾಯಿತು! ॥೨೮॥

**ಕೋಽ ನಾಮ ವಚನಂ ದತ್ವಾ ವಿಪರೀತಮಥಾಚರೇತ್ ॥೨೯॥**

**ವಿನಾ ಶಕ್ರಂ ಹರಿಂ ವಾಽಪಿ ಯಥಾಽಯಂ ವಿನಿಪಾತಿತಃ ।**
**ಏವಂ ವಿಧಾಃ ಕಥಾಶ್ಚಾನ್ಯಾಸ್ಸಮಾಜೇಷ್ವಭವನ್ ಭೃಶಂ ॥೩೦॥**

**ಶುಶ್ರಾವೇಂದ್ರೋಽಪಿ ವಿವಿಧಾಃ ಸ್ವಕೀರ್ತೇರ್ಹಾನಿಕಾರಕಾಃ ।**
**ಯಸ್ಯ ಕೀರ್ತಿರ್ಹತಾ ಲೋಕೇ ಧಿಕ್ ತಸ್ಯೈವ ಕುಜೀವಿತಂ ॥೩೧॥**

**ಯಂ ದೃಷ್ಟ್ವಾ ಪಥಿಗಚ್ಛಂತಂ ಶತ್ರುಃ ಸ್ಮೇರಮುಖೋಽಭವೇತ್ ।**
**ಇಂದ್ರದ್ಯುಮ್ನೋಽಪಿ ರಾಜರ್ಷಿಃ ಪತಿತಃ ಕೀರ್ತಿಸಂಕ್ಷಯಾತ್ ॥೩೨॥**

**ಸ್ವರ್ಗಾದಕೃತಪಾಪೋಽಸೌ ಪಾಪಕೃತ್ಕಿಂ ನ ಪಾತ್ಯತೇ ।**
**ಸ್ವಲ್ಪೇಽಪರಾಧೇಽಪಿ ನೃಪೋ ಯಯಾತಿಃ ಪತಿತಃ ಕಿಲ ॥೩೩॥**

---

ಇಂದ್ರನೂ, ವಿಷ್ಣುವೂ ಇವರನ್ನು ಹೊರತು ಮಾತನ್ನು ಕೊಟ್ಟು, ನಂಬಿಕೆಯನ್ನು ಹುಟ್ಟಿಸಿ ಅನಂತರದಲ್ಲಿ ಈ ವೃತ್ರನನ್ನು ಮೋಸದಿಂದ ಕೊಂದ ಹಾಗೆ ಧರ್ಮವಿರುದ್ಧವಾದ ಕೆಲಸವನ್ನು ಮಾಡುವವರು ಇನ್ನು ಯಾರುತಾನೇ ಈ ಪ್ರಪಂಚದಲ್ಲಿ ಇರುವರು ? ॥೨೯॥

ಇದೇರೀತಿಯಾಗಿರುವ ಇನ್ನೂ ಅನೇಕವಿಧವಾದ ದೂಷಣೆಯ ಮಾತುಗಳು ದೇವತೆಗಳ ಗುಂಪಿನಲ್ಲಿ ಬಹಳಮಟ್ಟಿಗೆ ನಡೆಯುತ್ತಿದ್ದುವು. ಇಂದ್ರನೂ ಕೂಡ ತನ್ನ ಕೀರ್ತಿಗೆ ಹಾನಿಯನ್ನು ಉಂಟುಮಾಡುವಂಥವಾದ ಈ ವರ್ತಮಾನಗಳೆಲ್ಲವನ್ನೂ ಕೇಳಿದನು. ॥೩೦॥

ಯಾವನ ಸಂಬಂಧವಾದ ಕೀರ್ತಿಯು ಲೋಕದಲ್ಲಿ ನಾಶವಾಗುವುದೋ, ಅವನ ನಿಕೃಷ್ಟವಾದ ಜೀವನಕ್ಕೆ ಧಿಕ್ಕಾರವಿರಲಿ! ಮತ್ತು ತನ್ನ ಕೀರ್ತಿಯನ್ನು ಹಾಳುಮಾಡಿಕೊಂಡಿರುವವನು ದಾರಿಯಲ್ಲಿ ಹೋಗುತ್ತಿದ್ದಾಗ ಅವನ ಶತ್ರುವೂ ಅವನನ್ನು ನೋಡಿ ಅಪಹಾಸ್ಯವನ್ನು ಮಾಡುವನು! ॥೩೧॥

ಇಂದ್ರದ್ಯುಮ್ನನೆಂಬ ರಾಜಋಷಿಯೂ ಕೂಡ ತನ್ನ ಕೀರ್ತಿಯು ನಾಶವಾದ ಪ್ರಯುಕ್ತ ಸ್ವರ್ಗದಿಂದ ಚ್ಯುತನಾದನು. ಇವನು ಯಾವ ವಿಧವಾದ ಪಾತಕವನ್ನೂ ಮಾಡಿದ್ದವನಲ್ಲವು. ಹೀಗಿರುವಲ್ಲಿ ಪಾತಕವನ್ನು ಮಾಡಿರುವ ಈ ಇಂದ್ರನು ಏತಕ್ಕೆ

ನೃಪಃ ಕರ್ಕಟತಾಂ ಪ್ರಾಪ್ತೋ ಯುಗಾನಷ್ಟಾದಶೈವ ತು ।
ಭೃಗುಪತ್ನೀ ಶಿರಶ್ಛೇದಾತ್ ಭಗವಾನ್ ಹರಿರಚ್ಯುತಃ ॥೩೪॥

ಬ್ರಹ್ಮಶಾಪಾತ್ಪಶೋರ್ಯೋನೌ ಸಂಜಾತೋ ಮಕರಾದಿಷು ।
ವಿಷ್ಣುಶ್ಚ ವಾಮನೋ ಭೂತ್ವಾ ಯಾಚನಾರ್ಥಂ ಬಲೇರ್ಗೃಹೇ॥೩೫॥

ಗತಃ ಕಿಮಪರಂ ದುಃಖಂ ಪ್ರಾಪ್ನೋತಿ ದುಷ್ಕೃತೀ ನರಃ ।
ರಾಮೋಽಪಿ ವನವಾಸೇಷು ಸೀತಾವಿರಹಜಂ ಬಹು ॥೩೬॥

ದುಃಖಂ ಚ ಪ್ರಾಪ್ತವಾನ್ ಘೋರಂ ಭೃಗುಶಾಪೇನ ಭಾರತ ।
ತಥೇಂದ್ರೋಽಪಿ ಬ್ರಹ್ಮಹತ್ಯಾಕೃತಂ ಪ್ರಾಪ್ಯ ಮಹದ್ಭಯಂ ॥೩೭॥
ನ ಸ್ವಾಸ್ಥ್ಯಂ ಪ್ರಾಪ ಗೇಹೇಽಸೌ ಸರ್ವಸಿದ್ಧಿಸಮನ್ವಿತೇ ।

---

ತಾನೇ ಸ್ವರ್ಗದಿಂದ ಬೀಳಲಾರನು ? ಪೂರ್ವದಲ್ಲಿ ಯಯಾತಿ ಎಂಬ ರಾಜನು ಕೊಂಚ ವಾದ ಅಪರಾಧವಿದ್ದರೂ ಅವನು ಸ್ವರ್ಗದಿಂದ ಪತಿತನಾಗಲಿಲ್ಲವೇ ? ॥೩೨-೩೩॥

ಒಬ್ಬ ರಾಜನು ಹದಿನೆಂಟು ಯುಗಗಳವರೆಗೂ ಕರ್ಕಟಜನ್ಮವನ್ನು ಅನು ಭವಿಸಲಿಲ್ಲವೇ ? ಷಡ್ಗುಣೈಶ್ವರ್ಯಸಂಪನ್ನನಾದ, ಶರಹತನಾದ ವಿಷ್ಣುವು ಭೃಗು ಪತ್ನಿಯ ತಲೆಯನ್ನು ಕತ್ತರಿಸಿದ ನಿಮಿತ್ತ ಬ್ರಾಹ್ಮಣನಾದ ಶುಕ್ರನ ಶಾಪದಿಂದ ಅನೇಕ ವಿಧವಾದ ತಿರ್ಯಗ್ಯೋನಿಗಳಲ್ಲಿ ಜನ್ಮವನ್ನೆತ್ತಿದನು. (ದೇ. ಭಾ. ಸ್ಕಂ. ೪ ಅ. ೧೨) ॥೩೪॥

ವಿಷ್ಣುವು ಅನೇಕ ವಿಧವಾದ ತಿರ್ಯಗ್ಯೋನಿಗಳಲ್ಲಿ ಜನ್ಮವನ್ನೆತ್ತಿದ್ದಲ್ಲದೆ, ತಾನು ವಾಮನ ರೂಪವನ್ನು ಧರಿಸಿಕೊಂಡು ಬಲಿ ಎಂಬ ದಾನವನ ಮನೆಗೆ ಭಿಕ್ಷುಕ ನಾಗಿ, ಭಿಕ್ಷೆಗಾಗಿ ಹೋಗಲಿಲ್ಲವೇ ? ಕೆಟ್ಟಕೆಲಸವನ್ನು ಮಾಡಿದವನು, ಇದಕ್ಕಿಂತಲೂ ಬೇರೆಯಾದ ದುಃಖವನ್ನು ಇನ್ನು ಏನನ್ನು ಹೊಂದಬೇಕಾಗಿರುವುದು ? ॥೩೫॥

ವಿಷ್ಣುವು ರಾಮಾವತಾರವನ್ನು ಮಾಡಿದಾಗ, ವನವಾಸದಲ್ಲಿ ಸೀತೆಯ ವಿಯೋಗದಿಂದ ಉಂಟಾದ ಬಹಳವಾದ ದುಃಖವನ್ನು ಭೃಗುಮಹರ್ಷಿಗಳ ಘೋರ ವಾದ ಶಾಪದಿಂದ ಅನುಭವಿಸಲಿಲ್ಲವೇ ? ॥೩೬॥

ಇಂದ್ರನೂ ಕೂಡ ವಿಷ್ಣುವಿನಂತೆಯೇ ಬ್ರಹ್ಮಹತ್ಯೆಯಿಂದ ಉಂಟುಮಾಡ ಲ್ಪಟ್ಟ ಹೆಚ್ಚಾದ ಭಯವನ್ನು ಹೊಂದಿದವನಾಗಿ ಸಕಲವಿಧವಾದ (ಸಿದ್ಧಿ) ಐಶ್ವರ್ಯ ದಿಂದ ಕೂಡಿರುವ, ಸ್ವರ್ಗದ ರಾಜಧಾನಿಯಾದ ಅಮರಾವತೀ ನಗರದಲ್ಲಿರುವ

**ಪೌಲೋಮೀ ತಂ ಸಭಾಹೀನಂ ದೃಷ್ಟ್ವೋವಾಚ ವಾಸವಂ ॥೩೮॥**

**ನಿಶ್ವಸಂತಂ ಭಯತ್ರಸ್ತಂ ನಷ್ಟಸಂಜ್ಞಂ ವಿಚೇತನಂ ।**
**ಕಿಂ ಪ್ರಭೋಽದ್ಯ ಭಯಾರ್ತೋಽಸಿ ಮೃತಸ್ತೇ ದಾರುಣೋ ರಿಪುಃ॥೩೯॥**

**ಕಾ ಚಿಂತಾ ವರ್ತತೇ ಕಾಂತ ತವ ಶತ್ರುನಿಷೂದನ ।**
**ಕಸ್ಮಾತ್ ಶೋಚಸಿ ಲೋಕೇಶ ನಿಶ್ವಸನ್ ಪ್ರಾಕೃತೋ ಯಥಾ ॥೪೦॥**

**ನಾನ್ಯೋಽಸ್ತಿ ಬಲವಾನ್ ಶತ್ರುರ್ಯೇನ ಚಿಂತಾಪರೋ ಭವಾನ್ ।**

॥ ಇಂದ್ರ ಉವಾಚ ॥

**ನಾರಾತಿರ್ಬಲವಾನ್ ಮೇಽಸ್ತಿ ನ ಶಾಂತಿರ್ನ ಸುಖಂ ತಥಾ ॥೪೧॥**
**ಬ್ರಹ್ಮಹತ್ಯಾ ಭಯಾದ್ರಾಜ್ಞಿ ಬಿಭೇಮಿ ಸತತಂ ಗೃಹೇ ।**

---

ಅರಮನೆಯಲ್ಲಿರುವವನಾದಾಗ್ಯೂ ಮನಸ್ಸಿನಲ್ಲಿ ಶಾಂತಿಸುಖವನ್ನು ಹೊಂದ ಲಿಲ್ಲವು ! ॥೩೭॥

ಇಂದ್ರನು ತನ್ನ ಸಭೆಯನ್ನು ಬಿಟ್ಟು ನಿಟ್ಟುಸಿರನ್ನು ಬಿಡುತ್ತಾ ಭಯದಿಂದ ನಡುಗುತ್ತಾ ಸರಿಯಾದ ಬುದ್ಧಿಯಿಲ್ಲದೆ, ಜ್ಞಾನವಿಲ್ಲದವನಂತಾಗಿರುವುದನ್ನು ಕಂಡು ಶಚೀದೇವಿಯು ಅವನ ಸಂಗಡ ಹೀಗೆ ಮಾತನಾಡಿದಳು. ॥೩೮॥

ಓ ಪ್ರಭುವೇ, ಈಗ ನೀನು ಯಾವ ಕಾರಣದಿಂದ ಭಯವುಳ್ಳವನಾಗಿ ಸಂಕಟಪಡುತ್ತಿದ್ದೀಯೆ ? ನಿನ್ನ ಶತ್ರುವು ಭಯಂಕರನಾಗಿದ್ದವನು ಮೃತನಾದನಷ್ಟೆ. ಶತ್ರುಗಳನ್ನು ಸೀಳುವವನಾದ ಓ ಕಾಂತನೇ, ನಿನಗೆ ಮನಸ್ಸಿನಲ್ಲಿ ಇನ್ನು ಏನು ಯೋಚನೆ ಇರುವುದು ? ॥೩೯॥

ಎಲೈ ಲೋಕಾಧಿಪನಾದ ಇಂದ್ರನೇ, ನೀನು ವ್ಯಸನಪಡಲು ಕಾರಣವಾದಷ್ಟು ಬಲಿಷ್ಠನಾದ ಶತ್ರುವು ಇನ್ನು ಯಾರೂ ಬೇರೆ ಇಲ್ಲದಿರುವಾಗ ಏನೂ ತಿಳಿಯದಿರುವವನು ದುಃಖಪಡುವ ಹಾಗೆ ನಿಟ್ಟುಸಿರನ್ನು ಬಿಡುತ್ತಾ ಏತಕ್ಕೆ ವ್ಯಸನಪಡುತ್ತಿರುವೆ? ॥೪೦॥

ಇಂದ್ರನು ಹೇಳಿದನು—ಓ ರಾಣಿಯೇ, ನಮಗೆ ಶತ್ರುವು ಬಲವುಳ್ಳವನು ಯಾರೂ ಇಲ್ಲವು. ಆದರೂ ನನಗೆ ಮನಸ್ಸಿನಲ್ಲಿ ಉಪಶಾಂತಿಯೂ, ಸುಖವೂ ಸಹ ಇಲ್ಲವು. ಏಕೆಂದರೆ ನಾನು ಬ್ರಹ್ಮಹತ್ಯೆಯ ಭಯದಿಂದ ಯಾವಾಗಲೂ ಮನೆಯಲ್ಲಿಯೇ ಹೆದರುತ್ತಿರುವೆನು. ॥೪೧॥

ನಂದನಂ ನ ಸುಖಾಕಾರಂ ನಾಮೃತಂ ನ ಗೃಹಂ ವನಂ ॥೪೨॥

ಗಂಧರ್ವಾಣಾಂ ತಥಾ ಗೇಯಂ ನೃತ್ಯಮಪ್ಸರಸಾಂ ಪುನಃ ।
ನ ತ್ವಂ ಸುಖಕರಾ ನಾರೀ ನಾನಾ ಚ ಸುರಯೋಷಿತಃ ॥೪೩॥

ನ ತಥಾ ಕಾಮಧೇನುಶ್ಚ ದೇವವೃಕ್ಷಸ್ಸುಖಪ್ರದಃ ।
ಕಿಂ ಕರೋಮಿ ಕ್ವ ಗಚ್ಛಾಮಿ ಕ್ವ ಶರ್ಮ ಮಮ ಜಾಯತೇ ॥೪೪॥

ಇತಿ ಚಿಂತಾಪರಃ ಕಾಂತೇ ನ ಲಭೇ ಸುಖಮಾತ್ಮನಿ ।

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ವಚನಂ ಶಕ್ರಃ ಪ್ರಿಯಾಂ ಪರಮಕಾತರಾಂ ॥೪೫॥

ನಿರ್ಜಗಾಮ ಗೃಹಾನ್ಮಂದೋ ಮಾನಸಂ ಸರ ಉತ್ತಮಂ ।
ಪದ್ಮನಾಳೇ ಪ್ರವಿಷ್ಟೋಽಸೌ ಭಯಾರ್ತಶ್ಶೋಕಕರ್ಶಿತಃ ॥೪೬॥

---

ನಂದನವನವೂ ನನಗೆ ಸುಖವನ್ನುಂಟುಮಾಡುವುದಾಗಿಲ್ಲವು. ಅಮೃತವೂ, ಈ ಅರಮನೆಯೂ, ಉದ್ಯಾನವನವೂ, ಗಂಧರ್ವರ ಸಂಗೀತಗಳೂ, ಅಪ್ಸರಸ್ತ್ರೀಯರ ನೃತ್ಯಗಳೂ, ಇವುಗಳಲ್ಲಿ ಯಾವುದೂ, ಎಲ್ಲವೂ, ನನಗೆ ಸುಖಕರವಾಗಿಲ್ಲವು ! ॥೪೨॥

ಎಲೈ ಕಾಂತೆಯೇ, ನೀನೂ ಕೂಡ ಈಗ ನನಗೆ ಸುಖವನ್ನುಂಟುಮಾಡುವ ಹಾಗಿಲ್ಲ. ಅನೇಕ ವಿಧದಿಂದ ಇರುವ ದೇವತಾಸ್ತ್ರೀಯರೂ ನನಗೆ ಹಿತಕರವಾಗಿಲ್ಲ. ಕಾಮಧೇನುವೂ, ಕಲ್ಪವೃಕ್ಷವೂ ಕೂಡ ಸುಖವನ್ನುಂಟುಮಾಡುವುದಾಗಿಲ್ಲ. ಏನನ್ನು ಮಾಡಲಿ? ಎಲ್ಲಿಗೆ ಹೋಗಲಿ? ಎಲ್ಲಿಗೆ ಹೋದರೆ ನನಗೆ ಸುಖವು ಉಂಟಾಗುವುದು? ಎಂಬುದಾಗಿ ಯಾವಾಗಲೂ ಯೋಚನೆಯನ್ನು ಮಾಡುತ್ತಾ ನಾನು ಮನಸ್ಸಿನಲ್ಲಿ ಸುಖವಿಲ್ಲದವನಾಗಿ ಇರುವೆನು ! ॥೪೪॥

ವ್ಯಾಸಋಷಿಯು ಹೇಳಿದನು — ಇಂದ್ರನು ಬಹಳಮಟ್ಟಿಗೆ ದುಃಖದಿಂದ ಗಾಬರಿಗೊಂಡಿರುವ ತನ್ನ ಪ್ರೀತಿಪಾತ್ರಳಾದ ಶಚೀದೇವಿಯ ಸಂಗಡ ಹೀಗೆ ಹೇಳಿದನು, ಮತ್ತು ಮೆಲ್ಲಗೆ ಮನೆಯಿಂದ ಹೊರಟನು. ಭಯದಿಂದ ಸಂಕಟವುಳ್ಳವನಾಗಿ, ದುಃಖದಿಂದ ಕೃಶನಾಗಿರುವ ಆ ಇಂದ್ರನು ಎಲ್ಲಕ್ಕಿಂತಲೂ ಶ್ರೇಷ್ಠವಾದ ಮಾನಸ ಸರೋವರದಲ್ಲಿರುವ ಪದ್ಮದನಾಳದಲ್ಲಿ ಪ್ರವೇಶಿಸಿ ವಾಸಮಾಡುತ್ತಿದ್ದನು. ॥೪೫-೪೬॥

**ನ ಪ್ರಜ್ಞಾಯತ ದೇವೇಂದ್ರಸ್ತ್ವಭಿಭೂತಶ್ಚ ಕಲ್ಮಷೈಃ ।**
**ಪ್ರತಿಚ್ಛನ್ನೋ ವಸತ್ಯಪ್ಸು ಚೇಷ್ಟಮಾನ ಇವೋರಗಃ ॥೪೭॥**

**ಅಸಹಾಯಸ್ತುರಾಷಾಡ್ವೈ ಚಿಂತಾರ್ತೋ ವಿಕಲೇಂದ್ರಿಯಃ ।**
**ತತಃ ಪ್ರಣಷ್ಟೇ ದೇವೇಂದ್ರೇ ಬ್ರಹ್ಮಹತ್ಯಾಭಯಾರ್ದಿತೇ ॥೪೮॥**

**ಸುರಾಶ್ಚಿಂತಾತುರಾ ಶ್ಚಾಸನ್ ಉತ್ಪಾತಾಶ್ಚಾಭವನ್ನಥ ।**
**ಋಷಯಸ್ಸಿದ್ಧಗಂಧರ್ವಾ ಭಯಾರ್ತಾಶ್ಚಾಭವನ್ ಭೃಶಂ ॥೪೯॥**

**ಅರಾಜಕಂ ಜಗತ್ಸರ್ವಮಭಿಭೂತಮುಪದ್ರವೈಃ ।**
**ಅವರ್ಷಣಂ ತದಾಜಾತಂ ಪೃಥಿವೀ ಕ್ಷಣವೈಭವಾ ॥೫೦॥**

---

ದೇವೇಂದ್ರನು ಬ್ರಹ್ಮಹತ್ಯೆಯ ಸಂಬಂಧವಾದ ಪಾಪಗಳಿಂದ ತಿರಸ್ಕಾರವನ್ನು ಹೊಂದಿದವನಾಗಿ ಯಾರಿಗೂ ತಿಳಿಯದಂತೆ, ಹಾವುಗಳು ನೀರಿನಲ್ಲಿ ಹೇಗೆ ಗೂಢವಾಗಿ ಹರಿದಾಡುತ್ತಾ ಇರುವುವೋ, ಹಾಗೆ (ಮರೆಯಾಗಿ) ನೀರಿನಲ್ಲಿ ಅವಿತುಕೊಂಡು ವಾಸಮಾಡುತ್ತಿದ್ದನು. ||೪೭||

ಹೀಗೆ ಯಾವ ಸಹಾಯವೂ ಇಲ್ಲದೆ ಆತಂಕದ ಯೋಚನೆಯಿಂದ ಸಂಕಟವುಳ್ಳವನಾಗಿದ್ದ, ದುರ್ಬಲವಾದ ಮನಸ್ಸುಳ್ಳ ಇಂದ್ರನು ಅಮರಾವತಿಯಿಂದ ಹೊರಕ್ಕೆ ಹೊರಟವನಾಗಿ ಪದ್ಮನಾಳದಲ್ಲಿ ಸೇರಿದನು. ಈ ರೀತಿಯಲ್ಲಿ ಬ್ರಹ್ಮಹತ್ಯೆಯ ಭಯದಿಂದ ಸಂಕಟವುಳ್ಳವನಾದ ಇಂದ್ರನು ಸ್ಥಾನಭ್ರಷ್ಟನಾದ ಬಳಿಕ ದೇವತೆಗಳು ಯೋಚನೆಯಿಂದ ಕೂಡಿದವರಾದರು. ಅನೇಕ ವಿಧವಾದ ಉತ್ಪಾತಗಳೂ ಉಂಟಾದುವು. ಋಷಿಗಳು, ಸಿದ್ಧರು, ಗಂಧರ್ವರು, ಇವರೆಲ್ಲರೂ ಬಹಳಮಟ್ಟಿಗೆ ಭಯದಿಂದ ಸಂಕಟವುಳ್ಳವರಾದರು. ||೪೯||

ಜಗತ್ತೆಲ್ಲವೂ ರಾಜನಿಲ್ಲದ್ದರಿಂದುಂಟಾದ ಕೆಟ್ಟಸ್ಥಿತಿಯನ್ನು ಹೊಂದಿ, ಈತಿಬಾಧೆಗಳಿಂದ ತಿರಸ್ಕಾರವನ್ನು ಹೊಂದಿತು. ಭೂಮಿಯಲ್ಲಿ ಮಳೆಯು ಹುಯ್ಯದೆ ಕ್ಷಾಮವುಂಟಾಯಿತು. ಭೂಮಿಯಲ್ಲಿನ ಐಶ್ವರ್ಯವು ಚಂಚಲವಾಗಿ ಕಡಿಮೆಯಾಗುತ್ತಾ ಬಂದಿತು. ||೫೦||

**ವಿಚ್ಛಿನ್ನಸ್ರೋತಸೋ ನದ್ಯಃ ಸರಾಂಸ್ಯನುದಕಾನಿ ವೈ ।**
**ಏವಂ ತ್ವರಾಜಕೇ ಜಾತೇ ದೇವತಾಮುನಯಸ್ತಥಾ ॥೫೧॥**

**ವಿಚಾರ್ಯ ನಹುಷಂ ಚಕ್ರುಃ ಶಕ್ರಂ ಸರ್ವೇ ದಿವೌಕಸಃ ।**
**ಸಂಪ್ರಾಪ್ಯ ನಹುಷೋ ರಾಜಾ ಧರ್ಮಿಷ್ಠೋಽಪಿ ರಜೋಬಲಾತ್ ॥೫೨॥**

**ಬಭೂವ ವಿಷಯಾಸಕ್ತಃ ಪಂಚಬಾಣ ಶರಾಹತಃ ।**
**ಅಪ್ಸರೋಭಿಃ ವೃತಃ ಕ್ರೀಡನ್ ದೇವೋದ್ಯಾನೇಷು ಭಾರತ ॥೫೩॥**

**ಶಕ್ರಪತ್ನೀಗುಣಾನ್ ಶ್ರುತ್ವಾ ಚಕಮೇ ತಾಂ ಸ ಪಾರ್ಥಿವಃ ।**
**ಋಷೀನಾಹ ಕಿಮಿಂದ್ರಾಣೀ ನೋಪಗಚ್ಛತಿ ಮಾಂ ಕಿಲ ॥೫೪॥**

**ಭವದ್ಭಿಶ್ಚಾಮರೈಸ್ಸರ್ವೈಃ ಕೃತೋಽಹಂ ವಾಸವಸ್ತ್ವಿಹ ।**
**ಪ್ರೇಷಯಧ್ವಂ ಸುರಾಃ ಕಾಮಂ ಸೇವಾರ್ಥಂ ಮಮ ವೈ ಶಚೀಂ ॥೫೫॥**

---

ನದಿಗಳಲ್ಲಿ ಪ್ರವಾಹವು ನಿಂತುಹೋಯಿತು. ಸರೋವರಗಳಲ್ಲಿ ನೀರು ಇಲ್ಲದೆ ಅವುಗಳು ಒಣಗಿದುವು. ಹೀಗೆ ಲೋಕವು ರಾಜನಿಲ್ಲದ್ದರಿಂದುಂಟಾದ ಉಪದ್ರವದಿಂದ ಕೆಡುತ್ತಿರಲು, ದೇವತೆಗಳೂ, ಋಷಿಗಳೂ, ಸಹ ಸೇರಿ ಚೆನ್ನಾಗಿ ವಿಮರ್ಶೆಮಾಡಿ, ಲೋಕದ ಕ್ಷೇಮಕ್ಕಾಗಿ ನಹುಷನೆಂಬ ರಾಜನನ್ನು ಇಂದ್ರನನ್ನಾಗಿ ನಿಯಮಿಸಿದರು. ॥೫೧॥

ನಹುಷನು ಇಂದ್ರನ ಸ್ಥಾನದಲ್ಲಿ ಏರಿಸಲ್ಪಟ್ಟವನಾಗಿ, ತಾನು ಸ್ವಭಾವದಿಂದ ಧರ್ಮಿಷ್ಠನಾಗಿದ್ದಾಗ್ಯೂ, ರಜೋಗುಣದ ಮಹಿಮೆಯಿಂದ ಈಗ ಭೋಗದಲ್ಲಿ ಆಸಕ್ತನಾಗಿ ಮನ್ಮಥನ ಬಾಣಗಳಿಂದ ತೊಂದರೆಗೆ ಈಡಾದನು. ಇವನು ಅಪ್ಸರಸ್ತ್ರೀಯರಿಂದ ಸುತ್ತುವರಿಯಲ್ಪಟ್ಟವನಾಗಿ, ದೇವತೆಗಳ ಉದ್ಯಾನವನಗಳಲ್ಲಿ ಆಟವಾಡುತ್ತಾ ಇದ್ದನು. ಎಲೈ ಜನಮೇಜಯರಾಜನೇ ಕೇಳು, ಆ ರಾಜನು ಹೀಗೆ ವಿಷಯಭೋಗಗಳಲ್ಲಿ ಆತ್ಯಾಸೆಯಿಂದ ಕೂಡಿರುತ್ತಾ, ಕಡೆಗೆ ಇಂದ್ರನ ಹೆಂಡತಿಯಾದ ಶಚೀದೇವಿಯ ಗುಣಗಳನ್ನು ಕೇಳಿದವನಾಗಿ ಅವಳನ್ನೂ ಹೊಂದಲು ಆಸೆಪಟ್ಟನು. ॥೫೨-೫೩॥

ನಹುಷನು ಋಷಿಗಳನ್ನು ಕುರಿತು ಹೀಗೆ ಹೇಳಿದನು, ಇಂದ್ರನ ಪತ್ನಿಯಾದ ಶಚೀದೇವಿಯು ನನ್ನನ್ನು ಸೇವಿಸಲು ಏಕೆ ಬರುವುದಿಲ್ಲ? ನೀವೆಲ್ಲರೂ, ದೇವತೆಗಳೂ ಒಟ್ಟಾಗಿ ಸೇರಿ ನನ್ನನ್ನು ಇಂದ್ರನನ್ನಾಗಿ ಮಾಡಿರುವಿರಿ! ಆದ್ದರಿಂದ ಎಲೈ ದೇವತೆ

ಪ್ರಿಯಂ ಚೇನ್ಮಮ ಕರ್ತವ್ಯಂ ಸರ್ವಥಾ ಮುನಯೋಽಮರಾಃ ।
ಅಹಮಿಂದ್ರೋಽದ್ಯ ದೇವಾನಾಂ ಲೋಕಾನಾಂ ಚ ತಥೇಶ್ವರಃ ॥೫೬॥

ಆಗಚ್ಛತು ಶಚೀ ಮಹ್ಯಂ ಕ್ಷಿಪ್ರಮದ್ಯ ನಿವೇಶನಂ ।
ಇತಿ ತಸ್ಯ ವಚಶ್ಶ್ರುತ್ವಾ ದೇವಾ ದೇವರ್ಷಯಸ್ತಥಾ ॥೫೭॥

ಗತ್ವಾ ಚಿಂತಾತುರಾಃ ಪ್ರೋಚುಃ ಪೌಲೋಮೀಂ ಪ್ರಣತಾಸ್ತತಃ ।
ಇಂದ್ರಪತ್ನಿ ದುರಾಚಾರೋ ನಹುಷಸ್ತ್ವಾಮಿಹೇಚ್ಛತಿ ॥೫೮॥

ಕುಪಿತೋಽಸ್ಮಾನುವಾಚೇದಂ ಪ್ರೇಷಯಧ್ವಂ ಶಚೀಮಿಹ ।
ಕಿಂ ಕುರ್ಮಸ್ತದಧೀನಾಃ ಸ್ಮಃ ಯೇನೇಂದ್ರೋಽಯಂ ಕೃತಃ ಕಿಲ॥೫೯॥

---

ಗಳೂ, ನೀವೆಲ್ಲರೂ ಸೇರಿ ಯೋಚಿಸಿ ಶಚಿಯನ್ನೂ ನನ್ನ ಸೇವೆಗಾಗಿ ಅವಶ್ಯಕವಾಗಿ ಕಳುಹಿಸಿರಿ (ಕಳುಹಿಸಲೇಬೇಕು.) ||೫೪-೫೫||

ಎಲೈ ಋಷಿಗಳೇ ಮತ್ತು ದೇವತೆಗಳೇ, ನೀವೆಲ್ಲರೂ ನನ್ನ ಮನಸ್ಸಿಗೆ ಹಿತವನ್ನುಂಟುಮಾಡಬೇಕಾಗಿದೆ. ಹಾಗಾದರೆ, ಇಂದ್ರನ ಪತ್ನಿಯಾದ ಶಚೀದೇವಿಯೂ ಬೇಗನೆ ಈಗ ನನ್ನ ಮನೆಗೆ ಬರಲಿ! ಏಕೆಂದರೆ ನಾನು ಈಗ ಇಂದ್ರನಾಗಿದ್ದೇನೆ! ದೇವತೆಗಳಿಗೂ ಮತ್ತು ಲೋಕಗಳಿಗೂ ಸಹ ಅಧಿಪತಿಯಾಗಿರುವೆನು! ||೫೬||

ದೇವತೆಗಳೂ, ದೇವರ್ಷಿಗಳೂ ಸಹ, ನಹುಷನು ಹೇಳುತ್ತಿರುವ ಆ ಪ್ರಕಾರವಾಗಿರುವ ಮಾತನ್ನು ಕೇಳಿ ಎಲ್ಲರೂ ವ್ಯಸನದಿಂದ ಸಂಕಟಪಡುವವರಾಗಿ ಶಚೀದೇವಿಯ ಹತ್ತಿರಕ್ಕೆ ಬಂದು ಅವಳಿಗೆ ನಮಸ್ಕರಿಸಿದರು. ಮತ್ತು ಹೀಗೆ ಮಾತನಾಡಿದರು. ||೫೭||

ಎಲೈ ಶಚೀದೇವಿಯೇ, ಕೆಟ್ಟನಡತೆಯುವನಾದ ನಹುಷನು ನಿನ್ನನ್ನೂ ಈಗ ಅಪೇಕ್ಷಿಸುತ್ತಿರುವನು! ನಾವೆಲ್ಲರೂ ಸೇರಿ ಅವನನ್ನು ಇಂದ್ರನನ್ನಾಗಿ ಮಾಡಿದೆವು. ಈಗ ನಾವೂ ಅವನ ಅಧೀನದಲ್ಲಿರುವೆವು. ಅವನು ನಮ್ಮ ಮೇಲೆ ಕೋಪವುಳ್ಳವನಾಗಿ ಶಚಿಯನ್ನೂ ಇಲ್ಲಿಗೆ ಕಳುಹಿಸಿರಿ, ಎಂದು ಹೇಳಿರುವನು! ಏನನ್ನು ಮಾಡೋಣ? ||೫೮-೫೯।

ತಚ್ಛ್ರುತ್ವಾ ದುರ್ಮನಾ ದೇವೀ ಬೃಹಸ್ಪತಿಮುವಾಚ ಹ ।
ರಕ್ಷ ಮಾಂ ನಹುಷಾದ್ಬ್ರಹ್ಮಂ ಸ್ತ್ವಾಸ್ಮಿ ಶರಣಂ ಗತಾ ॥೬೦॥

॥ ಬೃಹಸ್ಪತಿರುವಾಚ ॥

ನ ಭೇತವ್ಯಂ ತ್ವಯಾ ದೇವಿ ನಹುಷಾತ್ಪಾಪಮೋಹಿತಾತ್ ।
ನ ತ್ವಾಂ ದಾಸ್ಯಾಮ್ಯಹಂ ವತ್ಸೇ ತ್ಯಕ್ತ್ವಾ ಧರ್ಮಂ ಸನಾತನಂ ॥೬೧॥

ಶರಣಾಗತಮಾರ್ತಂ ಚ ಯೋ ದದಾತಿ ನರಾಧಮಃ ।
ಸ ಏವ ನರಕಂ ಯಾತಿ ಯಾವದಾಭೂತಸಂಪ್ಲವಂ ॥೬೨॥
ಸ್ವಸ್ಥಾ ಭವ ಪೃಥುಶ್ರೋಣಿ ನ ತ್ಯಕ್ಷ್ಯೇ ತ್ವಾಂ ಕದಾಚನ ॥

ಇತಿ ಶ್ರೀ ದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ
ಸಪ್ತಮೋಽಧ್ಯಾಯಃ.

---

ದೇವತೆಗಳೂ, ಋಷಿಗಳೂ ಸಹ ಸೇರಿ ಶಚೀದೇವಿಗೆ ಹೇಳಿದ ಮಾತನ್ನು ಅವಳು ಕೇಳಿ ಅಧರ್ಮಕ್ಕೆ ಹೆದರಿ ಮನಸ್ಸಿನಲ್ಲಿಯೇ ಆತಂಕದ ಯೋಚನೆಯುಳ್ಳವಳಾಗಿ ಬೃಹಸ್ಪತಿಯನ್ನು ಕುರಿತು "ಓ ಬ್ರಾಹ್ಮಣನೇ, ನನ್ನನ್ನು ನಹುಷನಿಂದ ರಕ್ಷಿಸು. ನಿನ್ನನ್ನು ನಾನು ಶರಣುಹೊಂದಿದ್ದೇನೆ" ಎಂದು ಹೇಳಿದಳು. ॥೬೦॥

ಬೃಹಸ್ಪತಿಯು ಹೇಳಿದನು—ಎಲೈ ದೇವಿಯೇ, ನೀನು ಕೆಟ್ಟಕೆಲಸವನ್ನು ಮಾಡಲು ಮೋಹಗೊಂಡಿರುವ ನಹುಷನಿಂದ ಹೆದರಬೇಡ. ಎಲೈ ಶಚಿಯೇ, ನಾನು ಶಾಶ್ವತವಾಗಿರುವ ಧರ್ಮವನ್ನು ಕೈಬಿಟ್ಟು ನಿನ್ನನ್ನು ಅವನಿಗೆ ಕೊಡುವುದಿಲ್ಲವು. ಏಕೆಂದರೆ— ॥೬೧॥

ನನ್ನನ್ನು ರಕ್ಷಿಸು ಎಂದು ಶರಣಾಗತನಾಗಿ ಬಂದವನನ್ನು ಯಾವ ನೀಚನು ಕಾಪಾಡದೇ ಬಿಟ್ಟುಕೊಡುವನೋ ಅವನು ಪಂಚಭೂತಗಳು ಪ್ರಳಯವಾಗುವವರೆಗೂ ನರಕವನ್ನು ಹೊಂದುವನು. ಆದ್ದರಿಂದ ಎಲೈ ಶಚೀದೇವಿಯೇ, ನೀನು ಸಮಾಧಾನವಾದ ಮನಸ್ಸಿನಿಂದ ಇರು. ನಿನ್ನನ್ನು ನಾನು ಯಾವಾಗಲೂ ಅವನ ವಶಕ್ಕೆ ಬಿಟ್ಟುಕೊಡುವುದಿಲ್ಲವು! ಎಂದು ಬೃಹಸ್ಪತಿಯು ಹೇಳಿದನು. ॥೬೨॥

ಇಲ್ಲಿಗೆ ಮಹಾಪುರಾಣವಾದ ದೇವೀಭಾಗವತದ ಆರನೆಯ ಸ್ಕಂಧದಲ್ಲಿ
ಏಳನೆಯ ಅಧ್ಯಾಯವು ಮುಗಿದಿರುವುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಃ ಸ್ಕಂಧೇ

## ॥ ಅಷ್ಟಮೋಽಧ್ಯಾಯಃ ॥

### ಎಂಟನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ನಹುಷಸ್ತ್ವಥ ತಾಂ ಶ್ರುತ್ವಾ ಗುರೋಸ್ತು ಶರಣಂ ಗತಾಂ ।**
**ಚುಕ್ರೋಧ ಸ್ಮರ ಬಾಣಾರ್ತಸ್ತಮಾಂಗಿರಸಮಾಶು ವೈ ॥೧॥**

**ದೇವಾನಾಹಾಂಗಿರಾಸೂನುರ್ಹಂತವ್ಯೋಽಯಂ ಮಯಾ ಕಿಲ ।**
**ಇತೀಂದ್ರಾಣೀಂ ಗೃಹೇ ಮೂಢೋ ರಕ್ಷತೀತಿ ಮಯಾ ಶ್ರುತಂ ॥೨॥**

---

ವ್ಯಾಸಋಷಿಯು ಹೇಳಿದನು—ಅನಂತರದಲ್ಲಿ ನಹುಷನು ಶಚೀದೇವಿಯು ಬೃಹಸ್ಪತಿಯ ಮರೆಹೊಕ್ಕಿರುವುದನ್ನು ಕೇಳಿದನು. ತಾನು ಮನ್ಮಥನಬಾಣಗಳಿಂದ ತೊಂದರೆಪಡುತ್ತಿರುವವನಾಗಿ ಬೇಗನೆ ಆ ಬೃಹಸ್ಪತಿಯ ಮೇಲೆ ಕೋಪಮಾಡಿದನು. ॥೧॥

ದೇವತೆಗಳಿಂದ ಇಂದ್ರನಾಗಿ ಮಾಡಲ್ಪಟ್ಟವನಾಗಿದ್ದರೂ ಐಶ್ವರ್ಯಕಾಮಗಳಿಂದ ಕುರುಡನಂತಾಗಿದ್ದ ಆ ನಹುಷನು, ದೇವತೆಗಳ ಸಂಗಡ ಹೀಗೆ ಹೇಳಿದನು. ಅಂಗಿರೋಋಷಿಯ ಮಗನಾದ ಬೃಹಸ್ಪತಿಯನ್ನು ನಾನು ಈಗ ಸಂಹರಿಸಬೇಕಾಗಿದೆ. ಏಕೆಂದರೆ ಅವನು ಇಂದ್ರನ ಪತ್ನಿಯಾದ ಶಚಿಯನ್ನು ತನ್ನ ಮನೆಯಲ್ಲಿ ಇರಿಸಿಕೊಂಡು ರಕ್ಷಿಸುತ್ತಿರುವನೆಂದು ನಾನು ವರ್ತಮಾನವನ್ನು ಕೇಳುತ್ತೇನೆ. ಆದ್ದರಿಂದ ಶಚೀದೇವಿಯನ್ನು ನಾನು ಪಡೆಯಲು ಅವನು ಅಡ್ಡಿಯಾಗಿರುತ್ತಾನೆ! ಎಂದು ಹೇಳಿದನು. ॥೨॥

**ಇತಿ ತಂ ಕುಪಿತಂ ದೃಷ್ಟ್ವಾ ದೇವಾಃ ಸರ್ಷಿಪುರೋಗಮಾಃ ।**
**ಅಬ್ರುವನ್ನಹುಷಂ ಘೋರಂ ಸಾಮಪೂರ್ವಂ ವಚಸ್ತದಾ ॥೩॥**

**ಕ್ರೋಧಂ ಸಂಹರ ರಾಜೇಂದ್ರ ತ್ಯಜ ಪಾಪಮತಿಂ ಪ್ರಭೋ ।**
**ನಿಂದಂತಿ ಧರ್ಮಶಾಸ್ತ್ರೇಷು ಪರದಾರಾಭಿಮರ್ಶನಂ ॥೪॥**

**ಶಕ್ರಪತ್ನೀ ಸದಾ ಸಾಧ್ವೀ ಜೀವಮಾನೇ ಪತೌ ಪುನಃ ।**
**ಕಥಮನ್ಯಂ ಪತಿಂ ಕುರ್ಯಾತ್ ಸುಭಗಾಽತಿಪತಿವ್ರತಾ ॥೫॥**

**ತ್ರಿಲೋಕೀಶಸ್ತ್ವಮಧುನಾ ಶಾಸ್ತಾ ಧರ್ಮಸ್ಯ ವೈ ವಿಭೋ ।**
**ತ್ವಾದೃಶೋಽಧರ್ಮಮಾತಿಷ್ಠೇತ್ತದಾ ನಶ್ಯೇತ್ಪ್ರಜಾಧ್ರುವಂ ॥೬॥**

---

ಆಗ ಕೋಪದಿಂದ ಹೀಗೆ ಮಾತನಾಡುತ್ತಿರುವ ಆ ನಹುಷನನ್ನು ನೋಡಿ, ದೇವತೆಗಳೂ ಋಷಿಗಳೊಡನೆ ಕೂಡಿಕೊಂಡು ಕೋಪದಿಂದ ಭಯಂಕರನಾಗಿ ಕ್ರೂರನಾಗಿರುವ ಆ ನಹುಷನ ಸಂಗಡ ಮೃದುವಾಗಿರುವ ಮಾತುಗಳನ್ನು ಹೀಗೆ ಹೇಳಿದರು. ||೩||

ಓ ಪ್ರಭುವೇ, ರಾಜಶ್ರೇಷ್ಠನೇ, ನೀನು ಈಗ ಕೋಪವನ್ನು ಅಡಗಿಸಿಕೊಳ್ಳುವನಾಗು. ಈ ಕೆಟ್ಟ ಬುದ್ಧಿಯನ್ನು ಬಿಡು. ಏಕೆಂದರೆ ಧರ್ಮಶಾಸ್ತ್ರಗಳಲ್ಲಿ ಇನ್ನೊಬ್ಬರ ಸ್ತ್ರೀಯರನ್ನು ಅಪೇಕ್ಷಿಸುವುದು ಕೆಟ್ಟದ್ದೆಂದು ನಿಂದಿಸಿರುವರು. ||೪||

ಇಂದ್ರನ ಪತ್ನಿಯಾದ ಶಚಿಯು ಯಾವಾಗಲೂ ಸಾಧುಸ್ವಭಾವದವಳೂ ಮತ್ತು ಮಹಾಪತಿವ್ರತೆಯೂ, ಸೌಭಾಗ್ಯಶಾಲಿನಿಯೂ, ಆಗಿರುವಳು. ಇಂಥ ಹೆಂಗುಸು ತನ್ನ ಪತಿಯು ಬದುಕಿರುವಾಗಲೇ ತಾನು ಬೇರೆಯಾದ ಗಂಡನನ್ನು ಹೇಗೆ ತಾನೇ ಹೊಂದುವಳು? ||೫||

ಓ ಸ್ವಾಮಿಯೇ, ನೀನು ಮೂರು ಲೋಕಗಳಿಗೂ ಅಧಿಪತಿಯಾಗಿರುವೆ. ಈಗ ಆಯಾಯ ಲೋಕದವರೆಲ್ಲರಿಗೂ ಧರ್ಮವನ್ನು ಆಚರಿಸುವಂತೆ ಅಪ್ಪಣೆಯನ್ನು ಮಾಡಿ ಹಾಗೆ ನಡೆಯದೆ ಇದ್ದಲ್ಲಿ ಅವರನ್ನು ಶಿಕ್ಷಿಸುವವನಾಗಿರುವೆ. ಹೀಗೆ ಇರುವ ನೀನೇ ಅಧರ್ಮವನ್ನು, ಅಂದರೆ ಇನ್ನೊಬ್ಬನ ಹೆಂಡತಿಯಾದ, ಶಚೀದೇವಿಯನ್ನು ಹೊಂದಲು ಆಸೆಮಾಡಿ ಅದರಂತೆ ನಡೆಯುವುದಾದರೆ, ಆಗ ಮೂರು ಲೋಕದ ಪ್ರಜೆಗಳೆಲ್ಲರೂ ಕಾಲಕ್ರಮದಲ್ಲಿ ಯದ್ಯದಾಚರತಿಶ್ರೇಷ್ಠಸ್ತತ್ತದೇವೇತರೋಜನಃ ।

ಸರ್ವಥಾ ಪ್ರಭುಣಾ ಕಾರ್ಯಂ ಶಿಷ್ಟಾಚಾರಸ್ಯ ರಕ್ಷಣಂ ।
ವಾರಮುಖ್ಯಾಶ್ಚ ಶತಶೋ ವರ್ತಂತೇಽತ್ರ ಶಚೀಸಮಾಃ ॥೭॥

ರತಿಸ್ತು ಕಾರಣಂ ಪ್ರೋಕ್ತಂ ಶೃಂಗಾರಸ್ಯ ಮಹಾತ್ಮಭಿಃ ।
ರಸಹಾನಿರ್ಬಲಾತ್ಕಾರೇ ಕೃತೇಽಸತಿ ತು ಜಾಯತೇ ॥೮॥

ಉಭಯೋಃ ಸದೃಶಂ ಪ್ರೇಮ ಯದಿ ಪಾರ್ಥಿವ ಸತ್ತಮ ।
ತದಾ ವೈ ಸುಖಸಂಪತ್ತಿರುಭಯೋರುಪಜಾಯತೇ ॥೯॥

ತಸ್ಮಾದ್ಭಾವಮಿಮಂ ಮುಂಚ ಪರದಾರಾಭಿಮರ್ಶನೇ ।
ಸದ್ಭಾವಂ ಕುರು ದೇವೇಂದ್ರ ಪದಂ ಪ್ರಾಪ್ತೋಽಸ್ಯನುತ್ತಮಂ ॥೧೦॥

---

ಎಂಬಂತೆಯೂ, ಯಥಾರಾಜಾತಥಾಪ್ರಜಾಃ | ಎಂಬಂತೆಯೂ ನಿನ್ನ ಮೇಲುಪಂಕ್ತಿಯನ್ನನುಸರಿಸಿ ಅಧರ್ಮದಿಂದ ನಾಶವನ್ನು ಹೊಂದುವರು. ||೬||

ದೊರೆಯಾಗಿರುವವನು ಯಾವಾಗಲೂ ಸರ್ವಪ್ರಕಾರದಿಂದಲೂ ಶಿಷ್ಟರಾದವರ ಧರ್ಮವನ್ನು ತಾನೂ ಆಚರಿಸುವುದಲ್ಲದೆ, ಇತರರೂ ಆಚರಿಸುವಂತೆ ಮಾಡುತ್ತಾ ರಕ್ಷಿಸಬೇಕು. ನಿನಗಾದರೋ ಶಚೀದೇವಿಗೆ ಸಮನಾಗಿ ಸುಂದರಿಯರಾಗಿರುವ ಅಪ್ಸರ ಸ್ತ್ರೀಯರು ನೂರುಗಟ್ಟಲೆಯಾಗಿ ಇಲ್ಲಿ ನಿನ್ನ ಅಧೀನದಲ್ಲಿರುವರು. ||೭||

ಲೋಕದ ನಡತೆಯನ್ನು ತಿಳಿದ ದೊಡ್ಡವರು ಶೃಂಗಾರರಸದಿಂದ ಸೌಖ್ಯವು ಉಂಟಾಗಲು ಸ್ತ್ರೀ ಪುರುಷರಿಬ್ಬರ ಅಭಿಪ್ರಾಯವೂ ಒಂದೇ ರೀತಿಯಾಗಿ ಪರಸ್ಪರವಾಗಿ ಅನುರಾಗವು ಮೇಲಾಗಿರುವುದು ಮುಖ್ಯವಾದ ಕಾರಣವೆಂದು ಹೇಳುವರು. ಹಾಗಿಲ್ಲದೆ ಪುರುಷನು ಮಾತ್ರ ಬಲಾತ್ಕಾರ ಮಾಡಿದಲ್ಲಿ ಅಂತಹ ಸಂಬಂಧದಿಂದ ರತಿಗೆ ಬದಲಾಗಿ ರಸಹಾನಿಯು ಆಗಿಯೇ ತೀರುವುದೆಂತಲೂ ಸಹ ಹೇಳುವರು. ಆದ್ದರಿಂದ ಏಕತ್ರಾನುರಾಗವು ಅಪ್ರಯೋಜಕವಾದ ಕಾರಣ ಈ ಶಚೀ ವಿಷಯವಾದ ಅಭಿಪ್ರಾಯವನ್ನು ನೀನು ಬಿಟ್ಟು ಬಿಡು ! ||೮||

ಎಲೈ ರಾಜಶ್ರೇಷ್ಠನೇ, ಸ್ತ್ರೀ ಪುರುಷರಿಬ್ಬರಿಗೂ ಪ್ರೀತಿಯು ಮೇಲಾಗಿ ಸಮನಾಗಿದ್ದಲ್ಲಿ ಆಗ ಅವರಿಬ್ಬರಿಗೂ ಸುಖವು ಅತಿಶಯವಾಗಿ ಉಂಟಾಗುವುದು. ||೯||

ಆದ್ದರಿಂದ ನೀನು ಇನ್ನೊಬ್ಬರ ಹೆಂಡತಿಯು ನಿನ್ನಲ್ಲಿ ಅನುರಕ್ತಳಾಗಿಲ್ಲದಿದ್ದರೂ, ಅವಳಲ್ಲಿ ಬಲಾತ್ಕಾರದಿಂದ ಭೋಗಪಡಬೇಕೆಂಬ ಈ ಕೆಟ್ಟ ಅಭಿಪ್ರಾಯವನ್ನು ಬಿಡು. ನೀನು ಶ್ರೇಷ್ಠವಾದ ದೇವೇಂದ್ರನ ಸ್ಥಾನವನ್ನು ಹೊಂದಿರುವೆಯಾದ್ದ

ಋದ್ಧಿಕ್ಷಯಸ್ತು ಪಾಪೇನ ಪುಣ್ಯೇ ನಾತಿವಿವರ್ಧನಂ ।
ತಸ್ಮಾತ್ಪಾಪಂ ಪರಿತ್ಯಜ್ಯ ಸನ್ಮತಿಂ ಕುರುಪಾರ್ಥಿವ ॥೧೧॥

॥ ನಹುಷ ಉವಾಚ ॥

ಗೌತಮಸ್ಯ ಯದಾ ಭುಕ್ತಾ ದಾರಾಃ ಶಕ್ರೇಣ ದೇವತಾಃ ।
ವಾಚಸ್ಪತೇಸ್ತು ಸೋಮೇನ ಕ್ವ ಯೂಯಂ ಸಂಸ್ಥಿತಾಸ್ತದಾ ॥೧೨॥

ಪರೋಪದೇಶೇ ಕುಶಲಾಃ ಪ್ರಭವಂತಿ ನರಾಃ ಕಿಲ ।
ಮಾಮಾಗಚ್ಛತು ಸಾ ದೇವೀ ಹಿತಂ ಸ್ಯಾದದ್ಭುತಂ ಹಿ ವಃ ।
ಏತಸ್ಯಾಃ ಪರಮಂ ದೇವಾಃ ಸುಖಮೇವಂ ಭವಿಷ್ಯತಿ ॥೧೪॥

---

ರಿಂದ ಅಂತಹ ಮೇಲಾದ ಪದವಿಗೆ ತಕ್ಕುದಾದ ಸರಿಯಾದ ಅಭಿಪ್ರಾಯವನ್ನು ಕಾಪಾಡಿಕೋ ॥೧೦॥

ಎಲೈ ರಾಜನೇ, ಕೆಟ್ಟ ಕೆಲಸದಿಂದ ಉಂಟಾಗುವ ಪಾಪದಿಂದ ಏಳಿಗೆಯು ಮತ್ತು ಐಶ್ವರ್ಯದ ಕ್ಷೀಣತೆಯು ಉಂಟಾಗುವುದು! ಪುಣ್ಯದಿಂದ ಅಭಿವೃದ್ಧಿಯೂ ಮತ್ತು ಐಶ್ವರ್ಯವೂ ದಿನೇ ದಿನೇ ಹೆಚ್ಚುವುದು. ಆದ್ದರಿಂದ ನೀನು ಈ ಕೆಟ್ಟ ಬುದ್ಧಿಯನ್ನು ಬಿಟ್ಟು ಒಳ್ಳೆಯ ಬುದ್ಧಿಯನ್ನು ಹೊಂದು. ॥೧೧॥

ನಹುಷನು ಹೇಳಿದನು, ಎಲೈ ದೇವತೆಗಳಿರಾ, ಯಾವಾಗ ಗೌತಮಋಷಿಯ ಹೆಂಡಿತಿಯಾದ ಅಹಲ್ಯೆಯಲ್ಲಿ ಇಂದ್ರನು ಸುಖಪಟ್ಟನೋ, ಮತ್ತು ಚಂದ್ರನು ಬೃಹಸ್ಪತಿಯ ಹೆಂಡಿತಿಯಲ್ಲಿ ಭೋಗವನ್ನು ಅನುಭವಿಸಿದನೋ, ಆಗ ನೀವು ಎಲ್ಲಿದ್ದಿರಿ? ॥೧೨॥

ಲೋಕದಲ್ಲಿ ಮಾನವರು ಇನ್ನೊಬ್ಬರಿಗೆ ನೀತಿಯನ್ನು ಉಪದೇಶಮಾಡುವುದರಲ್ಲಿ ಬಹಳ ಬುದ್ಧಿವಂತಿಕೆಯಿಂದ ಗಟ್ಟಿಗರಾಗಿ ಇರುವರು. ಆದರೆ ಉಪದೇಶಮಾಡುವಂತೆ ಆಚರಣೆಯನ್ನು ಮಾಡುವ ಪುರುಷರು ಬಹಳ ಅಪರೂಪವಾಗಿರುವರು! ಅಂಥವರು ದೊರೆಯುವುದಿಲ್ಲವು. ಅದು ಹೇಗಾದರೂ ಇರಲಿ! ॥೧೩॥

ಈಗ ಇಂದ್ರನ ಪತ್ನಿಯಾದ, ಆ ಶಚೀದೇವಿಯು ನನ್ನನ್ನು ಹೊಂದಲಿ. ಹೀಗಾದರೆ ನಿಮಗೆಲ್ಲರಿಗೂ ಆಶ್ಚರ್ಯಕರವಾಗುವಷ್ಟು ಒಳ್ಳೆಯಸ್ಥಿತಿಯು ಲಭಿಸಿ ಸುಖವುಂಟಾಗುವುದು. ಆ ಶಚೀದೇವಿಗೂ ಸಹ ಅತ್ಯುತ್ತಮವಾದ ಮತ್ತು ಉತ್ಕೃಷ್ಟವಾದ ಸುಖವುಂಟಾಗುವುದು! ॥೧೪॥

ಅನ್ಯಥಾ ನ ಹಿ ತುಷ್ಯೇಽಹಂ ಸತ್ಯಮೇತದ್ಬ್ರವೀಮಿ ವಃ ।
ವಿನಯಾದ್ವಾ ಬಲಾದ್ವಾಪಿ ತಾಮಾಶು ಪ್ರಾಪಯಂತ್ವಿಹ ॥೧೫॥

ಇತಿ ತಸ್ಯ ವಚಶ್ಶ್ರುತ್ವಾ ದೇವಾಶ್ಚ ಮುನಯಸ್ತಥಾ ।
ತಮೂಚು ಶ್ಚಾತಿಸಂತ್ರಸ್ತಾ ನಹುಷಂ ಮದನಾತುರಂ ॥೧೬॥

ಇಂದ್ರಾಣೀಮಾನಯಿಷ್ಯಾಮಃ ಸಾಮಪೂರ್ವಂ ತವಾಂತಿಕಂ ।
ಇತ್ಯುಕ್ತ್ವಾ ತೇ ತದಾ ಜಗ್ಮುರ್ಬೃಹಸ್ಪತಿನಿಕೇತನಂ ॥೧೭॥

॥ ವ್ಯಾಸ ಉವಾಚ ॥

ತೇ ಗತ್ವಾಂಗಿರಸಃ ಪುತ್ರಂ ಪ್ರೋಚುಃ ಪ್ರಾಂಜಲಯಸ್ಸುರಾಃ ।
ಜಾನೀಮಶ್ಶರಣಂ ಪ್ರಾಪ್ತಾಮಿಂದ್ರಾಣೀಂ ತವ ವೇಶ್ಮನಿ ॥೧೮॥

---

ಎಲೈ ದೇವತೆಗಳಿರಾ, ವಿನಯದಿಂದಾಗಲಿ ಬಲಾತ್ಕಾರದಿಂದಲಾಗಲಿ ಆ ಶಚೀದೇವಿಯನ್ನು ನನ್ನ ಹತ್ತಿರಕ್ಕೆ ಕರೆದುಕೊಂಡುಬಂದು ಬಿಡಿರಿ. ನಾನು ನಿಜ ವನ್ನು ಹೇಳುವೆನು. ಹೀಗೆ ನನ್ನ ಹತ್ತಿರಕ್ಕೆ ಅವಳನ್ನು ಕರೆದು ತರದೆ ಇದ್ದಲ್ಲಿ ನಿಮ್ಮ ವಿಷಯದಲ್ಲಿ ನಾನು ಸಂತೋಷವುಳ್ಳವನಾಗುವುದೇ ಇಲ್ಲವು! ॥೧೫॥

ದೇವತೆಗಳೂ ಋಷಿಗಳೂ ಸಹ ಮೇಲೆ ಹೇಳಿದಂತೆ ಆಡಿದ ಆ ನಹುಷನ ಮಾತುಗಳನ್ನು ಕೇಳಿ ಬಹಳ ಮಟ್ಟಿಗೆ ಹೆದರಿದವರಾಗಿ (ಮನ್ಮಥನ ಬಾಧೆಯಿಂದ) ಕಾಮುವೇಗದಿಂದ ತೊಂದರೆಯನ್ನು ಅನುಭವಿಸುತ್ತಿರುವ ಆ ನಹುಷನ ಸಂಗಡ ಹೀಗೆ ಮಾತನಾಡಿದರು. ॥೧೬॥

ನಾವೆಲ್ಲರೂ ಮೃದುವಾದ ಮಾತುಗಳನ್ನು ಹೇಳಿ ಶಚೀದೇವಿಯನ್ನು ನಿನ್ನ ಹತ್ತಿರಕ್ಕೆ ಕರೆದುಕೊಂಡು ಬರುವೆವು. ಎಂದು ಹೇಳಿ, ಅವರು ಆಗ ಬೃಹಸ್ಪತಿಯ ಮನೆಯನ್ನು ಕುರಿತು ಬಂದರು. ॥೧೭॥

ವ್ಯಾಸ ಋಷಿಯು ಹೇಳಿದನು, ಆ ದೇವತೆಗಳು ಅಂಗಿರೋ ಋಷಿಗಳ ಮಗನಾದ ಬೃಹಸ್ಪತಿಯ ಹತ್ತಿರಕ್ಕೆ ಹೋಗಿ ಬೊಗಸೆಗಟ್ಟಿಕೊಂಡು ಅವನ ಸಂಗಡ ಮಾತನಾಡಿದರು. ಓ ಬೃಹಸ್ಪತಿಯೇ, ನಿನ್ನ ಮನೆಯಲ್ಲಿ ಇಂದ್ರನ ಪತ್ನಿಯು ರಕ್ಷಣೆಯನ್ನು ಪಡೆದು ಇರುವಳೆಂದು ತಿಳಿದಿರುವೆವು. ॥೧೮॥

ಸಾ ದೇಯಾ ನಹುಷಾಯಾದ್ಯ ವಾಸವೋಽಸೌ ಕೃತೋಽಯತಃ ।
ವೃಣೋತ್ವಿಯಂ ವರಾರೋಹಾ ಪತಿತ್ವೇ ವರವರ್ಣಿನೀ ॥೧೯॥

ಬೃಹಸ್ಪತಿಸ್ಸುರಾನಾಹ ತಚ್ಛ್ರುತ್ವಾ ದಾರುಣಂ ವಚಃ ।
ನಾಹಂ ತ್ಯಕ್ಷ್ಯೇ ತು ಪೌಲೋಮೀಂ ಸತೀಂ ಚ ಶರಣಾಗತಾಂ ॥೨೦॥

॥ ದೇವಾ ಊಚುಃ ॥

ಉಪಾಯೋಽನ್ಯಃ ಪ್ರಕರ್ತವ್ಯೋ ಯೇನ ಸೋಽದ್ಯ ಪ್ರಸೀದತಿ ।
ಅನ್ಯಥಾ ಕೋಪಸಂಯುಕ್ತೋ ದುರಾರಾಧ್ಯೋ ಭವಿಷ್ಯತಿ ॥೨೧॥

ತತ್ರ ಗತ್ವಾ ಶಚೀ ಭೂಪಂ ಪ್ರಲೋಭ್ಯ ವಚಸಾ ಭೃಶಂ ।
ಕರೋತು ಸಮಯಂ ಬಾಲಾ ಪತಿಂ ಜ್ಞಾತ್ವಾ ಮೃತಂ ಭಜೇ ॥೨೨॥

---

ಈಗ ನಹುಷನು ಇಂದ್ರನಾಗಿ ಮಾಡಲ್ಪಟ್ಟಿರುವನು. ಆದ್ದರಿಂದ ಈ ಶಚೀದೇವಿಯನ್ನು ನಹುಷನಿಗಾಗಿ ಕೊಟ್ಟುಬಿಡಬೇಕಾಗಿದೆ. ಶ್ರೇಷ್ಠಳಾದ ಆ ಶಚೀದೇವಿಯು ಅವನನ್ನು ಪತಿಯನ್ನಾಗಿ ವರಿಸಲಿ. ॥೧೯॥

ಕಿವಿಗೆ ಕೇಳಲು ಕ್ರೂರವಾದ ಆ ಮಾತನ್ನು ಕೇಳಿ ಬೃಹಸ್ಪತಿಯು ದೇವತೆಗಳ ಸಂಗಡ ಹೀಗೆ ಹೇಳಿದನು. ನಾನು ಪತಿವ್ರತೆಯಾಗಿರುವ, ಮತ್ತು ನನಗೆ ಶರಣಾಗತಳಾಗಿರುವ ಶಚೀದೇವಿಯನ್ನು ಖಂಡಿತವಾಗಿಯೂ ಕೈಬಿಡುವುದಿಲ್ಲ ! ॥೨೦॥

ದೇವತೆಗಳು, "ನೀನು ಶಚೀದೇವಿಯನ್ನು ಕಳುಹಿಸದಿದ್ದರೆ ಅವನು ಬಹಳ ಮಟ್ಟಿಗೆ ಕೋಪವುಳ್ಳವನಾಗಿ ಸೇವೆಮಾಡಲು ಅಶಕ್ಯನಾಗುವನು. ಆದ್ದರಿಂದ ಅವನು ಪ್ರಸನ್ನನಾಗುವಂತೆ ಯಾವುದಾದರೂ ಒಂದು ಉಪಾಯವನ್ನು ಮಾಡಬೇಕು" ಎಂದು ಹೇಳಿದರು. ॥೨೧॥

ಬೃಹಸ್ಪತಿಯು ಹೇಳಿದನು, ಶಚೀದೇವಿಯು ನಹುಷನ ಹತ್ತಿರಕ್ಕೆ ಹೋಗಿ ರಾಜನಾದ ಅವನನ್ನು ಒಳ್ಳೆಯ ಮಾತುಗಳಿಂದ ಬಹಳ ಮಟ್ಟಿಗೆ ಆಸೆ ಹುಟ್ಟಿಸಿ, ತನ್ನ ಗಂಡನಾದ ಇಂದ್ರನು ಮೃತನಾಗಿದ್ದಾನೆಂದು ವರ್ತಮಾನವನ್ನು ಖಚಿತವಾಗಿ ತಿಳಿದುಕೊಂಡು ಅವನನ್ನು ಹೊಂದುವೆನು. ಎಂದು ಕಟ್ಟುಪಾಡಿನ ಮಾತನ್ನು ನಿಷ್ಕರ್ಷೆ ಮಾಡಿಕೊಳ್ಳಲಿ ! ॥೨೨॥

ಇಂದ್ರೇ ಜೀವತಿ ಮೇ ಕಾಂತೇ ಕಥಮನ್ಯಂ ಕರೋಮ್ಯಹಂ ।
ಅನ್ವೇಷಣಾರ್ಥಂ ಗಂತವ್ಯಂ ಮಯಾ ತಸ್ಯ ಮಹಾತ್ಮನಃ ॥೨೩॥

ಇತಿ ಸಾ ಸಮಯಂ ಕೃತ್ವಾ ವಂಚಯಿತ್ವಾ ಚ ಭೂಪತಿಂ ।
ಭರ್ತುರಾನಯನೇ ಯತ್ನಂ ಕರೋತು ಮಮ ವಾಕ್ಯತಃ ॥೨೪॥

ಇತಿ ಸಂಚಿಂತ್ಯ ತೇ ಸರ್ವೇ ಬೃಹಸ್ಪತಿ ಪುರೋಗಮಾಃ ।
ನಹುಷಂ ಸಹಿತಾ ಜಗ್ಮುರಿಂದ್ರಪತ್ನ್ಯಾಂ ದಿವೌಕಸಃ ॥೨೫॥

ತಾನಾಗತಾನ್ ಸಮೀಕ್ಷ್ಯಾಹ ತದಾ ಕೃತ್ರಿಮ ವಾಸವಃ ।
ಜಹರ್ಷ ಚ ಮುದಾಯುಕ್ತಸ್ತಾಂ ವೀಕ್ಷ್ಯಮುದಿತೋಽಬ್ರವೀತ್ ॥೨೬॥

---

ನನ್ನ ಗಂಡನಾದ ಇಂದ್ರನು ಬದುಕಿರುವಾಗ ನಾನು ಇನ್ನೊಬ್ಬ ಗಂಡನನ್ನು ಹೊಂದುವುದು ಹೇಗೆ ತಾನೇ ಉಚಿತವು? ಅಲ್ಲದೆ ಮಹಾ ಮಹಿಮನಾದ ಅವನನ್ನು ಹುಡುಕುವುದಕ್ಕಾಗಿ ನಾನು ಹೋಗಬೇಕಾಗಿರುತ್ತದೆ. ಆದ್ದರಿಂದ ಕೆಲವು ಕಾಲದ ವರೆಗೆ ನನಗೆ ಅವಕಾಶವನ್ನು ಕೊಡಬೇಕು. ॥೨೩॥

ಆ ಶಚೀದೇವಿಯು ಹೀಗೆಂದು ಹೇಳಿ ನಹುಷನಹತ್ತಿರ ಕಟ್ಟುಪಾಡಿನ ಮಾತನ್ನು ನಿಷ್ಕರ್ಷೆಮಾಡಿಕೊಂಡು, ಆ ದೊರೆಗೆ ಮೋಸಮಾಡಿ, ನಾನು ಹೇಳುವಂತೆ ತನ್ನ ಪತಿಯಾದ ಇಂದ್ರನನ್ನು ಹುಡುಕಲು ಯತ್ನವನ್ನು ಮಾಡಲಿ. ॥೨೪॥

ಆ ದೇವತೆಗಳೆಲ್ಲರೂ ಹೀಗೆ ಯೋಚಿಸಿ ಬೃಹಸ್ಪತಿಯನ್ನು ಮುಂದಿಟ್ಟು ಕೊಂಡು ಎಲ್ಲರೂ ಒಟ್ಟಾಗಿ ಶಚೀದೇವಿಯ ವಿಷಯವಾಗಿ ಮಾತನಾಡಲು ಅವ ಳೊಡನೆ ನಹುಷನ ಹತ್ತಿರಕ್ಕೆ ಹೋದರು. ॥೨೫॥

ಬೃಹಸ್ಪತಿಯೇ ಮೊದಲಾದ ದೇವತೆಗಳು ಶಚೀದೇವಿಯನ್ನು ಕರೆದು ಕೊಂಡು ಬಂದುದನ್ನೂ, ಇಂದ್ರನ ಪದವಿಯಲ್ಲಿರುವ, ವಾಸ್ತವವಾಗಿ ಇಂದ್ರನಲ್ಲದ ಸುಳ್ಳಾಗಿರುವ ಇಂದ್ರನಾದ ಆ ನಹುಷನು ಆ ದೇವಿಯನ್ನೂ ಕಂಡು ಬಹಳ ಸಂತೋಷ ಪಟ್ಟನು. ಮತ್ತು ಸಂತೋಷದಿಂದ ಆ ಶಚೀದೇವಿಗೆ ಮುಂದೆ ಹೇಳುವಂತೆ ಹೇಳಿದನು. ॥೨೬॥

ಅದ್ಯಾಽಸ್ಮಿ ವಾಸವಃ ಕಾಂತೇ ಭಜ ಮಾಂ ಚಾರುಲೋಚನೇ ।
ಪತಿಸ್ತ್ವೇ ಸರ್ವಲೋಕಸ್ಯ ಪೂಜ್ಯೋಽಹಂ ವಿಹಿತಃ ಸುರೈಃ ॥೨೭॥

ಇತ್ಯುಕ್ತಾ ಸಾ ನೃಪಂ ಪ್ರಾಹ ವೇಪಮಾನಾ ತ್ರಪಾಯುತಾ ।
ವರಮಿಚ್ಛಾಮ್ಯಹಂ ರಾಜಂಸ್ತ್ವತ್ತಃ ಪ್ರಾಪ್ತುಂ ಸುರೇಶ್ವರ ॥೨೮॥

ಕಿಂಚಿತ್ಕಾಲಂ ಪ್ರತೀಕ್ಷಸ್ವ ಯಾವತ್ಕುರ್ವೇ ವಿನಿರ್ಣಯಂ ।
ಇಂದ್ರೋಽಸ್ತೀತಿ ನವಾಽಸ್ತೀತಿ ಸಂದೇಹೋ ಮೇ ಹೃದಿ ಸ್ಥಿತಃ ॥೨೯॥

ತತಸ್ತ್ವಾಂ ಸಮುಪಸ್ಥಾಸ್ಯೇ ಕೃತ್ವಾ ನಿಶ್ಚಯಮಾತ್ಮನಿ ।
ತಾವತ್ಕ್ಷಮಸ್ವ ರಾಜೇಂದ್ರ ಸತ್ಯಮೇತದ್ಬ್ರವೀಮಿ ತೇ ॥೩೦॥

ನ ಹಿ ವಿಜ್ಞಾಯತೇ ಶಕ್ರೋ ನಷ್ಟಃ ಕಿಂ ವಾ ಕ್ವ ವಾ ಗತಃ ।
ಏವಮುಕ್ತಃ ಸ ಇಂದ್ರಾಣ್ಯಾ ನಹುಷಃ ಪ್ರೀತಿಮಾನಭೂತ್ ॥೩೧॥

---

ಎಲೈ ಸುಂದರವಾದ ಕಣ್ಣುಗಳುಳ್ಳ ಸುಂದರಿಯೇ, ಎಲ್ಲರಿಗೂ ಪೂಜ್ಯನಾದ ನಾನು ಸ್ವರ್ಗಲೋಕಕ್ಕೆ ಅಧಿಪತಿಯಾಗಿರುವೆನು! ದೇವತೆಗಳು ಈ ಅಧಿಕಾರವನ್ನು ನನಗೆ ಕೊಟ್ಟಿರುವುದರಿಂದ ಈಗ ದೇವೇಂದ್ರನೇ ಆಗಿರುವೆನು! ಆದುದರಿಂದ ನೀನು ನನ್ನನ್ನು ಸೇರು. ॥೨೭॥

ನಹುಷನು ಹೇಳಿದ ಮಾತನ್ನು ಕೇಳಿ ಶಚೀದೇವಿಯು ನಾಚಿಕೆಯಿಂದ ಕೂಡಿ ಭಯದಿಂದ ನಡುಗುತ್ತ ರಾಜನನ್ನು ಕುರಿತು, ದೇವಾಧಿಪತಿಯೇ, ನಿನ್ನಿಂದ ನಾನು ಒಂದು ವರವನ್ನು ಪಡೆಯಬೇಕೆಂದು ಅಪೇಕ್ಷಿಸಿರುತ್ತೇನೆ. ಎಂದಳು. ॥೨೮॥

ಆ ವರವೇನೆಂದರೆ:—ದೇವೇಂದ್ರನು ಇರುವನೋ ಇಲ್ಲವೋ ಎಂಬ ಸಂದೇಹವು ನನ್ನ ಮನಸ್ಸಿನಲ್ಲಿರುವುದು. ನಾನು ಇದನ್ನು ನಿಶ್ಚಯಿಸುವವರೆಗೆ ಕೆಲವು ಕಾಲ ನಿರೀಕ್ಷಿಸು. ॥೨೯॥

ನನ್ನ ಮನಸ್ಸಿನಲ್ಲಿ ಇದನ್ನು ನಿಶ್ಚಯಮಾಡಿಕೊಂಡು ಬಳಿಕ ನಿನ್ನನ್ನು ವರಿಸುವೆನು. ನಿಜವನ್ನು ಹೇಳುವೆನು. ರಾಜಶ್ರೇಷ್ಠನೇ, ಅಲ್ಲಿಯವರೆಗೆ ಕ್ಷಮಿಸು. ॥೩೦॥

ನನ್ನ ಪತಿಯಾದ ದೇವೇಂದ್ರನು ಸತ್ತನೋ ಅಥವಾ ಎಲ್ಲಿಗಾದರೂ ಹೋಗಿರುವನೋ ತಿಳಿಯದು. ಎಂದು ಶಚೀದೇವಿಯು ಹೇಳುತ್ತಲು ನಹುಷನು ಸಂತೋಷ ಹೊಂದಿದನು. ॥೩೧॥

ವ್ಯಸರ್ಜಯತ್ಸ ತಾಂ ದೇವೀಂ ತಥೇತ್ಯುಕ್ತ್ವಾ ಮುದಾನ್ವಿತಃ ।
ಸಾ ವಿಸೃಷ್ಟಾ ನೃಪೇಣಾಶು ಗತ್ವಾ ಪ್ರಾಪ ಸುರಾನ್ ಸತೀ ॥೩೨॥

ಇಂದ್ರಸ್ಯಾಗಮನೇ ಯತ್ನಂ ಕುರುತಾದ್ಯ ಕೃತೋದ್ಯಮಾಃ ।
ಶ್ರುತ್ವಾ ತದ್ವಚನಂ ದೇವಾ ಇಂದ್ರಾಣ್ಯಾ ರಸವಚ್ಛುಚಿ ॥೩೩॥

ಮಂತ್ರಯಾಮಾಸುರೇಕಾಗ್ರಾಃ ಶಕ್ರಾರ್ಥಂ ನೃಪಸತ್ತಮ ।
ತೇ ಗತ್ವಾ ವೈಷ್ಣವಂ ಧಾಮ ತುಷ್ಟುವುಃ ಪರಮೇಶ್ವರಂ ॥೩೪॥

ಆದಿದೇವಂ ಜಗನ್ನಾಥಂ ಶರಣಾಗತವತ್ಸಲಂ ।
ಊಚುಶ್ಚೈನಂ ಸಮುದ್ವಿಗ್ನಾಃ ವಾಕ್ಯಂ ವಾಕ್ಯವಿಶಾರದಾಃ ॥೩೫॥

ದೇವದೇವಸ್ಸುರಪತಿರ್ಬ್ರಹ್ಮಹತ್ಯಾಪ್ರಪೀಡಿತಃ ।
ಅದೃಶ್ಯಸ್ಸರ್ವಭೂತಾನಾಂ ಕ್ವಾಪಿ ತಿಷ್ಠತಿ ವಾಸವಃ ॥೩೬॥

---

ನಹುಷನು ಹಾಗೆಯೇ ಆಗಲೆಂದು ಸಂತೋಷದಿಂದ ಶಚೀದೇವಿಯನ್ನು ಬಿಟ್ಟುಕೊಟ್ಟನು. ದೂರೆಯ ನಿರ್ಬಂಧವಿಲ್ಲದ ಪತಿವ್ರತೆಯಾದ ಆ ಶಚೀದೇವಿಯು ದೇವತೆಗಳ ಸಮೀಪಕ್ಕೆಹೋಗಿ, ಎಲೈ ದೇವತೆಗಳೇ, ಈ ಕೂಡಲೇ ದೇವೇಂದ್ರನು ಇಲ್ಲಿಗೆ ಬರುವುದಕ್ಕೆ ಏನು ಪ್ರಯತ್ನವನ್ನು ಮಾಡಬೇಕೋ, ಅದನ್ನು ಮಾಡಿರಿ. ಎಂದು ಹೇಳಿದಳು. ||೩೨||

ರಾಜಶ್ರೇಷ್ಠನೇ ಕೇಳು—ಶಚೀದೇವಿಯು ಹೇಳಿದ ಪರಿಶುದ್ಧವಾದ ಸಾರವಾದ ಮಾತನ್ನು ಕೇಳಿ ದೇವತೆಗಳು ಒಂದೇ ಮನಸ್ಸಿನಿಂದ ದೇವೇಂದ್ರನಿಗೋಸ್ಕರವಾಗಿ ಮಂತ್ರಾಲೋಚನೆಯನ್ನು ಮಾಡಿದರು. ||೩೩||

ಬಳಿಕ ಅವರೆಲ್ಲರೂ ವೈಕುಂಠಲೋಕಕ್ಕೆಹೋಗಿ ದೇವತೆಗಳಿಗೆ ಮೊದಲನೆಯವನೂ ಲೋಕಗಳಿಗೆಲ್ಲ ಒಡೆಯನೂ ಶರಣುಹೊಕ್ಕವರನ್ನು ಕಾಪಾಡುವವನೂ ಆದ ವಿಷ್ಣುವನ್ನು ಕುರಿತು ದುಃಖದಿಂದ ಹೀಗೆ ಮಾತನಾಡಿದರು. ||೩೪-೩೫||

ದೇವತೆಗಳಿಗೆ ರಾಜನಾದ ದೇವೇಂದ್ರನು ಬ್ರಹ್ಮಹತ್ಯೆಯ ಪಾಪದಿಂದ ಉಂಟಾಗಿರುವ ದುಃಖದಿಂದ ತೊಂದರೆಪಡುತ್ತಾ ಯಾರಿಗೂ ಕಾಣದಂತೆ ಎಲ್ಲಿಯೋ ಹೋಗಿರುವನು! ||೩೬||

ತ್ವದ್ಧಿಯಾ ನಿಹತೇ ವಿಪ್ರೇ ಬ್ರಹ್ಮಹತ್ಯಾವೃತಃ ಪ್ರಭೋ ।
ತ್ವಂ ಗತಿಸ್ತಸ್ಯ ಭಗವನ್ ಅಸ್ಮಾಕಂ ಚ ತಥೈವ ಹಿ ॥೩೭॥

ತ್ರಾಹಿ ನಃ ಪರಮಾಪನ್ನಾನ್ ಮೋಕ್ಷಂ ತಸ್ಯ ವಿನಿರ್ದಿಶ ।
ದೇವಾನಾಂ ವಚನಂ ಶ್ರುತ್ವಾ ಕಾತರಂ ವಿಷ್ಣುರಬ್ರವೀತ್ ॥೩೮॥

ಯಜತಾಮುಶ್ವಮೇಧೇನ ಶಕ್ರಃ ಪಾಪನಿವೃತ್ತಯೇ ।
ಪುಣ್ಯೇನ ಹಯಮೇಧೇನ ಪಾವಿತಃ ಪಾಕಶಾಸನಃ ॥೩೯॥

ಪುನರೇಷ್ಯತಿ ದೇವಾನಾಮಿಂದ್ರತ್ವಮುಕುತೋಭಯಃ ।
ಹಯಮೇಧೇನ ಸಂತುಷ್ಟಾ ದೇವೀ ಶ್ರೀಜಗದಂಬಿಕಾ ॥೪೦॥
ಬ್ರಹ್ಮಹತ್ಯಾದಿಪಾಪಾನಿ ನಾಶಯಿಷ್ಯತ್ಯಸಂಶಯಂ ।

---

ಓ ಸ್ವಾಮಿಯೇ, ನಿನ್ನ ಬುದ್ಧಿವಂತಿಕೆಯ ಉಪಾಯದಿಂದ ಬ್ರಾಹ್ಮಣನಾದ ವೃತ್ರಾಸುರನನ್ನು ಕೊಲ್ಲಲು ದೇವೇಂದ್ರನಿಗೆ ಬ್ರಹ್ಮಹತ್ಯೆಯ ಪಾಪವು ಬಂದಿತು. ಈ ಸಂದರ್ಭದಲ್ಲಿ ಆ ದೇವೇಂದ್ರನಿಗೂ, ದಕ್ಷನಾದ ರಾಜನಿಲ್ಲದೆ ಇರುವ ನಮಗೂ, ನೀನೇ ದಿಕ್ಕಾಗಿರುವೆ. ॥೩೭॥

ಹೀಗೆ ವಿಶೇಷವಾದ ವಿಪತ್ತನ್ನು ಹೊಂದಿರುವ ನಮ್ಮನ್ನು ಕಾಪಾಡು. ದೇವೇಂದ್ರನಿಗೆ ಬ್ರಹ್ಮಹತ್ಯೆಯು ಬಿಡುಗಡೆಯಾಗುವ ಮಾರ್ಗವನ್ನು ಅಪ್ಪಣೆ ಕೊಡಿಸು. ಎಂದು ದೈನ್ಯದಿಂದ ಹೇಳುತ್ತಿರುವ ದೇವತೆಗಳ ಮಾತನ್ನು ಕೇಳಿ ವಿಷ್ಣುವು ಹೇಳಿದನು.. ॥೩೮॥

ದೇವೇಂದ್ರನು ತನ್ನ ಪಾಪವು ನಾಶವಾಗುವುದಕ್ಕಾಗಿ ಅಶ್ವಮೇಧವೆಂಬ ಯಜ್ಞವನ್ನು ಮಾಡಲಿ. ಪವಿತ್ರವಾದ ಅಶ್ವಮೇಧ ಯಜ್ಞದ ಆಚರಣೆಯಿಂದ ಶುದ್ಧನಾದ ಇಂದ್ರನು ಯಾವ ಭಯವೂ ಇಲ್ಲದವನಾಗಿ ಮತ್ತೆ ದೇವತೆಗಳಿಗೆ ದೊರೆಯಾಗುವನು. ॥೩೯॥

ಸಂಪದ್ಯುಕ್ತಳಾದ ಜಗನ್ಮಾತೆಯಾದ ದೇವಿಯು ಅಶ್ವಮೇಧ ಯಜ್ಞದಿಂದ ಸಂತೋಷಪಟ್ಟು ಬ್ರಹ್ಮಹತ್ಯವೇ ಮೊದಲಾದ ಪಾಪಗಳನ್ನು ಖಂಡಿತವಾಗಿ ನಾಶ ಮಾಡುವಳು! ॥೪೦॥

ಯಸ್ಯಾಃ ಸ್ಮರಣಮಾತ್ರೇಣ ಪಾಪಜಾಲಂ ವಿನಶ್ಯತಿ ॥೪೧॥

ಕಿಂ ಪುನರ್ವಾಜಿಮೇಧೇನ ತತ್ಪ್ರೀತ್ಯರ್ಥಂ ಕೃತೇನ ಚ ।
ಇಂದ್ರಾಣೀ ಕುರುತಾನ್ನಿತ್ಯಂ ಭಗವತ್ಯಾಃ ಪ್ರಪೂಜನಂ ॥೪೨॥

ಆರಾಧನಂ ಶಿವಾಯಾಸ್ತು ಸುಖಕಾರಿ ಭವಿಷ್ಯತಿ ।
ನಹುಷೋಽಪಿ ಜಗನ್ಮಾತುರ್ಮಾಯಯಾ ಮೋಹಿತಃ ಕಿಲ ॥೪೩॥

ವಿನಾಶಂ ಸ್ವಕೃತೇನಾಶು ಗಮಿಷ್ಯತ್ಯೇನಸಾ ಸುರಾಃ ।
ಪಾವಿತಶ್ಚಾಶ್ವಮೇಧೇನ ತುರಾಷಾಡಪಿ ವೈಭವಂ ॥೪೪॥

ಪ್ರಾಪ್ಸ್ಯತ್ಯಚಿರಕಾಲೇನ ಸ್ವಮಾಸನಮನುತ್ತಮಂ ।
ತೇ ತು ಶ್ರುತ್ವಾ ಶುಭಾಂ ವಾಣೀಂ ವಿಷ್ಣೋರಮಿತತೇಜಸಃ ॥೪೫॥

---

ಯಾವ ದೇವಿಯನ್ನು ಸ್ಮರಿಸಿದ ಮಾತ್ರಕ್ಕೆ ಪಾಪಗಳ ಸಮೂಹವು ನಾಶವಾಗುವುದೋ ಅಂತಹ ಮಹಿಮೆಯುಳ್ಳ ದೇವಿಯ ಸಂತೋಷಕ್ಕಾಗಿ ಮಾಡಿದ ಅಶ್ವಮೇಧ ಯಜ್ಞದಿಂದ ಎಲ್ಲ ಪಾಪಗಳೂ ನಾಶವಾಗುವುದರಲ್ಲಿ ಸಂದೇಹವಿಲ್ಲವು. ॥೪೧॥

ಹಾಗೆಯೇ ಆ ಶಚೀದೇವಿಯು ಕೂಡ ಪ್ರತಿ ದಿವಸವೂ ಮಹಾಮಹಿಮಳಾದ ದೇವಿಯನ್ನು ಪೂಜಿಸಲಿ. ಆ ದೇವಿಯ ಪೂಜೆಯು ಸುಖವನ್ನುಂಟುಮಾಡುವುದು. ॥೪೨॥

ಎಲೈ ದೇವತೆಗಳೇ—ನಹುಷನೂ ಕೂಡ ಜಗನ್ಮಾತೆಯ ಮಾಯೆಯಿಂದ ಅಜ್ಞಾನಿಯಾಗಿ ತಾನು ಮಾಡಿದ ಪಾಪದಿಂದಲೇ ಬೇಗನೆ ನಾಶವಾಗುವನು. ॥೪೩॥

ದೇವೇಂದ್ರನೂ ಕೂಡ ಅಶ್ವಮೇಧಯಜ್ಞದಿಂದ ಪರಿಶುದ್ಧನಾಗಿ ಬೇಗನೆ ಶ್ರೇಷ್ಠವಾದ ತನ್ನ ಇಂದ್ರ ಪದವಿಯ ಸಿಂಹಾಸನವನ್ನೂ ಸಂಪತ್ತನ್ನೂ ಮುಂಚಿನಂತೆಯೇ ಪಡೆಯುವನು. ॥೪೪॥

ಆ ದೇವತೆಗಳು ವಿಶೇಷವಾದ ತೇಜಸ್ಸುಳ್ಳ ವಿಷ್ಣುವಿನ ಮಂಗಳಕರವಾದ ಮಾತನ್ನು ಕೇಳಿ, ದೇವೇಂದ್ರನಿದ್ದ ಸ್ಥಳಕ್ಕೆ ಹೋದರು. ದೇವೇಂದ್ರನಿದ್ದ ಸ್ಥಳವು ದೇವತೆಗಳಿಗೆ ಮೊದಲೇ ತಿಳಿದಿದ್ದಿತು. ನಹುಷನ ಭಯದಿಂದ ಅದನ್ನು ಪ್ರಕಟಮಾಡಿರಲಿಲ್ಲ. ಅಥವಾ ವಿಷ್ಣುವಿನ ಮಾತಿನಿಂದ ಇಂದ್ರನು ಅಡಗಿದ್ದ ಸ್ಥಳವನ್ನು ಚೆನ್ನಾಗಿ ಹುಡುಕಿ ಗೊತ್ತುಮಾಡಿಕೊಂಡು ಅವನ ಸಮೀಪಕ್ಕೆ ಹೋದರು. ॥೪೫॥

ಜಗ್ಮುಸ್ತಂ ದೇಶಮನಿಶಂ ಯತ್ರಾಸ್ತೇ ಪಾಕಶಾಸನಃ ।
ತಮಾಶ್ವಾಸ್ಯ ಸುರಾಶ್ಶಕ್ರಂ ಬೃಹಸ್ಪತಿಪುರೋಗಮಾಃ ॥೪೬॥

ಕಾರಯಾಮಾಸುರಖಿಲಂ ಹಯಮೇಧಂ ಮಹಾಕ್ರತುಂ ।
ವಿಭಜ್ಯ ಬ್ರಹ್ಮಹತ್ಯಾಂ ತು ವೃಕ್ಷೇಷು ಚ ನದೀಷು ಚ ॥೪೭॥

ಪರ್ವತೇಷು ಪೃಥಿವ್ಯಾಂ ಚ ಸ್ತ್ರೀಷು ಚೈವಾಕ್ಷಿಪದ್ವಿಭುಃ ।
ತಾಂ ವಿಸೃಜ್ಯ ಚ ಭೂತೇಷು ವಿಪಾಪಃ ಪಾಕಶಾಸನಃ ॥೪೮॥

ವಿಜ್ವರಃ ಸಮಭೂದ್ಭೂಯಃ ಕಾಲಾಕಾಂಕ್ಷೀ ಸ್ಥಿತೋ ಜಲೇ ।
ಅದೃಶ್ಯಃ ಸರ್ವಭೂತಾನಾಂ ಪದ್ಮನಾಲೇ ವ್ಯತಿಷ್ಠತ ॥೪೯॥

ದೇವಾಸ್ತು ನಿರ್ಗತಾಃ ಸ್ಥಾನೇ ಕೃತ್ವಾ ಕಾರ್ಯಂ ತದದ್ಭುತಂ ।
ಪೌಲೋಮೀ ತು ಗುರುಂ ಪ್ರಾಹ ದುಃಖಿತಾ ವಿರಹಾಕುಲಾ ॥೫೦॥

---

ದೇವತೆಗಳು ಬೃಹಸ್ಪತಿಯನ್ನು ಮುಂದಿಟ್ಟುಕೊಂಡು ಹೋಗಿ ದೇವೇಂದ್ರನನ್ನು ಸಮಾಧಾನ ಮಾಡಿ, ಅಶ್ವಮೇಧವೆಂಬ ದೊಡ್ಡ ಯಜ್ಞವನ್ನು ಪೂರ್ಣವಾಗಿ ಅವನಿಂದ ಮಾಡಿಸಿದರು. ॥೪೬॥

ದೇವತೆಗಳಿಗೆ ಒಡೆಯನಾದ ದೇವೇಂದ್ರನು ತನ್ನ ಬ್ರಹ್ಮಹತ್ಯೆಯ ಪಾಪವನ್ನು ಮರಗಳು, ನದಿಗಳು, ಪರ್ವತಗಳು, ಸ್ತ್ರೀಯರು ಇವರುಗಳಿಗೆ ಹಂಚಿಕೊಟ್ಟನು. ನದಿಗಳಲ್ಲಿ ಪ್ರವಾಹಕಾಲದಲ್ಲೂ, ಸ್ತ್ರೀಯರಲ್ಲಿ ಋತುಕಾಲದಲ್ಲೂ ಇರುವಂತೆ ಮಾಡಿರುವುದಾಗಿ ಧರ್ಮಶಾಸ್ತ್ರದಲ್ಲೂ ಹೇಳಿದೆ. ॥೪೭॥

ದೇವೇಂದ್ರನು ಆ ಬ್ರಹ್ಮಹತ್ಯೆಯ ಪಾಪವನ್ನು ಮೇಲೆ ಹೇಳಿದಂತೆ ನಾಲ್ಕು ಭಾಗಮಾಡಿ ನಾಲ್ಕು ಭೂತಗಳಲ್ಲಿ ಇರುವಂತೆ ವಿನಿಯೋಜಿಸಿ, ಆ ಸ್ಥಳವನ್ನೂ ಬಿಟ್ಟು, ಶುದ್ಧನಾಗಿ ಮನಸ್ಸಿನಲ್ಲಿ ದುಃಖಹೊಂದದೆ ಆತುರ ಪಡದೆ ಏಳಿಗೆಗೆ ತಕ್ಕ ಕಾಲವನ್ನು ನಿರೀಕ್ಷಿಸುತ್ತಾ, ಯಾರಿಗೂ ಕಾಣದಂತೆ ಬೇರೊಂದಡೆಯ ನೀರಿನಲ್ಲಿ ಕಮಲದ ದಂಟಿನೊಳಗೆ ಅಡಗಿಕೊಂಡಿದ್ದನು. ಹಿಂದೆಯೂ ಹೀಗೆಯೇ ಅಡಗಿಕೊಂಡಿದ್ದುದರಿಂದ ಶಚೀದೇವಿಗೆ ಅವನಿದ್ದ ಸ್ಥಳವು ತಿಳಿದಿರಲಿಲ್ಲ. ಅಲ್ಲದೆ, ಸ್ಥಳವನ್ನು ಬದಲಾಯಿಸಿದುದರಿಂದ ಆಮೇಲೂ ಅದು ಗೊತ್ತಿರಲಿಲ್ಲವು. ॥೪೮-೪೯॥

ದೇವತೆಗಳು ಆಶ್ಚರ್ಯಕರವಾದ ಅಶ್ವಮೇಧಯಜ್ಞವನ್ನು ದೇವೇಂದ್ರನಿಂದ ಮಾಡಿಸಿ ತಮ್ಮ ತಮ್ಮ ಸ್ಥಳಗಳಿಗೆ ಹೋದರು. ಹೀಗೆ ಸ್ವಲ್ಪಕಾಲ ಕಳೆಯಲು

**ಕೃತಯಜ್ಞೋಽಪಿ ಮೇ ಭರ್ತಾ ಕಿಮದೃಶ್ಯಃ ಪುರಂದರಃ ।**
**ಕಥಂ ದ್ರಕ್ಷ್ಯೇ ಪ್ರಿಯಂ ಸ್ವಾಮಿಂಸ್ತಮುಪಾಯಂ ವದಸ್ವ ಮೇ॥೫೧॥**

॥ ಬೃಹಸ್ಪತಿರುವಾಚ ॥

**ತ್ವಮಾರಾಧಯ ಪೌಲೋಮಿ ದೇವೀಂ ಭಗವತೀಂ ಶಿವಾಂ ।**
**ದರ್ಶಯಿಷ್ಯತಿ ತೇ ನಾಥಂ ದೇವೀ ವಿಗತಕಲ್ಮಷಂ ॥೫೨॥**

**ಆರಾಧಿತಾ ಜಗದ್ಧಾತ್ರೀ ನಹುಷಂ ವಾರಯಿಷ್ಯತಿ ।**
**ಮೋಹಯಿತ್ವಾ ನೃಪಂ ಸ್ಥಾನಾತ್ಪಾತಯಿಷ್ಯತಿ ಚಾಂಬಿಕಾ ॥೫೩॥**

**ಇತ್ಯುಕ್ತಾ ಸಾ ತದಾ ತೇನ ಪುಲೋಮತನಯಾ ನೃಪ ।**
**ಜಗ್ರಾಹ ಮಂತ್ರಂ ವಿಧಿವದ್ಗುರೋರ್ದೇವ್ಯಾ ಸಸಾಧನಂ ॥೫೪॥**

---

ಶಚೀದೇವಿಯು ವಿರಹದಿಂದ ಸಂತಾಪ ಪಡುತ್ತ ಬೃಹಸ್ಪತಿಯನ್ನು ಕುರಿತು ದುಃಖದಿಂದ ಹೀಗೆ ಮಾತನಾಡಿದಳು. ॥೫೦॥

ಓ ಗುರುವೇ—ನನ್ನ ಗಂಡನಾದ ದೇವೇಂದ್ರನು ಯಜ್ಞವನ್ನು ಮಾಡಿದ ಮೇಲೆಯೂ ಯಾವ ಕಾರಣದಿಂದ ಯಾರಿಗೂ ಕಾಣದೆ ಇನ್ನೂ ಅವಿತುಕೊಂಡಿರುವನು? ನಾನು ನನ್ನ ಪ್ರಿಯನನ್ನು ಹೇಗೆ ನೋಡುವೆನು? ಆ ಉಪಾಯವನ್ನು ನನಗೆ ಹೇಳು! ॥೫೧॥

ಬೃಹಸ್ಪತಿಯು ಹೇಳಿದನು—ಓ ಶಚೀದೇವಿಯೇ, ನೀನು ಮಹಾಮಹಿಮಳೂ ಮಂಗಳಕರಳೂ ಆದ ಭುವನೇಶ್ವರೀ ದೇವಿಯನ್ನು ಪೂಜಿಸು. ಆ ದೇವಿಯು ಪಾಪವನ್ನು ಕಳೆದುಕೊಂಡುದರಿಂದ ಪರಿಶುದ್ಧನಾಗಿರುವ ನಿನ್ನ ಪತಿಯನ್ನು ನಿನಗೆ ತೋರಿಸುವಳು. ॥೫೨॥

ಅಷ್ಟೇ ಅಲ್ಲದೆ ನಿನ್ನ ಪೂಜೆಯಿಂದ ಸಂತೋಷವನ್ನು ಪಡೆದ ಜಗದಂಬೆಯು ನಹುಷನ ದೆಸೆಯಿಂದ ನಿನಗೆ ಉಂಟಾಗುತ್ತಿರುವ ತೊಂದರೆಯನ್ನೂ ತಪ್ಪಿಸುವಳು. ಮತ್ತು ಆ ನಹುಷನಿಗೆ ಅಜ್ಞಾನವನ್ನುಂಟುಮಾಡಿ ಇಂದ್ರನ ಸಿಂಹಾಸನದಿಂದ ಅವನನ್ನು ಕೆಡಹುವಳು. ॥೫೩॥

ಹೀಗೆಂದು ಬೃಹಸ್ಪತಿಯು ಹೇಳುತ್ತಲು, ಆ ಶಚೀದೇವಿಯು ಗುರುವಿನಿಂದ ದೇವಿಯ ಹೃಲ್ಲೇಖಾತ್ಮಕವಾದ ಮಂತ್ರವನ್ನು ಋಷಿ, ದೇವತಾ, ಅಂಗನ್ಯಾಸ

ವಿದ್ಯಾಂ ಪ್ರಾಪ್ಯ ಗುರೋರ್ದೇವೀ ದೇವೀಂ ಶ್ರೀಭುವನೇಶ್ವರೀಂ ।
ಸಮ್ಯಗಾರಾಧಯಾಮಾಸ ಬಲಿಪುಷ್ಪಾರ್ಚನೈಃ ಶುಭೈಃ ॥೫೫॥

ತ್ಯಕ್ತ್ವಾನ್ಯಭೋಗಸಂಭಾರಾ ತಾಪಸೀವೇಷಧಾರಿಣೀ ।
ಚಕಾರ ಪೂಜನಂ ದೇವ್ಯಾಃ ಪ್ರಿಯದರ್ಶನಲಾಲಸಾ ॥೫೬॥

ಕಾಲೇನ ಕಿಯತಾ ತುಷ್ಟಾ ಪ್ರತ್ಯಕ್ಷಂ ದರ್ಶನಂ ದದೌ ।
ಸೌಮ್ಯರೂಪಧರಾ ದೇವೀ ವರದಾ ಹಂಸವಾಹಿನೀ ॥೫೭॥

---

ಜಪ ಪೂಜೆ ಇತ್ಯಾದಿ ಕ್ರಮಪೂರ್ವಕವಾಗಿ ಶಾಸ್ತ್ರದಲ್ಲಿ ಹೇಳಿರುವ ಮೇರೆಗೆ ಉಪದೇಶದ ಮೂಲಕ ತೆಗೆದುಕೊಂಡಳು. ॥೫೪॥

ಬೃಹಸ್ಪತಿಯು ದೇವಸಂಬಂಧವಾದ ಎಲ್ಲ ಮಂತ್ರಗಳಿಗಿಂತಲೂ ಉತ್ತಮೋತ್ತಮವಾದ ಸಂಪತ್ತನ್ನು ಕೊಡುವ ಈ ಭುವನೇಶ್ವರೀ ಮಹಾಮಂತ್ರವನ್ನು ಉಪದೇಶ ಮಾಡಿದನು. ಈ ಮಂತ್ರವು ಮುಖ್ಯವಾಗಿ ಮಾಯಾವಿಶಿಷ್ಟ ಬ್ರಹ್ಮಪ್ರತಿಪಾದಕವಾದ ಕಾರಣ ಇದಕ್ಕೆ ಮಾಯಾಬೀಜ, ಶಕ್ತಿಬೀಜ, ಪ್ರಕೃತಿಬೀಜ, ಗೌರೀಬೀಜ ದೇವೀಪ್ರಣವ ಇತ್ಯಾದಿಯಾದ ನಾಮಾಂತರಗಳೂ ಉಂಟು. ಇವೆಲ್ಲವೂ ಶಕ್ತಿತತ್ತ್ವವಿಮರ್ಶಿನೀ ಎಂಬ ಗ್ರಂಥದಲ್ಲಿಯೂ, ವರಿವಸ್ಯಾರಹಸ್ಯದಲ್ಲಿಯೂ, ಸಪ್ರಮಾಣವಾಗಿ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಶಚೀದೇವಿಯು ಈ ಭುವನೇಶ್ವರೀಮಂತ್ರವನ್ನು ಗುರುವಿನಿಂದ ವಿಧಿವತ್ತಾಗಿ ಹೊಂದಿ ಮಂಗಳಕರವಾದ ಪುಷ್ಪಗಳನ್ನು ತಂದು ಪೂಜಿಸಿ ಬಲಿಯನ್ನು ಕೊಟ್ಟು ಮಂತ್ರಶಾಸ್ತ್ರದ ವಿಧಿಯನ್ನನುಸರಿಸಿ ಕಲ್ಪದಲ್ಲಿ ಹೇಳಿರುವ ಕ್ರಮದಿಂದ ದೇವಿಯನ್ನು ಆರಾಧಿಸಿದಳು. ॥೫೫॥

ಶಚೀದೇವಿಯು ಬೇರೆ ವಿಧವಾದ ಸುಖಾನುಭವದ ಸಾಮಗ್ರೀಗಳ ಪವ್ಯಾಸವನ್ನು ಬಿಟ್ಟು ತಾಪಸಿಯ ವೇಷವನ್ನು ಧರಿಸಿ ಮಂತ್ರಪುರಶ್ಚರಣದ ನಿಯಮಗಳನ್ನು ಪಾಲಿಸುತ್ತಾ ತನ್ನ ಪ್ರೀತಿಪಾತ್ರನಾದ ಪತಿಯನ್ನು ನೋಡುವ ಆಸಕ್ತಿಯಿಂದ ತ್ರೀಜಗನ್ಮಾತೆಯಾದ ಭುವನೇಶ್ವರೀ ದೇವಿಯನ್ನು ಪೂಜಿಸಿದಳು. ॥೫೬॥

ಜಗನ್ಮಾತೆಯಾದ ಭುವನೇಶ್ವರೀ ದೇವಿಯು ಸ್ವಲ್ಪಕಾಲದಲ್ಲಿಯೇ ಶಚೀದೇವಿಯ ಪೂಜೆಯಿಂದ ಸಂತೋಷವನ್ನು ಹೊಂದಿ ವರವನ್ನು ಕೊಡುವುದಕ್ಕಾಗಿ ಶಾಂತವಾದ ರೂಪವನ್ನು ಧರಿಸಿ ಹಂಸದಮೇಲೆ ಕುಳಿತುಕೊಂಡು ಬಂದು ಪ್ರತ್ಯಕ್ಷಳಾದಳು. ॥೫೭॥

ಕೋಟಿಸೂರ್ಯಪ್ರತೀಕಾಶಾ ಚಂದ್ರಕೋಟಿಸುಶೀತಲಾ ।
ವಿದ್ಯುತ್ಕೋಟಿಸಮಾನಾಭಾ ಚತುರ್ವೇದಸಮನ್ವಿತಾ ॥೫೮॥

ಪಾಶಾಂಕುಶಾಭಯವರಾನ್ ದಧತೀ ನಿಜಬಾಹುಭಿಃ ।
ಆಪಾದಲಂಬಿನೀಂ ಸ್ವಚ್ಛಾಂ ಮುಕ್ತಾಮಾಲಾಂ ಚ ಬಿಭ್ರತೀ ॥೫೯॥

ಪ್ರಸನ್ನಸ್ಮೇರವದನಾ ಲೋಚನತ್ರಯಭೂಷಿತಾ ।
ಆಬ್ರಹ್ಮಕೀಟಜನನೀ ಕರುಣಾಮೃತಸಾಗರಾ ॥೬೦॥

ಅನಂತಕೋಟಿ ಬ್ರಹ್ಮಾಂಡನಾಯಿಕಾ ಪರಮೇಶ್ವರೀ ।
ಸೌಮ್ಯಾನಂತರಸೈರ್ಯುಕ್ತಸ್ತನದ್ವಯವಿರಾಜಿತಾ ॥೬೧॥

---

ಆ ದೇವಿಯು ಕೋಟಿಸೂರ್ಯರ ಪ್ರಕಾಶದಂತೆ ಕಾಂತಿಯಿಂದ ಕೂಡಿದ್ದರೂ ಕೋಟಿಚಂದ್ರಕಾಂತಿಯಂತೆ ತಣ್ಣಗಿದ್ದು ಕೋಟಿಮಿಂಚಿನಂತೆ ಹೊಳೆಯುತ್ತ ನಾಲ್ಕು ವೇದಗಳಿಂದಲೂ ಸ್ತೋತ್ರಗಳಲ್ಲಿ ಪ್ರತಿಪಾದ್ಯವಾದ ಸ್ವರೂಪವುಳ್ಳವಳಾಗಿದ್ದಳು. ॥೫೮॥

ಪಾಶಾಯುಧ ಅಂಕುಶಗಳನ್ನು ಧರಿಸಿ ಅಭಯ ಮತ್ತು ವರದ ಮುದ್ರೆಯಿಂದ ಕೂಡಿದ ಹಸ್ತಗಳುಳ್ಳವಳಾಗಿ, ನಾಲ್ಕು ತೋಳುಗಳಿಂದ ಕೂಡಿ, ಕಾಲಿನವರೆಗೂ ಜೋಲಾಡುವ ಬಿಳಿಯ ಮುತ್ತಿನ ವೈಜಯಂತೀ ಎಂಬ ಹಾರವನ್ನು ಧರಿಸಿದ್ದಳು. ಶ್ರೀಶಂಕರಾಚಾರ್ಯರು ಪ್ರಪಂಚಸಾರದ ಭುವನೇಶ್ವರೀಪಟಲದಲ್ಲಿ "ಧಾತೂದ್ವಾಸ್ತೋರಕ್ಷಣವ್ಯಾಪಕಾರ್ಥೌ" ಎಂದು ಮುಂತಾಗಿ ಸ್ತೋತ್ರಮಾಡಿರುವರು. ॥೫೯॥

ಪ್ರಸನ್ನವಾದ ನಗುಮುಖದಿಂದ ಕೂಡಿ, ಮೂರು ಕಣ್ಣುಗಳಿಂದ ಅಲಂಕೃತಳಾಗಿ, ಬ್ರಹ್ಮನು ಮೊದಲುಗೊಂಡು ಕೀಟಪರ್ಯಂತವಾಗಿರುವ ಸಮಸ್ತ ಪ್ರಾಣಿಗಳಿಗೂ ತಾಯಿಯಾಗಿ ದಯಾಸಮುದ್ರಳಾಗಿದ್ದಳು. ॥೬೦॥

ಅನೇಕ ಕೋಟಿ ಬ್ರಹ್ಮಾಂಡಗಳಿಗೆ ಅಧಿಪತಿಯಾದ ದೇವಿಯು ಸೌಮ್ಯಗಳಾದ ಶಾಂತಿ ದಾಂತಿ ಕಾಂತಿ ಮೊದಲಾದ, ಮೋಕ್ಷಸುಖವನ್ನು ಕೊಡುವ, ಅನಂತವಾದ ರಸಗಳಿಂದ ತುಂಬಿ ಪರಿಪುಷ್ಟವಾಗಿರುವ ಎರಡು ಸ್ತನಗಳಿಂದ ಪ್ರಕಾಶಿಸುತ್ತಿದ್ದಳು. ॥೬೧॥

ಸರ್ವೇಶ್ವರೀ ಚ ಸರ್ವಜ್ಞಾ ಕೂಟಸ್ಥಾಕ್ಷರರೂಪಿಣೀ ।
ತಾಮುವಾಚ ಪ್ರಸನ್ನಾ ಸಾ ಶಕ್ರಪತ್ನೀಂ ಕೃತೋದ್ಯಮಾಂ ॥೬೨॥

ಮೇಘಗಂಭೀರಶಬ್ದೇನ ಮುದಮಾದಧತೀ ಭೃಶಂ ।

॥ ದೇವ್ಯುವಾಚ ॥

ವರಂ ವರಯ ಸುಶ್ರೋಣಿ ವಾಂಛಿತಂ ಶಕ್ರವಲ್ಲಭೇ ॥೬೩॥

ದದಾಮ್ಯದ್ಯ ಪ್ರಸನ್ನಾಽಸ್ಮಿ ಪೂಜಿತಾ ಸುಭೃಶಂ ತ್ವಯಾ ।
ವರದಾಽಹಂ ಸಮಾಯಾತಾ ದರ್ಶನಂ ಸಹಜಂ ನ ಮೇ ॥೬೪॥

ಅನೇಕಕೋಟಿಜನ್ಮೋತ್ಥಪುಣ್ಯಪುಂಜೈರ್ಹಿ ಲಭ್ಯತೇ ।
ಇತ್ಯುಕ್ತ್ವಾ ಸಾ ತದಾ ದೇವೀಂ ತಾಮಾಹ ಪ್ರಣತಾ ಪುರಃ ॥೬೫॥

---

ಎಲ್ಲಕ್ಕೂ ಅಧಿಪತಿಯಾಗಿಯೂ ಎಲ್ಲವನ್ನೂ ತಿಳಿದವಳಾಗಿಯೂ ಎಲ್ಲಕ್ಕೂ ಆಧಾರಳಾಗಿಯೂ ಕೂಟದಂತೆ ನಿರ್ವಿಕಾರವಾದ ಬ್ರಹ್ಮಸ್ವರೂಪಳಾಗಿಯೂ ಮತ್ತು ಮಾತೃಕಾವರ್ಗರೂಪಿಣಿಯಾಗಿಯೂ ಮೇಘದಂತೆ ಗಂಭೀರವಾದ ಧ್ವನಿಯಿಂದ ವಿಶೇಷವಾಗಿ ಸಂತೋಷವನ್ನುಂಟುಮಾಡುತ್ತಿರುವ ದೇವಿಯು ತನ್ನನ್ನು ಪೂಜೆ ಮಾಡಿದ ಶಚೀದೇವಿಗೆ ಪ್ರಸನ್ನಳಾಗಿ ಅವಳನ್ನು ಕುರಿತು ಹೀಗೆ ಹೇಳಿದಳು. ॥೬೨॥

ದೇವಿಯು ಹೇಳಿದಳು—ದೇವೇಂದ್ರನ ಪ್ರೀತಿಪಾತ್ರಳಾದ ಶಚೀದೇವಿಯೇ, ನೀನು ಮಾಡಿದ ಪೂಜೆಯಿಂದ ನಾನು ಸಂತೋಷವನ್ನು ಹೊಂದಿದೆನು. ನಿನಗಿಷ್ಟವಾದ ವರವನ್ನು ಕೇಳು ಕೊಡುವೆನು ! ॥೬೩॥

ನಾನು ವರವನ್ನು ಕೊಡುವುದಕ್ಕಾಗಿ ಬಂದಿರುವೆನು. ನನ್ನ ದರ್ಶನವು ಸಾಮಾನ್ಯ ಜನರಿಗೆ ಸುಲಭವಾಗಿ ದೊರೆಯತಕ್ಕದಲ್ಲವು. ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯಗಳ ಸಮೂಹವುಳ್ಳವರಿಗೆ ಮಾತ್ರ ದೊರೆಯುವುದು ! ಹೀಗೆಂದು ಹೇಳಿದ ದೇವಿಯನ್ನು ಕುರಿತು, ಶಚೀದೇವಿಯು ನಮಸ್ಕರಿಸಿ ಹೀಗೆ ಹೇಳಿದಳು. ॥೬೪-೬೫॥

ಶಕ್ರಪತ್ನೀ ಭಗವತೀಂ ಪ್ರಸನ್ನಾಂ ಪರಮೇಶ್ವರೀಂ ।
ವಾಂಛಾಮಿ ದರ್ಶನಂ ಮಾತಃ ಪತ್ಯುಃ ಪರಮದುರ್ಲಭಂ ॥೬೬॥

ನಹುಷಾದ್ಭಯನಾಶಂ ಚ ಸ್ವಪದಪ್ರಾಪಣಂ ತಥಾ ।

॥ ದೇವ್ಯುವಾಚ ॥

ಗಚ್ಛ ತ್ವಮನಯಾದೂತ್ಯಾ ಸಾರ್ಧಂ ಶ್ರೀಮಾನಸಂ ಸರಃ ॥೬೭॥

ಯತ್ರ ಮೇ ಮೂರ್ತಿರಚಲಾ ವಿಶ್ವಕಾಮಾಭಿಧಾ ಮತಾ ।
ತತ್ರ ಪಶ್ಯಸಿ ಶಕ್ರಂ ತ್ವಂ ದುಃಖಿತಂ ಭಯವಿಹ್ವಲಂ ॥೬೮॥

ಮೋಹಯಿಷ್ಯಾಮಿ ರಾಜಾನಂ ಕಾಲೇನ ಕಿಯತಾ ಪುನಃ ।
ಸ್ವಸ್ಥಾ ಭವ ವಿಶಾಲಾಕ್ಷಿ ಕರೋಮಿ ತವ ಚೇಪ್ಸಿತಂ ॥೬೯॥
ಭ್ರಂಶಯಿಷ್ಯಾಮಿ ಭೂಪಾಲಂ ಮೋಹಿತಂ ತ್ರಿದಶಾಸನಾತ್ ।

---

ದೇವೇಂದ್ರನ ಪತ್ನಿಯಾದ ಶಚೀದೇವಿಯು ತನಗೆ ಪ್ರತ್ಯಕ್ಷಳಾದ ಮಹಾಮಹಿಮಳಾದ ಭುವನೇಶ್ವರೀ ದೇವಿಯನ್ನು ಕುರಿತು, ಓ ದೇವಿಯೇ, ನನಗೆ ಈಚೆಗೆ ತುಂಬ ದುರ್ಲಭವಾಗಿರುವ ನನ್ನ ಪತಿಯ ದರ್ಶನವನ್ನು ಮಾಡಬೇಕೆಂದು ಅಪೇಕ್ಷಿಸುವೆನು ಮತ್ತು ನಹುಷನ ಭಯವು ತೊಲಗಿ ನನ್ನ ಪತಿಗೆ ಪೂರ್ವದಂತೆ ತನ್ನ ಪದವಿಯು ದೊರೆಯಬೇಕು, ಎಂದು ಕೇಳಿಕೊಂಡಳು. ||೬೬||

ದೇವಿಯು—ಎಲೈ ಶಚೀದೇವಿಯೇ, ನೀನು ಈ ನನ್ನ ದೂತಿಯೊಡನೆ ಮಾನಸ ಸರೋವರಕ್ಕೆ ಹೋಗು. ಅಲ್ಲಿ ಶಾಶ್ವತವಾದ ವಿಶ್ವಕಾಮಾ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ನನ್ನ ಮೂರ್ತಿಯು ಇರುವುದು. ನೀನು ಅಲ್ಲಿ ನಿನ್ನ ವಿಯೋಗದ ದುಃಖದಿಂದಲೂ ನಹುಷನಿಂದ ಉಂಟಾಗಿರುವ ಭಯದಿಂದಲೂ ಸಂಕಟಪಡುತ್ತಿರುವ ದೇವೇಂದ್ರನನ್ನು ನೋಡುವೆ. ||೬೭-೬೮||

ಮತ್ತು ನಾನು ಇನ್ನು ಸ್ವಲ್ಪಕಾಲದಲ್ಲಿಯೇ ದೇವೇಂದ್ರನ ಸಿಂಹಾಸನದಲ್ಲಿರುವ ನಹುಷರಾಜನಿಗೆ ಅಜ್ಞಾನವನ್ನುಂಟುಮಾಡಿ ಅಧಿಕಾರವನ್ನು ತಪ್ಪಿಸುವೆನು! ನಿನ್ನ ಇಷ್ಟವನ್ನು ನೆರವೇರಿಸುವೆನು! ಶಾಂತಚಿತ್ತಳಾಗಿರು, ಎಂದಳು. ||೬೯||

॥ ವ್ಯಾಸ ಉವಾಚ ॥

**ದೇವೀದೂತೀ ತಾಂ ಗೃಹೀತ್ವಾ ಶಕ್ರಪತ್ನೀಂ ತ್ವರಾನ್ವಿತಾ ॥೭೦॥**

**ಪ್ರಾಪಯಾಮಾಸ ಸಾನ್ನಿಧ್ಯಂ ಸ್ವಪತ್ಯುಃ ಪರಮೇಶ್ವರೀಂ ।**
**ಸಾ ದೃಷ್ಟ್ವಾ ತಂ ಪತಿಂ ಬಾಲಾ ಸುರೇಶಂ ಗುಪ್ತಸಂಸ್ಥಿತಂ ॥೭೧॥**
**ಮುದಿತಾಭೂದ್ವರಂ ವೀಕ್ಷ್ಯ ಬಹುಕಾಲಾಭಿವಾಂಛಿತಂ ।**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ**
**ಅಷ್ಟಮೋಽಧ್ಯಾಯಃ.**

---

ವ್ಯಾಸಋಷಿಯು ಹೇಳಿದನು—ಶ್ರೀ ಭುವನೇಶ್ವರೀದೇವಿಯ ದೂತಿಯು ದೇವೇಂದ್ರನ ಪತ್ನಿಯಾದ ದೇವತೆಗಳಿಗೆಲ್ಲರಿಗೂ ಒಡತಿಯಾದ ಶಚೀದೇವಿಯನ್ನು ಕರೆದುಕೊಂಡು ಬೇಗನೆ ಹೋಗಿ ಅವಳ ಪತಿಯಾದ ದೇವೇಂದ್ರನ ಸಮೀಪವನ್ನು ಪಡೆಯಿಸಿದಳು. ॥೭೦॥

ಚಿಕ್ಕ ವಯಸ್ಸಿನವಳಾದ ಎಂದರೆ ದೇವತೆಗಳಂತೆ ಅಮೃತಪಾನದಿಂದ ನಿತ್ಯ ಯುವತಿಯಾಗಿರುವ, ಶಚೀದೇವಿಯು ಮರೆಯಾಗಿದ್ದ, ಬಹುಕಾಲದಿಂದ ನೋಡ ಬೇಕೆಂಬ ಅಪೇಕ್ಷೆಯಿಂದ ತನಗೆ ದರ್ಶನೀಯನಾಗಿದ್ದ, ಆ ದೇವೇಂದ್ರನನ್ನು ನೋಡಿ ಸಂತೋಷವನ್ನು ಹೊಂದಿದಳು. ॥೭೧॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ ಎಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

॥ ನವಮೋಽಧ್ಯಾಯಃ ॥

**ಒಂಬತ್ತನೆಯ ಅಧ್ಯಾಯವು**

॥ ವ್ಯಾಸ ಉವಾಚ ॥

**ತಾಂ ವೀಕ್ಷ್ಯ ವಿಪುಲಾಪಾಂಗೀಂ ರಹಃ ಶೋಕಸಮನ್ವಿತಾಂ ।**
**ಆಖಂಡಲಃ ಪ್ರಿಯಾಂ ಭಾರ್ಯಾಂ ವಿಸ್ಮಿತಶ್ಚಾಬ್ರವೀತ್ತದಾ ॥೧॥**

**ಕಥಮತ್ರಾಗತಾ ಕಾಂತೇ ಕಥಂ ಜ್ಞಾತಸ್ತ್ವಯಾ ಹ್ಯಹಂ ।**
**ದುಜ್ಞೇಯಃ ಸರ್ವಭೂತಾನಾಂ ಸಂಸ್ಥಿತೋಽಸ್ಮಿ ಶುಭಾನನೇ ॥೨॥**

॥ ಶಚ್ಯುವಾಚ ॥

**ದೇವ ದೇವ್ಯಾಃ ಪ್ರಸಾದೇನ ಜ್ಞಾತೋಽಸ್ಯದ್ಯ ಭವಾನಿಹ ।**
**ಪುನಸ್ತಸ್ಯಾಃ ಪ್ರಸಾದೇನ ಪ್ರಾಪ್ತಾಽಸ್ಮಿ ತ್ವಾಂ ದಿವಸ್ಪತೇ ॥೩॥**

---

ವ್ಯಾಸಋಷಿಯು ಹೇಳಿದನು–ದೇವೇಂದ್ರನು ವಿಸ್ತಾರವಾದ ಕಡೆಗಣ್ಣಿನನೋಟವುಳ್ಳ ಪ್ರೀತಿಪಾತ್ರಳಾದ ತನ್ನ ಅಗಲಿಕೆಯಿಂದ ದುಃಖಿಸುತ್ತಿರುವ ಪತ್ನಿಯನ್ನು ಏಕಾಂತವಾದ ಪ್ರದೇಶದಲ್ಲಿ ನೋಡಿ ಆಶ್ಚರ್ಯಪಡುತ್ತ ಅವಳನ್ನು ಕುರಿತು ಹೇಳಿದನು. ॥೧॥

ಎಲೈ ಕಾಂತೆಯೇ ನೀನು ಇಲ್ಲಿಗೆ ಹೇಗೆ ಬಂದೆ? ಮಂಗಳಕರವಾದ ಮುಖವುಳ್ಳ ಶಚೀದೇವಿಯೇ ನಾನು ಯಾವ ಪ್ರಾಣಿಗೂ ತಿಳಿಯದಂತೆ ಇಲ್ಲಿ ಅವಿತುಕೊಂಡಿರುವೆನು. ನೀನು ಇಲ್ಲಿರುವ ನನ್ನನ್ನು ಹೇಗೆ ತಿಳಿದೆ? ॥೨॥

ಶಚೀದೇವಿಯು ಹೇಳಿದಳು---ಸ್ವರ್ಗಕ್ಕೆ ಅಧಿಪತಿಯಾದ ಸ್ವಾಮಿಯೇ ಈ ದಿವಸ ಭುವನೇಶ್ವರೀದೇವಿಯ ಅನುಗ್ರಹದಿಂದ ನೀನಿಲ್ಲಿರುವುದನ್ನು ತಿಳಿದೆನು. ಆ ದೇವಿಯ ಅನುಗ್ರಹದಿಂದಲೇ ನಿನ್ನ ಸಮೀಪಕ್ಕೆ ಬಂದಿರುವೆನು! ॥೩॥

ನಹುಷೋ ನಾಮ ರಾಜರ್ಷಿಃ ಸ್ಥಾಪಿತೋ ಭವದಾಸನೇ ।
ತ್ರಿದಶೈರ್ಮುನಿಭಿಶ್ಚೈವ ಸ ಮಾಂ ಬಾಧತಿ ನಿತ್ಯಶಃ ॥೪॥

ಪತಿಂ ಮಾಂ ಕುರು ಚಾರ್ವಂಗಿ ತುರಾಸಾಹಂ ಸುರಾಧಿಪಂ ।
ಏವಂ ವದತಿ ಮಾಂ ಪಾಪಾತ್ಮಾ ಕಿಂ ಕರೋಮಿ ಬಲಾರ್ದನ ॥೫॥

॥ ಇಂದ್ರ ಉವಾಚ ॥

ಕಾಲಾಕಾಂಕ್ಷೀ ವರಾರೋಹೇ ಸಂಸ್ಥಿತೋಽಸ್ಮಿ ಯದೃಚ್ಛಯಾ ।
ತಥಾ ತ್ವಮಪಿ ಕಲ್ಯಾಣಿ ಸುಸ್ಥಿರಂ ಸ್ವಮನಃ ಕುರು ॥೬॥

॥ ವ್ಯಾಸ ಉವಾಚ ॥

ಇತ್ಯುಕ್ತಾ ತೇನ ಸಾ ದೇವೀ ಪತಿನಾಽತಿಪ್ರಶಂಸಿನಾ ।
ನಿಶ್ವಸಂತ್ಯಾಹಿತಂ ಶಕ್ರಂ ನೇಪಮಾನಾಽತಿದುಃಖಿತಾ ॥೭॥

---

ನಹುಷನೆಂಬ ರಾಜರ್ಷಿಯು ದೇವತೆಗಳಿಂದಲೂ ಮುನಿಗಳಿಂದಲೂ ನಿನ್ನ ಸಿಂಹಾಸನದಲ್ಲಿ ಪಟ್ಟಾಭಿಷಿಕ್ತನಾಗಿರುವನು. ಅವನು ನನ್ನನ್ನು ಪ್ರತಿದಿನವೂ ತೊಂದರೆ ಪಡಿಸುತ್ತಿರುವನು. ॥೪॥

ಬಲಾಸುರನನ್ನು ನಾಶಮಾಡಿದ ಇಂದ್ರನೇ, ಆ ನಹುಷನು "ದೇವತೆಗಳಿಗೆ ಒಡೆಯನಾಗಿ ಈಗ ಇಂದ್ರನಾಗಿರುವ ನನ್ನನ್ನು ಪತಿಯನ್ನಾಗಿ ವರಿಸು" ಎಂಬುದಾಗಿ ಪಾಪಬುದ್ಧಿಯಿಂದ ಹೇಳುತ್ತಿರುವನು. ನಾನು ಏನನ್ನು ಮಾಡಲಿ? ಎಂದಳು. ॥೫॥

ದೇವೇಂದ್ರನು ಹೇಳಿದನು --ಸುಂದರಿಯಾದ ಶಚೀದೇವಿಯೇ, ಅದೃಷ್ಟಫಲ ರೂಪವಾಗಿ ತಾನಾಗಿಯೇ ಬರುವ ಅನುಕೂಲ ಕಾಲವನ್ನು ನಾನೂ ನಿರೀಕ್ಷಿಸಿಕೊಂಡಿರುವೆನು. ಎಲೌ ಮಂಗಳೆಯೇ, ಹಾಗೆಯೇ ನೀನೂ ನಿನ್ನ ಮನಸ್ಸನ್ನು ಸ್ಥಿರಮಾಡಿಕೊಂಡಿರು. ॥೬॥

ವ್ಯಾಸಋಷಿಯು ಹೇಳಿದನು—ಎಲ್ಲರೂ ಹೊಗಳುತ್ತಿರುವ ತನ್ನ ಪತಿಯಾದ ದೇವೇಂದ್ರನು ತನಗೆ ಹೇಳಿದ ಮಾತನ್ನು ಕೇಳಿ ಶಚೀದೇವಿಯು ದುಃಖದಿಂದ ನಿಟ್ಟುಸಿರನ್ನು ಬಿಟ್ಟು ನಡುಗುತ್ತ ಅವನನ್ನು ಕುರಿತು ಹೇಳಿದಳು. ॥೭॥

**ಕಥಂ ತಿಷ್ಠೇನ್ಮಹಾಭಾಗ ಪಾಪಾತ್ಮಾ ಮಾಂ ವಶಾನುಗಾಂ ।**
**ಕರಿಷ್ಯತಿ ಮದೋನ್ಮತ್ತೋ ವರದಾನೇನ ಗರ್ವಿತಃ ॥೮॥**

**ದೇವಾಶ್ಚ ಮುನಯಃ ಸರ್ವೇ ಮಾಮೂಚುಸ್ತದ್ಭಯಾಕುಲಾಃ ।**
**ತಂ ಭಜಸ್ವ ವರಾರೋಹೇ ದೇವರಾಜಂ ಸ್ಮರಾತುರಂ ॥೯॥**

**ಬೃಹಸ್ಪತಿಸ್ತು ಶತ್ರುಘ್ನ ವಾಡವೋ ಬಲವರ್ಜಿತಃ ।**
**ಕಥಂ ಮಾಂ ರಕ್ಷಿತುಂ ಶಕ್ತೋ ಭವೇದ್ದೇವಾನುಗಃ ಸದಾ ॥೧೦॥**

**ತಸ್ಮಾಚ್ಚಿಂತಾಽಸ್ತಿ ಮಹತೀ ನಾರ್ಯಹಂ ವಶವರ್ತಿನೀ ।**
**ಅನಾಥಾ ಕಿಂ ಕರಿಷ್ಯಾಮಿ ವಿಪರೀತೇ ವಿಧೌ ವಿಭೋ ॥೧೧॥**

**ನಾರ್ಯಸ್ಮ್ಯಹಂ ನ ಕುಲಟಾ ತ್ವಚ್ಚಿತ್ತಾಽತಿಪತಿವ್ರತಾ ।**
**ನಾಸ್ತಿ ಮೇ ಶರಣಂ ತತ್ರ ಯೋ ಮಾಂ ರಕ್ಷತಿ ದುಃಖಿತಾಂ ॥೧೨॥**

---

ಓ ಮಹಾನುಭಾವನಾದ ದೇವೇಂದ್ರನೇ, ಆ ಪಾಪಿಯಾದ ನಹುಷನು ದೇವತೆಗಳ ವರದಿಂದ ಬಂದ ಅಹಂಕಾರದಿಂದ ಮದಿಸಿದವನಾಗಿ ಹೇಗೆತಾನೇ ಸುಮ್ಮ ನಿರುವನು ? ಹುಚ್ಚನಂತೆ ನನ್ನನ್ನು ತನ್ನ ವಶಮಾಡಿಕೊಳ್ಳುವನು. ನಾನು ಹೇಗಿರುವುದು ? ॥೮॥

ದೇವತೆಗಳೂ ಮುನಿಗಳೂ ಇವರೆಲ್ಲರೂ ಆ ನಹುಷನ ಹೆದರಿಕೆಯಿಂದ ನನ್ನನ್ನು ಕುರಿತು ಎಲೈ ಸುಂದರಿಯೇ ಕಾಮವಿಕಾರದಿಂದ ವ್ಯಥೆಪಡುತ್ತಿರುವ ದೇವ ರಾಜನಾದ ನಹುಷನನ್ನು ಪತಿಯನ್ನಾಗಿ ಸ್ವೀಕರಿಸು ಎಂದು ಹೇಳಿದರು. ॥೯॥

ಶತ್ರುಗಳನ್ನು ನಾಶಮಾಡುವ ದೇವೇಂದ್ರನೇ—ಬೃಹಸ್ಪತಿಯಾದರೋ ಬ್ರಾಹ್ಮಣನು ಬಲಹೀನನು, ಯಾವಾಗಲೂ ದೇವತೆಗಳನ್ನೇ ಅನುಸರಿಸಿರುವನು. ಇಂಥವನು ನನ್ನನ್ನು ರಕ್ಷಿಸಲು ಹೇಗೆತಾನೆ ಶಕ್ತನಾಗುವನು ? ॥೧೦॥

ನಾನೋ ಹೆಂಗುಸು, ಇನ್ನೊಬ್ಬರ ಅಧೀನದಲ್ಲಿರತಕ್ಕವಳು, ದಿಕ್ಕಿಲ್ಲದವಳು. ಈ ಕಾರಣಗಳಿಂದ ನನಗೆ ದೊಡ್ಡ ಚಿಂತೆಯುಂಟಾಗಿರುವುದು. ನನ್ನ ಅದೃಷ್ಟವು ವಿರುದ್ಧಫಲವನ್ನು ಕೊಡುತ್ತಿರುವಲ್ಲಿ ನಾನು ಏನನ್ನು ಮಾಡಬಲ್ಲೆನು. ॥೧೧॥

ನಾನು ಜಾರೆಯಲ್ಲವು. ನಿನ್ನಲ್ಲೇ ಮನಸ್ಸುಳ್ಳ ಪತಿವ್ರತೆಯು. ಆ ನಹುಷ ನಿರುವ ಸ್ವರ್ಗದಲ್ಲಿ ನನ್ನನ್ನು ರಕ್ಷಿಸುವವರಾರೂ ಇಲ್ಲ. ಇಂತಹ ದುಃಖಕ್ಕೆ ಗುರಿಯಾದ

|| ಇಂದ್ರ ಉವಾಚ ||

ಉಪಾಯಂ ಪ್ರಬ್ರವೀಮ್ಯದ್ಯ ತಂ ಕುರುಷ್ವ ವರಾನನೇ ।
ಶೀಲಂ ತೇ ದುಃಸ್ಥಿತೇ ಕಾಲೇ ಪರಿತ್ರಾತಂ ಭವಿಷ್ಯತಿ ||೧೩||

ಪರೇಣ ರಕ್ಷಿತಾ ನಾರೀ ನ ಭವೇಚ್ಚ ಪತಿವ್ರತಾ ।
ಉಪಾಯೈಃ ಕೋಟಿಭಿಃ ಕಾಮಂ ಭಿನ್ನಚಿತ್ತಾತಿಚಂಚಲಾ ||೧೪||

ಶೀಲಮೇವ ಹಿ ನಾರೀಣಾಂ ಸದಾ ರಕ್ಷತಿ ಪಾಪತಃ ।
ತಸ್ಮಾತ್ತ್ವಂ ಶೀಲಮಾಸ್ಥಾಯ ಸ್ಥಿರಾ ಭವ ಶುಚಿಸ್ಮಿತೇ ||೧೫||

ಯದಾ ತ್ವಾಂ ನಹುಷೋ ರಾಜಾ ಬಲಾದಾಕರ್ಷಯೇತ್ಖಲಃ ।
ತದಾ ತ್ವಂ ಸಮಯಂ ಕೃತ್ವಾ ಗುಪ್ತಂ ವಂಚಯ ಭೂಪತಿಂ ||೧೬||

---

ನನ್ನನ್ನು ರಕ್ಷಿಸುವವರಾರೂ ಇಲ್ಲದಿರುವಾಗ ಈ ವಿಪತ್ತಿನಿಂದ ನನ್ನನ್ನು ಕಾಪಾಡುವ ರಾರು? ಎಂದು ಹೇಳಿದಳು. ||೧೨||

ದೇವೇಂದ್ರನು ಹೇಳಿದನು—ಸುಂದರವಾದ ಮುಖವುಳ್ಳ ಶಚೀದೇವಿಯೇ ಈಗ ನಾನು ನಿನಗೆ ಒಂದು ಉಪಾಯವನ್ನು ಹೇಳಿಕೊಡುವೆನು. ಅದನ್ನು ಮಾಡು. ಈ ಕೆಟ್ಟಕಾಲದಲ್ಲಿ ಆ ಉಪಾಯವು ನಿನ್ನ ನಡತೆಯನ್ನು ಕಾಪಾಡುವುದು. ||೧೩||

ಕಾಮವಿಕಾರದಿಂದ ಕೆಟ್ಟುಹೋದ ಮನಸ್ಸುಳ್ಳ ಅತಿ ಚಪಲೆಯಾದ ಸ್ತ್ರೀಯು ಪರರ ಅಧೀನದಲ್ಲಿದ್ದರೆ ಕೋಟಿಯುಕ್ತಿಗಳನ್ನು ಉಪಯೋಗಿಸಿದರೂ ಅವಳು ಪತಿವ್ರತೆಯಾಗಿರಲಾರಳು. ||೧೪||

ಮುಗುಳುನಗೆಯುಳ್ಳ ಶಚೀದೇವಿಯೇ-ಸ್ತ್ರೀಯರಿಗೆ ಒಳ್ಳೆಯ ನಡತೆಯಿದ್ದರೆ ಅದೇ ಅವರನ್ನು ಯಾವಾಗಲೂ ಪಾಪಕಾರ್ಯವನ್ನು ಮಾಡದಂತೆ ಕಾಪಾಡುವುದು. ಆದುದರಿಂದ ನೀನು ಒಳ್ಳೆಯ ನಡತೆಯನ್ನು ಆಶ್ರಯಿಸಿ ಧೈರ್ಯದಿಂದಿರು. ||೧೫||

ದುಷ್ಟರಾಜನಾದ ನಹುಷನು ಯಾವಾಗ ನಿನ್ನನ್ನು ಬಲಾತ್ಕಾರವಾಗಿ ಸೆಳೆಯುವನೋ ಆಗ ನೀನು ಒಂದು ಕಾಲವನ್ನು ಗೊತ್ತುಮಾಡಿ ಅಥವಾ ಒಂದು ಪ್ರತಿಜ್ಞೆಯನ್ನು ನಡೆಸಬೇಕೆಂದು ಗೊತ್ತುಮಾಡಿ ಗುಟ್ಟಾಗಿ ಅವನನ್ನು ಮೋಸಪಡಿಸು. ||೧೬||

ಏಕಾಂತೇ ತತ್ಸಮೀಪೇ ತ್ವಂ ಗತ್ವಾ ವದ ಮದಾಲಸೇ ।
ಋಷಿಯಾನೇನ ದಿವ್ಯೇನ ಮಾಮುಪೈಹಿ ಜಗತ್ಪತೇ ॥೧೬॥

ಏವಂ ತವ ವಶೇ ಪ್ರೀತಾ ಭವಿಷ್ಯಾಮೀತಿ ಮೇ ವ್ರತಂ ।
ಇತಿ ತಂ ವದ ಸುಶ್ರೋಣಿ ತದಾ ತು ಪರಿಮೋಹಿತಃ ॥೧೮॥

ಕಾಮಾಂಧಃ ಸ ಮುನೀನ್ ಯಾನೇ ಯೋಜಯಿಷ್ಯತಿ ಪಾರ್ಥಿವಃ ।
ಅವಶ್ಯಂ ತಾಪಸೋ ಭೂಪಂ ಶಾಪದಗ್ಧಂ ಕರಿಷ್ಯತಿ ॥೧೯॥

ಸಾಹಾಯ್ಯಂ ಜಗದಂಬಾ ತೇ ಕರಿಷ್ಯತಿ ನ ಸಂಶಯಃ ।
ಜಗದಂಬಾಪದಸ್ಮರ್ತುಃ ಸಂಕಟಂ ನ ಕದಾಚನ ॥೨೦॥

ಯದಿ ಜಾಯೇತ ತಚ್ಚಾಪಿ ಜ್ಞೇಯಂ ತತ್ಸ್ವಸ್ತಯೇ ಕಿಲ ।
ತಸ್ಮಾತ್ಸರ್ವಪ್ರಯತ್ನೇನ ಮಣಿದ್ವೀಪಾಧಿವಾಸಿನೀಂ ॥೨೧॥
ಭಜಸ್ವ ಭುವನೇಶಾನೀಂ ಗುರುವಾಕ್ಯಾನುಸಾರತಃ ।

---

ಮುಂದಗಮನೆಯಾದ ಶಚಿಯೇ, ನೀನೊಬ್ಬಳೇ ಆ ನಹುಷನ ಸಮೀಪಕ್ಕೆ ಹೋಗಿ "ಎಲೈ ಸ್ವರ್ಗಾಧಿಪತಿಯೇ, ನೀನು ಋಷಿಗಳು ಹೊತ್ತಿರುವ ಪಲ್ಲಕ್ಕಿಯಲ್ಲಿ ಕುಳಿತು ನನ್ನ ಮನೆಗೆ ಬಂದರೆ ಸಂತೋಷದಿಂದ ನಾನು ನಿನ್ನ ವಶಳಾಗುವೆನು, ಇದು ನನ್ನ ವ್ರತವು." ಎಂದು ಹೇಳು. ||೧೬||

ಆಗ ಅಜ್ಞಾನಿಯೂ ಕಾಮಾಂಧನೂ ಆದ ಆ ನಹುಷನು ಮುನಿಗಳನ್ನು ತನ್ನ ಪಲ್ಲಕ್ಕಿಯನ್ನು ಹೊರಲು ಗೊತ್ತುಮಾಡುವನು. ಋಷಿಯು ಆ ರಾಜನನ್ನು ಶಾಪದಿಂದ ಸುಟ್ಟುಬಿಡುವನು. ||೧೮-೧೯||

ನಿನಗೆ ಜಗದಂಬೆಯಾದ ಭುವನೇಶ್ವರೀದೇವಿಯು ಸಹಾಯವನ್ನು ಮಾಡುವಳು. ಆ ಜಗದಂಬೆಯ ಪಾದವನ್ನು ಸ್ಮರಿಸುವವರಿಗೆ ಎಂದಿಗೂ ದುಃಖವಿರುವುದಿಲ್ಲ. ಒಂದುವೇಳೆ ದುಃಖವುಂಟಾದರೆ ಅದೂ ಅವರ ಮಂಗಳಕ್ಕೆಂದು ತಿಳಿಯಬೇಕು. ಆದುದರಿಂದ ನಿನ್ನ ಸಮಸ್ತ ಪ್ರಯತ್ನಗಳಿಂದಲೂ ಮಣಿದ್ವೀಪವಾಸಿನಿಯಾದ ಭುವನೇಶ್ವರೀ ದೇವಿಯನ್ನು ಗುರುವಿನ ಉಪದೇಶದಂತೆ ಸೇವಿಸು. ||೨೦-೨೧||

|| ವ್ಯಾಸ ಉವಾಚ ||

**ಇತ್ಯಾಖ್ಯಾತಾ ಶಚೀ ತೇನ ಜಗಾಮ ನಹುಷಂ ಪ್ರತಿ ॥೨೨॥**

**ತಥೇತ್ಯುಕ್ತ್ವಾ ಪ್ರತೀತಿವಿಶ್ವಸ್ತಾ ಭಾವಿಕಾರ್ಯೇ ಕೃತೋದ್ಯಮಾ ।**
**ನಹುಷಸ್ತಾಂ ಸಮಾಲೋಕ್ಯ ಮುದಿತೋ ವಾಕ್ಯಮಬ್ರವೀತ್ ॥೨೩॥**

**ಸ್ವಾಗತಂ ಸತ್ಯವಚನೇ ತ್ವದಧೀನೋಽಸ್ಮಿ ಕಾಮಿನಿ ।**
**ದಾಸೋಽಹಂ ತವ ಸತ್ಯೇನ ಪಾಲಿತಂ ವಚನಂ ತ್ವಯಾ ॥೨೪॥**

**ಯದಾಗತಾ ಸಮೀಪೇ ಮೇ ತುಷ್ಟೋಽಸ್ಮಿ ಮಿತಭಾಷಿಣಿ ।**
**ನ ಚ ವ್ರೀಡಾ ತ್ವಯಾ ಕಾರ್ಯಾ ಭಕ್ತಂ ಮಾಂ ಭಜ ಸುಸ್ಮಿತೇ ॥೨೫॥**

**ಕಾರ್ಯಂ ವದ ವಿಶಾಲಾಕ್ಷಿ ಕರಿಷ್ಯಾಮಿ ತವ ಪ್ರಿಯಂ ।**

|| ಶಚ್ಯುವಾಚ ||

**ಸರ್ವಂಕೃತಂ ತ್ವಯಾಕಾರ್ಯಂ ಮಮಕೃತ್ರಿಮವಾಸವ ॥೨೬॥**

---

ವ್ಯಾಸಋಷಿಯು ಹೇಳಿದನು—ಹೀಗೆ ಹೇಳಿದ ದೇವೇಂದ್ರನ ಮಾತನ್ನು ಕೇಳಿ ಶಚೀದೇಯು ಹಾಗೆಯೆ ಆಗಲಿ ಎಂದು ಅವನ ಮಾತನ್ನು ನಂಬಿ ಮುಂದಿನ ಕಾರ್ಯವನ್ನು ಮಾಡುವ ಪ್ರಯತ್ನ ಉಳ್ಳವಳಾಗಿ ನಹುಷನ ಸಮೀಪಕ್ಕೆ ಹೋದಳು. ನಹುಷನು ಆಕೆಯನ್ನು ನೋಡಿ ಸಂತೋಷದಿಂದ ಮಾತನಾಡಿದನು. ||೨೨-೨೩||

ನಿಜವಾದ ಮಾತನಾಡುವ ಶಚಿಯೇ, ನೀನು ಸುಖವಾಗಿ ಬಂದೆಯಾ ? ನೀನು ಹೇಳಿದ ಮಾತನ್ನು ನಡೆಸಿದೆ. ನಾನು ಕಾಮಿನಿಯಾದ ನಿನ್ನಧೀನನಾಗಿ ನಿಜವಾಗಿಯೂ ನಿನ್ನ ಸೇವಕನಾಗಿರುವೆನು. ||೨೪||

ಮಿತವಾಗಿ ಮಾತನಾಡುವ ಶಚಿಯೇ, ನೀನು ನನ್ನ ಸಮೀಪಕ್ಕೆ ಬಂದುದ ರಿಂದ ನಾನು ಸಂತೋಷಹೊಂದಿದೆನು. ನೀನು ನಾಚಿಕೆಪಡಬೇಡ. ನಿನ್ನ ಭಕ್ತನಾದ ನನ್ನನ್ನು ಸೇರು. ವಿಸ್ತಾರವಾದ ಕಣ್ಣುಗಳೂ ಮನೋಹರವಾದ ನಗುವೂ ಉಳ್ಳ ನೀನು ಏನನ್ನು ಹೇಳಿದರೂ ನಿನಗಿಷ್ಟವಾದ ಕಾರ್ಯವನ್ನು ಮಾಡುವೆನು. ||೨೫||

ಶಚೀದೇವಿಯು ಹೇಳಿದಳು---ದೇವೇಂದ್ರನ ವೇಷದಲ್ಲಿರುವ ದೊರೆಯೇ, ನೀನು ನನಗೆ ಇಷ್ಟವಾದ ಕೆಲಸಗಳನ್ನೆಲ್ಲ ಮಾಡಿರುವೆ ! ನನ್ನ ಮನಸ್ಸಿನ ಆಸೆಯೊಂದಿ

**ಮನೋರಥೋಽಸ್ತಿ ಮೇ ದೇವ ಶೃಣು ಚಿತ್ತೇಽಧುನಾ ವಿಭೋ ।**
**ವಾಂಛಿತಂ ಕುರು ಕಲ್ಯಾಣಂ ತ್ವದ್ವಶಾಽಹಮತಃ ಪರಂ ॥೨೭॥**

**ಬ್ರವೀಮಿ ಮಾನಸೋತ್ಸಾಹಂ ತ್ವಂ ತಂ ಕರ್ತುಮಿಹಾರ್ಹಸಿ ।**

॥ ನಹುಷ ಉವಾಚ ॥

**ಕಾರ್ಯಂ ತಂ ಬ್ರೂಹಿ ಚಂದ್ರಾಸ್ಯೇ ಕರೋಮಿ ತವ ವಾಂಛಿತಂ ॥೨೮॥**

**ಅಲಭ್ಯಮಪಿ ದಾಸ್ಯಾಮಿ ತುಭ್ಯಂ ಸುಭ್ರು ವದಸ್ವ ಮಾಂ ।**

॥ ಶಚ್ಯುವಾಚ ॥

**ಕಥಂ ಬ್ರವೀಮಿ ರಾಜೇಂದ್ರ ಪ್ರತ್ಯಯೋ ನಾಸ್ತಿ ಮೇ ತವ ॥೨೯॥**

**ಶಪಥಂ ಕುರು ರಾಜೇಂದ್ರ ಯತ್ಕರೋಮಿ ಪ್ರಿಯಂ ತವ ।**
**ರಾಜಾನಃ ಸತ್ಯವಚಸೋ ದುರ್ಲಭಾ ಏವ ಭೂತಲೇ ॥೩೦॥**

---

ರುವುದು. ದೊರೆಯಾದ ನೀನು ಮನಸ್ಸಿಟ್ಟು ಕೇಳು. ನನಗಿಷ್ಟವಾದ ಮಂಗಳಕರವಾದ ಆ ಕೆಲಸವನ್ನು ಮಾಡು. ಬಳಿಕ ನಾನು ನಿನ್ನಧೀನಳಾಗುವೆನು. ॥೨೬-೨೭॥

ನನ್ನ ಮನಸ್ಸಿನ ಉತ್ಸಾಹವನ್ನು ಹೇಳುವೆನು. ನೀನು ಅದನ್ನು ಮಾಡಬೇಕು. ಎಂದಳು.

ನಹುಷನು ಹೇಳಿದನು—ಎಲೈ ಚಂದ್ರಮುಖಿಯೇ ನಿನಗೆ ಇಷ್ಟವಾದ ಕಾರ್ಯವೇನು? ಅದನ್ನು ಹೇಳು. ಮಾಡುತ್ತೇನೆ. ಸಿಕ್ಕದಿರುವ ವಸ್ತುವಾದರೂ ಅದನ್ನು ನಿನಗೆ ತಂದುಕೊಡುವೆನು. ಸುಂದರವಾದ ಹುಬ್ಬುಗಳುಳ್ಳ ಶಚಿಯೇ, ನೀನು ನನ್ನಲ್ಲಿ ಹೇಳು. ಎಂದನು. ॥೨೮॥

ಶಚೀದೇವಿಯು ಹೇಳಿದಳು—ಎಲೈ ರಾಜಶ್ರೇಷ್ಠನೇ, ಹೇಗೆ ಹೇಳಲಿ? ನಿನ್ನಲ್ಲಿ ನಂಬಿಕೆಯು ನನಗೆ ಉಂಟಾಗಿಲ್ಲ. ಆದುದರಿಂದ "ನಿನ್ನ ಇಷ್ಟದಂತೆ ಮಾಡುತ್ತೇನೆ" ಎಂಬುದಾಗಿ ಪ್ರತಿಜ್ಞೆಯನ್ನು ಮಾಡು. ಭೂಮಿಯಲ್ಲಿ ನಿಜವಾಗಿ ಮಾತನಾಡುವ ರಾಜರು ಸಿಕ್ಕುವುದು ಕಷ್ಟವಾದುದು! ॥೨೯-೩೦॥

**ಪಶ್ಚಾದ್ವಕ್ಷ್ಯಾಮ್ಯಹಂ ರಾಜನ್ ಜ್ಞಾತ್ವಾ ಸತ್ಯೇನ ಯಂತ್ರಿತಂ ।**
**ಕೃತೇ ಚೇದ್ವಾಂಛಿತೇ ಭೂಪ ಸದಾ ತೇ ವಶವರ್ತಿನೀ ॥೩೧॥**

**ಭವಿಷ್ಯಾಮಿ ಸುರಾಷಾಡ್ವೈ ಸತ್ಯಮೇತದ್ವಚೋ ಮಮ ।**

॥ ನಹುಷ ಉವಾಚ ॥

**ಅವಶ್ಯಮೇವ ಕರ್ತವ್ಯಂ ವಚನಂ ಮಮ ಸುಂದರಿ ॥೩೨॥**

**ಶಪಾಮಿ ಸುಕೃತೇನಾಹಂ ಯಜ್ಞದಾನಕೃತೇನ ವೈ ।**

॥ ಶಚ್ಯುವಾಚ ॥

**ಇಂದ್ರಸ್ಯ ಹ ಪಯೋವಾಹಾ ಗಜಶ್ಚೈವ ರಥಸ್ತಥಾ ॥೩೩॥**

**ಗರುಡೋ ವಾಸುದೇವಸ್ಯ ಯಮಸ್ಯ ಮಹಿಷಸ್ತಥಾ ।**
**ವೃಷಭಃ ಶಂಕರಸ್ಯಾಪಿ ಬ್ರಹ್ಮಣೋ ವರಟಾಪತಿಃ ॥೩೪॥**

**ಮಯೂರಃ ಕಾರ್ತಿಕೇಯಸ್ಯ ಗಜಾಸ್ಯಸ್ಯ ತು ಮೂಷಿಕಃ ।**
**ಇಚ್ಛಾಮ್ಯಹಮಪೂರ್ವಂ ವೈ ವಾಹನಂ ತೇ ಸುರಾಧಿಪ ॥೩೫॥**

---

ಎಲೈ ರಾಜನೇ, ನೀನು ಪ್ರತಿಜ್ಞೆಮಾಡಿದಮೇಲೆ ಸತ್ಯಕ್ಕೆ ಕಟ್ಟುಬಿದ್ದಿರುವೆ ಎಂಬುದನ್ನು ತಿಳಿದು ನಾನು ಹೇಳಬೇಕಾದುದನ್ನು ಹೇಳುವೆನು. ಎಲೈ ರಾಜನೇ ನನ್ನ ಇಷ್ಟವನ್ನು ನೀನು ನಡೆಸಿದರೆ ಯಾವಾಗಲೂ ನಾನು ನಿನ್ನಧೀನಳಾಗಿರುವೆನು. ಈ ನನ್ನ ಮಾತು ಸತ್ಯವೆಂದು ನಂಬು ಎಂದಳು. ||೩೧||

ನಹುಷನು ಹೇಳಿದನು—ಎಲೈ ಸುಂದರಿಯೇ ನನ್ನ ಮಾತನ್ನು ನಾನು ಅವಶ್ಯವಾಗಿ ನಡೆಸಿಕೊಡಬೇಕು. ಈ ವಿಷಯದಲ್ಲಿ ನಾನು ಮಾಡಿದ ಯಜ್ಞ ಮತ್ತು ದಾನಗಳ ಪುಣ್ಯಫಲಗಳ ಮೇಲೆ ಆಣೆ ಇಟ್ಟು ಸತ್ಯವಾಗಿ ನಿನ್ನ ಇಷ್ಟವನ್ನು ನಡೆಸುವೆ ನೆಂದು ಪ್ರತಿಜ್ಞೆಮಾಡುತ್ತೇನೆ. ಎಂದನು. ||೩೨||

ಶಚೀದೇವಿಯು ಹೇಳಿದಳು—ದೇವಾಧಿಪನಾದ ರಾಜನೇ, ದೇವೇಂದ್ರನಿಗೆ ಮೇಘಗಳೂ ಆನೆಯೂ ರಥವೂ ವಾಹನಗಳು; ವಿಷ್ಣುವಿಗೆ ಗರುಡನೂ, ಯಮನಿಗೆ ಕೋಣವೂ, ಶಿವನಿಗೆ ಎತ್ತೂ, ಬ್ರಹ್ಮನಿಗೆ ಹಂಸವೂ, ಕುಮಾರಸ್ವಾಮಿಗೆ ನವಿಲೂ, ಗಣಪತಿಗೆ ಇಲಿಯೂ ವಾಹನಗಳಾಗಿರುವುವು. ನಿನಗೆ ನಾನು ಇವರೆಲ್ಲರಿಗಿಂತಲು ವಿಲಕ್ಷಣವಾದ ಅಪೂರ್ವವಾದ ವಾಹನವಿರಬೇಕೆಂದು ಬಯಸುವೆನು! ||೩೩-೩೪-೩೫||

ಯನ್ನ ವಿಷ್ಣೋರ್ನ ರುದ್ರಸ್ಯ ನಾಸುರಾಣಾಂ ನ ರಕ್ಷಸಾಂ ।
ವಹಂತು ತ್ವಾಂ ಮಹಾರಾಜ ಮುನಯಃ ಸಂಶಿತವ್ರತಾಃ ॥೩೬॥

ಸರ್ವೇ ಶಿಬಿಕಯಾ ರಾಜನ್ನೇತದ್ಧಿ ಮಮ ವಾಂಛಿತಂ ।
ಸರ್ವದೇವಾಧಿಕಂ ತ್ವಾಂ ವೈ ಜಾನಾಮಿ ವಸುಧಾಧಿಪ ॥೩೭॥

ತೇನ ತೇ ತೇಜಸೋ ವೃದ್ಧಿಂ ವಾಂಛಾಮ್ಯಹಮತಂದ್ರಿತಾ ।

॥ ವ್ಯಾಸ ಉವಾಚ ॥

ತಸ್ಯಾಸ್ತದ್ವಚನಂ ಶ್ರುತ್ವಾ ಪ್ರಹಸ್ಯ ಜ್ಞಾನದುರ್ಬಲಃ ॥೩೮॥

ಮೋಹಿತಸ್ತು ಮಹಾದೇವ್ಯಾ ಕೃತಮೋಹೇನ ತತ್ಕ್ಷಣಂ ।
ಉವಾಚ ವಚನಂ ಭೂಪಃ ಸಂಸ್ತುವನ್ವಾಸವಪ್ರಿಯಾಂ ॥೩೯॥

॥ ನಹುಷ ಉವಾಚ ॥

ಸತ್ಯಮುಕ್ತಂ ತ್ವಯಾ ತನ್ವಿ ವಾಹನಂ ರುಚಿರಂ ಮಮ ।
ಕರಿಷ್ಯಾಮಿ ಸುಕೇಶಾಂತೇ ವಚನಂ ತವ ಸರ್ವಥಾ ॥೪೦॥

---

ಯಾವುದು ವಿಷ್ಣುವಿಗೂ, ರುದ್ರನಿಗೂ, ಅಸುರರಿಗೂ, ವಾಹನವಾಗಿಲ್ಲವೋ ಅಂತಹ ವಿಲಕ್ಷಣವಾದ ವಾಹನವು ನಿನಗಿರಬೇಕು. ವ್ರತನಿಯಮನಿಷ್ಠರಾದ ಮುನಿಗಳು ನಿನ್ನ ಪಲ್ಲಕ್ಕಿಯನ್ನು ಹೊರಬೇಕು. ಇದೇ ನನ್ನ ಅಪೇಕ್ಷೆಯಾಗಿರುವುದು. ॥೩೬॥

ಎಲೈ ಭೂಪತಿಯೇ, ಆಗ ನಿನ್ನನ್ನು ಸಮಸ್ತ ದೇವತೆಗಳಿಗಿಂತಲೂ ಹೆಚ್ಚಿನವನೆಂದು ನಾನು ತಿಳಿಯುವೆನು. ಇದರಿಂದ ನಿನ್ನ ತೇಜಸ್ಸು ಹೆಚ್ಚಿನದೆಂದೂ ಮತ್ತೂ ಹೆಚ್ಚುವುದೆಂದೂ ನಾನು ತಿಳಿದು ಅಪೇಕ್ಷಿಸುವೆನು ಎಂದಳು. ॥೩೭॥

ವ್ಯಾಸಋಷಿಯು ಹೇಳಿದನು–ಆ ಶಚೀದೇವಿಯ ಮಾತನ್ನು ಕೇಳಿ ಸಂತೋಷಪಟ್ಟು, ವಿವೇಚನೆಯ ಜ್ಞಾನಬಲವಿಲ್ಲದವನಾಗಿ ಮಹಾದೇವಿಯ ಮಾಯೆಯಿಂದ ಅಜ್ಞಾನಿಯಾದ ರಾಜನು ಆಕ್ಷಣದಲ್ಲಿಯೇ ಶಚೀದೇವಿಯನ್ನು ಹೊಗಳುತ್ತಾ ಮಾತನಾಡಿದನು. ॥೩೮-೩೯॥

ನಹುಷನು ಹೇಳಿದನು—ಎಲೌ ಕೃಶಾಂಗಿಯೇ ನೀನು ನಿಜವಾದ ಮಾತನ್ನು ಹೇಳಿದೆ! ನನಗೆ ಸೊಗಸಾದ ವಾಹನವನ್ನು ಗೊತ್ತುಮಾಡಿದೆ. ನಿನ್ನ ಮಾತನ್ನು ಖಂಡಿತವಾಗಿಯೂ ನಡೆಸುವೆನು. ॥೪೦॥

**ನ ಹ್ಯಲ್ಪವೀರ್ಯೋ ಭವತಿ ಯೋ ವಾಹಾನ್ಕುರುತೇ ಮುನೀನ್ ।**
**ಅಹಮಾರುಹ್ಯ ಯಾನೇನ ತ್ವಾಮೇಷ್ಯಾಮಿ ಶುಚಿಸ್ಮಿತೇ ॥೪೧॥**

**ಸಪ್ತರ್ಷಯೋ ಮಾಂ ವಕ್ಷ್ಯಂತಿ ಸರ್ವೇ ದೇವರ್ಷಯಸ್ತಥಾ ।**
**ಸಮರ್ಥಂ ತ್ರಿಷು ಲೋಕೇಷು ಜ್ಞಾತ್ವಾ ಮಾಂ ತಪಸಾಧಿಕಂ ॥೪೨॥**

॥ ವ್ಯಾಸ ಉವಾಚ ॥

**ಇತ್ಯುಕ್ತ್ವಾ ತಾಂ ಸುಸಂತುಷ್ಟೋ ವಿಸಸರ್ಜ ಹರಿಪ್ರಿಯಾಂ ।**
**ಮುನೀನಾಹೂಯ ಸರ್ವಾಂಸ್ತಾನಿತ್ಯುವಾಚ ಸ್ಮರಾನ್ವಿತಃ ॥೪೩॥**

॥ ನಹುಷ ಉವಾಚ ॥

**ಅಹಮಿಂದ್ರೋಽದ್ಯ ಭೋ ವಿಪ್ರಾಃ ಸರ್ವಶಕ್ತಿಸಮನ್ವಿತಃ ।**
**ಕಾರ್ಯಮತ್ರ ಪ್ರಕುರ್ವನ್ತು ಭವಂತೋ ವಿಗತಸ್ಮಯಾಃ ॥೪೪॥**

---

ಮುಗುಳು ನಗೆಯುಳ್ಳ ಶಚಿಯೇ, ಮುನಿಗಳನ್ನು ವಾಹನವನ್ನು ಹೊರುವವರನ್ನಾಗಿ ಮಾಡುವವನು ಅಲ್ಪವಾದ ಶಕ್ತಿಯುಳ್ಳವನಲ್ಲ. ನಾನು ಅಂತಹ ವಾಹನವನ್ನೇರಿ ನಿನ್ನ ಸಮೀಪಕ್ಕೆ ಬರುವೆನು. ॥೪೧॥

ಸಪ್ತರ್ಷಿಗಳೂ ಸಮಸ್ತ ದೇವರ್ಷಿಗಳೂ ನನ್ನನ್ನು ತಪಸ್ಸಿನಲ್ಲಿ ಹೆಚ್ಚಿನವನೆಂದೂ ಮೂರು ಲೋಕದಲ್ಲಿ ಎಲ್ಲರಿಗಿಂತಲೂ ಮಿಗಿಲಾದ ಶೂರನೆಂದೂ ತಿಳಿದು ಲೋಕಗಳಲ್ಲೆಲ್ಲ ಪ್ರಸಿದ್ಧಿಪಡಿಸಿರುವರು ! ಎಂದನು. ॥೪೨॥

ವ್ಯಾಸಋಷಿಯು ಹೇಳಿದನು—ಕಾಮವಿಕಾರದಿಂದ ಕೂಡಿದ ನಹುಷನು ದೇವೇಂದ್ರನ ಪತ್ನಿಯಾದ ಶಚೀದೇವಿಗೆ ಹೀಗೆಂದು ಹೇಳಿ ಸಂತೋಷದಿಂದ ಅವಳನ್ನು ಕಳುಹಿಸಿಕೊಟ್ಟನು. ಬಳಿಕ ಸಮಸ್ತ ಮುನಿಗಳನ್ನೂ ಕರೆಯಿಸಿ ಮುಂದೆ ಹೇಳುವಂತೆ ಹೇಳಿದನು. ॥೪೩॥

ನಹುಷನು ಹೇಳಿದನು— ಎಲೈ ಬ್ರಾಹ್ಮಣರೇ, ಈಗ ನಾನು ದೇವೇಂದ್ರನಾಗಿರುತ್ತೇನೆ. ಸಮಸ್ತ ಶಕ್ತಿಗಳಿಂದಲೂ ಕೂಡಿರುತ್ತೇನೆ. ನೀವು ನಾನು ಹೇಳುವ ಕೆಲಸವನ್ನು ಯಾವ ವಿಧವಾದ ಗರ್ವವನ್ನೂ ತೋರಿಸದೆ ಮಾಡಬೇಕಾಗಿರುವುದು. ॥೪೪॥

ಇಂದ್ರಾಸನಂ ಮಯಾ ಪ್ರಾಪ್ತಂ ನೇಂದ್ರಾಣೀ ಮಾಮುಪೈತಿ ಚ ।
ಆಕಾರಿತಾ ಚ ಮಾಂ ಬ್ರೂತೇ ಪ್ರೇಮಪೂರ್ವಮಿದಂ ವಚಃ ॥೪೫॥

ಮುನಿಯಾನೇನ ದೇವೇಂದ್ರ ಮಾಮುಪೈಹಿ ಸುರಾಧಿಪ ।
ದೇವದೇವ ಮಹಾರಾಜ ಮತ್ಪ್ರಿಯಂ ಕುರು ಮಾನದ ॥೪೬॥

ಏತತ್ಕಾರ್ಯಂ ಮುನಿಶ್ರೇಷ್ಠ ಮಮಾತ್ಯಂತಂ ದುರಾಸದಂ ।
ಭವದ್ಭಿಸ್ತು ಪ್ರಕರ್ತವ್ಯಂ ಸರ್ವಥೈವ ದಯಾಳುಭಿಃ ॥೪೭॥

ಮನೋ ದಹತಿ ಮೇ ಕಾಮಃ ಶಕ್ರಪತ್ನ್ಯಾಂ ಪ್ರವರ್ತಿತಂ ।
ಭವಂತಃ ಶರಣಂ ಮೇಽದ್ಯ ಕುರುಧ್ವಂ ಕಾರ್ಯಮದ್ಭುತಂ ॥೪೮॥

ಅಗಸ್ತಿಪ್ರಮುಖಾಸ್ತಸ್ಯ ಶ್ರುತ್ವಾ ವಾಕ್ಯಮಸತ್ಕರಂ ।
ಅಂಗೀಚಕ್ರುಶ್ಚ ಭಾವಿತ್ವಾತ್ ಕೃಪಯಾ ಪರಮರ್ಷಯಃ ॥೪೯॥

---

ದೇವೇಂದ್ರನ ಸಿಂಹಾಸನವು ನನಗೆ ಸಿಕ್ಕಿರುವುದು. ಆದರೆ ಇಂದ್ರನ ಪತ್ನಿಯಾದ ಶಚೀದೇವಿಯು ನನ್ನ ಸಮೀಪಕ್ಕೆ ಬರಲಿಲ್ಲ. ಕರೆಯಿಸಿದಾಗ ಅವಳು ನನ್ನನ್ನು ಕುರಿತು ಪ್ರೀತಿಯಿಂದ ಈ ಮಾತನ್ನು ಹೇಳಿರುವಳು. ॥೪೫॥

ದೇವತೆಗಳಿಗೆ ರಾಜನಾದ ದೇವೇಂದ್ರನೇ, ನೀನು ದೇವಾಧಿಪತಿಯಾಗಿರುವುದರಿಂದ ಮುನಿಗಳು ಹೊರುವ ಪಲ್ಲಕ್ಕಿಯನ್ನೇರಿ ನನ್ನ ಸಮೀಪಕ್ಕೆ ಬಂದು ನನಗೆ ಗೌರವವನ್ನೂ ಸಂತೋಷವನ್ನೂ ಉಂಟುಮಾಡು. ಎಂದು ಹೇಳಿರುವಳು. ॥೪೬॥

ಎಲೇ ಮುನಿಶ್ರೇಷ್ಠರೇ, ಈ ಕೆಲಸವು ನನಗೆ ಕಷ್ಟಸಾಧ್ಯವಾದುದಾಗಿರುವುದು. ಆದರೂ ನೀವು ಸಂಪೂರ್ಣ ದಯಾವಂತರಾದುದರಿಂದ ನನ್ನ ಮೇಲೆ ದಯವಿಟ್ಟು ನೀವು ಈ ಕಾರ್ಯವನ್ನು ಮಾಡಿಕೊಡಬೇಕು. ॥೪೭॥

ದೇವೇಂದ್ರನ ಹೆಂಡತಿಯಲ್ಲಿ ಆಸಕ್ತವಾದ ನನ್ನ ಮನಸ್ಸನ್ನು ಕಾಮವು ಸುಡುತ್ತಿರುವುದು. ಈ ಸಂದರ್ಭದಲ್ಲಿ ನೀವೇ ನನಗೆ ರಕ್ಷಕರು! ಈ ಆಶ್ಚರ್ಯಕರವಾದ ಕೆಲಸವನ್ನು ನೀವು ಮಾಡಬೇಕು. ಎಂದನು ॥೪೮॥

ಅಗಸ್ತ್ಯನೇ ಮೊದಲಾದವರು ಅಯೋಗ್ಯವಾದ ಆ ನಹುಷನ ಮಾತನ್ನು ಕೇಳಿ ಅವನ ಅದೃಷ್ಟಾನುಸಾರವಾದ ಫಲವುಂಟಾಗಬೇಕಾಗಿರುವುದರಿಂದ ದಯೆಯಿಂದ ಆ ಮಹರ್ಷಿಗಳೆಲ್ಲರೂ ಅವನ ಮಾತನ್ನು ಒಪ್ಪಿಕೊಂಡರು. ॥೪೯॥

ಅಂಗೀಕೃತೇ ಚ ತದ್ವಾಕ್ಯೇ ಮುನಿಭಿಃ ತತ್ತ್ವದರ್ಶಿಭಿಃ ।
ಮುದಂ ಪ್ರಾಪ ನೃಪಃ ಕಾಮಂ ಪೌಲೋಮೀಕೃತಮಾನಸಃ ॥೫೦॥

ಆರುಹ್ಯ ಶಿಬಿಕಾಂ ರಮ್ಯಾಂ ಸಂಸ್ಥಿತಸ್ತ್ವರಯಾಽನ್ವಿತಃ ।
ವಾಹಾನ್ ಕೃತ್ವಾ ಮುನೀನ್ದಿವ್ಯಾನ್ಸರ್ಪಸರ್ಪೇತಿ ಚಾಬ್ರವೀತ್ ॥೫೧॥

ಕಾಮಾರ್ತಃ ಸೋಽಸ್ಪೃಶನ್ಮೂಢಃ ಪಾದೇನ ಮುನಿಮಸ್ತಕಂ ।
ಅಗಸ್ತಿಂ ತಾಪಸಶ್ರೇಷ್ಠಂ ಲೋಪಾಮುದ್ರಾಪತಿಂ ತದಾ ॥೫೨॥

ವಾತಾಪಿಭಕ್ಷಕರ್ತಾರಂ ಸಮುದ್ರಸ್ಯಾಪಿ ಶೋಷಕಂ ।
ಕಶಯಾ ತಾಡಯಾಮಾಸ ಪಂಚಬಾಣಶರಾಹತಃ ॥೫೩॥

ಇಂದ್ರಾಣೀಹೃತಚಿತ್ತೋಽಸೌ ಸರ್ಪೇತಿ ಪ್ರಬ್ರುವನ್ಮುನಿಂ ।

---

ಪರಬ್ರಹ್ಮ ಸಾಕ್ಷಾತ್ಕಾರವನ್ನು ಮಾಡಿಕೊಂಡಿರುವ ಮುನಿಗಳು ಆ ನಹುಷನ ಮಾತನ್ನು ಒಪ್ಪಿದ ಮೇಲೆ ಶಚಿಯಲ್ಲೇ ಮನಸ್ಸುಳ್ಳ ಆ ರಾಜನು ಬಹಳ ಸಂತೋಷ ಪಟ್ಟನು. ॥೫೦॥

ಬಳಿಕ ನಹುಷನು ಶಚೀದೇವಿಯ ಸಮೀಪಕ್ಕೆ ಹೋಗಲು ಆತುರಪಡುತ್ತಾ ಪ್ರಯಾಣಕ್ಕೆ ಸಿದ್ಧನಾಗಿ ಮನೋಹರವಾದ ಪಲ್ಲಕ್ಕಿಯನ್ನೇರಿ ದೇವಮುನಿಗಳನ್ನು ವಾಹಕರನ್ನಾಗಿ ಮಾಡಿ, ನಡೆ ನಡೆ, ಎಂಬ ಅರ್ಥವನ್ನು ಕೊಡುವ ಸರ್ಪ, ಸರ್ಪ ಎಂಬ ಶಬ್ದವನ್ನು ಹೇಳಿದನು. ॥೫೧॥

ಅಲ್ಲದೆ ಕಾಮಾಸಕ್ತನೂ ದಡ್ಡನೂ ಆದ ಆ ನಹುಷನು ತನ್ನ ಕಾಲಿನಿಂದ ತಪಸ್ವಿಗಳಲ್ಲಿ ಶ್ರೇಷ್ಠನೂ ಪತಿವ್ರತೆಯಾದ ಲೋಪಾಮುದ್ರಾದೇವಿಯ ಗಂಡನೂ ಆದ ಅಗಸ್ತ್ಯಋಷಿಯ ತಲೆಯನ್ನು ತಗುಲಿಸಿದನು. ಮತ್ತು ಕಾಮಬಾಣಪೀಡಿತನಾಗಿ ಶಚೀದೇವಿಯಲ್ಲಿ ನಟ್ಟ ಮನಸ್ಸುಳ್ಳವನಾಗಿ ವಾತಾಪಿ ಎಂಬ ರಾಕ್ಷಸನನ್ನು ಭಕ್ಷಿಸಿ ಅರಗಿಸಿಕೊಂಡವನೂ ಸಮುದ್ರವನ್ನು ಕುಡಿದು ಒಣಗಿಸಿದವನೂ ಆದ ಅಗಸ್ತ್ಯಮುನಿಯನ್ನು ಸರ್ಪ, ಸರ್ಪ ಎಂದು ಹೇಳುತ್ತ ಕೊರಡೆಯಿಂದ ಹೊಡೆದನು. ॥೫೨-೫೩॥

ತಂ ಶಶಾಪ ಮುನಿಃ ಕ್ರುದ್ಧಃ ಕಶಾಘಾತಮನುಸ್ಮರನ್ ||೩೪||

ಸರ್ಪೋ ಭವ ದುರಾಚಾರ ವನೇ ಘೋರವಪುರ್ಮಹಾನ್ ।
ಬಹುವರ್ಷಸಹಸ್ರಾಣಿ ಯತ್ರ ಕ್ಲೇಶೋ ಮಹಾನ್‌ಭವೇತ್ ||೩೫||

ವಿಚರಿಷ್ಯಸಿ ವೀರ್ಯೇಣ ಪುನಃ ಸ್ವರ್ಗಮವಾಪ್ಸ್ಯಸಿ ।
ದೃಷ್ಟ್ವಾ ಯುಧಿಷ್ಠಿರಂ ನಾಮ ತವ ಮೋಕ್ಷೋ ಭವಿಷ್ಯತಿ ||೩೬||

ಪ್ರಶ್ನಾನಾಮುತ್ತರಂ ಶ್ರುತ್ವಾ ಯುಧಿಷ್ಠಿರಮುಖಾತ್ತತಃ ।

|| ವ್ಯಾಸ ಉವಾಚ ||

ಏವಂ ಶಪ್ತಃ ಸರಾಜರ್ಷಿಃ ಸ್ತುತ್ವಾ ತಂ ಮುನಿಸತ್ತಮಂ ||೩೭||

ಸ್ವರ್ಗಾತ್ಪಪಾತ ಸಹಸಾ ಸರ್ಪರೂಪಧರೋಽಭವತ್ ।
ಬೃಹಸ್ಪತಿಸ್ತತೋ ಗತ್ವಾ ತರಸಾ ಮಾನಸಂ ಪ್ರತಿ ||೩೮||
ಇಂದ್ರಾಯ ಸರ್ವವೃತ್ತಾಂತಂ ಕಥಯಾಮಾಸ ವಿಸ್ತರಾತ್ ।

---

ಆ ಅಗಸ್ತ್ಯಮುನಿಯು ಕೋರಡೆಯ ಏಟನ್ನು ಜ್ಞಾಪಿಸಿಕೊಳ್ಳುತ್ತಾ ಕೋಪವನ್ನು ಹೊಂದಿ ಆ ನಹುಷನನ್ನು ಕುರಿತು ಎಲೈ ದುರಾಚಾರಿಯೇ ನೀನು ಬಹಳ ಕಷ್ಟವನ್ನುಂಟುಮಾಡುವ ಕಾಡಿನಲ್ಲಿ ಭಯಂಕರವಾದ ಶರೀರವುಳ್ಳ ಹಾವಾಗಿ ಅನೇಕ ಸಾವಿರ ವರ್ಷ ಕಷ್ಟವನ್ನನುಭವಿಸು. ಎಂದು ಶಪಿಸಿದನು. ||೩೪-೩೫||

ಭಯಂಕರವಾದ ಹಾವಾಗಿ ನಿನ್ನ ಸಾಮರ್ಥ್ಯದಿಂದ ಸಂಚಾರಮಾಡುತ್ತಿರುವೆ! ಯುಧಿಷ್ಠಿರನೆಂಬವನನ್ನು ನೋಡಿ ಅವನ ಮುಖದಿಂದ ನಿನ್ನ ಪ್ರಶ್ನೆಗಳಿಗೆ ಉತ್ತರವನ್ನು ಕೇಳಿದಮೇಲೆ ನಿನಗೆ ಈ ಸರ್ಪಜನ್ಮವು ಬಿಡುಗಡೆಯಾಗಿ ಪುನಃ ಸ್ವರ್ಗವು ಲಭಿಸುವುದು. ಎಂದು ಕನಿಕರದಿಂದ ವಿಶಾಪವನ್ನೂ ಕರುಣಿಸಿದನು. ||೩೬||

ವ್ಯಾಸಮಹರ್ಷಿಯು ಹೇಳಿದನು --ಆ ರಾಜರ್ಷಿಯಾದ ನಹುಷನು ಅಗಸ್ತ್ಯಋಷಿಯು ಶಾಪಕೊಟ್ಟಮೇಲೆ ಆ ಮುನಿಯನ್ನು ಸ್ತೋತ್ರಮಾಡಿ ವಿಶಾಪವನ್ನೂ ಪಡೆದು ಒಡನೆಯೇ ಸ್ವರ್ಗದಿಂದ ಭೂಮಿಗೆ ಬಿದ್ದು ಹಾವಿನ ಆಕಾರವನ್ನು ಧರಿಸಿದನು. ||೩೭||

ಆ ಮೇಲೆ ಬೃಹಸ್ಪತಿಯು ಬೇಗನೆ ಮಾನಸ ಸರೋವರಕ್ಕೆ ಹೋಗಿ ಅಲ್ಲಿದ್ದ ದೇವೇಂದ್ರನಿಗೆ ಈ ಸಮಸ್ತ ವೃತ್ತಾಂತವನ್ನೂ ವಿಸ್ತಾರವಾಗಿ ಹೇಳಿದನು. ||೩೮||

ತಚ್ಛ್ರುತ್ವಾ ಮಘವಾ ರಾಜ್ಞಃ ಸ್ವರ್ಗಾತ್ಪ್ರಚ್ಯವನಾದಿಕಂ ॥೫೯॥
ಮುದಿತೋಽಭೂನ್ಮಹಾರಾಜ ಸ್ಥಿತಸ್ತತ್ರೈವ ವಾಸವಃ ।
ದೇವಾಶ್ಚ ಮುನಯೋ ದೃಷ್ಟ್ವಾ ನಹುಷಂ ಪತಿತಂ ಭುವಿ ॥೬೦॥
ಜಗ್ಮುಃ ಸರ್ವೇಽಪಿ ತತ್ರೈವ ಯತ್ರೇಂದ್ರಃ ಸರಸಿ ಸ್ಥಿತಃ ।
ತಮಾಶ್ವಾಸ್ಯ ಸುರಾಃ ಸರ್ವೇ ಮುನಿಭಿಃ ಸಹಿತಾಸ್ತದಾ ॥೬೧॥
ಸ್ವರ್ಗೇ ಸಮಾನಯಾಮಾಸುಃ ಮಾನಪೂರ್ವಂ ಶಚೀಪತಿಂ ।
ಸಮಾಗತಂ ತತಃ ಶಕ್ರಂ ಸರ್ವೇ ತೇ ಮುನಯಃ ಸುರಾಃ ॥೬೨॥
ಸ್ಥಾಪಯಿತ್ವಾಽಸನೇಪಶ್ಚಾದಭಿಷೇಕಂ ದಧುಃ ಶಿವಂ ।
ಇಂದ್ರೋಽಪಿ ಸ್ವಾಸನಂ ಪ್ರಾಪ್ಯ ಶಚ್ಯಾ ಸಹ ಸುರಾಲಯೇ ॥೬೩॥
ಚಿಕ್ರೀಡ ನಂದನೇ ರಮ್ಯೇ ಕಾನನೇ ಪ್ರೇಮಯುಕ್ತಯಾ ।

---

ಎಲೈ ಜನಮೇಜಯರಾಯನೇ, ದೇವೇಂದ್ರನು ರಾಜನಾದ ನಹುಷನು ಸ್ವರ್ಗದಿಂದ ಭೂಮಿಗೆ ಬಿದ್ದುದೇ ಮೊದಲಾದ ವೃತ್ತಾಂತವನ್ನು ಗುರುವಿನಿಂದ ಕೇಳಿ ಸಂತೋಷವನ್ನು ಹೊಂದಿ ಅಲ್ಲಿಯೇ ಇದ್ದನು. ॥೫೯॥

ದೇವತೆಗಳೂ ಮುನಿಗಳೂ ಕೂಡ ನಹುಷನು ಭೂಮಿಯಲ್ಲಿ ಬಿದ್ದುದನ್ನು ಕಂಡು ಯಾವ ಸರೋವರದಲ್ಲಿ ದೇವೇಂದ್ರನು ವಾಸವಾಗಿದ್ದನೋ ಅಲ್ಲಿಗೆ ಎಲ್ಲರೂ ಹೋದರು. ॥೬೦॥

ಸಮಸ್ತ ದೇವತೆಗಳೂ ಮುನಿಗಳೂ ಕೂಡಿ ದೇವೇಂದ್ರನನ್ನು ಸಮಾಧಾನ ಪಡಿಸಿ ಶಚೀಪತಿಯಾದ ಆ ದೇವೇಂದ್ರನನ್ನು ಮರ್ಯಾದೆಯೊಡನೆ ಸ್ವರ್ಗಲೋಕಕ್ಕೆ ಕರೆದುಕೊಂಡು ಬಂದರು. ॥೬೧॥

ಆಮೇಲೆ ಸಮಸ್ತ ದೇವತೆಗಳೂ ಮುನಿಗಳೂ ಬಂದ ದೇವೇಂದ್ರನನ್ನು ಸಿಂಹಾಸನದಲ್ಲಿ ಕೂಡಿಸಿ ಮಂಗಳಕರವಾದ ಪಟ್ಟಾಭಿಷೇಕವನ್ನು ಮಾಡಿದರು. ॥೬೨॥

ಇಂದ್ರನೂ ಕೂಡ ತನ್ನ ಸಿಂಹಾಸನವನ್ನು ಹೊಂದಿ ಸ್ವರ್ಗಲೋಕದಲ್ಲಿ ಶಚೀದೇವಿಯೊಡನೆ ಕೂಡಿ ಮನೋಹರವಾದ ನಂದನವನದಲ್ಲಿ ಪ್ರೀತಿಯಿಂದ ಕೂಡಿದ ಸಂತೋಷದಿಂದ ವಿಹಾರಮಾಡುತ್ತಿದ್ದನು. ॥೬೩॥

|| ವ್ಯಾಸ ಉವಾಚ ||

ಏವಮಿಂದ್ರೇಣ ಸಂಪ್ರಾಪ್ತಂ ದುಃಖಂ ಪರಮದಾರುಣಂ ||೬೪||

ಹತ್ವಾಽಸುರಂ ಕಾಮರೂಪಂ ವಿಶ್ವರೂಪಂ ಮಹಾಮುನಿಂ ।
ಪುನರ್ದೇವ್ಯಾಃ ಪ್ರಸಾದೇನ ಸ್ವಸ್ಥಾನಂ ಪ್ರಾಪ್ತವಾನ್ ನೃಪ ||೬೫||

ಏತತ್ತೇ ಸರ್ವಮಾಖ್ಯಾತಂ ವೃತ್ರಾಸುರವಧಾಶ್ರಯಂ ।
ಯತ್ಪೃಷ್ಟೋಽಹಂ ತ್ವಯಾ ರಾಜನ್ಕಥಾನಕಮನುತ್ತಮಂ ||೬೬||

ಯಾದೃಶಂ ಕುರುತೇ ಕರ್ಮ ತಾದೃಶಂ ಫಲಮಾಪ್ನುಯಾತ್ ।
ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ||೬೭||

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ
ನವಮೋಽಧ್ಯಾಯಃ.

---

ವ್ಯಾಸಋಷಿಯು ಹೇಳಿದನು—ಎಲೈ ರಾಜನೇ, ಕೇಳು. ಈ ರೀತಿಯಲ್ಲಿ ದೇವೇಂದ್ರನು ಬಹಳ ಭಯಂಕರವಾದ ದುಃಖವನ್ನನುಭವಿಸಿ ಇಷ್ಟವಾದ ರೂಪವನ್ನು ಧರಿಸಬಲ್ಲ ವೃತ್ರಾಸುರನನ್ನೂ ವಿಶ್ವರೂಪನೆಂಬ ಮಹಾಮುನಿಯನ್ನೂ ಕೊಂದು ಭುವನೇಶ್ವರೀದೇವಿಯ ಅನುಗ್ರಹದಿಂದ ಮತ್ತೆ ತನ್ನ ಸಿಂಹಾಸನವನ್ನು ಪಡೆದನು. ||೬೪-೬೫||

ಎಲೈ ಜನಮೇಜಯರಾಯನೇ ಕೇಳು—ನೀನು ಶ್ರೇಷ್ಠವಾದ ವೃತ್ರಾಸುರನನ್ನು ಕೊಂದ ಕಥೆಯನ್ನು ಕೇಳಿದೆಯಷ್ಟೆ. ಅದನ್ನೆಲ್ಲವನ್ನೂ ವಿಸ್ತಾರವಾಗಿ ನಾನು ಹೇಳಿರುವೆನು. ||೬೬||

ಲೋಕದಲ್ಲಿ ಜೀವನು ಎಂತಹ ಕರ್ಮವನ್ನು ಮಾಡುವನೋ ಅಂತಹ ಫಲವನ್ನನುಭವಿಸುವನು. ಯಾರಾದರೂ ತಾವು ಮಾಡಿದ ಶುಭಾಶುಭಕರ್ಮಗಳ ಫಲಗಳನ್ನು ತಾವೇ ಅನುಭವಿಸಿಯೇ ತೀರಿಸಬೇಕು. ||೬೭||

ಇಲ್ಲಿಗೆ ಮಹಾಪುರಾಣವಾದ ದೇವೀಭಾಗವತದ ಆರನೆಯ ಸ್ಕಂಧದಲ್ಲಿ
ಒಂಬತ್ತನೆಯ ಅಧ್ಯಾಯವು ಮುಗಿದಿರುವುದು,

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

### ॥ ದಶಮೋಽಧ್ಯಾಯಃ ॥

### ಹತ್ತನೆಯ ಅಧ್ಯಾಯವು

॥ ಜನಮೇಜಯ ಉವಾಚ ॥

**ಕಥಿತಂ ಚರಿತಂ ಬ್ರಹ್ಮನ್ ಶಕ್ರಸ್ಯಾದ್ಭುತಕರ್ಮಣಃ ।**
**ಸ್ಥಾನಭ್ರಂಶಸ್ತಥಾ ದುಃಖಪ್ರಾಪ್ತಿರುಕ್ತಾ ವಿಶೇಷತಃ ॥೧॥**

**ಯತ್ರ ದೇವಾಧಿದೇವ್ಯಾಶ್ಚ ಮಹಿಮಾಽತೀವ ವರ್ಣಿತಾ ।**
**ಸಂದೇಹೋಽತ್ರ ಮಮಾಪ್ಯಸ್ತಿ ಯಚ್ಛಕ್ರೋಽಪಿ ಮಹಾತಪಾಃ ॥೨॥**

**ದೇವಾಧಿಪತ್ಯಮಾಸಾದ್ಯ ದುಃಖಹಂ ದುಃಖಮನ್ವಭೂತ್ ।**
**ಮಖಾನಾಂ ತು ಶತಂ ಕೃತ್ವಾ ಪ್ರಾಪ್ತಂ ಸ್ಥಾನಮನುತ್ತಮಂ ॥೩॥**

---

ಜನಮೇಜಯರಾಜನು ಹೇಳಿದನು—ಓ ಬ್ರಹ್ಮರ್ಷಿಯಾದ ವ್ಯಾಸನೇ, ಆಶ್ಚರ್ಯಕರವಾದ ಕೆಲಸಗಳನ್ನು ಮಾಡುವವನಾದ ಇಂದ್ರನು ತನ್ನ ಅಧಿಕಾರವನ್ನು ಕಳೆದುಕೊಂಡು ದುಃಖವನ್ನು ಅನುಭವಿಸಿದುದೇ ಮೊದಲಾದ ಅವನ ಚರಿತ್ರೆಯು ವಿಸ್ತಾರವಾಗಿ ಹೇಳಲ್ಪಟ್ಟಿತು. ॥೧॥

ದೇವತೆಗಳಿಗೆಲ್ಲರಿಗೂ ಹೆಚ್ಚಿನ ದೇವತೆಯಾದ ದೇವಿಯ ಮಹಿಮೆಯೂ ವಿಸ್ತಾರವಾಗಿ ವರ್ಣಿಸಲ್ಪಟ್ಟಿತು. ಈ ಸಂದರ್ಭದಲ್ಲಿ ನನಗೆ ಸಂದೇಹವೂ ಬಂದಿರುವುದು. ಹೆಚ್ಚಾದ ತಪಸ್ಸನ್ನು ಮಾಡಿದ್ದ ದೇವೇಂದ್ರನೂ ಕೂಡ ದುಃಖವನ್ನು ನಾಶಮಾಡುವ ದೇವತೆಗಳ ದೊರೆತನವನ್ನು, ನೂರು ಅಶ್ವಮೇಧಯಾಗಗಳನ್ನು ಮಾಡಿ ಸಂಪಾದಿಸಿದ್ದರೂ ಆ ಶ್ರೇಷ್ಠವಾದ ಪದವಿಯನ್ನು ಅನುಭವಿಸುತ್ತಿದ್ದರೂ ಕೂಡ ದುಃಖವನ್ನು ಹೇಗೆ ಅನುಭವಿಸಿದನೆಂಬುದೇ ಆ ಸಂದೇಹದ ಕಾರಣವು. ॥೨-೩॥

**ದೇವೇಶತ್ವಂ ಚ ಸಂಪ್ರಾಪ್ಯ ಭ್ರಷ್ಟಃ ಸ್ಥಾನಾದಸೌ ಕಥಂ ।**
**ಏತತ್ಸರ್ವಂ ಸಮಾಚಕ್ಷ್ವ ಕಾರಣಂ ಕರುಣಾನಿಧೇ ॥೪॥**

**ಸರ್ವಜ್ಞೋಽಸಿ ಮುನಿಶ್ರೇಷ್ಠ ಪುರಾಣಾನಾಂ ಪ್ರವರ್ತಕಃ ।**
**ನಾವಾಚ್ಯಂ ಮಹತಾಂ ಕಿಂಚಿತ್ ಶಿಷ್ಯೇ ಚ ಶ್ರದ್ಧಯಾನ್ವಿತೇ ॥೫॥**

**ತಸ್ಮಾತ್ಕುರು ಮಹಾಭಾಗ ಮತ್ಸಂದೇಹಾಪನೋದನಂ ।**

---

ಕರುಣಾನಿಧಿಯಾದ ವ್ಯಾಸನೇ, ಈ ದೇವೇಂದ್ರನು ದೇವತೆಗಳ ದೊರೆತನವನ್ನು ಸಂಪಾದಿಸಿದವನಾಗಿದ್ದರೂ ಆ ಸ್ಥಾನವನ್ನೇಕೆ ಕಳೆದುಕೊಂಡನು? ಅದರ ಕಾರಣವನ್ನು ವಿಸ್ತಾರವಾಗಿ ಹೇಳು. ॥೪॥

ಓ ಶ್ರೇಷ್ಠನಾದ ವ್ಯಾಸಮುನಿಯೇ, ನೀನು ಎಲ್ಲವನ್ನೂ ತಿಳಿದಿರುವೆ. ಪುರಾಣಗಳೆಲ್ಲವನ್ನೂ ರಚಿಸಿ ಪ್ರಚಾರಮಾಡಿರುತ್ತೀಯೆ. ಮಹಾತ್ಮನಾದ ನೀನು ಭಕ್ತಿಯಿಂದ ಕೂಡಿ ಪ್ರಶ್ನಿಮಾಡುವ ಶಿಷ್ಯನಿಗೆ ಹೇಳವೆ ಮುಚ್ಚಿಡುವ ವಿಷಯವು ಯಾವುದೂ ಇರುವುದಿಲ್ಲವು! ॥೫॥

ಆದುದರಿಂದ ಓ ಮಹಾಮಹಿಮನೇ, ನನ್ನ ಸಂದೇಹವನ್ನು ನಾಶಪಡಿಸು. ನೂರು ಅಶ್ವಮೇಧಯಾಗಗಳನ್ನು ಮಾಡಿದವನಿಗೆ ಸ್ವರ್ಗದ ಆಧಿಪತ್ಯವು ಫಲವಾಗಿರುವುದು. ಆ ಫಲವು ಅನುಭವಕ್ಕೆ ಬಂದಾಗ ಅದು ಮುಗಿಯುವುದಕ್ಕಿಂತ ಮುಂಚಿತವಾಗಿ, ನಡುವೆ ಆ ಫಲವನ್ನು ಕೊಡುತ್ತಿರುವ ಶಕ್ತಿಯು ನಾಶವನ್ನು ಹೊಂದಲಾರದು. ಎಂಬುದು ನಿಜ. ಆದರೂ ಪ್ರಬಲವಾದ ಕಾರಣವಿನ್ನಲ್ಲಿ ಎಂದರೆ, ಬ್ರಹ್ಮಹತ್ಯಾದಿರೂಪವಾದ ಕರ್ಮವನ್ನು ಇವನಿಂದುಂಟುಮಾಡಿಸಿ ಆ ದುಷ್ಕರ್ಮಕ್ಕೆ ಫಲವಾದ ದುಃಖವನ್ನುಂಟುಮಾಡುವುದು. ಎಂದು ಹೇಳುವುದಾದರೆ, ಸ್ವರ್ಗಸಾಧನೆ ಮಾಡುವಷ್ಟು ಪುಣ್ಯಸಂಪಾದನೆ ಮಾಡಿದವನಿಗೆ ಬ್ರಹ್ಮಹತ್ಯಾಸಮಾನವಾದ ಪಾಪವನ್ನು ಮಾಡಿ ಅದರ ಫಲವಾದ ದುಃಖವನ್ನು ಈಗಲೇ ಅನುಭವಿಸುವಂತೆ ಮಾಡುವಂತಹ ದುಷ್ಕರ್ಮವನ್ನು ಮಾಡುವ ಬುದ್ಧಿಯು ತಾನೇ ಹೇಗೆ ಹುಟ್ಟೀತು? ಎಂಬುದೇ ಪ್ರಬಲವಾದ ಸಂದೇಹವು. ಈ ಸಂದೇಹವನ್ನು ನೀನು ಪರಿಹರಿಸಬೇಕು. ಎಂದು ಜನಮೇಜಯರಾಯನು ವ್ಯಾಸನನ್ನು ಕೇಳಿದನು. ಆ ವಿವರಣೆಯನ್ನೇ ಶೌನಕಾದಿಋಷಿಗಳನ್ನು ಕುರಿತು ಸೂತಪೌರಾಣಿಕನು ಹೇಳುತ್ತಿರುವನು.

ಇತಿ ಪೃಷ್ಟಃ ಸ ರಾಜ್ಞಾ ವೈ ತದಾ ಸತ್ಯವತೀಸುತಃ ॥೬॥
ತಮುವಾಚಾತಿಪ್ರಸನ್ನಾತ್ಮಾ ಯಥಾನುಕ್ರಮಮುತ್ತರಂ ।

॥ ವ್ಯಾಸ ಉವಾಚ ॥

ನಿಬೋಧ ನೃಪತಿಶ್ರೇಷ್ಠ ಕಾರಣಂ ಪರಮಾದ್ಭುತಂ ॥೭॥
ಕರ್ಮಣಸ್ತು ಗತಿಃ ಪ್ರೋಕ್ತಾ ತ್ರಿಧಾ ತತ್ತ್ವವಿದಾಂ ವರೈಃ ।
ಸಂಚಿತಂ ವರ್ತಮಾನಂ ಚ ಪ್ರಾರಬ್ಧಮಿತಿ ಭೇದತಃ ॥೮॥

ಅನೇಕಜನ್ಮಸಂಜಾತಂ ಪ್ರಾಕ್ತನಂ ಸಂಚಿತಂ ಸ್ಮೃತಂ ।
ಸಾತ್ತ್ವಿಕಂ ರಾಜಸಂ ಕರ್ಮ ತಾಮಸಂ ತ್ರಿವಿಧಂ ಪುನಃ ॥೯॥

ಶುಭಂ ವಾಪ್ಯಶುಭಂ ಭೂಪ ಸಂಚಿತಂ ಬಹುಕಾಲಿಕಂ ।
ಅವಶ್ಯಮೇವ ಭೋಕ್ತವ್ಯಂ ಸುಕೃತಂ ದುಷ್ಕೃತಂ ತಥಾ ॥೧೦॥

---

ಸೂತಮಹರ್ಷಿಯು ಹೇಳಿದನು—ರಾಜನು ಹೀಗೆ ಕೇಳುತ್ತಲು ಸತ್ಯವತಿಯ ಪುತ್ರನಾದ ವ್ಯಾಸನು ಬಹಳ ಸಂತೋಷದಿಂದ ರಾಜನ ಪ್ರಶ್ನೆಗೆ ಕ್ರಮವಾಗಿ ಉತ್ತರವನ್ನು ಹೀಗೆ ಹೇಳಿದನು. ॥೬॥

ವ್ಯಾಸಋಷಿಯು ಹೇಳಿದನು—ಎಲೈ ರಾಜಶ್ರೇಷ್ಠನೇ ಕೇಳು, ನಿನ್ನ ಪ್ರಶ್ನೆಗೆ ಉತ್ತರವಾಗಿ ಆಶ್ಚರ್ಯಕರವಾದ ಕರ್ಮಕಾರಣವನ್ನು ಹೇಳುವೆನು. ತತ್ತ್ವವನ್ನು ತಿಳಿದವರಲ್ಲಿ ಶ್ರೇಷ್ಠರಾದವರು ಸಂಚಿತ ವರ್ತಮಾನ ಪ್ರಾರಬ್ಧ ಎಂಬುದಾಗಿ ಕರ್ಮಗಳಿಗೆ ಮೂರು ವಿಧವಾದ ಹೆಸರುಗಳು ಇರುವುವು ಎಂದು ಹೇಳುವರು. ॥೭-೮॥

ಕಳೆದುಹೋದ ಅನೇಕ ಜನ್ಮಗಳಲ್ಲಿ ಮಾಡಿದ ಪುರಾತನವಾದ ಕರ್ಮಗಳ ರಾಶಿಯೇ ಸಂಚಿತವೆಂದು ಪ್ರಸಿದ್ಧವಾಗಿರುವುದು. ಅದರಲ್ಲಿ ಸಾತ್ತ್ವಿಕ, ರಾಜಸ, ತಾಮಸ ಎಂದು ಮೂರು ಬಗೆಯ ಕರ್ಮಗಳಿರುವುವು. ॥೯॥

ರಾಜನೇ, ಬಹಳಕಾಲದಿಂದ ಕೂಡಿರುವ ಕರ್ಮವೇ ಸಂಚಿತವೆಂಬುದು. ಆ ಸುಕೃತ ಮತ್ತು ದುಷ್ಟಕರ್ಮಗಳು ತಪ್ಪದೆ ಕಾಲಕ್ರಮದಲ್ಲಿ ಉಂಟುಮಾಡುತ್ತಿರುವ ಶುಭಾಶುಭಫಲಗಳನ್ನು ಜೀವರು ಅನುಭವಿಸಿಯೇ ತೀರಬೇಕು. ॥೧೦॥

**ಜನ್ಮಜನ್ಮನಿ ಜೀವಾನಾಂ ಸಂಚಿತಾನಾಂ ಚ ಕರ್ಮಣಾಂ ।**
**ನಿಶ್ಶೇಷಸ್ತು ಕ್ಷಯೋ ನಾಭೂತ್ ಕಲ್ಪಕೋಟಿಶತೈರಪಿ ॥೧೧॥**

**ಕ್ರಿಯಮಾಣಂ ಚ ಯತ್ಕರ್ಮ ವರ್ತಮಾನಂ ತದುಚ್ಯತೇ ।**
**ದೇಹಂ ಪ್ರಾಪ್ಯ ಶುಭಂ ವಾಪಿ ಹ್ಯಶುಭಂ ವಾ ಸಮಾಚರೇತ್ ॥೧೨॥**

**ಸಂಚಿತಾನಾಂ ಪುನರ್ಮಧ್ಯಾತ್ ಸಮಾಹೃತ್ಯ ಕಿಯಾನ್ ಕಿಲ ।**
**ದೇಹಾರಂಭೇ ಚ ಸಮಯೇ ಕಾಲಃ ಪ್ರೇರಯತೀವ ತತ್ ॥೧೩॥**

**ಪ್ರಾರಬ್ಧಂ ಕರ್ಮ ವಿಜ್ಞೇಯಂ ಭೋಗಾತ್ತಸ್ಯ ಕ್ಷಯಃ ಸ್ಮೃತಃ ।**
**ಪ್ರಾಣಿಭಿಃ ಖಲು ಭೋಕ್ತವ್ಯಂ ಪ್ರಾರಬ್ಧಂ ನಾತ್ರ ಸಂಶಯಃ ॥೧೪॥**

---

ಜೀವರ ಜನ್ಮಾರಂಭಕವಾದ ಕರ್ಮವು ಆಯಾ ಜನ್ಮದಲ್ಲಿ ಅನುಭವಕ್ಕೆ ಬಂದರೂ, ಪ್ರತಿಯೊಂದು ಜನ್ಮದಲ್ಲಿಯೂ ಮಾಡಿದ ಕರ್ಮಗಳೂ ಫಲೋನ್ಮುಖವಾಗುವವರೆಗೂ ಸಂಚಿತದಲ್ಲಿ ಸೇರುತ್ತಾ ಬರುತ್ತಲೇ ಇರುವುದರಿಂದಲೂ ಇಂತಹ ಜನ್ಮಕರ್ಮಗಳು ಅನಾದಿಕಾಲದಿಂದ ಅಸಂಖ್ಯಾತವಾಗಿರುವುದರಿಂದಲೂ ಸಂಚಿತ ಕರ್ಮವು ಫಲೋನ್ಮುಖವಾಗದೆ ಅನುಭವಕ್ಕೆಬಾರದೆಇರುವ ಕಾರಣದಿಂದಲೂ, ನೂರು ಕೋಟಿ ಕಲ್ಪಗಳಾದರೂ ನಿಶ್ಶೇಷವಾಗಿ ಸಂಚಿತಕರ್ಮ ಕ್ಷಯವಾಗುವುದಿಲ್ಲವು! ॥೧೧॥

ಪ್ರಾಣಿಯು ದೇಹವನ್ನು ಹೊಂದಿರುವಾಗಲೆಲ್ಲ ಒಳ್ಳೆಯದನ್ನಾಗಲಿ ಕೆಟ್ಟುದನ್ನಾಗಲಿ ಕರ್ಮವನ್ನು ಮಾಡುತ್ತಲೇ ಇರುವನು. ಒಂದು ಜನ್ಮದಲ್ಲಿ ಜೀವನು ದೇಹವಿರುವ ಪರಿಯಂತವಾಗಿಯೂ ಮಾಡುತ್ತಿರುವ ಕರ್ಮಗಳೆಲ್ಲವೂ ವರ್ತಮಾನ ಕರ್ಮಗಳೆನಿಸಿಕೊಳ್ಳುವುವು. ॥೧೨॥

ವರ್ತಮಾನಕರ್ಮವು ಫಲೋನ್ಮುಖವಾಗುವವರೆಗೂ ಸಂಚಿತವಾಗಿರುವುದು. ಯಾವುದಾದರೂ ಒಂದು ಪ್ರಾಣಿಯು ದೇಹವನ್ನು ಹೊಂದಲು ಅದಕ್ಕೆ ತಕ್ಕ ಕಾರಣವು ಆ ಪ್ರಾಣಿಯ ಸಂಚಿತಕರ್ಮಗಳ ಮಧ್ಯದಲ್ಲಿದ್ದ ಒಂದು ಕರ್ಮವು ಫಲೋನ್ಮುಖವಾಗಿ ಫಲವನ್ನು ಕೊಡಲು ಮುಂದುವರಿಯುವುದೇ ಆಗಿರುವುದು. ಹೀಗೆ ಆ ಕರ್ಮವನ್ನು ಕಾಲವು ಪ್ರೇರಿಸುತ್ತದೆ. ಕಾಲಕ್ಕೆ ಸರಿಯಾಗಿ ಫಲಕೊಡಲು ಸಿದ್ಧವಾದ ಕರ್ಮವನ್ನೇ ಪ್ರಾರಬ್ಧಕರ್ಮವೆನ್ನುವರು. ಪ್ರಾಣಿಗಳು ಈ ಪ್ರಾರಬ್ಧ ಕರ್ಮಫಲವನ್ನು ಅನುಭವಿಸಿಯೇ ತೀರಬೇಕು. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ॥೧೩-೧೪॥

ಪುರಾಕೃತಾನಿ ರಾಜೇಂದ್ರ ಹ್ಯಶುಭಾನಿ ಶುಭಾನಿ ಚ ।
ಅವಶ್ಯಮೇವ ಕರ್ಮಾಣಿ ಭೋಕ್ತವ್ಯಾನೀತಿ ನಿಶ್ಚಯಃ ॥೧೫॥

ದೇವೈರ್ಮನುಷ್ಯೈರಸುರೈರ್ಯಕ್ಷಗಂಧರ್ವಕಿನ್ನರೈಃ ।
ಕರ್ಮೈವ ಹಿ ಮಹಾರಾಜ ದೇಹಾರಂಭಸ್ಯ ಕಾರಣಂ ॥೧೬॥

---

ಎಲೈ ರಾಜನೇ, ಸಂಚಿತಕರ್ಮ ಪ್ರಾರಬ್ಧರೂಪವನ್ನು ಹೊಂದಿದಮೇಲೆ ಅದು ಶುಭವಾಗಲಿ, ಅಶುಭವಾಗಲಿ, ಹೇಗೆ ಅವಶ್ಯಕವಾಗಿ ಅನುಭವಿಸಬೇಕೋ ಹಾಗೆಯೇ ಪೂರ್ವದಲ್ಲಿ ತಾನು ಮಾಡಿದ ಶುಭಾಶುಭಕರ್ಮಗಳೆಲ್ಲವನ್ನೂ ದೇವತೆಗಳೂ ಮನುಷ್ಯರೂ ಅಸುರರೂ ಯಕ್ಷರೂ ಗಂಧರ್ವರೂ ಕಿನ್ನರರೂ ಇವರೆಲ್ಲರೂ ಅನುಭವಿಸಿಯೇ ತೀರಬೇಕೆಂದು ಶಾಸ್ತ್ರನಿಶ್ಚಯವಿರುವುದು. ॥೧೫॥

ಎಲೈ ಜನಮೇಜಯ ಮಹಾರಾಜನೇ ಕೇಳು—ಸಂಚಿತವಾದ ಕರ್ಮವಿಲ್ಲದಿದ್ದರೆ ದೇಹವು ಹುಟ್ಟುವುದಕ್ಕೆ ಅವಕಾಶವಿಲ್ಲವು. ಏಕೆಂದರೆ ದೇಹಾರಂಭವಾಗಲು ಸಂಚಿತಕರ್ಮವು ಉಪಾದಾನ ಕಾರಣವಾಗಿರುವುದು. ಆದುದರಿಂದ ದೇವತೆಗಳೇ ಮೊದಲಾದವರಿಗೂ ದೇಹಸಂಬಂಧವಿರುವ ಕಾರಣ ಅವರಿಗೂ ಸಂಚಿತಕರ್ಮವುಂಟೆಂದು ನಾವು ಊಹಿಸಬೇಕಾಗಿರುವುದು. ಸಂಚಿತಕರ್ಮವಿದ್ದರೆ ದೇಹವು ಹುಟ್ಟುವುದು. ಸಂಚಿತಕರ್ಮವು ಇಲ್ಲದಿದ್ದರೆ ದೇಹವು ಹುಟ್ಟುವುದಿಲ್ಲವು. ಎಂದು ದೇಹಾರಂಭಕ್ಕೂ ಸಂಚಿತಕರ್ಮಕ್ಕೂ ಕಾರ್ಯಕಾರಣಭಾವವಿರುವುದು. ಈ ವಿಷಯದಲ್ಲಿ ಬೃಹದಾರಣ್ಯಕಶ್ರುತಿಯಲ್ಲಿ ಹೀಗೆ ಹೇಳಿರುವುದು. " ತದೇವಯತ್ತಸ್ಸಹ ಕರ್ಮಣೈತಿ ಲಿಂಗಂ ಮನೋಯತ್ರ ನಿಷಕ್ತಮಸ್ಯ" ಎಂದರೆ ಇವನ ಮನಸ್ಸು ಎಲ್ಲಿ ಸಂಬಂಧಿಸುವುದೋ ಅದರೊಡನೆ ಇವನ ಲಿಂಗಶರೀರವು ಕರ್ಮದೊಡನೆ ಸೇರುವುದು. ಮತ್ತು ಕೈವಲ್ಯೋಪನಿಷತ್ತಿನಲ್ಲಿ " ಪುನಶ್ಚಜನ್ಮಾಂತರಕರ್ಮಯೋಗಾತ್ ಸ ಏವ ಜೀವಃ ಸ್ವಪಿತಿ ಪ್ರಬುದ್ಧಃ ।" ಜನ್ಮಾಂತರದ ಕರ್ಮಸಂಬಂಧದಿಂದ ಅದೇ ಜೀವನು ಪುನಃ ಪ್ರಬುದ್ಧನಾಗುವನು. ಆ ಕರ್ಮವು ಮುಗಿದನಂತರ ಮತ್ತೆ ಮಲಗುವನು " ಎಂದು ಈ ಉಪನಿಷತ್ತುಗಳಲ್ಲಿಯೂ ದೇಹಾರಂಭಕ್ಕೆ ಕರ್ಮವು ಕಾರಣವೆಂದು ಪ್ರತಿಪಾದಿತವಾಗಿರುವುದು. ಪ್ರಾಣಿಗಳಿಗೆ ಕರ್ಮವು ನಾಶವಾದರೆ ಜನ್ಮವು ನಾಶವಾಗುವುದೆಂದು ನಿಶ್ಚಯವಿರುವುದು. ಈ ವಿಷಯದಲ್ಲಿ ಸಂಶಯವಿಲ್ಲವು. ॥೧೬॥

ಕರ್ಮಕ್ಷಯೇ ಜನ್ಮನಾಶಃ ಪ್ರಾಣಿನಾಂ ನಾತ್ರ ಸಂಶಯಃ ।
ಬ್ರಹ್ಮಾ ವಿಷ್ಣುಸ್ತಥಾ ರುದ್ರ ಇಂದ್ರಾದ್ಯಾಶ್ಚ ಸುರಾಸ್ತಥಾ ॥೧೭॥

ದಾನವಾ ಯಕ್ಷಗಂಧರ್ವಾಃ ಸರ್ವೇ ಕರ್ಮವಶಾಃ ಕಿಲ ।
ಅನ್ಯಥಾ ದೇಹಸಂಬಂಧಃ ಕಥಂ ಭವತಿ ಭೂಪತೇ ॥೧೮॥

ಕಾರಣಂ ಯಸ್ತು ಭೋಗಸ್ಯ ದೇಹಿನಃ ಸುಖದುಃಖಯೋಃ ।
ತಸ್ಮಾದನೇಕಜನ್ಮೋತ್ಥಸಂಚಿತಾನಾಂ ಚ ಕರ್ಮಣಾಂ ॥೧೯॥

ಮಧ್ಯೇ ವೇಗಸ್ಸಮಾಯಾತಿ ಕಸ್ಯಚಿತ್ಕಾಲಪಾಕತಃ ।
ತತ್ಪ್ರಾರಬ್ಧವಶಾತ್ಪುಣ್ಯಂ ಕರೋತಿ ಚ ಯಥಾ ತಥಾ ॥೨೦॥
ಪಾಪಂ ಕರೋತಿ ಮನುಜಸ್ತಥಾ ದೇವಾದಯೋಽಪಿ ಚ ।

---

ದೇವತೆಗಳ ಶರೀರವೂ ಕರ್ಮಾಧೀನವಾದುದರಿಂದ ಬ್ರಹ್ಮ, ವಿಷ್ಣು, ರುದ್ರ, ದೇವೇಂದ್ರ ಮೊದಲಾದ ದೇವತೆಗಳೂ ದಾನವರೂ ಯಕ್ಷರೂ ಗಂಧರ್ವರೂ ಎಲ್ಲರೂ ಕರ್ಮಕ್ಕೆ ಅಧೀನರಾಗಿರುವರು. ॥೧೭॥

ಎಲೈ ರಾಜನೇ ಕೇಳು—ಕರ್ಮಗಳ ಫಲವಾದ ಸುಖದುಃಖಗಳನ್ನು ಅನುಭವಿಸಲು ದೇಹವು ಆವಶ್ಯಕವಾಗಿರುವ ಕಾರಣ ಪ್ರಾಣಿಗಳಿಗೆ ಆ ಕರ್ಮಸಂಬಂಧವೇ ದೇಹವನ್ನುಂಟುಮಾಡಿ ಆ ಶರೀರದಿಂದ ಆಯಾ ಕರ್ಮಫಲವನ್ನು ಅನುಭವಿಸುವಂತೆ ಮಾಡುವುದು ಎಂದು ಹೇಳಬೇಕು. ಇಲ್ಲದಿದ್ದರೆ ಪ್ರಾಣಿಗೆ ಕರ್ಮಫಲವನ್ನು ಅನುಭವಿಸಲು ದೇಹಸಂಬಂಧಕ್ಕೆ ಬೇರೆ ಕಾರಣವಿಲ್ಲದೆ ಅವಕಾಶವುಂಟಾಗಲಾರದು. ॥೧೮॥

ಹೀಗೆ ಸಂಚಿತಕರ್ಮಕ್ಕೂ ದೇಹಾರಂಭಕಕ್ಕೂ ಸಹ ಪರಸ್ಪರವಾಗಿ ಕಾರ್ಯಕಾರಣಭಾವವಿರುವುದರಿಂದ ಅನೇಕ ಜನ್ಮಗಳಲ್ಲಿ ಮಾಡಿದ ಸಂಚಿತಕರ್ಮಗಳ ಮಧ್ಯದಲ್ಲಿ ಯಾವುದೋ ಒಂದು ಕರ್ಮವು ಪಕ್ವವಾಗಿ ಕಾಲದಿಂದ ಪ್ರೇರಿತವಾಗಿ ತಕ್ಕಷ್ಟು ವೇಗವನ್ನು ಪಡೆದು ಫಲೋನ್ಮುಖವಾಗುವುದು. ಆಗ ಪ್ರಾರಬ್ಧವಾದ ಆ ಕರ್ಮದ ವೇಗಕ್ಕೆ ಅನುಸಾರವಾಗಿ ಪ್ರಾಣಿಯು ಪುಣ್ಯವನ್ನು ಹೇಗೆ ಮಾಡುವನೋ ಹಾಗೆಯೇ ಪಾಪವನ್ನೂ ಮಾಡುವನು. ಇದರಂತೆಯೇ ದೇವತೆಗಳು ಮೊದಲಾದವರೂ ಕೂಡ ಪುಣ್ಯಪಾಪಗಳನ್ನು ಮಾಡುವರು. ಪ್ರಕೃತದಲ್ಲಿ ದೇವೇಂದ್ರನು ತಾನು ಮಾಡಿದ ಪುಣ್ಯದಿಂದ ಇಂದ್ರಪಟ್ಟವನ್ನನುಭವಿಸುತ್ತಿದ್ದನು. ಆ ಕಾಲದಲ್ಲಿಯೇ, ಅವನ ಸಂಚಿತಕರ್ಮಗಳ ಪೈಕಿ ಮತ್ತೊಂದು ದುಷ್ಕರ್ಮವೂ

ತಥಾ ನಾರಾಯಣೋ ರಾಜನ್ ನರಶ್ಚ ಧರ್ಮಜಾವುಭೌ ॥೨೧॥

ಜಾತೌ ಕೃಷ್ಣಾರ್ಜುನೌ ಕಾಮಮಂಶೌ ನಾರಾಯಣಸ್ಯ ತೌ ।
ಪುರಾಣವೀಠಿಕೇಯಂ ವೈ ಮುನಿಭಿಃ ಪರಿಕೀರ್ತಿತಾ ॥೨೨॥

ದೇವಾಂಶಸ್ಸ ತು ವಿಜ್ಞೇಯೋ ಯೋ ಭವೇದ್ವಿಭವಾಧಿಕಃ ।
ನಾನೃಷಿಃ ಕುರುತೇ ಕಾವ್ಯಂ ನಾರುದ್ರೋ ರುದ್ರಮರ್ಚಯೇತ್॥೨೩॥

ನಾದೇವಾಂಶೋ ದದಾತ್ಯನ್ನಂ ನಾವಿಷ್ಣುಃ ಪೃಥಿವೀಪತಿಃ ।
ಇಂದ್ರಾದಗ್ನೇರ್ಯಮಾದ್ವಿಷ್ಣೋರ್ಧನದಾದಿತಿ ಭೂಪತೇ ॥೨೪॥

---

ಕಾಲದಿಂದ ಪ್ರೇರಿತವಾಗಿ ಫಲವನ್ನು ಕೊಡುವಷ್ಟು ವೇಗವನ್ನು ಪಡೆದು ಪ್ರಾರಬ್ಧವಾಗಬಹುದು. ಹಾಗೆ ಒದಗಿದ ದುಷ್ಟವಾದ ಪ್ರಾರಬ್ಧಕರ್ಮದಿಂದ ಬ್ರಹ್ಮಹತ್ಯೆಯೇ ಮೊದಲಾದ ಉತ್ಕಟಪಾಪವನ್ನು ಮಾಡಿ ಅದರ ಫಲವಾದ ರಾಜ್ಯಭ್ರಂಶವೇ ಮೊದಲಾದ ಕಷ್ಟಗಳನ್ನು ಎಂದರೆ ' ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ । ' ಎಂಬಂತೆ ಒಂದು ಕರ್ಮಮಧ್ಯದಲ್ಲಿ ಇನ್ನೊಂದನ್ನೂ ಅನುಭವಿಸಿದನು. ಆದುದರಿಂದ ಒಂದು ಜನ್ಮದಲ್ಲಿ ಅನೇಕ ಕರ್ಮಗಳು ತಮ್ಮ ಫಲಗಳನ್ನು ಉಂಟುಮಾಡುವುದು ವಿರುದ್ಧವಲ್ಲವೆಂದು ತಾತ್ಪರ್ಯವು. ॥೧೯-೨೦॥

ಹಾಗೆಯೇ ನಾರಾಯಣನ ಅಂಶದಿಂದ ಹುಟ್ಟಿದ ಧರ್ಮದೇವನ ಪುತ್ರರಾದ ನರನಾರಾಯಣರಿಬ್ಬರೂ ಕರ್ಮಾಧೀನರಾಗಿ ಕೃಷ್ಣಾರ್ಜುನರಾಗಿ ಹುಟ್ಟಿದರು. ಎಂದು ಪುರಾಣಗಳಲ್ಲಿ ಮುನಿಗಳು ಹೇಳಿರುವರು. ॥೨೧-೨೨॥

ಲೋಕದಲ್ಲಿ ಯಾವ ಮನುಷ್ಯನು ಹೆಚ್ಚಾದ ವಿಭವದಿಂದಿರುವನೋ ಅವನು " ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವವಾ । ತತ್ತದೇವಾವಗಚ್ಛತ್ವಂ ಮಮ ತೇಜೋಽಂಶಸಂಭವಂ॥ " ಎಂಬ ಗೀತೋಕ್ತಿಯಂತೆ ದೇವಾಂಶವುಳ್ಳವನೆಂದು ತಿಳಿಯತಕ್ಕದು. ಋಷಿಯ ಅಂಶವಿಲ್ಲದವನು ಕಾವ್ಯವನ್ನು ಬರೆಯಲಾರನು. ರುದ್ರನ ಅಂಶವಿಲ್ಲದವನು ರುದ್ರನ ಪೂಜೆಯಲ್ಲಿ ಆದರವನ್ನು ಮಾಡಲಾರನು. ದೇವತೆಗಳ ಅಂಶವಿಲ್ಲದವನು ವಿಶೇಷವಾಗಿ ಅನ್ನದಾನವನ್ನು ಮಾಡಲಾರನು. ವಿಷ್ಣುವಿನ ಅಂಶವಿಲ್ಲದವನು ರಾಜನಾಗಲಾರನು. ॥೨೩॥

ಜನಮೇಜಯರಾಜನೇ ಕೇಳು—ಇಂದ್ರ, ಅಗ್ನಿ, ಯಮ, ವಿಷ್ಣು, ಕುಬೇರ ಈ ದೇವತೆಗಳಿಂದ ಪ್ರಭುತ್ವಶಕ್ತಿ, ಮಹಿಮೆ, ಕೋಪ, ಪರಾಕ್ರಮ ಮತ್ತು ಐಶ್ವರ್ಯ

ಪ್ರಭುತ್ವಂ ಚ ಪ್ರಭಾವಂ ಚ ಕೋಪಂ ಚೈವ ಪರಾಕ್ರಮಂ ।
ಆದಾಯ ಕ್ರಿಯತೇ ನೂನಂ ಶರೀರಮಿತಿ ನಿಶ್ಚಯಃ ॥೨೫॥

ಯಃ ಕಶ್ಚಿದ್ಬಲವಾನ್ ಲೋಕೇ ಭಾಗ್ಯವಾನಥ ಭೋಗ್ಯವಾನ್ ।
ವಿದ್ಯಾವಾನ್ ಧನವಾನ್ವಾಪಿ ಸ ದೇವಾಂಶಃ ಪ್ರಪದ್ಯತೇ ॥೨೬॥

ತಥೈವೈತೇ ಸಮಾಖ್ಯಾತಾಃ ಪಾಂಡವಾಃ ಪೃಥಿವೀಪತೇ ।
ದೇವಾಂಶೋ ವಾಸುದೇವೋಽಪಿ ನಾರಾಯಣಸಮದ್ಯುತಿಃ ॥೨೭॥

ಶರೀರಂ ಪ್ರಾಣಿನಾಂ ನೂನಂ ಭಾಜನಂ ಸುಖದುಃಖಯೋಃ ।
ಶರೀರೀ ಪ್ರಾಪ್ನುಯಾತ್ಕಾಮಂ ಸುಖಂ ದುಃಖಮನಂತರಂ ॥೨೮॥

ದೇಹೀ ನಾಸ್ತಿ ವಶಃ ಕೋಽಪಿ ದೈವಾಧೀನಃ ಸದೈವ ಹಿ ।
ಜನನಂ ಮರಣಂ ದುಃಖಂ ಸುಖಂ ಪ್ರಾಪ್ನೋತಿ ಚಾವಶಃ ॥೨೯॥

---

ಸಂಪತ್ತು ಇವುಗಳನ್ನು ತೆಗೆದುಕೊಂಡು ಪ್ರಾಣಿಗಳ ಶರೀರವನ್ನು ಸೃಷ್ಟಿಮಾಡಲಾಗುವುದೆಂದು ನಿಯಮವಿರುವುದು. ಇದು ನಿಶ್ಚಯವಾದುದು. ||೨೪-೨೫||

ಲೋಕದಲ್ಲಿ ಯಾವನು ಬಲವುಳ್ಳವನೋ, ಸಂಪತ್ತುಳ್ಳವನೋ, ಸುಖಾನುಭವವುಳ್ಳವನೋ, ವಿದ್ಯಾವಂತನೋ, ಧನವಂತನೋ ಇವರೆಲ್ಲರೂ ದೇವತೆಗಳ ಅಂಶದಿಂದ ಕೂಡಿದವರೆಂದು ಹೇಳಲ್ಪಟ್ಟಿರುವುದು. ||೨೬||

ಎಲೈ ರಾಜನೇ ಕೇಳು—ಹಿಂದೆ ನಾನು ಹೇಳಿದಂತೆ ಈ ಪಾಂಡವರೆಲ್ಲರೂ ದೇವಾಂಶದಿಂದ ಅವತರಿಸಿದವರಾಗಿರುವರು. ನಾರಾಯಣನಿಗೆ ಸಮಾನವಾದ ಕಾಂತಿಯುಳ್ಳ, ವಸುದೇವಪುತ್ರನಾದ ಶ್ರೀಕೃಷ್ಣನೂ ಮಹಾವಿಷ್ಣುವಿನ ಅಂಶದಿಂದ ಉತ್ಪನ್ನನಾದವನು. ||೨೭||

ಎಲ್ಲ ಪ್ರಾಣಿಗಳ ಶರೀರವೂ ಸುಖದುಃಖಾನುಭವಗಳಿಗೆ ಪಾತ್ರವಾಗಿರುವುದು ನಿಜವಾದುದು. ಆದುದರಿಂದ ಇಂತಹ ಶರೀರವನ್ನು ಪಡೆದಿರುವ ಜೀವನು ಸುಖವನ್ನೂ ದುಃಖವನ್ನೂ ಒಂದಾಗುತ್ತಲೊಂದನ್ನು ವಿಶೇಷವಾಗಿ ಅನುಭವಿಸುತ್ತಿರುವನು. ||೨೮||

ದೇಹಿಯಾದ ಜೀವನು ಯಾವಾಗಲೂ ಕರ್ಮಫಲವಾದ ಅದೃಷ್ಟದ ಅಧೀನನು. ಸ್ವತಂತ್ರನಲ್ಲ. ಆದುದರಿಂದಲೇ ಕರ್ಮಫಲವಾದ ಅದೃಷ್ಟದ ಅಧೀನನಾಗಿ

ಪಾಂಡವಾಸ್ತೇ ವನೇ ಜಾತಾಃ ಪ್ರಾಪ್ತಾಸ್ತು ಸ್ವಗೃಹಂ ಪುನಃ ।
ಸ್ವಬಾಹುಬಲತಃ ಪಶ್ಚಾತ್ ರಾಜಸೂಯಂ ಕ್ರತೂತ್ತಮಂ ॥೩೦॥

ವನವಾಸಂ ಪುನಃ ಪ್ರಾಪ್ತಾಃ ಬಹುದುಃಖಕರಂ ಪರಂ ।
ಅರ್ಜುನೇನ ತಪಸ್ತಪ್ತಂ ದುಷ್ಕರಂ ಹ್ಯಜಿತೇಂದ್ರಿಯೈಃ ॥೩೧॥

ಸಂತುಷ್ಟೈಸ್ತು ಸುರೈರ್ದತ್ತಂ ವರದಾನಂ ಪುನಃ ಶುಭಂ ।
ನರದೇಹಕೃತಂ ಪುಣ್ಯಂ ಕ್ವ ಗತಂ ವನವಾಸಜಂ ॥೩೨॥

ನರದೇಹೇ ತಪಸ್ತಪ್ತಂ ಚೋಗ್ರೇ ಬದರಿಕಾಶ್ರಮೇ ।
ನಾರ್ಜುನಸ್ಯ ಶರೀರೇ ತತ್ಫಲದಂ ಸಂಬಭೂವ ಹ ॥೩೩॥

---

ಹುಟ್ಟು ಸಾವು ದುಃಖ ಸುಖ ಇವುಗಳನ್ನು ತನ್ನ ಅಧೀನದಲ್ಲಿಟ್ಟುಕೊಳ್ಳದೆ ಅದೃಷ್ಟವು ಫಲ ಕೊಡುವ ಕಾಲಕ್ಕೆ ಸರಿಯಾಗಿ ಅನುಭವಿಸುವನು. ॥೨೯॥

ಪಾಂಡವರು ವನದಲ್ಲಿ ಹುಟ್ಟಿದರು. ಆಮೇಲೆ ತಮ್ಮ ಮನೆಗೆ ಬಂದು ಸೇರಿದರು. ತರುವಾಯ ತಮ್ಮ ಭುಜಬಲದಿಂದ ಆರ್ಜಿಸಿದ ಧನದಿಂದ ರಾಜಸೂಯ ವೆಂಬ ಉತ್ತಮವಾದ ಯಜ್ಞವನ್ನು ಮಾಡಿದರು. ಬಳಿಕ ಬಹು ದುಃಖವನ್ನುಂಟು ಮಾಡಿದ ವನವಾಸವನ್ನೂ ಅನುಭವಿಸಿದರು. ಇವೆಲ್ಲವೂ ಜೀವರು ಅವರವರು ಮಾಡಿದ್ದ ಸಂಚಿತಕರ್ಮದ ಫಲವನ್ನು ಅದೃಷ್ಟಾಧೀನರಾಗಿ ಅವರು ಅನುಭವಿಸಿಯೇ ತೀರಬೇಕೆಂಬುದಕ್ಕೆ ನಿದರ್ಶನವಾಗಿರುವುದು. ॥೩೦॥

ಅರ್ಜುನನು ಜಿತೇಂದ್ರಿಯರಲ್ಲದವರು ಮಾಡಲು ಅಸಾಧ್ಯವಾದ ತಪಸ್ಸನ್ನು ಮಾಡಿದನು. ದೇವತೆಗಳು ಇವನ ತಪಸ್ಸಿಗೆ ಮೆಚ್ಚಿ ಒಳ್ಳೆಯ ವರಗಳನ್ನು ಪುನಃ ಕೊಟ್ಟರು. ॥೩೧॥

ಹಿಂದೆ ಬದರಿಕಾಶ್ರಮದಲ್ಲಿ ವನವಾಸ ಮಾಡುತ್ತಾ ನರದೇಹದಲ್ಲಿ ಕ್ರೂರವಾದ ತಪಸ್ಸನ್ನು ಮಾಡಿದ ಪುಣ್ಯವು ಎಲ್ಲಿ ಹೋಯಿತು! ಆ ಪುಣ್ಯವು ಅರ್ಜುನನ ಶರೀರದಲ್ಲಿ ಫಲಕೊಡುವುದಾಗಲಿಲ್ಲ. ಆದುದರಿಂದ ಜೀವನು ಮಾಡಿದ ಕರ್ಮಫಲಾನುಭವವು ಅವನ ಅಧೀನದಲ್ಲಿರುವುದಿಲ್ಲ. ಕರ್ಮವು ಅದೃಷ್ಟವಾಗಿ ಪರಿಣಮಿಸಿ ಫಲಕೊಡುವ ಕಾಲ ಬಂದಾಗ ಪರಮಾತ್ಮನ ಸಂಕಲ್ಪವೆಂಬ ಒಂದು ನಿಯಮವನ್ನನುಸರಿಸಿ ಯಾವುದೋ ಜನ್ಮದಲ್ಲಿ ಯಾವುದೋ ಕಾಲದಲ್ಲಿ ಫಲಕೊಡುವುದು.

**ಪ್ರಾಣಿನಾಂ ದೇಹಸಂಬಂಧೇ ಗಹನಾ ಕರ್ಮಣೋ ಗತಿಃ ।**
**ದುರ್ಜ್ಞೇಯಾ ಸರ್ವಥಾ ದೇವೈರ್ಮಾನವಾನಾಂ ತು ಕಾ ಕಥಾ॥೩೪॥**

**ವಾಸುದೇವೋಽಪಿ ಸಂಜಾತಃ ಕಾರಾಗಾರೇಽತಿಸಂಕಟೇ ।**
**ನೀತೋಽಸೌ ವಸುದೇವೇನ ನಂದಗೋಪಸ್ಯ ಗೋಕುಲಂ ॥೩೫॥**

**ಏಕಾದಶೈವ ವರ್ಷಾಣಿ ಸಂಸ್ಥಿತಸ್ತತ್ರ ಭಾರತ ।**
**ಪುನಸ್ಸ ಮಥುರಾಂ ಗತ್ವಾ ಜಘಾನೋಗ್ರಸುತಂ ಬಲಾತ್ ॥೩೬॥**

**ಮೋಚಯಾಮಾಸ ಪಿತರೌ ಬಂಧನಾದ್ಭೃಶದುಃಖಿತೌ ।**
**ಉಗ್ರಸೇನಂ ಚ ರಾಜಾನಂ ಚಕಾರ ಮಥುರಾಪುರೇ ॥೩೭॥**

---

ಅಂತು ಮಾಡಿದ ಕರ್ಮಕ್ಕೆ ಫಲವು ಖಂಡಿತವಾಗಿ ಬರುವುದು ಆದರೆ ಅದು ಜೀವನ ಅಧೀನದಲ್ಲಿಲ್ಲ. ಅದೃಷ್ಟದ, ಧರ್ಮದ, ದೇವರ ವಿಧಿಗನುಸಾರವಾಗಿರುವುದು. ||೩೩||

ಯಾವ ಪ್ರಾಣಿಯೇ ಆಗಲಿ ಯಾವ ಕರ್ಮಮಾಡಿ ಯಾವ ಜನ್ಮವನ್ನು ಪಡೆಯಿತು ? ತನಗೆ ಬಂದ ಜನ್ಮದಲ್ಲಿ ಯಾವ ಪುಣ್ಯಪಾಪರೂಪವಾದ ಕರ್ಮಫಲ ಗಳನ್ನು ಅನುಭವಿಸುತ್ತದೆ? ಎಂಬ ಕರ್ಮಗಳ ಪರಿಪಾಕವು ಯಾವ ಉಪಾಯದಿಂ ದಲೂ ದೇವತೆಗಳಿಂದಲೂ ತಿಳಿಯಲು ಕಷ್ಟಸಾಧ್ಯವಾಗಿರುವಾಗ ಮನುಷ್ಯನು ಇವು ಗಳನ್ನು ಸುಲಭವಾಗಿ ತಿಳಿಯಲು ಹೇಗೆ ಸಾಧ್ಯವಾಗುವುದು ? ||೩೪||

ಪಾಂಡವರು ದೇವತೆಗಳ ಅಂಶದಿಂದ ಹುಟ್ಟಿದವರಾದರೂ ಅದೃಷ್ಟರೂಪವಾದ ಕರ್ಮಕ್ಕೆ ಅಧೀನರಾಗಿದ್ದಂತೆ ಶ್ರೀಕೃಷ್ಣನೂ ಕರ್ಮಕ್ಕೆ ಅಧೀನನೆಂಬುದನ್ನು ವ್ಯಾಸ ಋಷಿಯು ವಿವರಿಸುವನು. ಶ್ರೀಕೃಷ್ಣನೂ ಕೂಡ ಸೆರೆಮನೆಯಲ್ಲಿ ಬಹಳ ಕಷ್ಟತರ ವಾಗಿರುವ ಪ್ರದೇಶದಲ್ಲಿ ಹುಟ್ಟಿದನು. ವಸುದೇವನು ಇವನನ್ನು ಹುಟ್ಟಿದೊಡ ನೆಯೇ ನಂದಗೋಪನ ಗೋಕುಲಕ್ಕೆ ಕರೆದುಕೊಂಡುಹೋದನು. ||೩೫||

ಕೃಷ್ಣನು ನಂದಗೋಕುಲದಲ್ಲಿ ಹನ್ನೊಂದು ವರುಷ ಮಾತ್ರ ಇದ್ದು ಬಳಿಕ ಮಥುರಾಪಟ್ಟಣಕ್ಕೆ ಬಂದು ಉಗ್ರಸೇನನ ಮಗನಾದ ಕಂಸನನ್ನು ಬಲಾತ್ಕಾರದಿಂದ ಕೊಂದನು. ||೩೬||

ಸೆರೆಯಲ್ಲಿ ಹಾಕಿರುವ ಕಾರಣದಿಂದ ಬಹಳ ದುಃಖಿತರಾಗಿದ್ದ ತನ್ನ ತಾಯಿ ತಂದೆಗಳನ್ನು ಆ ಕೃಷ್ಣನು ಸೆರೆಯಿಂದ ಬಿಡಿಸಿದನು. ಮತ್ತು ಮಥುರಾಪಟ್ಟಣದಲ್ಲಿ ಉಗ್ರಸೇನನನ್ನು ದೊರೆಯನ್ನಾಗಿ ಮಾಡಿದನು. ||೩೭||

ಜಗಾಮ ದ್ವಾರವತ್ಯಾಂ ಸ ಮ್ಲೇಚ್ಛರಾಜಭಯಾತ್ಸ್ವನಃ ।
ಸರ್ವಂ ಭಾವಿವಶಾತ್ ಕೃಷ್ಣಃ ಕೃತವಾನ್ ಪೌರುಷಂ ಮಹತ್ ॥೩೮॥

ಕೃತ್ವಾ ಕಾರ್ಯಾಣ್ಯನೇಕಾನಿ ದ್ವಾರವತ್ಯಾಂ ಜನಾರ್ದನಃ ।
ದೇಹಂ ತ್ಯಕ್ತ್ವಾ ಪ್ರಭಾಸೇ ತು ಸಕುಟುಂಬೋ ದಿವಂ ಗತಃ ॥೩೯॥

ಪುತ್ರಾಃ ಪೌತ್ರಾಶ್ಚ ಸುಹೃದೋ ಭ್ರಾತರೋ ಜಾಮಯಸ್ತಥಾ ।
ಪ್ರಭಾಸೇ ಯಾದವಾಸ್ಸರ್ವೇ ವಿಪ್ರಶಾಪಾತ್ಕ್ಷಯಂ ಗತಾಃ ॥೪೦॥

ಏವಂ ತೇ ಕಥಿತಾ ರಾಜನ್ ಕರ್ಮಣೋ ಗಹನಾ ಗತಿಃ ।
ವಾಸುದೇವೋಽಪಿ ವ್ಯಾಧಸ್ಯ ಬಾಣೇನ ನಿಧನಂ ಗತಃ ॥೪೧॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ
ದಶಮೋಽಧ್ಯಾಯಃ.

---

ಆ ಕೃಷ್ಣನು ಮ್ಲೇಚ್ಛರಾಜನ ಭಯದಿಂದ ದ್ವಾರಕಾಪಟ್ಟಣವನ್ನು ನಿರ್ಮಾಣ ಮಾಡಿಸಿ ಅಲ್ಲಿಗೆ ಹೋಗಿ ಸೇರಿದನು. ಹೀಗೆ ಕೃಷ್ಣನು ಮಹಾಪುರುಷ ಪ್ರಯತ್ನಗಳಿಂದ ಎಲ್ಲ ಕೆಲಸಗಳನ್ನೂ ಫಲಪ್ರದವಾದ ಅದೃಷ್ಟಾಧೀನನಾಗಿಯೇ ಮಾಡಿದನು. ॥೩೮॥

ಶ್ರೀಕೃಷ್ಣನು ದ್ವಾರಕಾನಗರದಲ್ಲಿ ಅನೇಕ ಕಾರ್ಯಗಳನ್ನು ಮಾಡಿ ಪ್ರಭಾಸ ಕ್ಷೇತ್ರದಲ್ಲಿ ತನ್ನ ಶರೀರವನ್ನು ಬಿಟ್ಟು ತನ್ನ ಪತ್ನಿಯರೊಡನೆ ಸ್ವರ್ಗಕ್ಕೆ ಹೋದನು. ॥೩೯॥

ಪ್ರಭಾಸಕ್ಷೇತ್ರದಲ್ಲಿ ಶ್ರೀಕೃಷ್ಣನ ಮಕ್ಕಳು ಮೊಮ್ಮಕ್ಕಳು ಸ್ನೇಹಿತರು ಸಹೋದರರು ಭಾವಮೈದಂದಿರು ಇವರೇ ಮೊದಲಾದ ಯಾದವರೆಲ್ಲರೂ ಬ್ರಾಹ್ಮಣನ ಶಾಪದಿಂದ ನಾಶವನ್ನು ಹೊಂದಿದರು. ॥೪೦॥

ಕೃಷ್ಣನೂ ಕೂಡ ಬೇಡನ ಬಾಣದಿಂದ ಮರಣವನ್ನು ಹೊಂದಿದನು. ಎಲೈ ಜನಮೇಜಯರಾಜನೇ, ಹೀಗೆ ಸಂಚಿತ ವರ್ತಮಾನ ಪ್ರಾರಬ್ಧ ಎಂಬ ಮೂರು ವಿಧವಾದ ಕರ್ಮಗಳ ಗತಿಯು ಅಂದರೆ ಫಲಕೊಡುವ ಕ್ರಮವು ತಿಳಿಯುವುದು ಸುಲಭಸಾಧ್ಯವಾದುದಲ್ಲವೆಂದು ನಿನಗೆ ಉದಾಹರಣೆಗಳೊಡನೆ ವಿವರಿಸಿ ವಿಸ್ತಾರವಾಗಿ ಅನೇಕ ಸಂದರ್ಭಗಳಲ್ಲಿ ಹೇಳಲ್ಪಟ್ಟಿತು. ॥೪೧॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

### || ಏಕಾದಶೋಽಧ್ಯಾಯಃ ||

### ಹನ್ನೊಂದನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಭಾರಾವತರಣಾರ್ಥಾಯ ಕಥಿತಂ ಜನ್ಮ ಕೃಷ್ಣಯೋಃ ।**
**ಸಂಶಯೋಽಯಂ ದ್ವಿಜಶ್ರೇಷ್ಠ ಹೃದಯೇ ಮಮ ತಿಷ್ಠತಿ ॥೧॥**

---

ಜನಮೇಜಯರಾಜನು ಹೇಳಿದನು—ಓ ಬ್ರಾಹ್ಮಣಶ್ರೇಷ್ಠನೇ, ನೀನು ಭೂಮಿಯ ಭಾರವನ್ನು ಕಡಮೆ ಮಾಡುವುದಕ್ಕಾಗಿ ಕೃಷ್ಣಾರ್ಜುನರು ಅಥವಾ ಬಲರಾಮ, ಕೃಷ್ಣರು ಭೂಮಿಯಲ್ಲಿ ಅವತರಿಸಿದ್ದರೆಂದು ಹೇಳುತ್ತೀಯೆ. ಈಗ ಹರಿಯ ಶ್ವೇತಕೇಶದಿಂದ ಬಲರಾಮನೂ, ಕೃಷ್ಣಕೇಶದಿಂದ ಕೃಷ್ಣನೂ, ನರನಾರಾಯಣರೇ ಕೃಷ್ಣಾರ್ಜುನರೂ ಆಗಿ ಅವತರಿಸಿದರೆಂದು ಹೇಳಿದೆ. ಅವರು ಕರ್ಮಫಲವನ್ನು ಅನುಭವಿಸುವುದಕ್ಕಾಗಿ ಕರ್ಮಾಧೀನರಾಗಿ ಹುಟ್ಟಿದರು. ಮತ್ತು ಸುಖದುಃಖಗಳನ್ನು ಅನುಭವಿಸಿದರು ಎಂದೂ ಹೇಳುತ್ತೀಯೆ! ಹೀಗೆ ಹೇಳಿದರೆ ಆ ಬಲರಾಮ, ಕೃಷ್ಣ, ಅರ್ಜುನರಿಗೂ ಸ್ವಾತಂತ್ರ್ಯವಿಲ್ಲವೇ? ಪಾರತಂತ್ರ್ಯ ಉಂಟೇ? ಎಂಬ ಈ ವಿಷಯದಲ್ಲಿ ಸಂದೇಹವು ನನ್ನ ಮನಸ್ಸಿನಲ್ಲಿರುವುದು. ಅಲ್ಲದೆ ಈ ಅವತಾರಗಳಿಂದ ಭೂಭಾರವು ತಗ್ಗಿತೇ? ಭೀಷ್ಮಾದಿಗಳು ಮೃತರಾದುದಲ್ಲದೆ, ದುಷ್ಟರು ಉಳಿದರಲ್ಲವೇ? ಇವೇ ಮುಂತಾದ ಸಂಶಯಗಳು ಉಳಿದಿವೆ. ನೀನು ಇವನ್ನು ಪರಿಹರಿಸಬೇಕು. ಕೃಷ್ಣಯೋಃ ಎಂದರೆ ಹರಿಯ ಅಂಶರಾದ ಬಲರಾಮ ಕೃಷ್ಣ ಅರ್ಜುನರು ಎಂದು ಅರ್ಥವು. ||೧||

ಪೃಥಿವೀ ಗೋಸ್ವರೂಪೇಣ ಬ್ರಹ್ಮಾಣಂ ಶರಣಂ ಗತಾ ।
ದ್ವಾಪರಾಂತೇಽತಿದೀನಾರ್ತಾ ಗುರುಭಾರಪ್ರಪೀಡಿತಾ । ॥೨॥

ವೇಧಸಾ ಪ್ರಾರ್ಥಿತೋ ವಿಷ್ಣುಃ ಕಮಲಾಪತಿರೀಶ್ವರಃ ।
ಭೂಭಾರೋತ್ತಾರಣಾರ್ಥಾಯ ಸಾಧೂನಾಂ ರಕ್ಷಣಾಯ ಚ ॥೩॥

ಭಗವಾ(ವ)ನ್ ಭಾರತೇ ಖಂಡೇ ದೇವೈಸ್ಸಹ ಜನಾರ್ದನಃ(ನ) ।
ಅವತಾರಂ ಗೃಹಾಣಾಽಶು ವಸುದೇವಗೃಹೇ ವಿಭೋ ॥೪॥

ಏವಂ ಸಂಪ್ರಾರ್ಥಿತೋ ಧಾತ್ರಾ ಭಗವಾನ್ ದೇವಕೀಸುತಃ ।
ಬಭೂವ ಸಹ ರಾಮೇಣ ಭೂಭಾರೋತ್ತಾರಣಾಯ ವೈ ॥೫॥

ಕಿಯಾನುತ್ತಾರಿತೋ ಭಾರೋ ಹತ್ವಾ ದುಷ್ಟಾನನೇಕಶಃ ।
ಜ್ಞಾತ್ವಾ ಸರ್ವಾನ್ ದುರಾಚಾರಾನ್ ಪಾಪಬುದ್ಧಿನೃಪಾನಿಹ ॥೬॥

---

ದ್ವಾಪರಯುಗದ ಕೊನೆಯಲ್ಲಿ ಭೂಮಿಯು ಹೆಚ್ಚು ಭಾರದಿಂದ ಸಂಕಟ ಪಡುತ್ತಾ ಗೋವಿನ ರೂಪವನ್ನು ಧರಿಸಿ ಬಹಳ ದೈನ್ಯದಿಂದ ದುಃಖಪಡುತ್ತಾ ಹೋಗಿ ಬ್ರಹ್ಮನನ್ನು ಶರಣುಹೊಂದಿತು. ||೨||

ಲಕ್ಷ್ಮೀದೇವಿಗೆ ಪತಿಯಾಗಿಯೂ ಎಲ್ಲರಿಗೂ ಅಧಿಪತಿಯಾಗಿಯೂ ಇರುವ ವಿಷ್ಣುವು ಭೂಮಿಯ ಭಾರವನ್ನು ಇಳಿಸುವುದಕ್ಕಾಗಿಯೂ ಸಜ್ಜನರನ್ನು ರಕ್ಷಿಸುವುದಕ್ಕಾಗಿಯೂ ಧರ್ಮಸ್ಥಾಪನೆಗಾಗಿಯೂ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟನು. ||೩||

" ಓ ಷಡ್ಗುಣೈಶ್ವರ್ಯಸಂಪನ್ನನಾದ ಪ್ರಭುವಾದ ಮಹಾವಿಷ್ಣುವೇ, ನೀನು ದೇವತೆಗಳೊಡನೆ ಭರತಖಂಡದಲ್ಲಿ ವಸುದೇವನ ಮನೆಯಲ್ಲಿ ಬೇಗನೆ ಅವತಾರ ಮಾಡು." ಎಂದು ಬ್ರಹ್ಮನು ವಿಷ್ಣುವನ್ನು ಪ್ರಾರ್ಥಿಸಿದನು. ||೪||

ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವು ಬ್ರಹ್ಮನಿಂದ ಹೀಗೆ ಪ್ರಾರ್ಥಿಸಲ್ಪಟ್ಟವನಾಗಿ ತಾನು ಬಲರಾಮನೊಡನೆ ಭೂಮಿಯ ಭಾರವನ್ನು ಇಳಿಸುವುದಕ್ಕಾಗಿ ದೇವಕೀದೇವಿಗೆ ಮಗನಾಗಿ ಅವತಾರಮಾಡಿದನು. ||೫||

ಈ ಲೋಕದಲ್ಲಿ ರಾಜರೆಲ್ಲರೂ ಪಾಪಬುದ್ಧಿಯುಳ್ಳವರಾಗಿ ದುರಾಚಾರಿಗಳಾಗಿರುವುದನ್ನು ತಿಳಿದು ದುಷ್ಟರಾದವರನೇಕರನ್ನು ಕೊಂದು ಎಷ್ಟುಮಟ್ಟಿಗೆ ಭೂಮಿಯ ಭಾರವನ್ನು ನಾನಾ ಬಗೆಯಲ್ಲಿ ಆ ವಿಷ್ಣುವು ಇಳಿಸಿದನು ? ||೬||

ಹತೋ ಭೀಷ್ಮೋ ಹತೋ ದ್ರೋಣೋ ವಿರಾಟೋ ದ್ರುಪದಸ್ತಥಾ।
ಬಾಹ್ಲೀಕಃ ಸೋಮದತ್ತಶ್ಚ ಕರ್ಣೋ ವೈಕರ್ತನಸ್ತಥಾ ॥೭॥

ಯೈರ್ಲುಂಠಿತಂ ಧನಂ ಸರ್ವಂ ಹೃತಾಶ್ಚ ಹರಿಯೋಷಿತಃ ।
ಕಥಂ ನ ನಾಶಿತಾ ದುಷ್ಟಾಃ ಯೇ ಸ್ಥಿತಾಃ ಪೃಥಿವೀತಲೇ ॥೮॥

ಆಭೀರಾಶ್ಚ ಶಕಾಃ ಮ್ಲೇಚ್ಛಾ ನಿಷಾದಾಃ ಕೋಟಿಶಸ್ತಥಾ ।
ಭಾರಾವತರಣಂ ಕಿಂ ತತ್ ಕೃತಂ ಕೃಷ್ಣೇನ ಧೀಮತಾ ॥೯॥

ಸಂದೇಹೋಽಯಂ ಮಹಾಭಾಗ ನ ನಿವರ್ತತಿ ಚಿತ್ತತಃ ।
ಕಲಾವಸ್ಮಿನ್ ಪ್ರಜಾಸ್ಸರ್ವಾಃ ಪಶ್ಯತಃ ಪಾಪನಿಶ್ಚಯಾಃ ॥೧೦॥

---

ಭೀಷ್ಮನೂ ದ್ರೋಣನೂ ವಿರಾಟರಾಜನೂ ದ್ರುಪದರಾಜನೂ ಬಾಹ್ಲೀಕ ರಾಜನೂ ಸೋಮದತ್ತನೆಂಬರಾಜನೂ ಸೂರ್ಯಪುತ್ರನಾದ ಕರ್ಣನೂ ಇಂತಹ ಗಟ್ಟಿಗರಾದ ದೊಡ್ಡವರೆಲ್ಲರೂ ಕೊಲ್ಲಲ್ಪಟ್ಟರು. ॥೭॥

ಆದರೆ ಎಲ್ಲ ಧನವನ್ನೂ ಕದ್ದು ಕೃಷ್ಣನ ಸ್ತ್ರೀಯರನ್ನೂ ಅಪಹರಿಸಿದ ಭೂಮಿಯ ಮೇಲಿದ್ದ ಆ ದುಷ್ಟರನ್ನು ಆ ಕೃಷ್ಣನು ಏಕೆ ನಾಶಪಡಿಸಲಿಲ್ಲ ? ॥೮॥

ಗೊಲ್ಲರು, ಶಕರು, ಮ್ಲೇಚ್ಛರು, ಬೇಡರು ಇವರು ಕೋಟಿಗಟ್ಟಲೆಯಾಗಿರು ವರು. ಬುದ್ಧಿವಂತನಾದ ಕೃಷ್ಣನು ಭೂಮಿಯ ಭಾರವನ್ನಿಳಿಸಿದುದೇನು ? ॥೯॥

ಮಹಾಮಹಿಮನಾದ ವ್ಯಾಸಮುನಿಯೇ, ಈ ಕಲಿಯುಗದಲ್ಲಿ ಕೆಟ್ಟ ಕೆಲಸ ಗಳನ್ನು ಮಾಡುವುದರಲ್ಲಿಯೇ ಮನೋನಿಶ್ಚಯವುಳ್ಳ ಅನೇಕ ಜನರನ್ನು ನೋಡು ತ್ತಿರುವಲ್ಲಿ ಕೃಷ್ಣನು ಭೂಭಾರವನ್ನಿಳಿಸುವುದಕ್ಕಾಗಿ ವಿಷ್ಣುವಿನ ಅಂಶದಿಂದ ಅವತರಿಸಿ ಭೂಮಿಯ ಭಾರವನ್ನಿಳಿಸಿದನು ಎಂಬ ಮಾತಿನ ವಿಷಯದಲ್ಲಿ ಸಂದೇಹವು ನನ್ನ ಮನಸ್ಸಿನಿಂದ ಹೋಗಿಲ್ಲ. ಇಲ್ಲಿ ಕೃಷ್ಣನು ತನ್ನ ಕರ್ಮಾಧೀನನಾಗಿ ಜನ್ಮವೆತ್ತಿ ಪ್ರಾರಬ್ಧಕರ್ಮಕ್ಕನುಸಾರವಾಗಿ ಕೆಲಸಮಾಡಿದನೇ ? ಅಥವಾ ಸ್ವತಂತ್ರನಾಗಿ ಕರ್ಮಾ ಧೀನನಾಗದೆ ಇದ್ದನೇ ? ಈ ಸಂದೇಹವನ್ನು ನಿವಾರಣೆ ಮಾಡಬೇಕೆಂಬುದೂ ರಾಜನ ಪ್ರಶ್ನೆಯಾಗಿದೆ. ॥೧೦॥

|| ವ್ಯಾಸ ಉವಾಚ ||

**ರಾಜನ್ ಯಸ್ಮಿನ್ ಯುಗೇ ಯಾದೃಕ್ ಪ್ರಜಾ ಭವತಿ ಕಾಲತಃ ।**
**ನಾನ್ಯಥಾ ತದ್ಭವೇನ್ನೂನಂ ಯುಗಧರ್ಮೋಽತ್ರ ಕಾರಣಂ ॥೧೧॥**

**ಯೇ ಧರ್ಮರಸಿಕಾ ಜೀವಾಸ್ತೇ ವೈ ಸತ್ಯಯುಗೇಽಭವನ್ ।**
**ಧರ್ಮಾರ್ಥರಸಿಕಾ ಯೇ ತು ತೇ ವೈ ತ್ರೇತಾಯುಗೇಽಭವನ್ ॥೧೨॥**

---

ವ್ಯಾಸನು ಹೇಳಿದನು—ಎಲೈ ದೊರೆಯೇ, ಯಾವ ಯುಗದಲ್ಲಿ ಯಾವ ವಿಧವಾದ ಪ್ರಜೆಗಳು ಕಾಲಕ್ಕೆ ಅನುಸಾರವಾಗಿ ಹುಟ್ಟಬೇಕೋ ಅಂತಹ ಪ್ರಜೆಗಳೇ ಹುಟ್ಟುವರು. ಇದಕ್ಕೆ ವಿರುದ್ಧವಾಗಿ ಎಂದಿಗೂ ನಡೆಯುವುದಿಲ್ಲ. ಇದು ನಿಜವಾದ ಸಂಗತಿಯಾಗಿದೆ. ಇದಕ್ಕೆ ಯುಗಧರ್ಮವೇ ಕಾರಣವಾಗಿರುವುದು. ಇಲ್ಲಿ ವಿಶೇಷವೇನೆಂದರೆ, ಲೋಕದಲ್ಲಿ ದುಷ್ಟರು ಎರಡು ವಿಧವಾಗಿರುವರು. ಒಂದು ಬಗೆಯವರು ಯುಗಧರ್ಮಕ್ಕನುರೂಪವಾಗಿ ಹುಟ್ಟಿ ಸ್ವಭಾವವಾಗಿ ದುರಾಚಾರಿಗಳಾಗಿಯೇ ಇರುವರು. ಮತ್ತೊಂದು ಬಗೆಯವರು ಲೋಕದಲ್ಲಿ ವ್ಯವಹಾರಕ್ಕೂ ಧರ್ಮಕ್ಕೂ ಕಾರಣವಾದ ಜ್ಞಾನಮಾರ್ಗವನ್ನು ನಾಶಮಾಡುವುದಕ್ಕಾಗಿಯೇ ಭೂಮಿಯಲ್ಲಿ ಅವತರಿಸಿದ ರಾಕ್ಷಸರಾಗಿಯೂ ಆ ರಾಕ್ಷಸರ ಅಂಶದವರಾಗಿಯೂ ಇರುವರು. ಇವರು ಕ್ಷತ್ರಿಯರ ವಂಶದಲ್ಲಿ ಹುಟ್ಟಿ ಧರ್ಮವನ್ನು ನಾಶಮಾಡುವರು. ಕೆಲವರು ದೈತ್ಯವಂಶದಲ್ಲಿಯೇ ಹುಟ್ಟಿ ಧರ್ಮವನ್ನೂ ವೇದಮಾರ್ಗವನ್ನೂ ಹಾಳುಮಾಡುವರು. ಹೀಗೆ ಲೋಕವನ್ನು ಹಾಳುಮಾಡುವ ಎರಡನೆಯ ಗುಂಪಿನವರಾದ ದೈತ್ಯರನ್ನು ನಾಶಪಡಿಸುವುದಕ್ಕಾಗಿ ವಿಷ್ಣುವು ಕೃಷ್ಣರೂಪದಿಂದ ಅವತಾರಮಾಡಿ ಅವರನ್ನು ನಿರ್ಮೂಲಮಾಡಿದನು. ಮೊದಲನೆಯ ಗುಂಪಿನವರು ಯುಗಧರ್ಮಕ್ಕನುಸಾರವಾಗಿ ಭೂಮಿಯಲ್ಲಿ ಹುಟ್ಟಿದ ಪ್ರಜೆಗಳು. ಇವರನ್ನು ನಾಶಮಾಡುವುದು ಕೃಷ್ಣನ ಕೆಲಸವಲ್ಲವು. ಇವರನ್ನೂ ನಾಶಮಾಡಿದಲ್ಲಿ ಕಲಿಯುಗಧರ್ಮವೂ ನಾಶವಾಗುವುದಲ್ಲದೆ ಸಂಪೂರ್ಣ ಪ್ರಜಾನಾಶವೂ ಆಗುವುದು. ಆದುದರಿಂದ ಕೃಷ್ಣನು ಈ ಗುಂಪಿನವರನ್ನು ನಾಶಮಾಡಲಿಲ್ಲ. ||೧೧||

ಕೃತಯುಗದಲ್ಲಿ ಧರ್ಮಾಚರಣೆಯಲ್ಲಾಸಕ್ತರಾದ ಜೀವರುಗಳೇ ಹೆಚ್ಚಾಗಿ ಇದ್ದರು. ತ್ರೇತಾಯುಗದಲ್ಲಿ ಧರ್ಮ ಅರ್ಥ ಇವೆರಡರಲ್ಲಿ ಆಸಕ್ತರಾದ ಜೀವರು ಹೆಚ್ಚು ಪ್ರಭಾವಶಾಲಿಗಳಾಗಿದ್ದರು. ದ್ವಾಪರಯುಗದಲ್ಲಿ ಧರ್ಮ, ಅರ್ಥ, ಕಾಮ ಈ ಮೂರರಲ್ಲಿಯೂ ಆಸಕ್ತರಾಗಿರುವ ಜೀವರು ತುಂಬ ಪ್ರಮುಖರಾಗಿರುತ್ತಿದ್ದರು.

ಧರ್ಮಾರ್ಥಕಾಮರಸಿಕಾಃ ದ್ವಾಪರೇ ಚಾಭವನ್ ಯುಗೇ ।
ಅರ್ಥಕಾಮಪರಾಸ್ಸರ್ವೇ ಕಲಾವಸ್ಮಿನ್ ಭವನ್ತಿ ಹಿ ॥೧೩॥

ಯುಗಧರ್ಮಸ್ತು ರಾಜೇಂದ್ರ ನ ಯಾತಿ ವ್ಯತ್ಯಯಂ ಪುನಃ ।
ಕಾಲಃ ಕರ್ತಾಽಸ್ತಿ ಧರ್ಮಸ್ಯ ಹ್ಯಧರ್ಮಸ್ಯ ಚ ವೈ ಪುನಃ ॥೧೪॥

॥ ರಾಜೋವಾಚ ॥

ಯೇ ತು ಸತ್ಯಯುಗೇ ಜೀವಾಃ ಭವಂತಿ ಧರ್ಮತತ್ಪರಾಃ ।
ಕುತ್ರ ತೇಽದ್ಯ ಮಹಾಭಾಗ ತಿಷ್ಠಂತಿ ಪುಣ್ಯಭಾಗಿನಃ ॥೧೫॥

ತ್ರೇತಾಯುಗೇ ದ್ವಾಪರೇ ವಾ ಯೇ ದಾನವ್ರತಕಾರಕಾಃ ।
ವರ್ತಂತೇ ಮುನಯಃ ಶ್ರೇಷ್ಠ ಕುತ್ರ ಬ್ರೂಹಿ ಪಿತಾಮಹ ॥೧೬॥

---

ಈ ಕಲಿಯುಗದಲ್ಲಿಯಾದರೋ ಸಮಸ್ತ ಜೀವರೂ ಅರ್ಥ, ಕಾಮ ಇವೆರಡರಲ್ಲಿಯೇ ಹೆಚ್ಚು ಆಸಕ್ತರಾಗಿ ಮುಂದಾಳುಗಳಾಗಿಯೂ ಅನುಯಾಯಿಗಳಾಗಿಯೂ ಇರುವರು. ॥೧೨-೧೩॥

ಓ ರಾಜಶ್ರೇಷ್ಠನೇ, ಯುಗಧರ್ಮವು ಯಾವಾಗಲೂ ವ್ಯತ್ಯಾಸವನ್ನು ಹೊಂದುವುದಿಲ್ಲವು. ಧರ್ಮಕ್ಕೇ ಆಗಲಿ ಅಧರ್ಮಕ್ಕೇ ಆಗಲಿ ಕಾಲವೇ ಕಾರಣವಾಗಿರುತ್ತದೆ. ॥೧೪॥

ಜನಮೇಜಯರಾಜನು ಕೇಳಿದನು—ಸತ್ಯಪ್ರಧಾನವಾದ ಕೃತಯುಗದಲ್ಲಿ ಹುಟ್ಟಿದ್ದಂತಹ ಜೀವರು ಧರ್ಮಾಚರಣೆಯಲ್ಲಿ ಆಸಕ್ತರಾಗಿದ್ದುದರಿಂದ ಪುಣ್ಯವನ್ನು ಸಂಪಾದಿಸಿದವರಾಗಿದ್ದು ಈಗ ಆ ಜೀವರು ಎಲ್ಲಿರುತ್ತಾರೆ? ಓ ಪುಣ್ಯಶಾಲಿಯೇ, ಈ ಅಂಶವನ್ನು ನನಗೆ ತಿಳಿಯ ಹೇಳು. ॥೧೫॥

ಅದರಂತೆಯೇ ತ್ರೇತಾಯುಗದಲ್ಲಾಗಲಿ ದ್ವಾಪರಯುಗದಲ್ಲಾಗಲಿ ಹುಟ್ಟಿದ್ದು ಯುಗಧರ್ಮಕ್ಕೆ ಅನುಸಾರವಾಗಿ ವರ್ಣಾಶ್ರಮಧರ್ಮಗಳನ್ನೂ ದಾನಗಳನ್ನೂ ವ್ರತಗಳನ್ನೂ ಆಚರಿಸುತ್ತಿದ್ದ ಋಷಿಗಳೂ, ಮುನಿಗಳೂ, ಓ ಉತ್ತಮಸ್ವಭಾವದ ಪಿತಾಮಹನೇ, ಈಗ ಎಂದರೆ ಈ ದ್ವಾಪರಯುಗದ ಅಂತ್ಯಭಾಗದಲ್ಲಿ ಅಥವಾ ಕಲಿಯುಗದ ಆದಿಭಾಗದಲ್ಲಿ ಎಲ್ಲಿರುತ್ತಾರೆ? ಅದನ್ನೂ ತಿಳಿಯಿಸು. ॥೧೬॥

ಕಲಾವದ್ಯ ದುರಾಚಾರಾ ಯೇಽತ್ರ ಸಂತಿ ಗತತ್ರಪಾಃ ।
ಅಧ್ಯೇ ಯುಗೇ ಕ್ವ ಯಾಸ್ಯಂತಿ ಪಾಪಿಷ್ಠಾ ದೇವನಿಂದಕಾಃ ॥೧೭॥

ಏತತ್ಸರ್ವಂ ಮಮಾಚಕ್ಷ್ವ ವಿಸ್ತರೇಣ ಮಹಾಮತೇ ।
ಸರ್ವಥಾ ಶ್ರೋತುಕಾಮೋಽಸ್ಮಿ ಯದೇತದ್ಧರ್ಮನಿರ್ಣಯಂ ॥೧೮॥

॥ ವ್ಯಾಸ ಉವಾಚ ॥

ಯೇ ವೈ ಕೃತಯುಗೇ ರಾಜನ್ ಸಂಭವಂತೀಹ ಮಾನವಾಃ ।
ಕೃತ್ವಾ ತೇ ಪುಣ್ಯಕರ್ಮಾಣಿ ದೇವಲೋಕಾನ್ ವ್ರಜಂತಿ ವೈ ॥೧೯॥

ಬ್ರಾಹ್ಮಣಾಃ ಕ್ಷತ್ರಿಯಾಃ ವೈಶ್ಯಾಃ ಶೂದ್ರಾಶ್ಚ ನೃಪಸತ್ತಮ ।
ಸ್ವಧರ್ಮನಿರತಾ ಯಾನ್ತಿ ಲೋಕಾನ್ಕರ್ಮ(ಚಿ)ಜಿತಾನ್ಕಿಲ ॥೨೦॥

---

ಓ ವ್ಯಾಸಮಹರ್ಷಿಯೇ, ಹಾಗೆಯೇ ಈ ಕಲಿಯುಗದಲ್ಲಿ ಯಾವ ಜೀವರು ಧರ್ಮಾಚರಣೆಯನ್ನು ಬಿಟ್ಟು, ಅಧರ್ಮಾಚರಣೆಯಲ್ಲಿ ನಾಚಿಕೆ ಇಲ್ಲದವರಾಗಿ, ಪಾಪಕಾರ್ಯಗಳನ್ನು ಮಾಡುತ್ತಾ, ದೇವರನ್ನೂ ಧರ್ಮಗಳನ್ನೂ ಇಲ್ಲವೆಂದು ಹೇಳುತ್ತಾ ಅಲ್ಲಗಳೆದು ದೂಷಿಸುತ್ತಿರುವರೋ, ಅಂಥ ಜೀವರು ಪುನಃ ಮರಳಿ ಬರುವ ಕೃತ ಯುಗದಲ್ಲಿ ಎಲ್ಲಿಗೆ ಹೋಗಿ ಇರುವರು? ಇದನ್ನೂ ವಿವರಿಸಿ ಹೇಳು. ||೧೭||

ಹೆಚ್ಚಾದ ತಿಳಿವಳಿಕೆಯುಳ್ಳ ಓ ವ್ಯಾಸಮಹರ್ಷಿಯೇ, ಇವೆಲ್ಲವನ್ನೂ ನನಗೆ ವಿವರಿಸಿ ತಿಳಿಯಹೇಳು. ಈ ಯುಗಧರ್ಮಗಳ ಮತ್ತು ಜೀವರ ಸ್ಥಿತಿಗತಿಗಳ ವಿಷಯ ದಲ್ಲಿ ಖಚಿತವಾದ ಸಿದ್ಧಾಂತದ ತಿಳಿವಳಿಕೆಯನ್ನು ನನಗೆ ನೀನು ದಯೆಯಿಟ್ಟು ಕರುಣಿಸು. ಅದನ್ನು ಎಲ್ಲ ಪ್ರಕಾರದಲ್ಲೂ ವಿಶದವಾಗಿ ತಿಳಿಯಲು ನಾನು ತುಂಬ ಕುತೂಹಲವುಳ್ಳವನಾಗಿದೇನೆ. ||೧೮||

ವ್ಯಾಸಮಹರ್ಷಿಯು ಹೀಗೆ ವಿವರಿಸಿ ಹೇಳಿದನು—ಓ ಜನಮೇಜಯ ರಾಜನೇ, ಎಂತಹ ಮನುಷ್ಯರು ಧರ್ಮಪ್ರಧಾನವಾದ ಕೃತಯುಗದಲ್ಲಿ ಈ ಲೋಕ ದಲ್ಲಿ ಹುಟ್ಟುತ್ತಾರೋ ಅಂಥ ಮಾನವಜೀವರು ಪುಣ್ಯಕರಗಳಾದ ಸತ್ಕರ್ಮಗಳನ್ನು ಆಚರಿಸುತ್ತಿದ್ದು ಸ್ವರ್ಗಲೋಕವೇ ಮೊದಲಾದ ಸದ್ಗತಿಯನ್ನು ಪಡೆಯುತ್ತಾರೆ. ||೧೯||

ಎಲೈ ರಾಜಶ್ರೇಷ್ಠನೇ—ಬ್ರಾಹ್ಮಣರೂ ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ ತಮ್ಮ ತಮ್ಮ ವರ್ಣಾಶ್ರಮಗಳಿಗೆ ವಿಹಿತಗಳಾಗಿರುವ ಧರ್ಮಗಳಲ್ಲಿ ಆಸಕ್ತರಾಗಿ ತಮ್ಮ ಕರ್ಮಗಳಿಂದ ಸಂಪಾದಿಸಿದ ಲೋಕಗಳಿಗೆ ಹೋಗುವರು. ||೨೦||

ಸತ್ಯಂ ದಯಾ ತಥಾ ದಾನಂ ಸ್ವದಾರಗಮನಂ ತಥಾ ।
ಅದ್ರೋಹಸ್ಸರ್ವಭೂತೇಷು ಸಮತಾ ಸರ್ವಜಂತುಷು ॥೨೧॥

ಏತತ್ಸಾಧಾರಣಂ ಧರ್ಮಂ ಕೃತ್ವಾ ಸತ್ಯಯುಗೇ ಪುನಃ ।
ಸ್ವರ್ಗಂ ಯಾಂತೀತರೇ ವರ್ಣಾಃ ಧರ್ಮತೋ ರಜಕಾದಯಃ ॥೨೨॥

ತಥಾ ತ್ರೇತಾಯುಗೇ ರಾಜನ್ ದ್ವಾಪರೇಽಥ ಯುಗೇ ತಥಾ ।
ಕಲಾವಸ್ಮಿನ್ ಯುಗೇ ಪಾಪಾ ನರಕಂ ಯಾಂತಿ ಮಾನವಾಃ ॥೨೩॥

ತಾವತ್ತಿಷ್ಠಂತಿ ತೇ ತತ್ರ ಯಾವತ್ಸ್ಯಾದ್ಯುಗಪರ್ಯಯಃ ।
ಪುನಶ್ಚ ಮಾನುಷೇ ಲೋಕೇ ಭವಂತಿ ಭುವಿ ಮಾನವಾಃ ॥೨೪॥

ಯದಾ ಸತ್ಯಯುಗಸ್ಯಾದಿಃ ಕಲೇರಂತಶ್ಚ ಪಾರ್ಥಿವ ।
ತದಾ ಸ್ವರ್ಗಾತ್ಪುಣ್ಯಕೃತೋ ಜಾಯಂತೇ ಕಿಲ ಮಾನವಾಃ ॥೨೫॥

---

ನಿಜವನ್ನು ಹೇಳುವುದು, ಪ್ರಾಣಿಗಳಲ್ಲಿ ದಯೆ, ದಾನಮಾಡುವುದು, ತನ್ನ ಹೆಂಡಿತಿಯಲ್ಲಿ ಧರ್ಮದಿಂದಿರುವುದು, ಕೇಡುಕು ಮಾಡದಿರುವುದು, ಸಮಸ್ತ ಪ್ರಾಣಿಗಳಲ್ಲಿಯೂ ಸಮಾನಭಾವ; ಇವುಗಳು ಎಲ್ಲರಿಗೂ ಸಾಮಾನ್ಯವಾದ ಧರ್ಮಗಳು. ಅಗಸನೇ ಮೊದಲಾಗಿ ಎಲ್ಲ ಇತರ ಜಾತಿಯವರೂ ಕೃತಯುಗದಲ್ಲಿ ಈ ಧರ್ಮಗಳನ್ನಾಚರಿಸಿ ಸ್ವರ್ಗ ಮೊದಲಾದ ಲೋಕಕ್ಕೆ ಹೋಗುವರು. ॥೨೧-೨೨॥

ರಾಜನೇ, ಅದರಂತೆಯೇ ತ್ರೇತಾಯುಗದಲ್ಲಿಯೂ ದ್ವಾಪರಯುಗದಲ್ಲಿಯೂ ಸಾಮಾನ್ಯ ಧರ್ಮಗಳನ್ನಾಚರಿಸಿ ಜನರು ಸ್ವರ್ಗಕ್ಕೆ ಹೋಗುವರು. ಈ ಕಲಿಯುಗದಲ್ಲಿ ಪಾಪಕಾರ್ಯವನ್ನು ಮಾಡುವ ಮನುಷ್ಯರು ನರಕಕ್ಕೆ ಹೋಗುವರು. ॥೨೩॥

ಅವರು ಆ ನರಕದಲ್ಲಿ ಈ ಕಲಿಯುಗವು ಕಳೆದು ಮತ್ತೆ ಕೃತಯುಗವೂ ಮರಳಿ ಕಲಿಯುಗವು ಬರುವವರೆಗೂ ಅಲ್ಲಿದ್ದು ಬಳಿಕ ಭೂಮಿಯಲ್ಲಿ ಮನುಷ್ಯರಾಗಿ ಪುನಃ ಹುಟ್ಟುವರು. ॥೨೪॥

ಎಲೈ ರಾಜನೇ, ಕಲಿಯುಗವು ಕೊನೆಯಾಗಿ ಕೃತಯುಗವು ಯಾವಾಗ ಮೊದಲಾಗುವುದೋ ಆಗ ಪುಣ್ಯವಂತರಾದವರು ಸ್ವರ್ಗದಿಂದ ಭೂಮಿಯಲ್ಲಿ ಮನುಷ್ಯರಾಗಿ ಹುಟ್ಟುವರು. ॥೨೫॥

ಯದಾ ಕಲಿಯುಗಸ್ಯಾದಿಃ ದ್ವಾಪರಸ್ಯ ಕ್ಷಯಸ್ತದಾ ।
ನರಕಾತ್ಪಾಪಿನಃ ಸರ್ವೇ ಭವಂತಿ ಭುವಿ ಮಾನವಾಃ ॥೨೬॥

ಏವಂ ಕಾಲಸಮಾಚಾರೋ ನಾನ್ಯಥಾ ಭೂತ್ಕದಾಚನ ।
ತಸ್ಮಾತ್ಕಲಿರಸತ್ಕರ್ತಾ ತಸ್ಮಿಂಸ್ತು ತಾದೃಶ ಪ್ರಜಾಃ ॥೨೭॥

ಕದಾಚಿದ್ದೈವಯೋಗಾತ್ತು ಪ್ರಾಣಿನಾಂ ವ್ಯತ್ಯಯೋ ಭವೇತ್ ।
ಕಲೌ ಯೇ ಸಾಧವಃ ಕೇಚಿತ್ ದ್ವಾಪರೇ ಸಂಭವನ್ತಿ ತೇ ॥೨೮॥

ತಥಾ ತ್ರೇತಾಯುಗೇ ಕೇಚಿತ್ ಕೇಚಿತ್ಸತ್ಯಯುಗೇ ತಥಾ ।
ದುಷ್ಟಾಃ ಸತ್ಯಯುಗೇ ಯೇ ತು ತೇ ಭವನ್ತಿ ಕಲಾವಪಿ ॥೨೯॥

ಕೃತಕರ್ಮಪ್ರಭಾವೇನ ಪ್ರಾಪ್ನುವಂತ್ಯಸುಖಾನಿ ಚ ।
ಪುನಶ್ಚ ತಾದೃಶಂ ಕರ್ಮ ಕುರ್ವಂತಿ ಯುಗಭಾವತಃ ॥೩೦॥

---

ದ್ವಾಪರಯುಗವು ಕೊನೆಯಾಗಿ ಕಲಿಯುಗವು ಯಾವಾಗ ಪ್ರಾರಂಭವಾಗುವುದೋ ಆಗ ಸಮಸ್ತ ಪಾಪಿಗಳೂ ನರಕದಿಂದ ಬಂದು ಭೂಮಿಯಲ್ಲಿ ಮನುಷ್ಯರಾಗಿ ಹುಟ್ಟುವರು. ॥೨೬॥

ಈ ರೀತಿಯಾಗಿ ಕಾಲಕ್ಕನುಸಾರವಾದ ಆಚಾರವು ಎಂದಿಗೂ ಬೇರೆಯಾಗಲಾರದು. ಆ ಕಾರಣದಿಂದಲೇ ಕಲಿಯುಗವು ಕೆಟ್ಟಕೆಲಸಗಳನ್ನೇ ಮಾಡಿಸುವುದು. ಆ ಯುಗದಲ್ಲಿ ಅದಕ್ಕನುಸಾರವಾದ ಪ್ರಜೆಗಳೇ ಹುಟ್ಟುವರು. ॥೨೭॥

ಒಂದೊಂದು ಸಮಯದಲ್ಲಿ ಪ್ರಬಲವಾದ ಅದೃಷ್ಟವಿಶೇಷಗಳ ಪರಿಪಾಕದಿಂದ ಪ್ರಾಣಿಗಳ ಉತ್ಪತ್ತಿಯು ಯುಗಭೇದವನ್ನು ಪಡೆವುದು. ಹೇಗೆಂದರೆ— ಸತ್ಯಯುಗದಲ್ಲಿ ಹುಟ್ಟಬೇಕಾದ ಸಜ್ಜನರು ಕೆಲವರು ತ್ರೇತಾ ದ್ವಾಪರ ಕಲಿಯುಗಗಳಲ್ಲಿಯೂ ಕಲಿಯುಗದಲ್ಲಿ ಹುಟ್ಟ ಬೇಕಾದ ಕೆಲವರು ದುಷ್ಟರು ಕೃತ ತ್ರೇತಾ ದ್ವಾಪರಯುಗಗಳಲ್ಲಿಯೂ ಹುಟ್ಟುವರು. ಇದಕ್ಕೆ ಆ ಜೀವರು ಮಾಡಿದ್ದ ಕರ್ಮಫಲರೂಪವಾದ ಅದೃಷ್ಟವೇ ಕಾರಣವು. ॥೨೯॥

ಜೀವರು ತಾವು ಮಾಡಿದ ಕರ್ಮದ ಮಹಿಮೆಯಿಂದ ಸುಖದುಃಖಗಳನ್ನು ಹೊಂದುವರು. ಮತ್ತೆ ಯುಗದ ಸ್ವಭಾವಕ್ಕನುಸಾರವಾಗಿಯೂ ಸುಕೃತ ದುಷ್ಕೃತ ಕರ್ಮಗಳನ್ನು ಮಾಡುವರು. ॥೩೦॥

॥ ಜನಮೇಜಯ ಉವಾಚ ॥

**ಯುಗಧರ್ಮಾನ್ ಮಹಾಭಾಗ ಬ್ರೂಹಿ ಸರ್ವಾನಶೇಷತಃ ।**
**ಯಸ್ಮಿನ್ಯೈ ಯಾದೃಶೋ ಧರ್ಮಃ ಜ್ಞಾತುಮಿಚ್ಛಾಮಿ ತಂ ತಥಾ॥೩೧॥**

॥ ವ್ಯಾಸ ಉವಾಚ ॥

**ನಿಬೋಧ ನೃಪಶಾರ್ದೂಲ ದೃಷ್ಟಾಂತಂ ತೇ ಬ್ರವೀಮ್ಯಹಂ ।**
**ಸಾಧೂನಾಮಪಿ ಚೇತಾಂಸಿ ಯುಗಭಾವಾದ್ಭ್ರಮಂತಿ ಹಿ ॥೩೨॥**

**ಪಿತುರ್ಯಥಾ ತೇ ರಾಜೇಂದ್ರ ಬುದ್ಧಿರ್ವಿಪ್ರಾವಹೇಲನೇ ।**
**ಕೃತ್ವಾ ವೈ ಕಲಿನಾ ರಾಜನ್ ಧರ್ಮಜ್ಞಸ್ಯ ಮಹಾತ್ಮನಃ ॥೩೩॥**

**ಅನ್ಯಥಾ ಕ್ಷತ್ರಿಯೋ ರಾಜಾ ಯಯಾತಿಕುಲಸಂಭವಃ ।**
**ತಾಪಸಸ್ಯ ಗಳೇ ಸರ್ಪಂ ಮೃತಂ ಕಸ್ಮಾದಯೋಜಯತ್ ॥೩೪॥**

---

ಜನಮೇಜಯರಾಜನು ಹೇಳಿದನು—ಎಲೈ ಮಹಾನುಭಾವನೇ, ಎಲ್ಲ ಯುಗಗಳ ಧರ್ಮಗಳನ್ನೂ ಹೇಳು. ಯಾವ ಯುಗದಲ್ಲಿ ಯಾವ ಧರ್ಮವಿರುವುದು? ಅದನ್ನು ತಿಳಿಯಲು ನಾನು ಅಪೇಕ್ಷಿಸುತ್ತೇನೆ. ||೩೧||

ವ್ಯಾಸನು ಹೇಳಿದನು - ಎಲೈ ರಾಜಶ್ರೇಷ್ಠನೇ, ಯುಗಧರ್ಮಗಳನ್ನು ನಾನು ಹೇಳುವೆನು. ಅವುಗಳನ್ನು ನೀನು ಕೇಳಿ ಜಾಗರೂಕನಾಗಿ ಆಚರಿಸು. ಇಲ್ಲದಿದ್ದರೆ ಆಯಾ ಯುಗಧರ್ಮಾನುಸಾರವಾಗಿ ಬುದ್ಧಿಯು ವ್ಯತ್ಯಾಸಹೊಂದುವುದು. ಸಜ್ಜನರ ಮನಸ್ಸೂ ಯುಗಸ್ವಭಾವದಿಂದ ಭ್ರಾಂತವಾಗುವುದುಂಟು. ಈ ವಿಷಯದಲ್ಲಿ ದೃಷ್ಟಾಂತವನ್ನು ಹೇಳುವೆನು ಕೇಳು. ||೩೨||

ರಾಜಶ್ರೇಷ್ಠನೇ, ಧರ್ಮಗಳನ್ನು ತಿಳಿದ ಮಹಾತ್ಮನಾದ ನಿನ್ನ ತಂದೆಯ ಬುದ್ಧಿಯು ಕಲಿಯ ಮಹಿಮೆಯಿಂದ ಬ್ರಾಹ್ಮಣನನ್ನು ಅಪಮಾನಗೊಳಿಸುವ ಕೆಲಸದಲ್ಲಿ ಉದ್ಯುಕ್ತವಾಯಿತು. ||೩೩||

ಯುಗಾನುಸಾರವಾಗಿ ಬುದ್ಧಿಯು ವ್ಯತ್ಯಾಸಹೊಂದುವುದುಂಟು. ಎಂಬುದು ನಿಜವಲ್ಲದಿದ್ದರೆ ಯಯಾತಿಯ ವಂಶದಲ್ಲಿ ಹುಟ್ಟಿದವನೂ ಶೂರನೂ ಆದ ರಾಜನು ತಪಸ್ಸನ್ನು ಮಾಡುತ್ತಿದ್ದ ಋಷಿಯ ಕುತ್ತಿಗೆಗೆ ಸತ್ತಹಾವನ್ನು ಹಾಕುತ್ತಿದ್ದನೇ? ||೩೪||

ಸರ್ವಂ ಯುಗಬಲಂ ರಾಜನ್ ವೇದಿತವ್ಯಂ ವಿಜಾನತಾ ।
ಪ್ರಯತ್ನೇನ ಹಿ ಕರ್ತವ್ಯಂ ಧರ್ಮಕರ್ಮವಿಶೇಷತಃ ॥೩೫॥

ನೂನಂ ಸತ್ಯಯುಗೇ ರಾಜನ್ ಬ್ರಾಹ್ಮಣಾ ವೇದಪಾರಗಾಃ ।
ಪರಾಶಕ್ತ್ಯರ್ಚನರತಾಃ ದೇವೀದರ್ಶನಲಾಲಸಾಃ ॥೩೬॥

ಗಾಯತ್ರೀಪ್ರಣವಾಸಕ್ತಾ ಗಾಯತ್ರೀಧ್ಯಾನಕಾರಿಣಃ ।
ಗಾಯತ್ರೀಜಪಸಂಸಕ್ತಾ ಮಾಯಾಬೀಜೈಕಜಾಪಿನಃ ॥೩೭॥

ಗ್ರಾಮೇ ಗ್ರಾಮೇ ಪರಾಂಬಾಯಾಃ ಪ್ರಾಸಾದಕರಣೋತ್ಸುಕಾಃ ।
ಸ್ವಕರ್ಮನಿರತಾಃ ಸರ್ವೇ ಸತ್ಯಶೌಚದಯಾನ್ವಿತಾಃ ॥೩೮॥

ತ್ರಯ್ಯುಕ್ತ ಕರ್ಮನಿರತಾಃ ತತ್ವಜ್ಞಾನವಿಶಾರದಾಃ ।
ಅಭವನ್ ಕ್ಷತ್ರಿಯಾಸ್ತತ್ರ ಪ್ರಜಾರಕ್ಷಣತತ್ಪರಾಃ ॥೩೯॥

---

ಎಲೈ ದೊರೆಯೇ--- ತಿಳಿವಳಿಕೆಯುಳ್ಳವನು ಎಲ್ಲವೂ ಕಾಲಬಲದಿಂದ ನಡೆವುದೆಂದು ತಿಳಿಯಬೇಕು ಮತ್ತು ವಿಶೇಷವಾದ ಪ್ರಯತ್ನದಿಂದ ಧರ್ಮಕಾರ್ಯಗಳನ್ನು ಮಾಡಬೇಕು. ॥೩೫॥

ರಾಜನೇ, ಕೃತಯುಗದಲ್ಲಿ ಬ್ರಾಹ್ಮಣರು ವೇದವನ್ನು ಸಂಪೂರ್ಣವಾಗಿ ತಿಳಿದವರಾಗಿಯೂ ಮೂಲಪ್ರಕೃತಿಯಾದ ಭುವನೇಶ್ವರೀ ದೇವಿಯ ಪೂಜೆಯಲ್ಲಾಸಕ್ತರಾಗಿಯೂ ಉಪಾಸನೆಯಿಂದ ಆ ದೇವಿಯ ದರ್ಶನ ಮಾಡುವುದರಲ್ಲಿ ಅತ್ಯಾಸಕ್ತರಾಗಿಯೂ ಇದ್ದರು. ॥೩೬॥

ಗಾಯತ್ರೀಮಂತ್ರದಲ್ಲಿಯೂ ಪ್ರಣವಮಂತ್ರದಲ್ಲಿಯೂ ಆಸಕ್ತರಾಗಿ ಗಾಯತ್ರೀ ದೇವಿಯನ್ನು ಧ್ಯಾನಮಾಡುತ್ತಾ ಗಾಯತ್ರಿಯ ಮಂತ್ರವನ್ನು ಜಪಿಸುವರು. ಮತ್ತು ಮಾಯಾಬೀಜವಾದ ಭುವನೇಶ್ವರಿಯ ಏಕಾಕ್ಷರೀಮಂತ್ರವನ್ನೂ ಜಪಿಸುವರು.॥೩೭॥

ಪ್ರತಿಯೊಂದು ಗ್ರಾಮದಲ್ಲಿಯೂ ಪರಾಶಕ್ತಿಯ ದೇವಸ್ಥಾನವನ್ನು ಕಟ್ಟಿಸುವುದರಲ್ಲಿ ಉತ್ಸಾಹ ಉಳ್ಳವರಾಗಿ ತಂತಮ್ಮ ವರ್ಣಾಶ್ರಮ ಧರ್ಮಗಳನ್ನು ನಡೆಸುತ್ತ ಎಲ್ಲರೂ ನಿಜವನ್ನು ಹೇಳುವಿಕೆ, ಶುಚಿತ್ವ, ದಯೆ ಇವುಗಳಿಂದ ಕೂಡಿದ್ದರು. ॥೩೮॥

ಬ್ರಾಹ್ಮಣರು ವೇದದಲ್ಲಿ ಹೇಳಿರುವ ಕರ್ಮಗಳಲ್ಲಿ ಆಸಕ್ತರಾಗಿಯೂ ವೇದಾಂತತತ್ವವನ್ನು ಸಂಪೂರ್ಣವಾಗಿ ತಿಳಿದವರಾಗಿಯೂ ಇದ್ದರು. ಕ್ಷತ್ರಿಯರು ಪ್ರಜೆಗಳನ್ನು ರಕ್ಷಿಸುವುದರಲ್ಲಿ ಆಸಕ್ತರಾಗಿದ್ದರು. ॥೩೯॥

ವೈಶ್ಯಾಸ್ತು ಕೃಷಿವಾಣಿಜ್ಯಗೋಸೇವಾನಿರತಾಸ್ತಥಾ ।
ಶೂದ್ರಾಸ್ಸೇವಾಪರಾಸ್ತತ್ರ ಪುಣ್ಯೇ ಸತ್ಯಯುಗೇ ನೃಪ ॥೪೦॥

ಪರಾಂಬಾಪೂಜನಾಸಕ್ತಾಃ ಸರ್ವೇ ವರ್ಣಾಃ ಪರೇ ಯುಗೇ ।
ತಥಾ ತ್ರೇತಾಯುಗೇ ಕಿಂಚಿನ್ನ್ಯೂನಾ ಧರ್ಮಸ್ಯ ಸಂಸ್ಥಿತಿಃ ॥೪೧॥

ದ್ವಾಪರೇ ಚ ವಿಶೇಷೇಣ ನ್ಯೂನಾ ಸತ್ಯಯುಗಸ್ಥಿತಿಃ ।
ಪೂರ್ವಂ ಯೇ ರಾಕ್ಷಸಾ ರಾಜಂಸ್ತೇ ಕಲೌ ಬ್ರಾಹ್ಮಣಾಃ ಸ್ಮೃತಾಃ ॥೪೨॥

ಪಾಖಂಡನಿರತಾಃ ಪ್ರಾಯೋ ಭವಂತಿ ಜನವಂಚಕಾಃ ।
ಅಸತ್ಯವಾದಿನಃ ಸರ್ವೇ ವೇದ ಧರ್ಮವಿವರ್ಜಿತಾಃ ॥೪೩॥

ದಾಂಭಿಕಾ ಲೋಕೇ ಚತುರಾಃ ಮಾನಿನೋ ವೇದವರ್ಜಿತಾಃ ।
ಶೂದ್ರಸೇವಾಪರಾಃ ಕೇಚಿತ್ ನಾನಾಧರ್ಮಪ್ರವರ್ತಕಾಃ ॥೪೪॥

---

ವೈಶ್ಯರು ವ್ಯವಸಾಯ, ವ್ಯಾಪಾರ, ಗೋಸೇವೆ ಇವುಗಳಲ್ಲಾಸಕ್ತರಾಗಿದ್ದರು. ಶೂದ್ರರು ಆಕೃತಯುಗದಲ್ಲಿ ಮೇಲಿನ ಮೂರು ವರ್ಣದವರ ಸೇವೆಯಲ್ಲಿ ಆಸಕ್ತರಾಗಿದ್ದರು. ||೪೦||

ಶ್ರೇಷ್ಠವಾದ ಕೃತಯುಗದಲ್ಲಿ ಸಮಸ್ತ ವರ್ಣದವರೂ ಪರಾದೇವತೆಯಾದ ಭುವನೇಶ್ವರೀದೇವಿಯ ಪೂಜೆಯಲ್ಲಿ ಆಸಕ್ತರಾಗಿದ್ದರು. ತ್ರೇತಾಯುಗದಲ್ಲಿ ಧರ್ಮದ ಆಚರಣೆಯಲ್ಲಿ ಆದರದ ಸ್ಥಿತಿಯು ಸ್ವಲ್ಪ ಕಡಮೆಯಾಗಿರುವುದು. ||೪೧||

ದ್ವಾಪರಯುಗದಲ್ಲಿ ಕೃತಯುಗಕ್ಕಿಂತಲೂ ಧರ್ಮವು ವಿಶೇಷ ಕಡಮೆಯಾಗುವುದು. ಕೃತಯುಗದಲ್ಲಿ ರಾಕ್ಷಸರಾಗಿದ್ದವರು ಕಲಿಯುಗದಲ್ಲಿ ಬ್ರಾಹ್ಮಣರಾಗಿ ಹುಟ್ಟಿ ಧರ್ಮವನ್ನೆಲ್ಲ ನಾಶಮಾಡುವರು. ||೪೨||

ಕಲಿಯುಗದಲ್ಲಿ ಜನರು ವಿಶೇಷವಾಗಿ ಡಂಭಾಚಾರವಾದ ಪಾಖಂಡಮತವನ್ನವಲಂಬಿಸಿ ಜನರನ್ನು ಮೋಸಗೊಳಿಸುವರು. ಎಲ್ಲರೂ ಸುಳ್ಳನ್ನು ಹೇಳುತ್ತಾ ವೇದ ಧರ್ಮವನ್ನು ಬಿಟ್ಟಿರುವರು. ||೪೩||

ಕಲಿಯುಗದಲ್ಲಿ ಹುಟ್ಟಿದ ಬ್ರಾಹ್ಮಣರು ದಂಭಾಚಾರದವರು. ಲೋಕವ್ಯವಹಾರದಲ್ಲಿ ಚತುರರು, ಆತ್ಮಾಭಿಮಾನವುಳ್ಳವರು, ವೇದಾಧ್ಯಯನವಿಲ್ಲದವರು, ಕೆಲವರು

ವೇದನಿಂದಾಕರಾಃ ಕ್ರೂರಾಃ ಧರ್ಮಭ್ರಷ್ಟಾತಿ ವಾಮುಕಾಃ ।
ಯಥಾ ಯಥಾ ಕಲಿರ್ವೃದ್ಧಿಂ ಯಾತಿ ರಾಜಂಸ್ತಥಾ ತಥಾ ॥೪೫॥

ಧರ್ಮಸ್ಯ ಸತ್ಯಮೂಲಸ್ಯ ಕ್ಷಯಃ ಸರ್ವಾತ್ಮನಾ ಭವೇತ್ ।
ತಥೈವ ಕ್ಷತ್ರಿಯಾಃ ವೈಶ್ಯಾಃ ಶೂದ್ರಾಶ್ಚ ಧರ್ಮವರ್ಜಿತಾಃ ॥೪೬॥

ಅಸತ್ಯವಾದಿನಃ ಪಾಪಾಸ್ತಥಾ ವರ್ಣೇತರಾಃ ಕಲೌ ।
ಶೂದ್ರಧರ್ಮರತಾ ವಿಪ್ರಾಃ ಪ್ರತಿಗ್ರಹಪರಾಯಣಾಃ ॥೪೭॥

ಭವಿಷ್ಯಂತಿ ಕಲೌ ರಾಜನ್ ಯುಗೇ ವೃದ್ಧಿಂ ಗತೇ ಕಿಲ ।
ಕಾಮಚಾರಾಃ ಸ್ತ್ರಿಯಃ ಕಾಮಲೋಭಮೋಹಸಮನ್ವಿತಾಃ ॥೪೮॥

ಪಾಪಾ ಮಿಥ್ಯಾಭಿವಾದಿನ್ಯಃ ಸದಾ ಕ್ಲೇಶಕರಾ ನೃಪ ।
ಸ್ವಭರ್ತೃವಂಚಕಾ ನಿತ್ಯಂ ಧರ್ಮಭಾಷಣಪಂಡಿತಾಃ ॥೪೯॥

---

ಶೂದ್ರರ ಸೇವೆಯನ್ನು ಮಾಡುವುದರಲ್ಲಾಸಕ್ತರಾಗಿ ಬೇರೆ ಬೇರೆ ಮತಧರ್ಮಗಳನ್ನು ಪ್ರಚಾರಪಡಿಸುವವರಾಗಿರುವರು. ॥೪೪॥

ಅವರು ವೇದಗಳನ್ನು ನಿಂದಿಸುತ್ತಾ ಕಠಿನ ಸ್ವಭಾವದವರಾಗಿ ಅತಿಯಾಗಿ ಮಾತನಾಡುವರು. ಕಲಿಯು ಹೇಗೆ ಹೆಚ್ಚುವುದೋ ಹಾಗೆ ಹಾಗೆ ಕೃತಯುಗಕ್ಕೆ ಮೂಲಕಾರಣವಾದ ಧರ್ಮದ ನಾಶವು ಸರ್ವವಿಧಗಳಲ್ಲಿಯೂ ಉಂಟಾಗುವುದು. ॥೪೫॥

ಕಲಿಯುಗದಲ್ಲಿ ಬ್ರಾಹ್ಮಣರಂತೆಯೇ ಕ್ಷತ್ರಿಯರೂ ವೈಶ್ಯರೂ ಶೂದ್ರರೂ ತಮ್ಮ ತಮ್ಮ ಧರ್ಮಗಳನ್ನು ಬಿಡುವರು. ಇತರ ವರ್ಣದವರೆಲ್ಲರೂ ಸುಳ್ಳನ್ನು ಹೇಳುತ್ತಾ ಪಾಪಿಗಳಾಗುವರು. ॥೪೬॥

ಬ್ರಾಹ್ಮಣರು ಶೂದ್ರರ ಧರ್ಮವನ್ನು ಆಚರಿಸುವುದರಲ್ಲಿ ಆಸಕ್ತರಾಗಿಯೂ ದಾನವನ್ನು ತೆಗೆದುಕೊಳ್ಳುವುದರಲ್ಲಿ ನಿರತರಾಗಿಯೂ ಇರುವರು! ಕಲಿಯುಗವು ವೃದ್ಧಿಯನ್ನು ಹೊಂದುತ್ತಾ ಇದ್ದಹಾಗೆಲ್ಲ ಇವೆಲ್ಲವೂ ಹೆಚ್ಚಾಗಿ ನಡೆಯುತ್ತಾ ಬರುವುದು. ॥೪೭॥

ರಾಜನೇ ಕೇಳು—ಕಲಿಯುಗದಲ್ಲಿ ಸ್ತ್ರೀಯರು ತಮ್ಮ ಮನಬಂದಂತೆ ನಡೆವರು. ಕಾಮ, ಅತ್ಯಾಸೆ, ಅಜ್ಞಾನ ಇವುಗಳಿಂದ ಕೂಡಿರುವರು. ಪಾಪಕಾರ್ಯಗಳನ್ನು ಮಾಡುತ್ತಲೂ ಸುಳ್ಳನ್ನು ಹೇಳುತ್ತಲೂ ಯಾವಾಗಲೂ ಕಷ್ಟವನ್ನು ಕೊಡುವುದರ

ಭವಂತ್ಯೇವಂ ವಿಧಾ ನಾರ್ಯಃ ಪಾಪಿಷ್ಠಾಶ್ಚ ಕಲೌ ಯುಗೇ ।
ಆಹಾರಶುದ್ಧ್ಯಾ ನೃಪತೇ ಚಿತ್ತಶುದ್ಧಿಸ್ತು ಜಾಯತೇ ॥೫೦॥

ಶುದ್ಧೇ ಚಿತ್ತೇ ಪ್ರಕಾಶಃ ಸ್ಯಾತ್ ಧರ್ಮಸ್ಯ ನೃಪಸತ್ತಮ ।
ವೃತ್ತಸಂಕರದೋಷೇಣ ಜಾಯತೇ ಧರ್ಮಸಂಕರಃ ॥೫೧॥

ಧರ್ಮಸ್ಯ ಸಂಕರೇ ಜಾತೇ ನೂನಂ ಸ್ಯಾದ್ವರ್ಣಸಂಕರಃ ।
ಏವಂ ಕಲಿಯುಗೇ ಭೂಪ ಸರ್ವಧರ್ಮವಿವರ್ಜಿತೇ ॥೫೨॥

ಸ್ವವರ್ಣಧರ್ಮವಾರ್ತೈಷಾ ನ ಕುತ್ರಾಪ್ಯುಪಲಭ್ಯತೇ ।
ಮಹಾಂತೋಽಪಿ ಚ ಧರ್ಮಜ್ಞಾ ಅಧರ್ಮಂ ಕುರ್ವತೇ ನೃಪ॥೫೩॥

---

ಲ್ಲಾಸಕ್ತರಾಗಿಯೂ ತಮ್ಮ ತಮ್ಮ ಗಂಡಂದಿರಿಗೆ ಮೋಸಮಾಡುವವರಾಗಿಯೂ ಧರ್ಮದ ಮಾತನಾಡುವುದರಲ್ಲಿ ಬುದ್ಧಿವಂತೆಯರಾಗಿಯೂ ಇರುವರು. ॥೪೮-೪೯॥

ಕಲಿಯುಗದಲ್ಲಿ ಸ್ತ್ರೀಯರು ಈ ರೀತಿಯಲ್ಲಿ ಪಾಪಿಗಳಾಗುವರು. ರಾಜನೇ, ಮನುಷ್ಯನಿಗೆ ಆಹಾರವು ಶುದ್ಧವಾದುದಾಗಿದ್ದರೆ ಚಿತ್ತವು ಶುದ್ಧವಾಗಿರುವುದು. ॥೫೦॥

ರಾಜನೇ—ಚಿತ್ತವು ಶುದ್ಧವಾದರೆ ಆ ಚಿತ್ತದಲ್ಲಿ ಧರ್ಮದ ಅರಿವು ಸ್ಫುರಿಸುವುದು. ಮತ್ತು ಹೆಚ್ಚುವುದು. ಒಬ್ಬರ ಧರ್ಮವನ್ನು ಮತ್ತೊಬ್ಬರು ಆಚರಿಸುವುದೆಂಬ ವೃತ್ತಸಂಕರದೋಷದಿಂದ ಧರ್ಮದ ಸಂಕರವಾಗುವುದು ಎಂದರೆ ಶುದ್ಧವಾದ ಧರ್ಮವು ಇರುವುದಿಲ್ಲವು. ॥೫೧॥

ಧರ್ಮಸಂಕರವಾದರೆ ವರ್ಣಸಂಕರವು ಆಗಿಯೇ ಆಗುವುದು. ಹೀಗೆ ಕಲಿಯುಗದಲ್ಲಿ ಶುದ್ಧವಾಗಿರುವ ಎಲ್ಲ ವರ್ಣಾಶ್ರಮಧರ್ಮಗಳೂ ನಾಶವಾಗಲಾಗಿ ಇದು ನನ್ನ ವರ್ಣ ಇದು ನನ್ನ ಧರ್ಮ ಎಂಬೀ ಮಾತೂ ಕೂಡ ಎಲ್ಲಿಯೂ ಕೇಳಿಸುವುದಿಲ್ಲವು. ॥೫೨॥

ರಾಜನೇ—ಧರ್ಮವನ್ನು ತಿಳಿದಿರುವವರಾದ ದೊಡ್ಡವರೂ ಕೂಡ ಅಧರ್ಮವನ್ನು ಆಚರಿಸುವರು! ಇದು ಕಲಿಯುಗದ ಸ್ವಭಾವವು. ಇದನ್ನು ಯಾರೂ ಪರಿಹರಿಸಲಾರರು. ॥೫೩॥

ಕಲಿಸ್ವಭಾವಏವೈಷ ಪರಿಹಾರ್ಯೋ ನ ಕೇನ ಚಿತ್ ।
ತಸ್ಮಾದತ್ರ ಮನುಷ್ಯಾಣಾಂ ಸ್ವಭಾವಾತ್ಪಾಪಕಾರಿಣಾಂ ॥೫೪॥

ನಿಷ್ಕೃತಿರ್ನ ಹಿ ರಾಜೇಂದ್ರ ಸಾಮಾನ್ಯೋಽಪಾಯತೋ ಭವೇತ್ ।

॥ ಜನಮೇಜಯ ಉವಾಚ ॥

ಭಗವನ್ ಸರ್ವಧರ್ಮಜ್ಞ ಸರ್ವಶಾಸ್ತ್ರವಿಶಾರದ ॥೫೫॥

ಕಲಾವಧರ್ಮಬಹುಳೇ ನರಾಣಾಂ ಕಾಗತಿರ್ಭವೇತ್ ।
ಯದ್ಯಸ್ತಿ ತದುಪಾಯ ಶ್ಚೇದ್ದಯಯಾ ತಂ ವದಸ್ವ ಮೇ ॥೫೬॥

॥ ವ್ಯಾಸ ಉವಾಚ ॥

ಏಕ ಏವ ಮಹಾರಾಜ ತತ್ರೋಪಾಯೋಽಸ್ತಿ ನಾಪರಃ ।
ಸರ್ವದೋಷನಿರಾಸಾರ್ಥಂ ಧ್ಯಾಯೇದ್ದೇವೀಪದಾಂಬುಜಂ ॥೫೭॥

ನ ಸಂತ್ಯಘಾನಿ ತಾವಂತಿ ಯಾವತೀ ಶಕ್ತಿರಸ್ತಿ ಹಿ ।
ನಾಮ್ನಃ ದೇವ್ಯಾಃ ಪಾಪದಾಹೇ ತಸ್ಮಾದ್ಭೀತಿಃ ಕುತೋ ನೃಪ ॥೫೮॥

---

ರಾಜಶ್ರೇಷ್ಠನೇ, ಈ ಲೋಕದಲ್ಲಿ ಪರರ ಪ್ರೇರಣೆಯಿಲ್ಲದೆ ತಾನಾಗಿಯೇ ಸ್ವಭಾವವಾಗಿ ಪಾಪಕಾರ್ಯವನ್ನು ಮಾಡುವ ಮನುಷ್ಯರಿಗೆ ಯುಗಧರ್ಮವೂ ಸೇರಿದರೆ ಅವರು ಮಾಡುವ ಪಾಪಕಾರ್ಯಗಳಿಗೆ ಪ್ರಾಯಶ್ಚಿತ್ತದಿಂದ ಪರಿಹಾರವನ್ನು ಸಾಮಾನ್ಯವಾದ ಉಪಾಯದಿಂದ ಮಾಡಲು ಸಾಧ್ಯವಾಗುವುದಿಲ್ಲ. ||೫೪||

ಸರ್ವಶಾಸ್ತ್ರಗಳನ್ನೂ ತಿಳಿದು ಎಲ್ಲ ಧರ್ಮಗಳನ್ನೂ ಬಲ್ಲ ಮಹಾಮಹಿಮನಾದ ವ್ಯಾಸಮುನಿಯೇ, ಅಧರ್ಮವೇ ಹೆಚ್ಚಾಗಿರುವ ಈ ಕಲಿಯುಗದಲ್ಲಿ ಮನುಷ್ಯರಿಗೆ ಯಾವ ದುರ್ಗತಿಯುಂಟಾಗುವುದು ? ಅದನ್ನು ತಪ್ಪಿಸಿಕೊಳ್ಳಲು ಉಪಾಯವಿದ್ದರೆ ದಯೆಯಿಟ್ಟು ಅದನ್ನು ನನಗೆ ಹೇಳು. ||೫೫-೫೬||

ಮಹಾರಾಜನೇ ಕೇಳು—ಕಲಿಯುಗದಲ್ಲಿ ಸಂಭವಿಸುವ ಸಮಸ್ತ ದೋಷಗಳ ನಿವಾರಣೆಗೆ ದೇವಿಯ ಪಾದಪದ್ಮವನ್ನು ಧ್ಯಾನಮಾಡುವ ಒಂದು ಉಪಾಯವು ಮಾತ್ರ ಇರುವುದು. ಅದು ಹೊರತು ಬೇರೆಯಿಲ್ಲ. ||೫೭||

ರಾಜನೇ, ದೇವಿಯ ನಾಮಕ್ಕೆ ಪಾಪವನ್ನು ನಾಶಮಾಡುವ ವಿಷಯದಲ್ಲಿ ಎಷ್ಟು ಶಕ್ತಿಯು ಇರುವುದೋ ಅಷ್ಟು ಪಾಪಗಳೇ ಇಲ್ಲದಿರುವಾಗ ನಮಗೆ ಭಯವೇಕೆ ? ||೫೮||

**ಅವಶೇನಾಪಿ ಯನ್ನಾಮ ಲೀಲಯೋಚ್ಚರಿತಂ ಯದಿ ।**
**ಕಿಂ ಕಿಂ ದದಾತಿ ತಜ್ಜ್ಞಾತುಂ ಸಮರ್ಥಾ ನ ಹರಾದಯಃ ॥೫೯॥**

**ಪ್ರಾಯಶ್ಚಿತ್ತಂ ತು ಪಾಪಾನಾಂ ಶ್ರೀದೇವೀನಾಮಸಂಸ್ಮೃತಿಃ ।**
**ತಸ್ಮಾತ್ಕಲಿಭಯಾದ್ರಾಜನ್ ಪುಣ್ಯಕ್ಷೇತ್ರೇ ವಸೇನ್ನರಃ ॥೬೦॥**

**ನಿರಂತರಂ ಪರಾಂಬಾಯಾ ನಾಮಸಂಸ್ಮರಣಂ ಚರೇತ್ ।**
**ಛಿತ್ವಾ ಭಿತ್ವಾ ಚ ಭೂತಾನಿ ಹತ್ವಾ ಸರ್ವಮಿದಂ ಜಗತ್ ॥೬೧॥**

**ದೇವೀಂ ನಮತಿ ಭಕ್ತ್ಯಾ ಯೋ ನ ಸ ಪಾಪೈರ್ವಿಲಿಪ್ಯತೇ ।**
**ರಹಸ್ಯಂ ಸರ್ವಶಾಸ್ತ್ರಾಣಾಂ ಮಯಾ ರಾಜನ್ನುದೀರಿತಂ ॥೬೨॥**

**ವಿಮೃಶ್ಯೈದಶೇಷೇಣ ಭಜ ದೇವೀಪದಾಂಬುಜಂ ।**
**ಅಜಪಾಂ ನಾಮ ಗಾಯತ್ರೀಂ ಜಪನ್ತಿ ನಿಖಿಲಾ ಜನಾಃ ।**
**ಮಹಿಮಾನಂ ನ ಜಾನಂತಿ ಮಾಯಾಯಾ ವೈಭವಂ ಮಹತ್ ॥೬೩॥**

---

ಅಜ್ಞಾನದಿಂದ ಆಟಕ್ಕಾದರೂ ದೇವಿಯ ನಾಮವನ್ನು ಉಚ್ಚರಿಸಿದರೆ ಅದು ಯಾವ ಯಾವ ಫಲವನ್ನು ಕೊಡುವುದೆಂಬುದನ್ನು ತಿಳಿಯಲು ಶಿವನೇ ಮೊದಲಾದ ದೇವತೆಗಳಿಗೂ ಶಕ್ತಿಯಿರುವುದಿಲ್ಲ. ॥೫೯॥

ಪಾಪಗಳ ನಿವಾರಣೆಗೆ ಪ್ರಾಯಶ್ಚಿತ್ತವು ಶ್ರೀ ಭುವನೇಶ್ವರೀದೇವಿಯ ನಾಮ ಸ್ಮರಣೆಯೊಂದೇ ಸಾಕು. ಆದುದರಿಂದ ರಾಜನೇ ಕೇಳು, ಕಲಿಭಯವಿದ್ದವರು ಪುಣ್ಯಕ್ಷೇತ್ರದಲ್ಲಿ ವಾಸಮಾಡುತ್ತ ಪ್ರತಿದಿನವೂ ಪರಾಶಕ್ತಿಯ ನಾಮಸ್ಮರಣೆಯನ್ನು ಮಾಡುತ್ತಿರಬೇಕು. ॥೬೦॥

ಯಾವ ಮನುಷ್ಯನು ಭಕ್ತಿಯಿಂದ ದೇವಿಗೆ ನಮಸ್ಕಾರಮಾಡುವನೋ ಅವನು ಪ್ರಾಣಿಗಳನ್ನು ಹಿಡಿದು ಶೀಳಿ ಸಮಸ್ತ ಜಗತ್ತನ್ನೂ ನಾಶಮಾಡಿದರೂ ಪಾಪವು ಅವನನ್ನು ಹೊಂದುವುದಿಲ್ಲ. ರಾಜನೇ, ಹೀಗೆಂಬ ಸಮಸ್ತಶಾಸ್ತ್ರಗಳ ಗುಟ್ಟನ್ನೂ ನಿನಗೆ ನಾನು ಹೇಳಿರುವೆನು. ನೀನು ಇವುಗಳನ್ನೆಲ್ಲವನ್ನೂ ಸಂಪೂರ್ಣವಾಗಿ ವಿಚಾರಮಾಡಿ ತಿಳಿದು ದೇವಿಯ ಪಾದಕಮಲವನ್ನು ಸೇವಿಸು. ॥೬೧-೬೨॥

ಭೂಮಿಯಲ್ಲಿ ಸಮಸ್ತಜನರೂ ಅಜಪಾ ಎಂಬ ಗಾಯತ್ರೀಮಂತ್ರವನ್ನು ಜಪಿಸುತ್ತಿರುವರು. ಅಜ್ಞಾನದಿಂದ ಆ ಮಂತ್ರದ ಮಹಿಮೆಯನ್ನೂ ಅದರ ಮಹಾ

**ಗಾಯತ್ರೀಂ ಬ್ರಾಹ್ಮಣಾಸ್ಸರ್ವೇ ಜಪನ್ತಿ ಹೃದಯಾಂತರೇ ।**
**ಮಹಿಮಾನಂ ನ ಜಾನಂತಿ ಮಾಯಾಯಾ ವೈಭವಂಮಹತ್ ॥೬೪॥**

**ಏತತ್ಸರ್ವಂ ಸಮಾಖ್ಯಾತಂ ಯತ್ಪೃಷ್ಟಂ ತತ್ತ್ವಯಾ ನೃಪ ।**
**ಯುಗಧರ್ಮ ವ್ಯವಸ್ಥಾಯಾಂ ಕಿಂ ಭೂಯಃ ಶ್ರೋತುಮಿಚ್ಛಸಿ॥೬೫॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ**
**ಏಕಾದಶೋಽಧ್ಯಾಯಃ.**

---

ವೈಭವವನ್ನೂ ತಿಳಿಯರು ! ಈ ಅಜ್ಞಾನವು ದೇವಿಯ ಮಾಯೆಯ ಮಹಿಮೆಯಾಗಿರುತ್ತದೆ. ದೇವಿಯ ಭಕ್ತಿಯಿಂದಲೇ ಈ ಅಜ್ಞಾನವನ್ನೂ ಕಳೆದುಕೊಂಡು ಮಂತ್ರದ ಸ್ವರೂಪವನ್ನು ತಿಳಿದು ಯಾರು ಜಪಮಾಡುವರೋ ಅವರು ಮುಕ್ತರಾಗುವರು. "ಅಜಪಾ ಎಂಬ ಹೆಸರುಳ್ಳ ಗಾಯತ್ರೀಮಂತ್ರವನ್ನು ಜೀವನು ಯಾವಾಗಲೂ ಜಪಿಸುವನು. ಅಜಪಾ ಗಾಯತ್ರಿಯನ್ನು ಜಪಿಸುವವನಿಗೆ ಪುನರ್ಜನ್ಮವಿಲ್ಲ." ಎಂದು ಈ ಗಾಯತ್ರೀಮಂತ್ರದ ಜಪದ ವಿಧಾನವು ದಕ್ಷಿಣಾಮೂರ್ತಿಸಂಹಿತೆಯಲ್ಲಿಯೂ ಸೂತಸಂಹಿತೆಯಲ್ಲಿಯೂ ಹೇಳಿದೆ. ||೬೩||

ಬ್ರಾಹ್ಮಣರೆಲ್ಲರೂ ಈ ಗಾಯತ್ರೀಮಂತ್ರವನ್ನು ತಮ್ಮ ಮನಸ್ಸಿನಲ್ಲಿಯೇ ಜಪಮಾಡುವರು. ಅಜ್ಞಾನದಿಂದ ಆ ಮಂತ್ರದ ಶಕ್ತಿಯನ್ನೂ ಅದರ ಮಹಾವೈಭವವನ್ನೂ ತಿಳಿಯರು! ಅಜ್ಞಾನಾವರಣದ ಮಹಿಮೆಯನ್ನು ಏನೆಂದು ಹೇಳುವುದು ! ಗಾಯತ್ರೀ ಮಹಿಮೆಯನ್ನು ಬೃಹದಾರಣ್ಯಕ ಉಪನಿಷತ್ತಿನ ಏಳನೆಯ ಅಧ್ಯಾಯದಲ್ಲಿ ಹೇಳಿದೆ. ||೬೪||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಹನ್ನೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

|| ದ್ವಾದಶೋಽಧ್ಯಾಯಃ ||

### ಹನ್ನೆರಡನೆಯ ಅಧ್ಯಾಯವು

|| ರಾಜೋವಾಚ ||

**ತೀರ್ಥಾನಿ ಭುವಿ ಪುಣ್ಯಾನಿ ಬ್ರೂಹಿ ಮೇ ಮುನಿಸತ್ತಮ ।**
**ಗಮ್ಯಾನಿ ಮಾನವೈರ್ದೇವೈಃ ಕ್ಷೇತ್ರಾಣಿ ಸರಿತಸ್ತಥಾ ॥೧॥**

**ಫಲಂ ಚ ಯಾದೃಶಂ ಯತ್ರ ತೀರ್ಥೇಷು ಸ್ನಾನದಾನತಃ ।**
**ವಿಧಿಂ ಚ ತೀರ್ಥಯಾತ್ರಾಯಾಂ ನಿಯಮಾಂಶ್ಚ ವಿಶೇಷತಃ ॥೨॥**

|| ವ್ಯಾಸ ಉವಾಚ ||

**ಶೃಣು ರಾಜನ್ಪ್ರವಕ್ಷ್ಯಾಮಿ ತೀರ್ಥಾನಿ ವಿವಿಧಾನಿ ಚ ।**
**ಯೇಷು ತೀರ್ಥೇಷು ದೇವೀನಾಂ ಪ್ರಶಸ್ತಾನ್ಯಾಯನಾನಿ ಚ ॥೩॥**

---

ಹಿಂದಿನ ಅಧ್ಯಾಯದಲ್ಲಿ ಪುಣ್ಯಕರವಾದ ಕ್ಷೇತ್ರಗಳಲ್ಲಿ ವಾಸಮಾಡಬೇಕೆಂದು ಹೇಳಿದುದನ್ನು ಕೇಳಿ ರಾಜನು ಪ್ರಶ್ನೆ ಮಾಡಿದನು— ಓ ಋಷಿಶ್ರೇಷ್ಠನೇ, ಮನುಷ್ಯರೂ ದೇವತೆಗಳೂ ಭೂಮಿಯಲ್ಲಿರುವ ಯಾವ ತೀರ್ಥಕ್ಷೇತ್ರಗಳಿಗೆ ಹೋಗಬೇಕು? ಪುಣ್ಯಕರವಾದ ಕ್ಷೇತ್ರಗಳೂ ನದಿಗಳೂ ಯಾವುವು? ಅವುಗಳನ್ನು ನನಗೆ ಹೇಳು. ||೧||

ಯಾವ ತೀರ್ಥದಲ್ಲಿ ಸ್ನಾನದಾನಾದಿಗಳನ್ನು ಮಾಡಿದರೆ ಯಾವ ವಿಧವಾದ ಫಲವು ಬರುವುದು? ತೀರ್ಥಯಾತ್ರೆಯ ವಿಧಿಯನ್ನೂ ನಿಯಮಗಳನ್ನೂ ವಿಸ್ತಾರವಾಗಿ ಹೇಳಬೇಕು. ||೨||

ರಾಜನೇ, ಬಗೆಬಗೆಯ ತೀರ್ಥಗಳನ್ನೂ, ಯಾವ ತೀರ್ಥಗಳಲ್ಲಿ ದೇವಿಯು ತನ್ನಂಶದಿಂದ ವಾಸಿಸುವಳೆಂಬುದನ್ನೂ, ಹೇಳುವೆನು ಕೇಳು. ||೩||

ನದೀನಾಂ ಜಾಹ್ನವೀ ಶ್ರೇಷ್ಠಾ ಯಮುನಾ ಚ ಸರಸ್ವತೀ ।
ನರ್ಮದಾ ಗಂಡಕೀ ಸಿಂಧುರ್ಗೋಮತೀ ತಮಸಾ ತಥಾ ॥೪॥

ಕಾವೇರೀ ಚಂದ್ರಭಾಗಾ ಚ ಪುಣ್ಯಾ ವೇತ್ರವತೀ ಶುಭಾ ।
ಚರ್ಮಣ್ವತೀ ಚ ಸರಯೂಸ್ತಾಪೀ ಸಾ ಭ್ರಮತೀ ತಥಾ ॥೫॥

ಏತಾಶ್ಚ ಕಥಿತಾ ರಾಜನ್ ಅನ್ಯಾಶ್ಚ ಶತಶಃ ಪುನಃ ।
ತಾಸಾಂ ಸಮುದ್ರಗಾಃ ಪುಣ್ಯಾಃ ಸ್ವಲ್ಪಪುಣ್ಯಾ ಹ್ಯನಬ್ಧಿಗಾಃ ॥೬॥

ಸಮುದ್ರಗಾನಾಂ ತಾಃ ಪುಣ್ಯಾಃ ಸರ್ವದೌಘವಹಾಸ್ತು ಯಾಃ ।
ಮಾಸದ್ವಯಂ ಶ್ರಾವಣಾದೌ ತಾಶ್ಚ ಸರ್ವಾ ರಜಸ್ವಲಾಃ ॥೭॥

ಭವಂತೀ ವೃಷ್ಟಿಯೋಗೇನ ಗ್ರಾಮ್ಯವಾರಿವಹಾಸ್ತಥಾ ।
ಪುಷ್ಕರಂ ಚ ಕುರುಕ್ಷೇತ್ರಂ ಧರ್ಮಾರಣ್ಯಂ ಸುಪಾವನಂ ॥೮॥

---

ನದಿಗಳಲ್ಲಿ ಗಂಗಾ, ಯಮುನಾ, ಸರಸ್ವತೀ, ನರ್ಮದಾ, ಗಂಡಕೀ, ಸಿಂಧು, ಗೋಮತೀ, ತಮಸಾ ಈ ನದಿಗಳು ಶ್ರೇಷ್ಠವಾದುವುಗಳು. ॥೪॥

ಕಾವೇರೀ, ಚಂದ್ರಭಾಗಾ, ವೇತ್ರವತೀ, ಚರ್ಮಣ್ವತೀ, ಸರಯೂ, ತಾಪೀ, ಭ್ರಮತೀ ಎಂಬ ಹೊಳೆಗಳೂ ಶ್ರೇಷ್ಠವಾದುವುಗಳು. ಇವುಗಳಲ್ಲದೆ ಇನ್ನೂ ನೂರಾರು ನದಿಗಳಿರುವುವು. ಆ ನದಿಗಳಲ್ಲಿ ಸಮುದ್ರವನ್ನು ಸೇರುವ ನದಿಗಳು ಹೆಚ್ಚು ಪುಣ್ಯಕರವಾದುವು. ಸಮುದ್ರವನ್ನು ಸೇರದವು ಕಡಮೆಯಾಗಿ ಪುಣ್ಯಕರಗಳು. ॥೫-೬॥

ಸಮುದ್ರವನ್ನು ಸೇರುವ ನದಿಗಳಲ್ಲಿ ಯಾವ ನದಿಗಳಲ್ಲಿ ಯಾವಾಗಲೂ ಪ್ರವಾಹವು ಹರಿಯುತ್ತಿರುವುದೋ, ಆ ನದಿಗಳು ಪುಣ್ಯಕರಗಳಾದುವು. ಎಲ್ಲ ನದಿಗಳೂ ಶ್ರಾವಣಮಾಸ ಮೊದಲಾಗಿ ಎರಡು ತಿಂಗಳುಗಳ ವರೆಗೆ ಹೆಚ್ಚು ಪ್ರವಾಹ ಬಂದು ರಜೋದೋಷದಿಂದ ಕೂಡಿರುತ್ತವೆ. ಮತ್ತು ಹೆಚ್ಚು ಮಳೆಯಿಂದ ಗ್ರಾಮಗಳ ಕೊಳೆ ನೀರನ್ನೂ ಹೊಂದಿರುತ್ತವೆ. ಈ ಸಣ್ಣ ಹೊಳೆಗಳಿಂದ ಗ್ರಾಮಗಳು ಹಳ್ಳಿಗಳು ಇವಕ್ಕೆ ನೀರು ದೊರೆಯುವಂತಾಗುತ್ತದೆ. ಇಂತಹ ಹೊಳೆಗಳು ಸಮುದ್ರವನ್ನೂ ಸೇರುವಷ್ಟು ಹೆಚ್ಚು ನೀರುಳ್ಳವುಗಳಲ್ಲವು. ॥೭-೮॥

ಪ್ರಭಾಸಂ ಚ ಪ್ರಯಾಗಂ ಚ ನೈಮಿಶಾರಣ್ಯಮೇವ ಚ ।
ವಿಶ್ರುತಂ ಚಾರ್ಬುದಾರಣ್ಯಂ ಶೈಲಾಶ್ಚ ಪಾವನಾಸ್ತಥಾ ॥೯॥

ಶ್ರೀಶೈಲಶ್ಚ ಸುಮೇರುಶ್ಚ ಸರ್ವತೋ ಗಂಧಮಾದನಃ ।
ಸರಾಂಸಿ ಚೈವ ಪುಣ್ಯಾನಿ ಮಾನಸಂ ಸರ್ವವಿಶ್ರುತಂ ॥೧೦॥

ತಥಾ ಬಿಂದುಸರಃ ಶ್ರೇಷ್ಠಮಕ್ಷೋ(ಚ್ಛೋ)ದಂ ನಾಮ ಪಾವನಂ ।
ಆಶ್ರಮಾಸ್ತು ತಥಾ ಪುಣ್ಯಾ ಮುನೀನಾಂ ಭಾವಿತಾತ್ಮನಾಂ ॥೧೧॥

ವಿಶ್ರುತಸ್ತು ಸದಾಪುಣ್ಯಃ ಖ್ಯಾತೋ ಬದರಿಕಾಶ್ರಮಃ ।
ನರನಾರಾಯಣೌ ಯತ್ರ ತೇಪಾತೇ ತೌ ಮುನೀ ತಪಃ ॥೧೨॥

ವಾಮನಾಶ್ರಮ ಆಖ್ಯಾತ ಶ್ಶತಯೂಪಾಶ್ರಮ ಸ್ತಥಾ ।
ಯೇನ ಯತ್ರ ತಪಸ್ತಪ್ತಂ ತಸ್ಯ ನಾಮ್ನಾಽತಿವಿಶ್ರುತಃ ॥೧೩॥

ಏವಂ ಪುಣ್ಯಾನಿ ಸ್ಥಾನಾನಿ ಹ್ಯಸಂಖ್ಯಾತಾನಿ ಭೂತಲೇ ।
ಮುನಿಭಿಃ ಪರಿಗೀತಾನಿ ಪಾವನಾನಿ ಮಹೀಪತೇ ॥೧೪॥

---

ಪುಷ್ಕರ, ಕುರುಕ್ಷೇತ್ರ, ಧರ್ಮಾರಣ್ಯ, ಪ್ರಭಾಸ, ಪ್ರಯಾಗ, ನೈಮಿಶಾರಣ್ಯ, ಅರ್ಬುದಾರಣ್ಯ ಇವುಗಳು ಪ್ರಸಿದ್ಧವಾದ ಕ್ಷೇತ್ರಗಳಾಗಿರುವುವು. ||೯||

ಶ್ರೀಶೈಲ, ಸುಮೇರು, ಗಂಧಮಾದನ ಈ ಪರ್ವತಗಳು ಪರಿಶುದ್ಧವಾದುವು. ಸರ್ವ ಪ್ರಸಿದ್ಧವಾದ ಮಾನಸಸರೋವರ, ಬಿಂದುಸರೋವರ, ಅಕ್ಷೋ(ಚ್ಛೋ)ದ ಸರೋವರ ಇವು ಪವಿತ್ರವಾದ ಸರೋವರಗಳು. ||೧೦||

ಬ್ರಹ್ಮಸಾಕ್ಷಾತ್ಕಾರವುಳ್ಳವರಾದ ಋಷಿಗಳು ವಾಸಮಾಡುವ ಪುಣ್ಯಕರವಾದ ಆಶ್ರಮಗಳಲ್ಲಿ ನರನಾರಾಯಣರೆಂಬ ಇಬ್ಬರು ಋಷಿಗಳು ತಪಸ್ಸುಮಾಡಿದ ಬದರಿಕಾ ಶ್ರಮವೆಂಬುದು ಪುಣ್ಯಕರವಾದುದೆಂದು ಪ್ರಸಿದ್ಧಿ ಹೊಂದಿರುವುದು. ||೧೧-೧೨||

ವಾಮನಾಶ್ರಮ, ಶತಯೂಪಾಶ್ರಮ ವೆಂಬ ಪ್ರಸಿದ್ಧವಾದ ಆಶ್ರಮಗಳು ಅಲ್ಲಿ ತಪಸ್ಸುಮಾಡಿದ ವಾಮನ, ಶತಯೂಪ ಎಂಬ ಋಷಿಗಳ ಹೆಸರಿನಿಂದ ವಿಶೇಷ ಪ್ರಸಿದ್ಧಿಗೆ ಬಂದಿರುವುವು. ||೧೩||

ರಾಜನೇ—ಹೀಗೆಯೇ ಭೂಮಿಯಲ್ಲಿ ಲೆಕ್ಕವಿಲ್ಲದಷ್ಟು ಪವಿತ್ರವಾದ ಯಾತ್ರಿಕರನ್ನು ಶುದ್ಧರನ್ನಾಗಿ ಮಾಡುವ, ಪುಣ್ಯಕ್ಷೇತ್ರಗಳು ಇರುವುವೆಂದು ಮುನಿಗಳು ಹೇಳಿರುವರು ||೧೪||

ಏಷು ಸ್ಥಾನೇಷು ಸರ್ವತ್ರ ದೇವೀಸ್ಥಾನಾನಿ ಭೂಪತೇ ।
ದರ್ಶನಾತ್ಪಾಪಹಾರೀಣಿ ವಸಂತಿ ನಿಯಮೇನ ಚ ॥೧೫॥

ಕಥಯಿಷ್ಯಾಮಿ ತಾನ್ಯಗ್ರೇ ಪ್ರಸಂಗೇನ ಚ ಕಾನಿ ಚಿತ್ ।
ತೀರ್ಥಾನಿ ನೃಪ ದಾನಾನಿ ವ್ರತಾನಿ ಚ ಮಖಾಸ್ತಥಾ ॥೧೬॥

ತಪಾಂಸಿ ಪುಣ್ಯಕರ್ಮಾಣಿ ಸಾಪೇಕ್ಷಾಣಿ ಮಹೀಪತೇ ।
ದ್ರವ್ಯಶುದ್ಧಿಂ ಕ್ರಿಯಾಶುದ್ಧಿಂ ಮನಶ್ಶುದ್ಧಿಮಪೇಕ್ಷ್ಯ ಚ ॥೧೭॥

ಪಾವನಾನಿ ಹಿ ತೀರ್ಥಾನಿ ತಪಾಂಸಿ ಚ ವ್ರತಾನಿ ಚ ।
ಕದಾಚಿತ್ ದ್ರವ್ಯಶುದ್ಧಿಸ್ಸ್ಯಾತ್ ಕ್ರಿಯಾಶುದ್ಧಿಃ ಕದಾಚನ ॥೧೮॥

---

ಈ ಎಲ್ಲ ಪವಿತ್ರವಾದ ತೀರ್ಥಗಳು ಗಿರಿಗಳು ಆಶ್ರಮಗಳು ಇವುಗಳಲ್ಲಿ ಎಲ್ಲ ದರಲ್ಲಿಯೂ ಜಗನ್ಮಾತೆಯಾದ ದೇವಿಯ ಸ್ಥಾನಗಳು ವಿಶಿಷ್ಟವಾಗಿ ಇರುತ್ತವೆ. ಅವು ಗಳು ದರ್ಶನಮಾತ್ರದಿಂದಲೇ ಮನುಷ್ಯರ ಪಾಪಗಳನ್ನು ನಾಶಮಾಡುತ್ತವೆ ! ||೧೫||

ಆ ಪ್ರದೇಶಗಳಲ್ಲಿ ಕೆಲವನ್ನು ಸಂದರ್ಭಾನುಸಾರವಾಗಿ ಮುಂದೆ ಏಳನೆಯ ಸ್ಕಂಧದಲ್ಲಿ ದೇವಿಯ ಮಹಿಮೆಯನ್ನು ಹೇಳುವಾಗ ತಿಳಿಯಿಸುವೆನು. ಎಲೈ ರಾಜನೇ, ಈ ತೀರ್ಥಗಳೂ ದಾನಗಳೂ ವ್ರತಗಳೂ ತಪಸ್ಸೂ ಕೂಡ ದ್ರವ್ಯಶುದ್ಧಿ, ಕ್ರಿಯಾ ಶುದ್ಧಿ, ಮನಶ್ಶುದ್ಧಿ ಇವುಗಳೊಡನೆ ಸಹಕರಿಸಿಕೊಂಡು ಫಲವನ್ನುಂಟುಮಾಡು ವುವು. ಇವುಗಳು ಪ್ರತ್ಯೇಕವಾಗಿ ಫಲವನ್ನು ಕೊಡಲಾರವು. ಎಂದರೆ ಪವಿತ್ರವಾದ ತೀರ್ಥದಲ್ಲಿ ನಿಯತವಾಗಿ ಪರಿಶುದ್ಧವಾದ ಮನಸ್ಸಿನಿಂದ ಚೆನ್ನಾಗಿರುವ ಪದಾರ್ಥ ವನ್ನು ಸರಿಯಾದ ಪಾತ್ರದಲ್ಲಿ ದಾನಮಾಡಿದರೆ ಫಲವುಂಟು. ತಪಸ್ಸನ್ನು ಶುದ್ಧವಾದ ಮನಸ್ಸಿನಿಂದ ಪವಿತ್ರವಾದ ಆಶ್ರಮದಲ್ಲಿ ಸರಿಯಾಗಿ ನಿಯತವಾಗಿ ನಡೆಸಿದರೆ ಫಲ ವುಂಟು. ಆದುದರಿಂದ ಈ ಮೂರು ಬಗೆಯ ಶುದ್ಧಿಯನ್ನೂ ಸಂಪಾದಿಸಬೇಕು.||೧೬||

ಎಲೈರಾಜನೇ — ತಪಸ್ಸೂ ಮತ್ತು ಇತರವಾದ ಪುಣ್ಯಕೆಲಸಗಳೂ ದ್ರವ್ಯ ಶುದ್ಧಿಯನ್ನೂ ಕ್ರಿಯಾಶುದ್ಧಿಯನ್ನೂ ಮನಶ್ಶುದ್ಧಿಯನ್ನೂ ಅವಲಂಬಿಸಿಕೊಂಡು ಫಲಜನಕವಾಗುತ್ತವೆ. ಕೇವಲವಾದ ತೀರ್ಥವೂ ಕೇವಲವಾದ ದ್ರವ್ಯಶುದ್ಧಿಯೂ ಉದ್ದಿಷ್ಟವಾದ ಪರಮ ಫಲಜನಕವಲ್ಲ. ||೧೭||

ಪರಿಶುದ್ಧವಾದ ತೀರ್ಥಗಳು. ತಪಸ್ಸು, ವ್ರತಗಳು ಇವುಗಳ ಸಂಬಂಧದಿಂದ ಒಂದು ಕಾಲದಲ್ಲಿ ದ್ರವ್ಯಶುದ್ಧಿಯೂ ಒಂದು ಕಾಲದಲ್ಲಿ ಕ್ರಿಯಾಶುದ್ಧಿಯೂ ಉಂಟಾ

**ದುರ್ಲಭಾ ಮನಸಃ ಶುದ್ಧಿಃ ಸರ್ವೇಷಾಂ ಸರ್ವದಾ ನೃಪ ।**
**ಮನಸ್ತು ಚಂಚಲಂ ರಾಜನ್ ಅನೇಕವಿಷಯಾಶ್ರಿತಂ ॥೧೯॥**

**ಕಥಂ ಶುದ್ಧಂ ಭವೇದ್ರಾಜನ್ ನಾನಾಭಾವಸಮಾಶ್ರಿತಂ ।**
**ಕಾಮಕ್ರೋಧೌ ತಥಾ ಲೋಭೋ ಹ್ಯಹಂಕಾರೋ ಮದಸ್ತಥಾ॥೨೦॥**

**ಸರ್ವೇ ವಿಘ್ನಕರಾ ಹ್ಯೇತೇ ತಪಸ್ತೀರ್ಥವ್ರತೇಷು ಚ ।**
**ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯನಿಗ್ರಹಃ ॥೨೧॥**

**ಸ್ವಧರ್ಮಪಾಲನಂ ರಾಜನ್ ಸರ್ವತೀರ್ಥಫಲಪ್ರದಂ ।**
**ನಿತ್ಯಕರ್ಮಪರಿತ್ಯಾಗಾತ್ ಮಾರ್ಗೇ ಸಂಸರ್ಗದೋಷತಃ ॥೨೨॥**
**ವ್ಯರ್ಥಂ ತೀರ್ಥಾಭಿಗಮನಂ ಪಾಪಮೇವಾವಶಿಷ್ಯತೇ ।**

---

ದೀತು. ಆದರೆ ಯಾವಾಗಲೂ ಎಲ್ಲರಿಗೂ ಮನಶ್ಶುದ್ಧಿಯುಂಟಾಗುವುದು ಅಸಾಧ್ಯ ವಾದುದು. ॥೧೮॥

ಎಲೈ ರಾಜನೇ ಮನಸ್ಸು ಯಾವಾಗಲೂ ಚಂಚಲವಾಗಿರುವುದು. ಅದು ಅನೇಕ ವಿಷಯಗಳನ್ನು ಆಶ್ರಯಿಸಿ ಬಗೆಬಗೆಯ ಅಭಿಪ್ರಾಯಗಳಿಂದ ಕೂಡಿರುವುದ ರಿಂದ ಹೇಗೆ ಶುಭಕರವಾದೀತು? ಕಾಮ, ಕ್ರೋಧ, ಲೋಭ, ಮದ, ಅಹಂಕಾರ, ಅಜ್ಞಾನ, ಇವುಗಳೆಲ್ಲವೂ ತಪಸ್ಸು, ತೀರ್ಥಯಾತ್ರೆ, ವ್ರತ, ಇವುಗಳಿಂದ ಉಂಟಾಗ ಬೇಕಾದ ಪರಮ ಫಲಕ್ಕೆ ವಿಘ್ನವನ್ನುಂಟುಮಾಡುವುವು. ॥೧೯-೨೦॥

ರಾಜನೇ,—ಮೂರುಬಗೆಯ ಹಿಂಸೆಗಳನ್ನೂ ಮಾಡದಿರುವುದು, ನಿಜವನ್ನು ಹೇಳುವುದು, ಶುಚಿತ್ವ, ಇಂದ್ರಿಯಗಳನ್ನು ತನ್ನಧೀನದಲ್ಲಿಟ್ಟುಕೊಂಡಿರುವುದು, ತನ್ನ ಧರ್ಮವನ್ನು ಕಾಪಾಡಿಕೊಂಡುಬರುವುದು, ಇವು ಸಮಸ್ತ ತೀರ್ಥಗಳ ಫಲಗಳನ್ನೂ ಕೊಡುವುವು. ಎಂದರೆ ಮಾನವರು ತಮಗೆ ವಿಹಿತವಾಗಿರುವ ನಿತ್ಯವಾದ ವರ್ಣಾಶ್ರಮ ಧರ್ಮಗಳನ್ನು ಆದರದಿಂದ ಆಚರಿಸುತ್ತಿದ್ದರೆ, ಎಲ್ಲ ತೀರ್ಥಗಳಿಂದುಂಟಾಗುವ ಫಲ ಗಳೂ, ಎಂದರೆ ಪಾಪನಿವೃತ್ತಿ, ಚಿತ್ತಶುದ್ಧಿ, ಜ್ಞಾನಪ್ರಾಪ್ತಿ, ಹೃದಯವೈಶಾಲ್ಯ, ಶಾಂತಿಲಾಭ ಮುಂತಾದ ಫಲಗಳೆಲ್ಲವೂ ತಪ್ಪದೆ ದೊರೆಯುತ್ತವೆ. ಎಂದು ಭಾವವು. ಹಾಗಿಲ್ಲದೆ ॥೨೧॥

ತೀರ್ಥಯಾತ್ರೆಮಾಡುವುದು ವ್ಯರ್ಥವಾಗುವುದು! ಏಕೆಂದರೆ ಆಗ ದಾರಿ ಯನ್ನು ನಡೆಯಬೇಕಾದ ಸಂದರ್ಭವಿರುವುದರಿಂದ ಕಾಲಕ್ಕೆ ಸರಿಯಾಗಿ ನಿತ್ಯಕರ್ಮ

ಕ್ಷಾಳಯನ್ತಿ ಚ ತೀರ್ಥಾನಿ ಸರ್ವಥಾ ದೇಹಜಂ ಮಲಂ ॥೨೩॥

ಮಾನಸಂ ಕ್ಷಾಳಿತುಂ ತಾನಿ ನ ಸಮರ್ಥಾನಿ ವೈ ನೃಪ ।
ಶಕ್ತಾನಿ ಯದಿ ಚೇತ್ತಾನಿ ಗಂಗಾತೀರನಿವಾಸಿನಃ ॥೨೪॥

ಮುನಯೋ ದ್ರೋಹಸಂಯುಕ್ತಾಃ ಕಥಂ ಸ್ಯುರ್ಭಾವಿತೇಶ್ವರಾಃ ।
ವಸಿಷ್ಠಸದೃಶಾಃ ಪ್ರಹ್ವಾಃ ವಿಶ್ವಾಮಿತ್ರಾದಯಃ ಕಿಲ ॥೨೫॥
ರಾಗದ್ವೇಷರತಾಃ ಸರ್ವೇ ಕಾಮಕ್ರೋಧಾಕುಲಾಃ ಸದಾ ।

---

ಗಳನ್ನು ಆದರದಿಂದ ಸಾಂಗವಾಗಿ ಮಾಡುವುದಕ್ಕೆ ಅವಕಾಶವಿಲ್ಲದೆ ಹೋಗುವುದರಿಂದಲೂ, ದಾರಿಯಲ್ಲುಂಟಾಗುವ ನಾನಾಬಗೆಯ ಜನರ ಸಂಸರ್ಗಗಳಲ್ಲಿ ಹೆಚ್ಚಾಗಿ ಉಂಟಾಗುವ ದೋಷದಿಂದ ಪಾಪವೇ ಸಾಮಾನ್ಯವಾಗಿ ಸಂಭವಿಸುವುದರಿಂದಲೂ, ಹೀಗಾದ ಮೇಲೆ ಎಂದರೆ ನಿತ್ಯಧರ್ಮಾಚರಣೆಯಿಂದ ಉಂಟಾಗುತ್ತಿದ್ದ ಪುಣ್ಯವಿಲ್ಲದೆ, ದುಸ್ಸಹವಾಸದೋಷವೇ ಹೆಚ್ಚಾಗಿ ಉಳಿಯುವುದರಿಂದ ತೀರ್ಥಯಾತ್ರೆಮಾಡುವುದರಲ್ಲಿ ಫಲವೇ ಇಲ್ಲದೆ ಹೋಗುವುದು. ಆದುದರಿಂದ ನಿತ್ಯಕರ್ಮಗಳನ್ನು ಯಥೋಚಿತವಾಗಿಯಾದರೂ ಮಾಡುತ್ತಾ, ಮಾರ್ಗದಲ್ಲಿ ಸತ್ಸಹವಾಸವನ್ನೇ ಪಡೆಯುತ್ತಾ, ತೀರ್ಥಯಾತ್ರೆಯನ್ನೂ ಮಾಡುವುದು ಶ್ರೇಯಸ್ಕರವೇ ಹೊರತು ನಿತ್ಯಕರ್ಮಗಳನ್ನು ಬಿಟ್ಟರೆ ತೀರ್ಥಯಾತ್ರೆಯಿಂದ ಫಲವಿಲ್ಲವು ಎಂದು ಅಭಿಪ್ರಾಯವು, ॥೨೨॥

ರಾಜನೇ—ತೀರ್ಥಗಳು ಯಾತ್ರಿಕರ ಸ್ಥೂಲದೇಹದಲ್ಲಿರುವ ಕೊಳೆಯನ್ನು ಮಾತ್ರ ತೊಳೆಯುವುವು. ಆದರೆ ಅವು ಅವರ ಮನಸ್ಸಿನ ಕೊಳೆಯನ್ನು ತೊಳೆಯಲು ಸಮರ್ಥಗಳಾಗಿಲ್ಲವು. ಏಕೆಂದರೆ ॥೨೩॥

ಆ ತೀರ್ಥಗಳು ಮನಸ್ಸಿನ ಕೊಳೆಯನ್ನೂ ನಾಶಮಾಡುವ ಶಕ್ತಿಯುಳ್ಳವುಗಳಾಗಿದ್ದರೆ, ಅಂತಹ ಗಂಗಾದಿ ತೀರ್ಥಕ್ಷೇತ್ರಗಳಲ್ಲಿಯೇ ಯಾವಾಗಲೂ ವಾಸಮಾಡಿಕೊಂಡಿರುತ್ತಾ ಈಶ್ವರನನ್ನು ಧ್ಯಾನಮಾಡುತ್ತಿರುವ ಮುನಿಗಳೂ ದ್ರೋಹಬುದ್ಧಿಯುಳ್ಳವರಾಗುತ್ತಿದ್ದರೇ ? ಉದಾಹರಣೆಗಾಗಿ ॥೨೪॥

ವಿನೀತರಾದ ವಸಿಷ್ಠನಿಗೆ ಸಮಾನರಾದ ವಿಶ್ವಾಮಿತ್ರನೇ ಮೊದಲಾದ ಋಷಿಗಳು ಯಾವಾಗಲೂ ಅಭಿಮಾನದಿಂದ ಪ್ರೀತಿ ಮತ್ತು ದ್ವೇಷಗಳಲ್ಲಿ ಆಸಕ್ತರಾಗಿ, ಕಾಮಕ್ರೋಧಾದಿಗಳಿಂದ ಕೂಡಿದ ಮನಸ್ಸಿನಿಂದ ದುಃಖವನ್ನನುಭವಿಸುತ್ತಿದ್ದರೇ ? ಆದುದರಿಂದ ಬರಿಯ ತೀರ್ಥಗಳ ಸಮೀಪದಲ್ಲಿ ವಾಸವು ಮಾನಸಿಕ ದೋಷಗಳನ್ನು ನಾಶಮಾಡಲಾರದು. ॥೨೫॥

**ಚಿತ್ತಶುದ್ಧಿಮಯಂ ತೀರ್ಥಂ ಗಂಗಾದಿಭ್ಯೋಽತಿಪಾವನಂ ॥೨೬॥**

**ಯದಿ ಸ್ಯಾದ್ದೈವಯೋಗೇನ ಕ್ಷಾಳಯಂತ್ಯಾಂತರಂ ಮಲಂ ।**
**ವಿಶೇಷೇಣ ತು ಸತ್ಸಂಗೋ ಜ್ಞಾನನಿಷ್ಠಸ್ಯ ಭೂಪತೇ ॥೨೭॥**

**ನ ವೇದಾ ನ ಚ ಶಾಸ್ತ್ರಾಣಿ ನ ವ್ರತಾನಿ ತಪಾಂಸಿ ನ ।**
**ನ ಮಖಾ ನ ಚ ದಾನಾನಿ ಚಿತ್ತಶುದ್ಧೇಸ್ತು ಕಾರಣಂ ॥೨೮॥**

---

ಎಲೈ ರಾಜನೇ, ಜ್ಞಾನಾಭ್ಯಾಸದಲ್ಲಾಸಕ್ತನಾದವನಿಗೆ ಅದೃಷ್ಟಪರಿಪಾಕದಿಂದ ಸಜ್ಜನರ ಸಹವಾಸವುಂಟಾದರೆ, ಅದು ಮನಸ್ಸಿನ ಕೊಳೆಯನ್ನು ತೊಳೆಯುವುದು. ಆದುದರಿಂದ ಇದೇ, ಎಂದರೆ ಸಜ್ಜನರ ಸಹವಾಸವೇ, ಚಿತ್ತಶುದ್ಧಿಯನ್ನುಂಟು ಮಾಡುವ ತೀರ್ಥವಾಗಿರುವುದು. ಇದು ಗಂಗಾದಿ ತೀರ್ಥಗಳಿಗಿಂತಲೂ ಹೆಚ್ಚು ಪರಿಶುದ್ಧಿಕರವಾದುದು ! ॥೨೬-೨೭॥

ವೇದಗಳೂ, ಶಾಸ್ತ್ರಗಳೂ, ವ್ರತಗಳೂ, ತಪಸ್ಸುಗಳೂ, ಯಜ್ಞಗಳೂ, ದಾನ ಗಳೂ ಇವುಗಳಾವುವೂ ಜ್ಞಾನ, ಸಾಧುಸಹವಾಸವಿಲ್ಲದೆ ಇದ್ದರೆ ಚಿತ್ತಶುದ್ಧಿಗೆ ಕಾರಣ ಗಳಲ್ಲವು. ॥೨೮॥

ಆದುದರಿಂದಲೇ ಕೇವಲವಾದ ತೀರ್ಥಾಶ್ರಮಾದಿ ಸೇವೆಗಳಿಗೆ ಚಿತ್ತಶುದ್ಧಿ ಯನ್ನುಂಟುಮಾಡುವ ಶಕ್ತಿಯು ಇಲ್ಲವೆಂತಲೂ, ಜ್ಞಾನನಿಷ್ಠನಾದ ಸತ್ಪುರುಷನ ಸಹವಾಸವು ಚಿತ್ತಶುದ್ಧಿಯನ್ನುಂಟುಮಾಡಲು ಸಮರ್ಥವಾದುದೆಂತಲೂ, ಹಿಂದೆ ಹೇಳಿರುವುದು. ಆದುದರಿಂದ ಕಲಿಯ ಭಯದಿಂದ ಸಂಕಟಪಟ್ಟವನು ಮೂರು ಮತ್ತು ನಾಲ್ಕನೆಯ ಸ್ಕಂಧಗಳಲ್ಲಿ ಹೇಳಿದಪ್ರಕಾರ ದ್ರವ್ಯಶುದ್ಧಿಯನ್ನೂ ಕ್ರಿಯಾ ಶುದ್ಧಿಯನ್ನೂ ಪಡೆದು, ಪುಣ್ಯಕ್ಷೇತ್ರಗಳಲ್ಲಿ ವಾಸಮಾಡುತ್ತಾ, ಜ್ಞಾನನಿಷ್ಠನಾದ ಸತ್ಪುರುಷನ ಸಹವಾಸದಿಂದ ವೇದಾಂತಶಾಸ್ತ್ರವನ್ನು ಶ್ರವಣಮನನಮಾಡುತ್ತಾ, ಮನಶ್ಶುದ್ಧಿಯನ್ನು ವೈರಾಗ್ಯದಿಂದ ಸಂಪಾದಿಸಿ, ದೇವಿಯ ನಾಮಗಳನ್ನು ಪಠನ ಮಾಡುತ್ತಾ, ದೇವಿಯ ಸೇವೆಯಲ್ಲಾಸಕ್ತನಾಗಿರಬೇಕೆಂದು ರಾಜನಿಗೆ ಉಪದೇಶ ಮಾಡಿರುವರು.

ಇಲ್ಲಿ ದ್ರವ್ಯಶುದ್ಧಿ ಕ್ರಿಯಾಶುದ್ಧಿ ಚಿತ್ತಶುದ್ಧಿಗಳನ್ನುಂಟುಮಾಡುವುದರಲ್ಲಿಯೇ ಎಲ್ಲ ವಿಧವಾದ ವ್ರತಗಳೂ ನಿಯಮಗಳೂ ಪರ್ಯವಸಾನ ಹೊಂದಿ ಕಳೆದುಹೋಗು ವುದರಿಂದ ರಾಜನಿಗೆ ಪ್ರತ್ಯೇಕವಾಗಿ ತೀರ್ಥವ್ರತನಿಯಮಗಳನ್ನು ಹೇಳಲಿಲ್ಲವು.

ವಸಿಷ್ಠೋ ಬ್ರಹ್ಮಣಃ ಪುತ್ರೋ ವೇದವಿದ್ಯಾವಿಶಾರದಃ ।
ರಾಗದ್ವೇಷಾನ್ವಿತಃ ಕಾಮಂ ಗಂಗಾತೀರಸಮಾಶ್ರಿತಃ ॥೨೯॥

ಆಡೀಬಕಂ ಮಹಾಯುದ್ಧಂ ವಿಶ್ವಾಮಿತ್ರವಸಿಷ್ಠಯೋಃ ।
ಜಾತಂ ನಿರರ್ಥಕಂ ದ್ವೇಷಾತ್ ದೇವಾನಾಂ ವಿಸ್ಮಯಪ್ರದಂ ॥೩೦॥

ವಿಶ್ವಾಮಿತ್ರೋ ಬಕಸ್ತತ್ರ ಜಾತಃ ಪರಮತಾಪಸಃ ।
ಶಪ್ತಃ ಸ ತು ವಸಿಷ್ಠೇನ ಹರಿಶ್ಚಂದ್ರಸ್ಯ ಕಾರಣಾತ್ ॥೩೧॥

ಕೌಶಿಕೇನ ವಸಿಷ್ಠೋಽಪಿ ಶಪ್ತ್ವಾಡೀದೇಹ ಭಾಕ್ಕೃತಃ ।
ಶಾಪಾದಾಡೀಬಕೌ ಜಾತೌ ತೌ ಮುನೀ ವಿಶದಪ್ರಭೌ ॥೩೨॥

ನಿವಾಸಂ ಪ್ರಾಪತುಸ್ತೀರೇ ಸರಸೋ ಮಾನಸಸ್ಯ ಚ ।
ಚಕ್ರತುರ್ದಾರುಣಂ ಯುದ್ಧಂ ನಖಚಂಚುಪ್ರತಾಡನೈಃ ॥೩೩॥

---

ಇವುಗಳಿಂದ ಚಿತ್ತಶುದ್ಧಿಯುಂಟಾಗುವುದು ಕಷ್ಟವೆಂದು ತಿಳಿಸುವುದಕ್ಕಾಗಿ ವಸಿಷ್ಠ ವಿಶ್ವಾಮಿತ್ರರ ಕಥೆಯನ್ನು ಹೇಳುವರು.

ಬ್ರಹ್ಮನ ಮಗನಾದ ವೇದವಿದ್ಯೆಯಲ್ಲಿ ನಿಪುಣನಾದ ವಸಿಷ್ಠಮುನಿಯು ಗಂಗಾತೀರದಲ್ಲಿ ವಾಸಮಾಡುತ್ತಿದ್ದರೂ, ವಿಶೇಷವಾದ ರಾಗದ್ವೇಷಗಳಿಂದ ಕೂಡಿದ್ದನು. ವಸಿಷ್ಠವಿಶ್ವಾಮಿತ್ರರಿಗೆ ನಿಜವಾದ ಧರ್ಮಪಕ್ಷಪಾತದಿಂದ ಉಂಟಾದ ದ್ವೇಷದಿಂದ ಯಾರಿಗೂ ಯಾವ ಪ್ರಯೋಜನವೂ ಇಲ್ಲದ, ದೇವತೆಗಳಿಗೂ ಆಶ್ಚರ್ಯವನ್ನುಂಟುಮಾಡುವ, ಆಡೀಬಕವೆಂಬ ದೊಡ್ಡ ಯುದ್ಧವು ಉಂಟಾಯಿತು !॥೨೯-೩೦॥

ಮಹಾತಪಸ್ವಿಯಾದ ವಿಶ್ವಾಮಿತ್ರನು ಹರಿಶ್ಚಂದ್ರನಿಗೆ ತೊಂದರೆಯನ್ನು ಕೊಟ್ಟ ಕಾರಣದಿಂದ ವಸಿಷ್ಠನ ಶಾಪದಿಂದ ಬಕನೆಂಬ ಪಕ್ಷಿಯಾದನು. ॥೩೧॥

ವಸಿಷ್ಠಋಷಿಯೂ ಕೂಡ ವಿಶ್ವಾಮಿತ್ರಋಷಿಯಿಂದ ಶಾಪವನ್ನು ಹೊಂದಿ ಆಡೀ ಎಂಬ ಹಕ್ಕಿನ ಶರೀರವನ್ನು ಹೊಂದಿದನು. ಮಹಾತೇಜಸ್ಸಿನಿಂದ ಕೂಡಿದವರಾದ ಅವರಿಬ್ಬರು ಮುನಿಗಳೂ ಪರಸ್ಪರ ಶಾಪದಿಂದ ಆಡೀಬಕರಾದರು. ॥೩೨॥

ಇವರಿಬ್ಬರೂ ಮಾನಸರೋವರದ ತೀರದಲ್ಲಿ ವಾಸಸ್ಥಾನವನ್ನು ಮಾಡಿಕೊಂಡಿದ್ದರು. ಮತ್ತು ಅವರಿಬ್ಬರೂ ತಮ್ಮ ಉಗುರು ಕೊಕ್ಕು ಇವುಗಳ ಹೊಡೆತದಿಂದ ಭಯಂಕರವಾದ ಯುದ್ಧವನ್ನು ಮಾಡುತ್ತಿದ್ದರು. ॥೩೩॥

**ವರ್ಷಾಣಾಮಯುತಂ ಯಾವತ್ ತಾವೃಷೀ ದೋಷಸಂಯುತೌ ।**
**ಯುಯುಧಾತೇ ಮದೋನ್ಮತ್ತೌ ಸಿಂಹಾವಿವ ಪರಸ್ಪರಂ ॥೩೪॥**

॥ ರಾಜೋವಾಚ ॥

**ಕಥಂ ತೌ ಮುನಿಶಾರ್ದೂಲೌ ತಾಪಸೌ ಧರ್ಮತತ್ಪರೌ ।**
**ಪರಸ್ಪರಂ ವೈರವಂತೌ ಸಂಜಾತೌ ಕೇನ ಹೇತುನಾ ॥೩೫॥**

**ಶಾಪಂ ಪರಸ್ಪರಂ ಕೇನ ಕಾರಣೇನ ಮಹಾಮತೀ ।**
**ದತ್ತವಂತೌ ಮಿಥಃ ಕ್ಲೇಶಕಾರಕೌ ದುಃಖದೌ ನೃಣಾಂ ॥೩೬॥**

॥ ವ್ಯಾಸ ಉವಾಚ ॥

**ಹರಿಶ್ಚಂದ್ರೋ ನೃಪಶ್ರೇಷ್ಠಸ್ತ್ರಿಶಂಕುತನಯಃ ಪುರಾ ।**
**ಬಭೂವ ರವಿವಂಶೀಯೋ ರಾಮಚಂದ್ರಸ್ಯ ಪೂರ್ವಜಃ ॥೩೭॥**

---

ಆ ಇಬ್ಬರು ಋಷಿಗಳೂ ರೋಷದಿಂದ ಕೂಡಿದವರಾಗಿ ಹತ್ತುಸಾವಿರ ವರ್ಷಗಳವರೆಗೆ, ಮದಿಸಿದ ಸಿಂಹಗಳು ಪರಸ್ಪರವಾಗಿ ಹೋರಾಡುವಂತೆ, ಯುದ್ಧಮಾಡಿದರು! ॥೩೪॥

ರಾಜನು ಹೇಳಿದನು—ಮುನಿಗಳಲ್ಲಿ ಶ್ರೇಷ್ಠರೂ ತಪಸ್ಸುಮಾಡುವವರೂ ಧರ್ಮಾಸಕ್ತರೂ ಆದ ಅವರಿಬ್ಬರೂ ಯಾವ ಕಾರಣದಿಂದ ಹೇಗೆ ಪರಸ್ಪರ ದ್ವೇಷ ಉಳ್ಳವರಾದರು? ॥೩೫॥

ಬಹಳ ಬುದ್ಧಿವಂತರಾದ ಇವರಿಬ್ಬರೂ ಯಾವ ಕಾರಣದಿಂದ ಪರಸ್ಪರ ಕಷ್ಟವನ್ನುಂಟುಮಾಡುವ, ಜನರಿಗೆ ದುಃಖವನ್ನು ಕೊಡುವ, ಶಾಪವನ್ನು ಒಬ್ಬರಿಗೊಬ್ಬರು ಕೊಟ್ಟರು? ॥೩೬॥

ವ್ಯಾಸಋಷಿಯು ಹೇಳಿದನು—ಸೂರ್ಯವಂಶದಲ್ಲಿ ಹುಟ್ಟಿದ ತ್ರಿಶಂಕುರಾಜನ ಮಗನಾದ ಶ್ರೀರಾಮನಿಗೆ ಹಿಂದಿನವನಾದ ಹರಿಶ್ಚಂದ್ರನೆಂಬ ರಾಜಶ್ರೇಷ್ಠನಿದ್ದನು. ॥೩೭॥

ಅನಪತ್ಯಃ ಸ ರಾಜರ್ಷಿಃ ವರುಣಾಯ ಮಹಾಕ್ರತುಂ ।
ಪ್ರತಿಜಜ್ಞೇ ಪುತ್ರಕಾಮೋ ನರಮೇಧಂ ದುರಾಸದಂ ॥೩೮॥

ವರುಣಸ್ತಸ್ಯ ಸಂತುಷ್ಟೋ ಯಜ್ಞಸ್ಯ ನಿಯಮೇ ಕೃತೇ ।
ದಧಾರ ಗರ್ಭಂ ರಾಜ್ಞಸ್ತು ಭಾರ್ಯಾ ಪರಮಸುಂದರೀ ॥೩೯॥

ರಾಜಾ ಬಭೂವ ಸಂತುಷ್ಟೋ ದೃಷ್ಟ್ವಾ ಭಾರ್ಯಾಂ ಸದೋಹದಾಂ ।
ಚಕಾರ ವಿಧಿವತ್ಕರ್ಮ ಗರ್ಭಸಂಸ್ಕಾರಕಾರಕಂ ॥೪೦॥

ಸುಷುವೇ ತನಯಂ ನಾರೀ ಸರ್ವಲಕ್ಷಣಸಂಯುತಂ ।
ಮುದಂ ಪ್ರಾಪ ನೃಪಸ್ತತ್ರ ಪುತ್ರೇ ಜಾತೇ ವಿಶಾಂ ಪತೇ ॥೪೧॥

ಕೃತವಾನ್ ಜಾತಕರ್ಮಾದಿಸಂಸ್ಕಾರವಿಧಿಮುತ್ತಮಂ ।
ದದೌ ಹಿರಣ್ಯಂ ಗಾ ದೋಗ್ಧ್ರೀಃ ಬ್ರಾಹ್ಮಣೇಭ್ಯೋ ವಿಶೇಷತಃ ॥೪೨॥

---

ರಾಜರಲ್ಲಿ ಋಷಿಯಂತಿದ್ದ ಆತನು ತನಗೆ ಮಕ್ಕಳಿಲ್ಲದಿದ್ದುದರಿಂದ ಪುತ್ರಕಾಮನಾಗಿ ವರುಣನ ಪ್ರೀತಿಗೋಸ್ಕರ ಅಸಾಧ್ಯವಾದ ನರಮೇಧವೆಂಬ ಯಜ್ಞವನ್ನು ಮಾಡುತ್ತೇನೆಂದು ಸಂಕಲ್ಪಿಸಿ ಪ್ರತಿಜ್ಞೆ ಮಾಡಿದನು. ॥೩೮॥

ಆ ರಾಜನು ಯಜ್ಞಕ್ಕಾಗಿ ವ್ರತವನ್ನು ಹಿಡಿದು ನಿಯಮದಿಂದಿರಲು ವರುಣನು ಇದರಿಂದ ಸಂತೋಷ ಹೊಂದಿದನು. ಸುಂದರಿಯಾದ ಹರಿಶ್ಚಂದ್ರರಾಜನ ಪತ್ನಿಯು ಗರ್ಭವನ್ನು ಧರಿಸಿದಳು. ॥೩೯॥

ರಾಜನು ತನ್ನ ಹೆಂಡಿತಿಯು ಗರ್ಭವನ್ನು ಧರಿಸಿದುದನ್ನು ತಿಳಿದು, ಸಂತೋಷವನ್ನು ಹೊಂದಿ ಅವಳ ಬಯಕೆಗಳನ್ನೂ ನೆರವೇರಿಸುತ್ತಾ, ಗರ್ಭಸಂಸ್ಕಾರವನ್ನುಂಟುಮಾಡುವ ಪುಂಸವನ, ಸೀಮಂತ ಮೊದಲಾದ ಕರ್ಮಗಳನ್ನೂ ವೇದವಿಧಿಗನುಸಾರವಾಗಿ ಮಾಡಿದನು. ॥೪೦॥

ಎಲೈ ರಾಜನೇ ಕೇಳು—ಹರಿಶ್ಚಂದ್ರನ ಹೆಂಡಿತಿಯು ಸಮಸ್ತ ರಾಜಲಕ್ಷಣಗಳಿಂದ ಕೂಡಿದ ಮಗನನ್ನು ಹೆತ್ತಳು. ಮಗನು ಹುಟ್ಟಿದುದಕ್ಕೆ ರಾಜನೂ ಸಂತೋಷಪಟ್ಟನು. ॥೪೧॥

ರಾಜನು ಮಗನಿಗೆ ಜಾತಕರ್ಮವೇ ಮೊದಲಾದ ಉತ್ತಮವಾದ ಸಂಸ್ಕಾರಗಳನ್ನು ಮಾಡಿ ಎಲ್ಲರಿಗೂ ಬಹುಮಾನಗಳನ್ನು ಕೊಟ್ಟುದಲ್ಲದೆ, ಬ್ರಾಹ್ಮಣರಿಗೆ ಚಿನ್ನವನ್ನೂ ಹಾಲು ಕರೆವ ಹಸುಗಳನ್ನೂ ವಿಶೇಷವಾಗಿ ದಾನಮಾಡಿದನು. ॥೪೨॥

ಜನ್ಮೋತ್ಸವೇಽತಿಸಂವೃತ್ತೇ ಗೇಹೇ ವೈ ಯಾದಸಾಂ ಪತಿಃ ।
ಆಜಗಾಮ ಮಹಾರಾಜ ವಿಪ್ರವೇಷಧರಸ್ತದಾ ॥೪೩॥

ಪೂಜಿತಃ ಪಾರ್ಥಿವೇನಾಥ ದತ್ವಾ ವಿಧಿವದಾಸನಂ ।
ಕಾರ್ಯೇ ಪೃಷ್ಟೇಽಬ್ರವೀದ್ವಾಕ್ಯಂ ವರುಣೋಽಸ್ಮೀತಿ ಭೂಪತಿಂ॥೪೪॥

ಕುರು ಯಜ್ಞಂ ಪಶುಂ ಕೃತ್ವಾ ಸುತಂ ಪರಮಪಾವನಂ ।
ಸತ್ಯವಾಗ್ಭವ ರಾಜೇಂದ್ರ ಸಂಕಲ್ಪಸ್ತು ತ್ವಯಾ ಕೃತಃ ॥೪೫॥

ತಚ್ಛ್ರುತ್ವಾ ವಚನಂ ರಾಜಾ ವಿಹ್ವಲೋಽತಿವ್ಯಥಾಕುಲಃ ।
ಸಂಸ್ತಭ್ಯಾಧಿಂ ನೃಪಃ ಪ್ರಾಹ ವರುಣಂ ಸತ್ಕೃತಾಂಜಲಿಃ ॥೪೬॥

ಸ್ವಾಮಿನ್ ಕರೋಮಿ ತಂ ಯಜ್ಞಂ ಸರ್ವಥಾ ವಿಧಿಪೂರ್ವಕಂ ।
ಮಯಾ ತೇ ಯತ್ಪ್ರತಿಜ್ಞಾತಂ ಭವಾಮಿ ಸತ್ಯವಾಗಹಂ ॥೪೭॥

---

ಜನಮೇಜಯನೇ ಕೇಳು—ಹರಿಶ್ಚಂದ್ರನ ಮನೆಯಲ್ಲಿ ಪುತ್ರ ಜನ್ಮನಿಮಿತ್ತವಾದ ಉತ್ಸವವೆಲ್ಲವೂ ಅತಿಶಯದಿಂದ ಮುಗಿದ ಮೇಲೆ ಜಲಜಂತುಗಳಿಗೆ ಅಧಿಪತಿಯಾದ ವರುಣನು ಬ್ರಾಹ್ಮಣವೇಷದಿಂದ ರಾಜನ ಮನೆಗೆ ಬಂದನು. ॥೪೩॥

ರಾಜನು ಆ ಬ್ರಾಹ್ಮಣನಿಗೆ ಪೀಠವನ್ನು ಕೊಟ್ಟು ವಿಧಿಗನುಸಾರವಾಗಿ ಅವನನ್ನು ಪೂಜಿಸಿ, ಬಂದಕಾರ್ಯವೇನೆಂದು ಪ್ರಶ್ನೆಮಾಡಲು, ಆ ಬ್ರಾಹ್ಮಣನು ನಾನು ವರುಣನೆಂದು ರಾಜನಿಗೆ ತಿಳಿಯಿಸಿ ಮುಂದೆ ಹೇಳುವ ಮಾತನ್ನಾಡಿದನು. ॥೪೪॥

ಎಲೈ ರಾಜಶ್ರೇಷ್ಠನೇ, ನಿನ್ನ ಮಗನನ್ನು ಪಶುವನ್ನಾಗಿ ಮಾಡಿಕೊಂಡು ಅತ್ಯಂತ ಪರಿಶುದ್ಧವಾದ ಯಜ್ಞವನ್ನು ಮಾಡು. ಹಿಂದೆ ನೀನು ನರಮೇಧಯಾಗವನ್ನು ಮಾಡುವೆನೆಂದು ಸಂಕಲ್ಪಮಾಡಿರುವೆಯಲ್ಲವೆ? ನಿನ್ನ ಆ ಮಾತನ್ನು ನಿಜವಾಗಿ ಮಾಡು. ॥೪೫॥

ಆ ಮಾತನ್ನು ಕೇಳಿ ರಾಜನು ಗಾಬರಿಯಿಂದಲೂ ದುಃಖದಿಂದಲೂ ಕೂಡಿದ್ದರೂ ಮನೋವ್ಯಥೆಯನ್ನು ಧೈರ್ಯದಿಂದ ತಡೆದುಕೊಂಡು ಕೈಜೋಡಿಸಿಕೊಂಡು ವರುಣ ದೇವನನ್ನು ಕುರಿತು ಹೀಗೆ ಹೇಳಿದನು. ॥೪೬॥

ಓ ಸ್ವಾಮಿಯೇ, ನಾನು ಪ್ರತಿಜ್ಞೆಮಾಡಿದಂತೆ ವಿಧಿಗನುಸಾರವಾಗಿ ನರಮೇಧವೆಂಬ ಆ ಯಜ್ಞವನ್ನು ಮಾಡಿ ಸತ್ಯವಚನವುಳ್ಳವನಾಗುವೆನು. ॥೪೭॥

**ಪೂರ್ಣೇ ಮಾಸೇ ವಿಶುಧ್ಯೇತ ಧರ್ಮಪತ್ನೀ ಸುರೋತ್ತಮ ।**
**ವಿಶುದ್ಧಾಯಾಂ ತು ಭಾರ್ಯಾಯಾಂ ಕರ್ತವ್ಯಃ ಸಪಶು ರ್ಮಖಃ ॥೪೮॥**

॥ ವ್ಯಾಸ ಉವಾಚ ॥

**ಇತ್ಯುಕ್ತೇ ವಚನೇ ರಾಜ್ಞಾ ವರುಣಃ ಸ್ವಗೃಹಂ ಗತಃ ।**
**ರಾಜಾ ಬಭೂವ ಸಂತುಷ್ಟಃ ಕಿಂಚಿಚ್ಚಿಂತಾತುರಸ್ತಥಾ ॥೪೯॥**

**ಪೂರ್ಣೇ ಮಾಸಿ ಪುನಃ ಪಾಶೀ ಪರೀಕ್ಷಾರ್ಥಂ ನೃಪಾಲಯೇ ।**
**ಆಜಗಾಮ ದ್ವಿಜೋ ಭೂತ್ವಾ ಸುವೇಷಃ ಸುಷ್ಠು ಭಾಷಕಃ ॥೫೦॥**

**ಕೃತಾರ್ಹಣಂ ಸುಖಾಸೀನಂ ಭೂಪತಿಸ್ತಂ ಸುರೋತ್ತಮಂ ।**
**ಉವಾಚವಿನಯೋಪೇತೋ ಹೇತುಗರ್ಭಂ ವಚಸ್ತದಾ ॥೫೧॥**

**ಅಸಂಸ್ಕೃತಂ ಸುತಂ ಸ್ವಾಮಿನ್ ಯೂಪೇ ಬಧ್ನಾಮಿ ತಂ ಕಥಂ ।**
**ಸಂಸ್ಕೃತ್ಯ ಕ್ಷತ್ರಿಯಂ ಕೃತ್ವಾ ಯಜೇಽಹಂ ಯಜ್ಞಮುತ್ತಮಂ ॥೫೨॥**

---

ದೇವಶ್ರೇಷ್ಠನೇ, ನನ್ನ ಹೆಂಡತಿಯು ಹೆತ್ತು ಒಂದು ತಿಂಗಳು ತುಂಬಿದ ಮೇಲೆ ಶುದ್ಧಳಾಗುವಳು. ಹಾಗೆ ಶುದ್ಧಿಹೊಂದಿದ ಮೇಲೆ ಪಶುಸಹಿತವಾದ ಆ ಯಜ್ಞವನ್ನು ಮಾಡಬೇಕಾಗಿರುವುದು. ಎಂದು ಹೇಳಿದನು. ॥೪೮॥

ರಾಜನು ಹೀಗೆ ಹೇಳುತ್ತಲು ವರುಣನು ತನ್ನ ಮನೆಗೆ ಹೋದನು. ಬಳಿಕ ದೊರೆಯು ಸಂತೋಷವುಳ್ಳವನಾದನು. ಆದರೂ ಸ್ವಲ್ಪಮಟ್ಟಿಗೆ ಚಿಂತೆಯಿಂದ ದುಃಖಿಸಿದನು. ॥೪೯॥

ಒಂದು ತಿಂಗಳು ಕಳೆದ ಮೇಲೆ ಮತ್ತೆ ಪಾಶಧರನಾದ ವರುಣನು ಒಳ್ಳೆಯ ವೇಷವನ್ನು ಧರಿಸಿ ಸ್ಪಷ್ಟವಾಗಿ ಮಾತನಾಡುವ ಬ್ರಾಹ್ಮಣನರೂಪದಲ್ಲಿ ಪರೀಕ್ಷಾರ್ಥವಾಗಿ ಆ ರಾಜನ ಮನೆಗೆ ಬಂದನು. ॥೫೦॥

ರಾಜನು ಆ ಬ್ರಾಹ್ಮಣನಿಗೆ ಪೂಜೆಯನ್ನು ಮಾಡಿದ ಮೇಲೆ ಸುಖವಾಗಿ ಕುಳಿತಿದ್ದ ದೇವಶ್ರೇಷ್ಠನನ್ನು ಕುರಿತು ವಿನಯದಿಂದ ಕಾರಣಸಹಿತವಾದ ಮಾತನ್ನಾಡಿದನು. ॥೫೧॥

ಓ ಸ್ವಾಮಿಯೇ; ಸಂಸ್ಕಾರರಹಿತನಾದ ಅಪರಿಶುದ್ಧನಾಗಿರುವ ಮಗನನ್ನು ಯೂಪಸ್ತಂಭಕ್ಕೆ ಹೇಗೆ ಕಟ್ಟಲಿ? ಅವನಿಗೆ ಜಾತಕರ್ಮ ಮುಂತಾದ ಸಂಸ್ಕಾರ

ದಯಸೇ ಯದಿ ದೇವ ತ್ವಂ ಜ್ಞಾತ್ವಾ ದೀನಂ ಸ್ವಸೇವಕಂ ।
ಅಸಂಸ್ಕೃತಸ್ಯ ಬಾಲಸ್ಯ ನಾಧಿಕಾರೋಽಸ್ತಿ ಕುತ್ರಚಿತ್ ॥೫೩॥

ಪ್ರತಾರಯಸಿ ರಾಜೇಂದ್ರ ಕೃತ್ವಾ ಸಮಯ ಮಗ್ರತಃ ।
ದುಸ್ತ್ಯಜಸ್ತವ ಜಾನಾಮಿ ಸುತಸ್ನೇಹೋ ಹ್ಯಪುತ್ರಿಣಃ ॥೫೪॥

ಗೃಹಂ ವ್ರಜಾಮಿ ಭೂಪಾಲ ವಚನಾತ್ತವ ಕೋಮಲಾತ್ ।
ಕಿಯತ್ಕಾಲಂ ಪ್ರತೀಕ್ಷ್ಯಾಹಂ ಆಗಮಿಷ್ಯಾಮಿ ತೇ ಗೃಹಂ ॥೫೫॥

ಭವಿತವ್ಯಂ ತ್ವಯಾ ತಾತ ತದಾ ಸತ್ಯವಚೋಽನ್ವಿತಂ ।
ಅನ್ಯಥಾ ತ್ವಯಿ ಮುಂಚಾಮಿ ಕೋಪಂ ಶಾಪಸಮನ್ವಿತಂ ॥೫೬॥

॥ ರಾಜೋವಾಚ ॥

ಸಮಾವರ್ತನಕರ್ಮಾಂತೇ ಸರ್ವಥಾ ಯಾದಸಾಂ ಪತೇ ।
ಕೃತ್ವಾ ಪುತ್ರಂ ಪಶುಂ ಯಜ್ಞೇ ಯಜಿಷ್ಯೇ ವಿಧಿಪೂರ್ವಕಂ ॥೫೭॥

---

ಕರ್ಮಗಳನ್ನು ಮಾಡಿ ಕ್ಷತ್ರಿಯನನ್ನಾಗಿ ಮಾಡಿದ ಮೇಲೆ ನಾನು ಆ ಶ್ರೇಷ್ಠವಾದ ಯಜ್ಞವನ್ನು ಮಾಡುವೆನು. ॥೫೨॥

ಶಾಸ್ತ್ರವಿಹಿತವಾದ ಸಂಸ್ಕಾರವಿಲ್ಲದ ಹುಡುಗನಿಗೆ ಯಾವ ವಿಧವಾದ ಶಾಸ್ತ್ರೀಯವಾದ ಕರ್ಮಗಳಲ್ಲಿಯೂ ಅಧಿಕಾರವಿರುವುದಿಲ್ಲ. ದೀನನಾದ ನನ್ನನ್ನು ನಿನ್ನ ಸೇವಕನನ್ನಾಗಿ ತಿಳಿದು ದಯದಿಂದ ಅಲ್ಲಿಯ ವರೆಗೆ ಅವಕಾಶವನ್ನು ಕೊಡು. ಎಂದನು. ॥೫೩॥

ವರುಣನು ಹೇಳಿದನು—ರಾಜನೇ, ಮಕ್ಕಳಿಲ್ಲದ ನಿನಗೆ ಪುತ್ರಸ್ನೇಹವನ್ನು ಬಿಡಲು ಅಸಾಧ್ಯವಾಗಿರುವುದನ್ನು ನಾನು ಬಲ್ಲೆನು. ಆದುದರಿಂದಲೇ ಯಾಗಮಾಡುವ ಕಾಲವನ್ನು ಮುಂದಕ್ಕೆ ತಳ್ಳುತ್ತ ನನ್ನನ್ನು ವಂಚಿಸುತ್ತಿರುತ್ತೀಯೆ. ॥೫೪॥

ಎಲೈ ರಾಜನೇ, ನಿನ್ನ ಮೃದುವಾದ ಮಾತನ್ನು ಕೇಳಿ ಈಗ ನಾನು ಮನೆಗೆ ಹೋಗುವೆನು. ಇನ್ನೆಷ್ಟುದಿನದ ಮೇಲೆ ನಿನ್ನ ಮನೆಗೆ ಬರಲಿ? ಹೇಳು. ಆಗ ನಿನ್ನ ಮಾತನ್ನು ನಿಜವಾಗಿ ಮಾಡಿಕೊಳ್ಳಬೇಕು. ಹಾಗಿಲ್ಲದಿದ್ದರೆ ಕೋಪದಿಂದ ನಿನಗೆ ಶಾಪವನ್ನು ಕೊಡುವೆನು. ॥೫೫-೫೬॥

ವರುಣನ ಆ ಮಾತಿಗೆ ರಾಜನು ಓ ಜಲಜಂತುಗಳಿಗೆ ಪತಿಯಾದ ವರುಣನೇ, ನನ್ನ ಮಗನಿಗೆ ಸಮಾವರ್ತನವೆಂಬ ಕರ್ಮವು ನಡೆದ ಮೇಲೆ ಅವನನ್ನು ಯಜ್ಞ

|| ವ್ಯಾಸ ಉವಾಚ ||

**ತಚ್ಛ್ರುತ್ವಾ ವಚನಂ ರಾಜ್ಞೋ ವರುಣಃ ಪ್ರೀತಮಾನಸಃ ।**
**ತಥೇತ್ಯುಕ್ತ್ವಾ ಯಯೌ ತೂರ್ಣಂ ನೃಪಸ್ತು ಸುಸ್ಥಿತೋಽಭವತ್ ॥೫೮॥**

**ರೋಹಿತಾಶ್ವ ಇತಿ ಖ್ಯಾತಃ ಸುತಸ್ತಸ್ಯ ವಿವೃದ್ಧಿಮಾನ್ ।**
**ಸಂಜಾತಶ್ಚತುರಃ ಸರ್ವವಿದ್ಯಾನಾಂ ಚ ವಿಶಾರದಃ ॥೫೯॥**

**ಯಜ್ಞಸ್ಯ ಕಾರಣಂ ಯೇನ ಜ್ಞಾತಂ ಸರ್ವಂ ಸವಿಸ್ತರಂ ।**
**ಭಯಭೀತಸ್ತತಃ ಸೋಽಪಿ ಮತ್ವಾ ಮರಣಮಾತ್ಮನಃ ॥೬೦॥**

**ಕೃತ್ವಾ ಪಲಾಯನಂ ವೀರೋ ಗತೋಽಸೌ ಗಿರಿಗಹ್ವರೇ ।**
**ಅಗಮ್ಯೇ ನೃಪತಿಸ್ಥಾನೇ ಸ್ಥಿತಸ್ತತ್ರ ಭಯಾತುರಃ ॥೬೧॥**

**ಪ್ರಾಪ್ತೇ ಕಾಲೇಽಥ ವರುಣೋ ಯಜ್ಞಾರ್ಥೀ ನೃಪತೇರ್ಗೃಹಂ ।**
**ಗತ್ವಾ ತಮಾಹ ಭೂಪಾಲಂ ಕುರು ಯಜ್ಞಂ ವಿಶಾಂಪತೇ ॥೬೨॥**

---

ಪಶುವನ್ನಾಗಿ ಮಾಡಿ ವಿಧಿಯನ್ನನುಸರಿಸಿ ಖಂಡಿತವಾಗಿಯೂ ಯಜ್ಞವನ್ನು ಮಾಡುವೆನು ! ಎಂದನು. ||೫೭||

ವ್ಯಾಸನು ಹೇಳಿದನು.—ರಾಜನ ಆ ಮಾತನ್ನು ಕೇಳಿ ವರುಣನು ಸಂತೋಷವನ್ನು ಹೊಂದಿ ಹಾಗೆಯೇ ಆಗಲೆಂದು ಹೇಳಿ ಬೇಗನೆ ಹೊರಟು ಹೋದನು. ದೊರೆಯೂ ಸ್ಥಿರಮನಸ್ಸುಳ್ಳವನಾದನು. ||೫೮||

ರೋಹಿತಾಶ್ವನೆಂಬ ಆ ರಾಜನ ಮಗನು ಕ್ರಮೇಣ ಅಭಿವೃದ್ಧಿ ಹೊಂದುತ್ತಾ ಸಮಸ್ತ ವಿದ್ಯೆಗಳಲ್ಲಿ ಪಂಡಿತನೂ, ಬುದ್ಧಿಕೌಶಲವುಳ್ಳವನೂ ಆದನು. ||೫೯||

ಆ ಮೇಲೆ ಅವನು ತನ್ನನ್ನೇ ಪಶುವನ್ನಾಗಿ ಮಾಡಿ ನೆರವೇರಿಸಬೇಕಾಗಿರುವ ಆ ಯಜ್ಞದ ಕಾರಣವನ್ನು ವಿವರವಾಗಿ ತಿಳಿದು, ಅದರಿಂದ ತನ್ನ ಮರಣವನ್ನು ನಿಶ್ಚಯಿಸಿ, ಹೆದರಿಕೊಂಡನು. ||೬೦||

ವೀರನಾದ ಆ ರೋಹಿತಾಶ್ವನು ಮರಣದಭಯದಿಂದ ಓಡಿಹೋಗಿ ಸಾಮಾನ್ಯವಾಗಿ ಯಾರೂ ಪ್ರವೇಶಮಾಡಲಸಾಧ್ಯವಾದ ಪರ್ವತ ಗುಹೆಯಲ್ಲಿದ್ದನು. ||೬೧||

ರಾಜನು ಹೇಳಿದ ಕಾಲವು ಬರುತ್ತಲು ವರುಣನು ಯಜ್ಞದ ಅಪೇಕ್ಷೆಯಿಂದ ರಾಜನ ಮನೆಗೆ ಹೋಗಿ ರಾಜನನ್ನು ಕುರಿತು, ದೊರೆಯೇ, ಯಜ್ಞವನ್ನು ಈಗಲಾದರೂ ಮಾಡು. ಎಂದನು. ||೬೨||

ಪ್ರಮ್ಲಾನವದನೋ ರಾಜಾ ತಮಾಹ ವ್ಯಥಿತೇಂದ್ರಿಯಃ ।
ಕಿಂ ಕರೋಮಿ ಗತಃ ಕ್ವಾಪಿ ಸುತೋ ಮೇ ಸುರಸತ್ತಮ ॥೬೩॥

ಶ್ರುತ್ವಾ ತದ್ವಚನಂ ರಾಜ್ಞಃ ಕುಪಿತೋ ಯಾದಸಾಂ ಪತಿಃ ।
ಶಶಾಪ ತಂ ನೃಪಂ ಕೋಪಾತ್ ಅಸತ್ಯವಾದಿನಂ ಭೃಶಂ ॥೬೪॥

ಜಲೋದರಾಭಿಧೋ ವ್ಯಾಧಿರ್ದೇಹೇ ಭವತು ತೇ ನೃಪ ।
ಯತಃ ಪ್ರತಾರಿತಶ್ಚಾಹಂ ಕೃತ್ವಾ ಕಪಟಪಂಡಿತ ॥೬೫॥

ಇತಿ ಶಪ್ತ್ವಾ ಯಯೌ ಧಾಮ ಸ್ವಕಂ ಪಾಶಧರಸ್ತದಾ ।
ರಾಜಾ ಚಿಂತಾತುರಸ್ತಸ್ಥೌ ಭವನೇ ವ್ಯಾಧಿಪೀಡಿತಃ ॥೬೬॥

ಯದಾಽತಿವ್ಯಾಧಿತೋ ರಾಜಾ ರೋಗೇಣ ಶಾಪಜೇನ ಹ ।
ತದಾ ಶುಶ್ರಾವ ಪುತ್ರೋಽಪಿ ಪಿತರಂ ವ್ಯಾಧಿಪೀಡಿತಂ ॥೬೭॥

---

ಆಗ ರಾಜನು ಬಾಡಿದ ಮುಖವುಳ್ಳವನಾಗಿ ದುಃಖಿಸುತ್ತಾ ಆ ವರುಣನನ್ನು ಕುರಿತು, ಓ ದೇವೋತ್ತಮನೇ, ನನ್ನ ಮಗನು ಎಲ್ಲಿಗೋ ಹೋದನು. ಏನನ್ನು ಮಾಡಲಿ ? ಎಂದನು ! ॥೬೩॥

ವರುಣನು ಆ ರಾಜನ ಮಾತನ್ನು ಕೇಳಿ ಕೋಪಗೊಂಡು ಸುಳ್ಳುಮಾತನ್ನಾಡಿ ಮೋಸಮಾಡಿದನೆಂಬ ಕೋಪದಿಂದ ರಾಜನಿಗೆ ಶಾಪವನ್ನು ಕೊಟ್ಟನು. ॥೬೪॥

ಎಲೈ ರಾಜನೇ, ನೀನು ಮೋಸದಿಂದ ತಿಳಿವಳಿಕೆಯುಳ್ಳವನಂತೆ ನಟಿಸಿ ನನಗೆ ವಂಚನೆಯನ್ನು ಮಾಡಿದಕಾರಣ ನಿನ್ನ ಶರೀರದಲ್ಲಿ ಜಲೋದರವೆಂಬ ರೋಗ ವುಂಟಾಗಲಿ! ಎಂದು ಶಪಿಸಿ ವರುಣನು ತನ್ನ ಮನೆಗೆ ಹೋದನು. ರಾಜನು ಮನಸ್ಸಿನ ಚಿಂತೆಯಿಂದ ದುಃಖಿಸುತ್ತಾ ಆ ರೋಗದಿಂದ ಕಷ್ಟಪಡುತ್ತಾ ಮನೆಯಲ್ಲಿ ದ್ದನು. ॥೬೫-೬೬॥

ರಾಜನು ಶಾಪದಿಂದ ಹುಟ್ಟಿದ ರೋಗದಿಂದ ಹೆಚ್ಚು ಕಷ್ಟಪಡುತ್ತಿರಲು ರೋಗವು ಹೆಚ್ಚುತ್ತಿದ್ದುದನ್ನು ಮಗನು ಕೇಳಿದನು. ॥೬೭॥

ಪಾಂಥಿಕಃ ಪ್ರಾಹ ಪುತ್ರಂ ಹಿ ಪಿತಾ ತೇ ಭೃಶದುಃಖಿತಃ ।
ಜಲೋದರವಿಕಾರೇಣ ಶಾಪಜೇನ ನೃಪಾತ್ಮಜ ॥೬೮॥

ವಿನಷ್ಟಂ ಜೀವಿತಂ ತೇಽದ್ಯ ವೃಥಾ ಜಾತಸ್ಯ ದುರ್ಮತೇ ।
ಯತ್ತ್ಯಕ್ತ್ವಾ ಪಿತರಂ ದುಃಸ್ಥಂ ಪ್ರಾಪ್ತೋಽಸಿ ಗಿರಿಗಹ್ವರಂ ॥೬೯॥

ಕಿಮನೇನ ಶರೀರೇಣ ಪ್ರಾಪ್ತಂ ತೇ ಜನ್ಮನಃ ಫಲಂ ।
ದೇಹದಂ ದುಃಖಿತಂ ಕೃತ್ವಾ ಸ್ಥಿತೋಽಸ್ಯತ್ರ ಸುತಾಧಮ ॥೭೦॥

ಪ್ರಾಣಾಸ್ತ್ಯಾಜ್ಯಾಃ ಪಿತುಃ ಕಾರ್ಯೇ ಸತ್ಪುತ್ರೇಣೇತಿ ನಿಶ್ಚಯಃ ।
ತ್ವದರ್ಥೇ ದುಃಖಿತೋ ರಾಜಾ ಕ್ರಂದತಿ ವ್ಯಾಧಿಪೀಡಿತಃ ॥೭೧॥

॥ ವ್ಯಾಸ ಉವಾಚ ॥

ತದಾಕರ್ಣ್ಯ ವಚಸ್ತಥ್ಯಂ ಪಾಂಥಿಕಾದ್ಧರ್ಮಸಂಯುತಂ ।
ಯದಾ ಚಕ್ರೇ ಮನೋ ಗಂತುಂ ದ್ರಷ್ಟುಂ ತಾತಂ ವ್ಯಥಾತುರಂ ॥೭೨॥

---

ಆ ದಾರಿಯಲ್ಲಿ ಹೋಗುತ್ತಿದ್ದ ಪ್ರಯಾಣಿಕನೊಬ್ಬನು ರಾಜಪುತ್ರನನ್ನು ಕುರಿತು, 'ನಿನ್ನ ತಂದೆಯು ಶಾಪದಿಂದುಂಟಾದ ಜಲೋದರರೋಗದಿಂದ ವಿಶೇಷವಾಗಿ ದುಃಖಿಸುತ್ತಿರುವನು. ನೀನು ಹುಟ್ಟಿದುದು ವ್ಯರ್ಥವಾಯಿತು! ದುರ್ಬುದ್ಧಿಯಾದ ನೀನು ಕಷ್ಟಪಡುತ್ತಿರುವ ತಂದೆಯನ್ನು ಬಿಟ್ಟು ಬೆಟ್ಟದ ಗುಹೆಗೆ ಬಂದಿರುವ ಕಾರಣದಿಂದ ನೀನೂ ಬದುಕಿದ್ದರೂ ಸತ್ತಂತೆಯೇ ಸರಿ.' ॥೬೮-೬೯॥

ನೀನು ಹುಟ್ಟಿದುದಕ್ಕೆ ಈ ಶರೀರವನ್ನಿಟ್ಟುಕೊಂಡು ಯಾವ ಫಲವನ್ನು ಸಂಪಾದಿಸುವೆ? ನಿನಗೆ ಶರೀರವನ್ನು ಕೊಟ್ಟ ತಂದೆಯನ್ನು ರೋಗದಿಂದ ದುಃಖಿಸುತ್ತಿರುವನನ್ನಾಗಿ ಮಾಡಿ ಈ ಸ್ಥಳದಲ್ಲಿ ನೀನು ಅಡಗಿರುವುದರಿಂದ ನೀನು ನೀಚನಾದ ಮಗನಾಗಿರುವೆ! ॥೭೦॥

ಸತ್ಪುತ್ರನಾದವನು ತಂದೆಯ ಕೆಲಸಕ್ಕಾಗಿ ಪ್ರಾಣವನ್ನಾದರೂ ಕೊಟ್ಟು ತಂದೆಯನ್ನು ದುಃಖದಿಂದ ಬಿಡಿಸಬೇಕೆಂದು ಶಾಸ್ತ್ರನಿಶ್ಚಯವಿರುವುದು. ಹೀಗಿದ್ದರೂ ನಿನ್ನ ತಂದೆಯಾದ ಆ ರಾಜನು ನಿನಗೋಸ್ಕರವಾಗಿ ದುಃಖಪಡುತ್ತಾ ರೋಗದ ಬಾಧೆಯಿಂದ ಅಳುತ್ತಿರುವನು. ಎಂದನು. ॥೭೧॥

ವ್ಯಾಸಋಷಿಯು ಹೇಳಿದನು—ಆ ದಾರಿಯಲ್ಲಿ ಹೋಗುತ್ತಿದ್ದ ಆ ಪ್ರಯಾಣಿಕನು ಹೇಳಿದ, ಧರ್ಮದಿಂದ ಕೂಡಿದ, ನಿಜವಾದ ಮಾತನ್ನು ಕೇಳಿ ಆ ರಾಜ

ತದಾ ವಿಪ್ರವಪುರ್ಭೂತ್ವಾ ವಾಸವಸ್ತಮುಪಾಗಮತ್ ।
ರಹಃ ಪ್ರಾಹ ಹಿತಂ ವಾಕ್ಯಂ ದಯಾವಾನಿವ ಭಾರತ ॥೨೩॥

ಮೂರ್ಖೋಽಸಿ ರಾಜಪುತ್ರ ತ್ವಂ ಗಮನಾಯ ಮತಿಂ ವೃಥಾ ।
ಕರೋಷಿ ಪಿತರಂ ತ್ವದ್ಯ ನ ಜಾನಾಸಿ ವ್ಯಥಾತುರಂ ॥೨೪॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ
ದ್ವಾದಶೋಽಧ್ಯಾಯಃ.

---

ಪುತ್ರನು ದುಃಖಿತನಾದ ತನ್ನ ತಂದೆಯನ್ನು ನೋಡಬೇಕೆಂದು ಹೊರಡಲು ಮನಸ್ಸು ಮಾಡಿದನು. ||೨೨||

ಆ ಸಮಯಕ್ಕೆ ಸರಿಯಾಗಿ ದೇವೇಂದ್ರನು ಬ್ರಾಹ್ಮಣವೇಷವುಳ್ಳವನಾಗಿ ರೋಹಿತಾಶ್ವನ ಸಮೀಪಕ್ಕೆ ಬಂದು ದಯಾಶಾಲಿಯಂತೆ ಅವನಿಗೆ ಹಿತವಾದ ಮಾತನ್ನು ಗುಟ್ಟಾಗಿ ಹೀಗೆ ಹೇಳಿದನು. ||೨೩||

ಎಲೈ ರಾಜಪುತ್ರನೇ, ನೀನು ಮೂಢನಾಗಿರುತ್ತೀಯೆ. ನಿನ್ನ ತಂದೆಯ ಸಮೀಪಕ್ಕೆ ಹೋಗಬೇಕೆಂದು ವ್ಯರ್ಥವಾಗಿ ಆಲೋಚಿಸುತ್ತಿರುವೆ! ನಿನ್ನ ತಂದೆಯು ರೋಗದಿಂದ ದುಃಖಪಡುತ್ತಿರುವನೆಂಬುದನ್ನು ಸ್ಪಷ್ಟವಾಗಿ ನಂಬಿಕೆಗೆ ಅರ್ಹವಾದ ರೀತಿಯಿಂದ ತಿಳಿದಿಲ್ಲ! ಎಂದನು ||೨೪||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಹನ್ನೆರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

### || ತ್ರಯೋದಶೋಽಧ್ಯಾಯಃ ||

### ಹದಿಮೂರನೆಯ ಅಧ್ಯಾಯವು

|| ಇಂದ್ರ ಉವಾಚ ||

**ಸಾಹಸಂ ಕೃತವಾನ್ ರಾಜಾ ಪೂರ್ವಂ ಯತ್ಕಥಿತೋ ಮಖಃ ।**
**ವರುಣಾಯ ಪ್ರತಿಜ್ಞಾತಃ ಪುತ್ರಂ ಕೃತ್ವಾ ಪಶುಂ ಪ್ರಿಯಂ ॥೧॥**

**ಗತೇ ತ್ವಯಿ ಪಿತಾ ಪುತ್ರಂ ಬಧ್ವಾ ಯೂಪೇಽಘೃಣಃ ಪುನಃ ।**
**ಪಶುಂ ಕೃತ್ವಾ ಮಹಾಬುದ್ಧೇ ವಧಿಷ್ಯತಿ ವ್ಯಥಾತುರಃ ॥೨॥**

**ಇತ್ಥಂ ನಿಷಿದ್ಧಸ್ತತ್ಪುತ್ರಃ ಶಕ್ರೇಣಾಮಿತತೇಜಸಾ ।**
**ಸ್ಥಿತಸ್ತತ್ರೈವ ಮಾಯೇಶೀಮಾಯಯಾ ಮೋಹಿತೋ ಭೃಶಂ ॥೩॥**

---

ಇಂದ್ರನು ರೋಹಿತಾಶ್ವನನ್ನು ಕುರಿತು, ಎಲೈ ರಾಜಪುತ್ರನೇ, ಹಿಂದೆ ನಿನ್ನ ತಂದೆಯಾದ ಹರಿಶ್ಚಂದ್ರನು ಪ್ರೀತಿಪಾತ್ರನಾದ ಮಗನನ್ನೇ ಪಶುವನ್ನಾಗಿ ಮಾಡಿ ಯಜ್ಞಮಾಡುವೆನೆಂದು ವರುಣನಿಗೆ ಮಾತುಕೊಟ್ಟು ಅಸಾಧ್ಯವಾದ ಮತ್ತು ಅನುಚಿತವಾದ ಸಾಹಸಕಾರ್ಯವನ್ನು ಮಾಡಿರುವನು! ||೧||

ನೀನು ಅಲ್ಲಿಗೆ ಹೋದರೆ ರೋಗದಿಂದ ದುಃಖಿಸುತ್ತಿರುವ ನಿನ್ನ ತಂದೆಯು ಸ್ವಲ್ಪವೂ ದಯವಿಲ್ಲದ ಮಗನಾದ ನಿನ್ನನ್ನು ಯೂಪಸ್ತಂಭಕ್ಕೆ ಕಟ್ಟಿ ಪಶುವನ್ನಾಗಿ ಮಾಡಿ ನಿನ್ನನ್ನು ವ್ಯರ್ಥವಾಗಿ ಕೊಲ್ಲುವನು! ಇದನ್ನು ಮಹಾಬುದ್ಧಿವಂತನಾದ ನೀನು ಆಲೋಚಿಸು. ||೨||

ಮಹಾತೇಜಸ್ವಿಯಾದ ದೇವೇಂದ್ರನು ಹೀಗೆ ಹೇಳಿ ಹರಿಶ್ಚಂದ್ರರಾಜನ ಮಗನನ್ನು ತಂದೆಯ ಸಮೀಪಕ್ಕೆ ಹೋಗದಂತೆ ನಿಷೇಧಿಸಿ ತಡೆಯಲು, ಆ ರೋಹಿ

**ಯಥಾ ಪುನಃಪುನಃ ಶ್ರುತ್ವಾ ಪಿತರಂ ರೋಗಪೀಡಿತಂ ।**
**ಗಮನಾಯ ಮತಿಂ ಚಕ್ರೇ ತದೇಂದ್ರಃ ಪ್ರತ್ಯಷೇಧಯತ್ ॥೪॥**

**ಹರಿಶ್ಚಂದ್ರೋಽತಿದುಃಖಾರ್ತಃ ಪಪ್ರಚ್ಛ ಗುರುಮಂತಿಕೇ ।**
**ಸ್ಥಿತಂ ವಸಿಷ್ಠಮೇಕಾಂತೇ ಸರ್ವಜ್ಞಂ ಹಿತತತ್ಪರಂ ॥೫॥**

|| ರಾಜೋವಾಚ ||

**ಭಗವನ್ ಕಿಂಕರೋಮ್ಯದ್ಯ ಕಾತರೋಽಸ್ಮಿ ವ್ಯಥಾಕುಲಃ ।**
**ತ್ರಾಹಿ ಮಾಂ ದುಃಖಮನಸಂ ಮಹಾವ್ಯಾಧಿಭಯಾತುರಂ ॥೬॥**

---

ತಾಶ್ವನು ಮಾಯೆಯ ಎಂದರೆ ಎಲ್ಲರ ಎಲ್ಲ ಬಗೆಯ ಅಜ್ಞಾನಗಳಿಗೂ ಅಧಿಪತಿಯಾದ ಮೂಲಪ್ರಕೃತಿಯ ಮಾಯೆಯಿಂದ ಮೋಹಿತನಾಗಿ ವಿವೇಕವಿಲ್ಲದವನಾಗಿ ತಂದೆಯ ಸಮೀಪಕ್ಕೆ ಹೋಗದೆ ಅಲ್ಲಿಯೇ ನಿಂತುಬಿಟ್ಟನು. ||೩||

ತಂದೆಯು ರೋಗದಿಂದ ಕಷ್ಟಪಡುತ್ತಿರುವನೆಂದು ಮತ್ತೆ ಮತ್ತೆ ಕೇಳಿದಾಗ ಲೆಲ್ಲ ಅವನ ನೆರವಿಗಾಗಿ ಹೊರಡುವುದಕ್ಕೆ ಆಲೋಚಿಸಿದ ಸಮಯಕ್ಕೆ ಸರಿಯಾಗಿ ದೇವೇಂದ್ರನು ಬಂದು ಅವನನ್ನು ಹೋಗದಂತೆ ತಡೆದುಬಿಡುತ್ತಿದ್ದನು! ಇಂತಹ ಸಂದರ್ಭಗಳಲ್ಲಿ ತೋರಿಬರುವ ಕರ್ಮವಾದ ಸಿದ್ಧಾಂತಗಳಲ್ಲಿನ ತೊಡಕಿನ ಸಮಸ್ಯೆಗಳನ್ನು ನೌರಾಗಿ ಬಿಡಿಸಿರುವುದನ್ನು ಮನಗಾಣಬಹುದು. ||೪||

ಹೀಗಿರುವಲ್ಲಿ ಹರಿಶ್ಚಂದ್ರನು ಬಹಳವಾದ ದುಃಖದಿಂದ ಕಷ್ಟಪಡುತ್ತಾ ತನ್ನ ಸಮೀಪದಲ್ಲಿಯೇ ಇದ್ದ ಎಲ್ಲವನ್ನೂ ತಿಳಿದವನಾದ ತನಗೆ ಹಿತವನ್ನು ಮಾಡುವುದರಲ್ಲಿಯೇ ಆಸಕ್ತನಾದ ಗುರುವಾದ ವಸಿಷ್ಠನನ್ನು ಕುರಿತು ಗುಟ್ಟಾಗಿ ಹೀಗೆ ಪ್ರಶ್ನೆಮಾಡಿದನು. ||೫||

ರಾಜನು, ಓ ಪೂಜ್ಯರಾದ ಗುರುಗಳೇ, ಈಗ ನಾನು ಶರೀರದಲ್ಲಿರುವ ರೋಗದ ನೋವಿನಿಂದ ಮನಸ್ಸಿನಲ್ಲಿ ಸಮಾಧಾನವಿಲ್ಲದವನಾಗಿರುತ್ತೇನೆ. ಇದರ ನಿವಾರಣೆಗಾಗಿ ಏನನ್ನು ಮಾಡಲಿ? ದೊಡ್ಡದಾದ ಈ ರೋಗದಿಂದ ಉಂಟಾಗಬಹುದಾದ ಇನ್ನೂ ಹೆಚ್ಚಿನ ವಿಪತ್ತಿನ ಭಯದಿಂದ ದುಃಖಿಸುತ್ತಿರುವ ನನ್ನನ್ನು ಕಾಪಾಡಿ! ಎಂದು ಪ್ರಾರ್ಥಿಸುತ್ತಾ ಹೇಳಿದನು. ||೬||

॥ ವಸಿಷ್ಠ ಉವಾಚ ॥

ಶೃಣು ರಾಜನ್ನುಪಾಯೋಽಸ್ತಿ ರೋಗನಾಶಂ ಪ್ರತಿ ಸ್ತುತಃ ।
ತ್ರಯೋದಶವಿಧಾಃ ಪುತ್ರಾಃ ಕಥಿತಾ ಧರ್ಮಸಂಗ್ರಹೇ ॥೭॥

ತಸ್ಮಾತ್ಕ್ರೀತಂ ಸುತಂ ಕೃತ್ವಾ ಯಜಸ್ವ ಮಖಮುತ್ತಮಂ ।
ದ್ರವ್ಯಂ ದತ್ವಾ ಯಥೋದ್ದಿಷ್ಟಮಾನಯಸ್ವ ದ್ವಿಜೋತ್ತಮಂ ॥೮॥

ಏವಂ ಕೃತೇ ಮಖೇ ಭೂಪ ರೋಗನಾಶೋ ಭವಿಷ್ಯತಿ ।
ವರುಣೋಽಪಿ ಪ್ರಸನ್ನಾತ್ಮಾ ಭವಿಷ್ಯತಿ ಯಥಾಸುಖಂ ॥೯॥

ಇತಿ ತಸ್ಯ ವಚಃ ಶ್ರುತ್ವಾ ರಾಜಾ ಪ್ರೋವಾಚ ಮಂತ್ರಿಣಂ ।
ಅನ್ವೇಷಯ ಮಹಾಬುದ್ಧೇ ವಿಷಯೇಷ್ವತಿಯತ್ನತಃ ॥೧೦॥

ಕದಾಚಿತ್ಕೋಽಪಿ ಲೋಭಾರ್ಥೀ ದದಾತಿ ಸ್ವಸುತಂ ಪಿತಾ ।
ಸಮಾನಯ ಧನಂ ದತ್ವಾ ಯಾವತ್ಪ್ರಾರ್ಥಯತೇಽಸ್ಯ ಸಃ ॥೧೧॥

---

ವಸಿಷ್ಠನು ಹೇಳಿದನು— ರಾಜನೇ ಕೇಳು, ನಿನ್ನ ರೋಗವು ನಾಶವಾಗುವುದಕ್ಕೆ ಶ್ಲಾಘ್ಯವಾದ ಒಂದು ಉಪಾಯವಿರುವುದು. ಧರ್ಮಶಾಸ್ತ್ರಗಳಲ್ಲಿ ಹದಿಮೂರು (ಹನ್ನೆರಡು)ವಿಧವಾದ ಪುತ್ರರನ್ನು ಹೇಳಿರುವರು. ॥೭॥

ಆದುದರಿಂದ ಶ್ರೇಷ್ಠನಾದವನೊಬ್ಬ ಬ್ರಾಹ್ಮಣನಿಗೆ ಅವನು ಕೇಳುವಷ್ಟು ಹಣವನ್ನು ಕೊಟ್ಟು ಕ್ರೀತಪುತ್ರನನ್ನು ಪಡೆದು ಶ್ರೇಷ್ಠವಾದ ಯಜ್ಞವನ್ನು ಮಾಡು ! ॥೮॥

ಎಲೈ ಮಹಾರಾಜನೇ, ಹೀಗೆ ಯಜ್ಞವನ್ನು ಮಾಡಿದರೆ ನಿನ್ನ ರೋಗವೂ ನಾಶವಾಗುವುದು, ವರುಣನೂ ಪ್ರಸನ್ನನಾಗುವನು. ಇದೇ ಸುಖಕರವಾದ ಮಾರ್ಗವು. ॥೯॥

ವಸಿಷ್ಠನು ಹೇಳಿದ ಮಾತನ್ನು ಕೇಳಿ ರಾಜನು ಮಂತ್ರಿಯನ್ನು ಕುರಿತು, ಮಹಾಬುದ್ಧಿಯುಳ್ಳಮಂತ್ರಿಯೇ, ನಮ್ಮ ದೇಶಗಳಲ್ಲಿ ತುಂಬ ಪ್ರಯತ್ನಪಟ್ಟು ನರಪಶುವನ್ನು ಕೊಡುವವನನ್ನು ಹುಡುಕು. ॥೧೦॥

ಒಂದು ಸಮಯದಲ್ಲಿ ಯಾವನಾದರೊಬ್ಬ ತಂದೆಯು ಆಶ್ಯಾಸೆ ಅಥವಾ ಅವಶ್ಯಕತೆಯಿಂದ ತನ್ನ ಮಗನನ್ನು ಮಾರಬಹುದು. ಅವನು ಕೇಳುವಷ್ಟು ಹಣವನ್ನು ಕೊಟ್ಟು ಅವನ ಮಗನನ್ನು ಕರೆದುಕೊಂಡು ಬಾ. ॥೧೧॥

ಸರ್ವಥೈವ ಸಮಾನೇಯೋ ಯಜ್ಞಾರ್ಥೇ ದ್ವಿಜಬಾಲಕಃ ।
ನ ಕಾರ್ಯಾ ಕೃಪಣಾ ಬುದ್ಧಿಸ್ತ್ವಯಾ ಮತ್ಕಾರ್ಯಹೇತವೇ ॥೧೨॥

ಪ್ರಾರ್ಥನೀಯಸ್ತ್ವಯಾ ಪುತ್ರಃ ಕಸ್ಯಚಿದ್ದ್ವಿಜವಾದಿನಃ ।
ದ್ರವ್ಯೇಣ ದೇಹಿ ಯಜ್ಞಾರ್ಥಂ ಕರ್ತವ್ಯೋಽಸೌ ಪಶುಃ ಕಿಲ ॥೧೩॥

ಇತಿ ಸಂಚೋದಿತಸ್ತೇನ ಸಚಿವಃ ಕಾರ್ಯಹೇತವೇ ।
ಅನ್ವೇಷಯಾಮಾಸ ಪುರೇ ಗ್ರಾಮೇಗ್ರಾಮೇ ಗೃಹೇಗೃಹೇ ॥೧೪॥

ಏವಮನ್ವೇಷತಸ್ತಸ್ಯ ವಿಷಯೇ ಕಶ್ಚಿದಾತುರಃ ।
ನಿರ್ಧನಃ ತ್ರಿಸುತಶ್ಚಾಸೀದಜೀಗರ್ತೇತಿ ನಾಮತಃ ॥೧೫॥

ತಸ್ಯ ಪುತ್ರಂ ಶುನಶ್ಶೇಫಂ ಮಧ್ಯಮಂ ಮಂತ್ರಿಸತ್ತಮಃ ।
ಆನಯಾಮಾಸ ದತ್ತ್ವಾಽರ್ಥಂ ಪ್ರಾರ್ಥಿತಂ ಯದ್ಧನಂ ತದಾ ॥೧೬॥

---

ಅಲ್ಲದೆ ಓ ಮಂತ್ರಿಯೇ, ನಿನ್ನ ಸರ್ವಪ್ರಯತ್ನದಿಂದಲೂ ಯಜ್ಞಕ್ಕೋಸ್ಕರವಾಗಿ ಬ್ರಾಹ್ಮಣ ಬಾಲಕನನ್ನೇ ಕರೆತರಬೇಕು! ನನ್ನ ಕೆಲಸವನ್ನು ನೆರವೇರಿಸುವುದರಲ್ಲಿ ನೀನು ಲೋಭಬುದ್ಧಿಯನ್ನು ಮಾಡಬೇಡ. ॥೧೨॥

ಮತ್ತು ನೀನು ಬ್ರಾಹ್ಮಣನಾದ ಯಾವನನ್ನಾದರೂ ಕಂಡು "ನಿನ್ನ ಮಗನನ್ನು ದ್ರವ್ಯವನ್ನು ತೆಗೆದುಕೊಂಡು ಕೊಡು. ಯಜ್ಞಕ್ಕೋಸ್ಕರ ಅವನನ್ನು ಪಶುವನ್ನಾಗಿ ಮಾಡಬೇಕಾಗಿರುವುದು" ಎಂದೇ ಮುಚ್ಚುಮರೆ ಇಲ್ಲದೆ ಪ್ರಕಟವಾಗಿ ಹೇಳಿ ಕೇಳಬೇಕು. ಎಂದು ಹೇಳಿದನು. ॥೧೩॥

ಹೀಗೆಂದು ರಾಜನು ಮಂತ್ರಿಯನ್ನು ಪ್ರೇರಿಸಲು ಮಂತ್ರಿಯು ಕಾರ್ಯಸಿದ್ಧಿಗೋಸ್ಕರವಾಗಿ ಪಟ್ಟಣಗಳಲ್ಲಿಯೂ ಹಳ್ಳಿಹಳ್ಳಿಗಳಲ್ಲಿಯೂ ಮನೆಮನೆಯಲ್ಲಿಯೂ ಹುಡುಕುತ್ತಿದ್ದನು. ॥೧೪॥

ಹೀಗೆ ಮಂತ್ರಿಯು ಹುಡುಕುತ್ತಿರಲು ಆ ದೇಶದಲ್ಲಿಯೇ ಧನವಿಲ್ಲದೆ ಬಡತನದಿಂದ ದುಃಖಪಡುತ್ತಿದ್ದ, ಮೂರು ಜನ ಮಕ್ಕಳುಳ್ಳ, ಅಜೀಗರ್ತನೆಂಬ ಬ್ರಾಹ್ಮಣನಿದ್ದನು. ॥೧೫॥

ಆ ಮಂತ್ರಿಶ್ರೇಷ್ಠನು ಆ ಬ್ರಾಹ್ಮಣನ ಎರಡನೆಯ ಮಗನಾದ ಶುನಶ್ಶೇಫನೆಂಬುವನನ್ನು ಅವನ ತಂದೆಯು ಅಪೇಕ್ಷಿಸಿ ಕೇಳಿದಷ್ಟು ಧನವನ್ನು ಕೊಟ್ಟು ಕರೆದುಕೊಂಡು ಬಂದನು. ॥೧೬॥

ಸಮಾನೀಯ ಶುನಶ್ಶೇಫಂ ಸಚಿವಃ ಕಾರ್ಯತತ್ಪರಃ ।
ರಾಜ್ಞೇ ನಿವೇದಯಾಮಾಸ ಪಶುಯೋಗ್ಯಂ ದ್ವಿಜಾತ್ಮಜಂ ॥೧೭॥

ರಾಜಾಽತಿಮುದಿತಸ್ತೇನ ವಿಪ್ರಾನಾನೀಯ ಸರ್ವತಃ ।
ಕಾರಯಾಮಾಸ ಸಂಭಾರಾನ್ ಯಜ್ಞಾರ್ಥಂ ವೇದವಿತ್ತಮಃ ॥೧೮॥

ಪ್ರಾರಬ್ಧೇ ತು ಮಖೇ ತತ್ರ ವಿಶ್ವಾಮಿತ್ರೋ ಮಹಾಮುನಿಃ ।
ಬದ್ಧಂ ದೃಷ್ಟ್ವಾ ಶುನಃಶೇಫಂ ನಿಷಿಷೇಧ ನೃಪಂ ತದಾ ॥೧೯॥

ರಾಜನ್ ಮಾ ಸಾಹಸಂ ಕಾರ್ಷೀಃ ಮುಂಚೈನಂ ದ್ವಿಜಬಾಲಕಂ ।
ಪ್ರಾರ್ಥಯಾಮ್ಯಹಮಾಯುಷ್ಮನ್ ಸುಖಂ ತೇಽದ್ಯ ಭವಿಷ್ಯತಿ ॥೨೦॥

ಕ್ರಂದತ್ಯಯಂ ಶುನಃಶೇಫಃ ಕರುಣಾ ಮಾಂ ದುನೋತ್ಯಪಿ ।
ದಯಾವಾನ್ಭವ ರಾಜೇಂದ್ರ ಕುರು ಮೇ ವಚನಂ ನೃಪ ॥೨೧॥

---

ಕೆಲಸವನ್ನು ಸಾಧಿಸುವುದರಲ್ಲಿ ಆಸಕ್ತನಾದ ಮತ್ತು ದಕ್ಷನಾದ ಆ ಮಂತ್ರಿಯು ಯಜ್ಞಪಶುವಾಗಲು ಯೋಗ್ಯನಾದ ಬ್ರಾಹ್ಮಣಪುತ್ರನಾದ ಶುನಶ್ಶೇಫನನ್ನು ಕರೆದು ಕೊಂಡು ಬಂದು ರಾಜನಿಗೆ ಒಪ್ಪಿಸಿದನು. ॥೧೭॥

ಆದರಿಂದ ರಾಜನು ಬಹಳ ಸಂತೋಷಪಟ್ಟು ಎಲ್ಲ ಕಡೆಯಿಂದಲೂ ಬ್ರಾಹ್ಮಣ ರನ್ನು ಕರೆಯಿಸಿ, ವೇದವನ್ನು ತಿಳಿದವರಲ್ಲಿ ಶ್ರೇಷ್ಠನಾದುದರಿಂದ ಯಜ್ಞಕ್ಕೋಸ್ಕರ ವಾಗಿ ಬೇಕಾದ ಪದಾರ್ಥಗಳನ್ನೆಲ್ಲ ಸಿದ್ಧಮಾಡಿಸಿದನು. ॥೧೮॥

ಯಜ್ಞವು ಪ್ರಾರಂಭವಾಗಲು ಅಲ್ಲಿದ್ದ ವಿಶ್ವಾಮಿತ್ರಮಹರ್ಷಿಯು ಶುನಶ್ಶೇಫ ನನ್ನು ಯೂಪಸ್ತಂಭಕ್ಕೆ ಕಟ್ಟಿದುದನ್ನು ನೋಡಿ ಆಗ ರಾಜನನ್ನು ಕುರಿತು ಆ ಯಜ್ಞ ವನ್ನು ಮಾಡಬೇಡವೆಂದು ಹೇಳಿ ತಡೆದನು. ॥೧೯॥

ಎಲೈ ರಾಜನೇ, ಅಪಾಯವುಳ್ಳ ಸಾಹಸಕಾರ್ಯವನ್ನು ಮಾಡಬೇಡ! ಈ ಬ್ರಾಹ್ಮಣ ಬಾಲಕನನ್ನು ಬಿಟ್ಟು ಬಿಡು. ಆಯುಷ್ಮಂತನಾದ ರಾಜನೇ, ನಾನು ನಿನ್ನನ್ನು ಬೇಡಿಕೊಳ್ಳುತ್ತೇನೆ. ಈ ದಿವಸವೇ ನಿನಗೆ ಸುಖವುಂಟಾಗುವುದು. ॥೨೦॥

ರಾಜಶ್ರೇಷ್ಠನೇ, ಈ ಶುನಶ್ಶೇಫನು ಅಳುತ್ತಿರುವನು. ದಯೆಯು ನನ್ನನ್ನು ಬಾಧಿಸುತ್ತಿರುವುದು. ದೊರೆಯಾದ ನೀನೂ ದಯಾವಂತನಾಗು ನನ್ನ ಮಾತನ್ನು ನಡೆಯಿಸು. ॥೨೧॥

ಪರದೇಹಸ್ಯ ರಕ್ಷಾಯೈ ಸ್ವದೇಹಂ ಯೇ ದಯಾಪರಾಃ ।
ದದತಿ ಕ್ಷತ್ರಿಯಾಃ ಪೂರ್ವಂ ಸ್ವರ್ಗಕಾಮಾಃ ಶುಚಿವ್ರತಾಃ ॥೨೨॥

ತಂ ಸ್ವದೇಹಸ್ಯ ರಕ್ಷಾರ್ಥಂ ಹಂಸಿ ದ್ವಿಜಸುತಂ ಬಲಾತ್ ।
ಪಾಪಂ ಮಾ ಕುರು ರಾಜೇಂದ್ರ ದಯಾವಾನ್ಭವ ಬಾಲಕೇ ॥೨೩॥

ಸರ್ವೇಷಾಂ ಸದೃಶೀ ಪ್ರೀತಿರ್ದೇಹೇ ವೇತ್ಸಿ ಸ್ವಯಂ ನೃಪ ।
ಮುಂಚೈನಂ ಬಾಲಕಂ ತಸ್ಮಾತ್ ಪ್ರಮಾಣಂ ಯದಿ ಮೇ ವಚಃ ॥೨೪॥

॥ ವ್ಯಾಸ ಉವಾಚ ॥

ಅನಾದೃತ್ಯ ಚ ತದ್ವಾಕ್ಯಂ ರಾಜಾ ದುಃಖಾತುರೋ ಭೃಶಂ ।
ನ ಮುಮೋಚ ಮುನಿಸ್ತಸ್ಮೈ ಚುಕೋಪಾತೀವ ತಾಪಸಃ ॥೨೫॥

---

ಪೂರ್ವದಲ್ಲಿ ಸ್ವರ್ಗಮುಂತಾದ ಸದ್ಗತಿಯ ಫಲವನ್ನಪೇಕ್ಷಿಸುವ ಕ್ಷತ್ರಿಯರು ದಯಾವಂತರಾಗಿಯೂ ಪರಿಶುದ್ಧವಾದ ವ್ರತ ಉಳ್ಳವರಾಗಿಯೂ ಇದ್ದು, ಪರರ ದೇಹವನ್ನು ಕಾಪಾಡುವುದಕ್ಕಾಗಿ ಅವಶ್ಯಕವಾದಾಗ ತಮ್ಮ ದೇಹವನ್ನೇ ಕೊಡುತ್ತಿದ್ದರು! ॥೨೨॥

ಹೀಗಿರುವಾಗ ನೀನು ನಿನ್ನ ದೇಹವನ್ನು ಕಾಪಾಡಿಕೊಳ್ಳುವುದಕ್ಕಾಗಿ ಆ ಬ್ರಾಹ್ಮಣಪುತ್ರನನ್ನು ಬಲಾತ್ಕಾರದಿಂದ ಕೊಲ್ಲುತ್ತಿರುವೆ! ರಾಜನೇ, ಪಾಪಕಾರ್ಯವನ್ನು ಮಾಡಬೇಡ. ಈ ಬಾಲಕನಲ್ಲಿ ದಯೆಯನ್ನು ತೋರಿಸು. ॥೨೩॥

ಎಲೈ ರಾಜನೇ, ಅವರವರ ಶರೀರದ ವಿಷಯದಲ್ಲಿ ಎಲ್ಲರಿಗೂ ಒಂದೇ ಸಮವಾದ ಪ್ರೀತಿಯು ಇರುವುದೆಂಬುದನ್ನು ನೀನೂ ತಿಳಿದಿರುವೆ. ಆ ಕಾರಣದಿಂದ ನನ್ನ ಮಾತನ್ನು ನಂಬುವುದಾದರೆ ಈ ಬಾಲಕನನ್ನು ಬಿಟ್ಟುಬಿಡು. ಎಂದು ಹೇಳಿದನು. ॥೨೪॥

ವ್ಯಾಸಋಷಿಯು ಹೇಳಿದನು—ರಾಜನು ತನಗಿದ್ದ ಜಲೋದರರೋಗದಿಂದ ಬಹಳ ದುಃಖವನ್ನು ಅನುಭವಿಸುತ್ತಿದ್ದನಾದಕಾರಣ, ಯಜ್ಞವನ್ನು ಬಿಟ್ಟರೆ ತನ್ನ ರೋಗವು ಹೋಗುವುದಿಲ್ಲವೆಂಬ ತಿಳಿವಳಿಕೆಯಿಂದ, ವಿಶ್ವಾಮಿತ್ರನ ಮಾತನ್ನು ತಿರಸ್ಕರಿಸಿ ಶುನಶ್ಶೇಫನನ್ನು ಬಿಡಲಿಲ್ಲ. ತಪಸ್ವಿಯಾದ ವಿಶ್ವಾಮಿತ್ರನು ರಾಜನ ಮೇಲೆ ಬಹಳವಾಗಿ ಕೋಪಿಸಿಕೊಂಡನು. ॥೨೫॥

ಉಪದೇಶಂ ದದೌ ತಸ್ಮೈ ಶುನಃಶೇಫಾಯ ಕೌಶಿಕಃ ।
ಮಂತ್ರಂ ಪಾಶಧರಸ್ಯಾಥ ದಯಾವಾನ್ವೇದವಿತ್ತಮಃ ॥೨೬॥

ಶುನಃಶೇಫೋಽಪಿ ತಂ ಮಂತ್ರಮಸಕೃದ್ವ್ಯಥಕರ್ಶಿತಃ ।
ಪ್ಲುತಸ್ವರೇಣ ಚುಕ್ರೋಶ ಸಂಸ್ಮರನ್ವರುಣಂ ಭೃಶಂ ॥೨೭॥

ಸ್ತುವಂತಂ ಮುನಿಪುತ್ರಂ ತಂ ಜ್ಞಾತ್ವಾ ವೈ ಯಾದಸಾಂ ಪತಿಃ ।
ತತ್ರಾಗತ್ಯ ಶುನಶ್ಶೇಫಂ ಮುಮೋಚ ಕರುಣಾರ್ಣವಃ ॥೨೮॥

ರೋಗಹೀನಂ ನೃಪಂ ಕೃತ್ವಾ ವರುಣಃ ಸ್ವಗೃಹಂ ಯಯೌ ।
ವಿಶ್ವಾಮಿತ್ರಸ್ತು ತಂ ಪುತ್ರಂ ಕೃತವಾನ್ಮೋಚಿತಂ ಮೃತೇಃ ॥೨೯॥

ನ ಕೃತಂ ವಚನಂ ರಾಜ್ಞಾ ಕೌಶಿಕಸ್ಯ ಮಹಾತ್ಮನಃ ।
ರೋಷಂ ದಧಾರ ಮನಸಾ ರಾಜೋಪರಿ ಸ ಗಾಧಿಜಃ ॥೩೦॥
ಏಕಸ್ಮಿನ್ಸಮಯೇ ರಾಜಾ ಹಯಾರೂಢೋ ವನಂ ಗತಃ ।

---

ಆಮೇಲೆ ವೇದವನ್ನು ತಿಳಿದವರಲ್ಲಿ ಉತ್ತಮನಾದ ಮತ್ತು ದಯಾಶಾಲಿಯಾದ ಆ ವಿಶ್ವಾಮಿತ್ರನು ಆ ಶುನಶ್ಶೇಫನಿಗೆ ವರುಣನನ್ನು ಸ್ತುತಿಸಿ ಒಲಿಸಿಕೊಳ್ಳಲು ಸಮರ್ಥವಾದ ಮಂತ್ರವನ್ನು ಉಪದೇಶಮಾಡಿದನು. ॥೨೬॥

ಶುನಶ್ಶೇಫನಾದರೋ ತನ್ನನ್ನು ಯಜ್ಞದಲ್ಲಿ ಕೊಲ್ಲುವರೆಂಬ ಭಯದಿಂದ ವರುಣನನ್ನು ಸ್ಮರಿಸುತ್ತಾ ಆ ಮಂತ್ರವನ್ನು ಅನೇಕಾವೃತ್ತಿ ಪ್ಲುತಸ್ವರದಿಂದ ಗಟ್ಟಿಯಾಗಿ ಉಚ್ಚರಿಸುತ್ತಾ ವಿಶೇಷವಾಗಿ ಕೂಗಿಕೊಂಡನು ! ॥೨೭॥

ಆ ವರುಣದೇವನೂ ಸ್ತೋತ್ರಮಾಡುತ್ತಿರುವ ಮುನಿಪುತ್ರನನ್ನು ತಿಳಿದು ಅಲ್ಲಿಗೆ ಬಂದು ನೋಡಿ ದಯಾಸಮುದ್ರನಾದುದರಿಂದ ಆ ಶುನಶ್ಶೇಫನನ್ನು ಬಿಡಿಸಿ ಬಿಟ್ಟನು ! ॥೨೮॥

ಅಲ್ಲದೆ ವರುಣನು ಆ ಹರಿಶ್ಚಂದ್ರರಾಜನನ್ನೂ ರೋಗವಿಲ್ಲದವನನ್ನಾಗಿಮಾಡಿ, ತನ್ನ ಮನೆಗೆ ಹಿಂತಿರುಗಿ ಹೋದನು. ವಿಶ್ವಾಮಿತ್ರನು ಮರಣದಿಂದ ಬಿಡುಗಡೆಯನ್ನು ಹೊಂದಿದ ಆ ಶುನಶ್ಶೇಫನನ್ನು ತನ್ನ ಮಗನನ್ನಾಗಿ ಮಾಡಿಕೊಂಡನು.॥೨೯॥

ಮಹಾತ್ಮನಾದ ವಿಶ್ವಾಮಿತ್ರನ ಮಾತನ್ನು ಆ ರಾಜನು ನಡೆಯಿಸದಿದ್ದುದರಿಂದ ಆ ಗಾಧಿರಾಜನ ಮಗನಾದ ವಿಶ್ವಾಮಿತ್ರಮುನಿಯು ರಾಜನ ಮೇಲೆ ಮನಸ್ಸಿನಲ್ಲಿ ಕೋಪವನ್ನಿಟ್ಟುಕೊಂಡನು. ॥೩೦॥

ಸೂಕರಂ ಹಂತುಕಾಮಸ್ತು ಮಧ್ಯಾಹ್ನೇ ಕೌಶಿಕೀತಟೇ ॥೩೧॥

ವೃದ್ಧಬ್ರಾಹ್ಮಣವೇಷೇಣ ವಿಶ್ವಾಮಿತ್ರೇಣ ವಂಚಿತಃ ।
ಸರ್ವಸ್ವಂ ಪ್ರಾರ್ಥಿತಂ ತಸ್ಯ ಗೃಹೀತಂ ರಾಜ್ಯಮದ್ಭುತಂ ॥೩೨॥

ಪೀಡಿತೋಽಸೌ ಹರಿಶ್ಚಂದ್ರೋ ಯಜಮಾನೋ ಯತೋ ಭೃಶಂ ।
ವಸಿಷ್ಠಃ ಕೌಶಿಕಂ ಪ್ರಾಹ ವನೇ ಪ್ರಾಪ್ತಂ ಯದೃಚ್ಛಯಾ ॥೩೩॥

ಕ್ಷತ್ರಿಯಾಧಮ ದುರ್ಬುದ್ಧೇ ವೃಥಾ ಬ್ರಾಹ್ಮಣರೂಪಭೃತ್ ।
ಬಕಧರ್ಮ ವೃಥಾ ಕಿಂ ತ್ವಂ ಗರ್ವಂ ವಹಸಿ ದಾಂಭಿಕ ॥೩೪॥

ಕಸ್ಮಾತ್ತ್ವಯಾ ನೃಪಶ್ರೇಷ್ಠೋ ಯಜಮಾನೋ ಮಮಾಪ್ಯಸೌ ।
ಅಪರಾಧಂ ವಿನಾ ಜಾಲ್ಮ ಗಮಿತಂ ದುಃಖಮದ್ಭುತಂ ॥೩೫॥
ಬಕಧ್ಯಾನಪರೋ ಯಸ್ಮಾತ್ತಸ್ಮಾತ್ತ್ವಂ ವೈ ಬಕೋ ಭವ ।

---

ಒಂದಾನೊಂದು ಕಾಲದಲ್ಲಿ ಹರಿಶ್ಚಂದ್ರನು ಕಾಡುಹಂದಿಗಳನ್ನು ಬೇಟೆಯಾಡುವುದಕ್ಕಾಗಿ ಕುದುರೆಯನ್ನೇರಿ ಕಾಡಿಗೆ ಹೋದನು. ಅಲ್ಲಿ ಮಧ್ಯಾಹ್ನ ಸಮಯದಲ್ಲಿ ಕೌಶಿಕೀ ಎಂಬ ನದೀತೀರದಲ್ಲಿದ್ದಾಗ ವಿಶ್ವಾಮಿತ್ರಮುನಿಯು ಮುದುಕನಾದ ಬ್ರಾಹ್ಮಣವೇಷದಿಂದ ಬಂದು ಹರಿಶ್ಚಂದ್ರನನ್ನು ಮೋಸಪಡಿಸಿದನು. ॥೩೧॥

ವಿಶ್ವಾಮಿತ್ರನು ರಾಜನ ಸರ್ವಸ್ವವನ್ನೂ ಯಾಚಿಸಿ ಆಶ್ಚರ್ಯಕರವಾದ ರೀತಿಯಿಂದ ಅವನ ರಾಜ್ಯವನ್ನು ತೆಗೆದುಕೊಂಡು ಆ ಹರಿಶ್ಚಂದ್ರನನ್ನು ಬಹಳವಾಗಿ ಪೀಡಿಸಿದನು. ॥೩೨॥

ಒಂದುದಿನ ಅಕಸ್ಮಾತ್ತಾಗಿ ಕಾಡಿನಲ್ಲಿ ಎದುರಿಗೆ ಬರುತ್ತಿದ್ದ ವಿಶ್ವಾಮಿತ್ರನನ್ನು ವಸಿಷ್ಠನು ಕಂಡು, ಎಲೈ ಕೆಟ್ಟಬುದ್ಧಿಯ ನೀಚಕ್ಷತ್ರಿಯನೇ, ನೀನು ವ್ಯರ್ಥವಾಗಿ ಬ್ರಾಹ್ಮಣವೇಷವನ್ನು ಧರಿಸಿರುವೆ ! ಇದು ಬರಿಯ ಬಕಧರ್ಮವು. ಡಂಬಾಚಾರವನ್ನು ಆಚರಿಸಿ ವ್ಯರ್ಥವಾದ ಅಹಂಕಾರವನ್ನು ಏಕೆ ಹೊಂದಿರುವೆ ? ॥೩೩-೩೪॥

ಎಲೈ ನೀಚನೇ, ನನ್ನ ಶಿಷ್ಯನಾದ ಹರಿಶ್ಚಂದ್ರನಲ್ಲಿ ಯಾವ ತಪ್ಪು ಇಲ್ಲದಿದ್ದರೂ ಯಾವ ಕಾರಣದಿಂದ ನೀನು ಅವನಿಗೆ ವಿಶೇಷ ದುಃಖವನ್ನುಂಟುಮಾಡಿದೆಯೋ, ಮತ್ತು ನೀನು ಯಾವ ಕಾರಣದಿಂದ ಬಕನಂತೆ ಧ್ಯಾನಮಾಡುತ್ತಿರುವೆಯೋ, ಆ ಕಾರಣದಿಂದ ನೀನೂ ಬಕಪಕ್ಷಿಯೇ ಆಗು. ॥೩೫॥

ಇತಿ ಶಪ್ತೋ ವಸಿಷ್ಠೇನ ಕೌಶಿಕಃ ಪ್ರಾಹ ತಂ ಪುನಃ ॥೩೬॥
ತ್ವಮಪ್ಯಾಡಿರ್ಭವಾಯುಷ್ಮನ್ ಬಕೋಽಹಂ ಯಾವದೇವ ಹಿ ।

॥ ವ್ಯಾಸ ಉವಾಚ ॥

ಏವಂ ಪರಸ್ಪರಂ ದತ್ವಾ ಶಾಪಂ ತೌ ಕ್ರೋಧಪೀಡಿತೌ ॥೩೭॥

ಅಂಡಜೌ ತರಸಾ ಜಾತೌ ಸರಸ್ಯಾಡೀಬಕೌ ಮುನೀ ।
ಏಕಸ್ಮಿನ್‌ಪಾದಪೇ ನೀಡಂ ಕೃತ್ವಾಸೌ ಬಕರೂಪಭಾಕ್ ॥೩೮॥

ವಿಶ್ವಾಮಿತ್ರಃ ಸ್ಥಿತಸ್ತತ್ರ ದಿವ್ಯೇ ಸರಸಿ ಮಾನಸೇ ।
ಅನ್ಯಸ್ಮಿನ್‌ಪಾದಪೇ ಕೃತ್ವಾ ವಸಿಷ್ಠೋ ನೀಡಮುತ್ತಮಂ ॥೩೯॥

ಆಡೀರೂಪಧರಸ್ತಸ್ಥಾ ವನ್ಯೋನ್ಯದ್ವೇಷತತ್ಪರೌ ।
ದಿನೇದಿನೇ ಚ ಸಂಗ್ರಾಮಂ ಚಕ್ರತುಃ ಕ್ರೋಧಸಂಯುತೌ ॥೪೦॥

---

ಹೀಗೆಂದು ವಸಿಷ್ಠನು ವಿಶ್ವಾಮಿತ್ರನಿಗೆ ಶಾಪವನ್ನು ಕೊಡಲು, ಪುನಃ ವಿಶ್ವಾಮಿತ್ರನು ವಸಿಷ್ಠನನ್ನು ಕುರಿತು, ಎಲೈ ಆಯುಷ್ಮಂತನಾದ ವಸಿಷ್ಠನೇ, ನಾನು ಎಲ್ಲಿಯವರೆಗೆ ಬಕನಾಗಿರುವೆನೋ ಅಲ್ಲಿಯ ವರೆಗೆ ನೀನೂ ಕೂಡ ಆಡಿ ಎಂಬ ಹದ್ದಾಗಿರು. ಎಂದು ಶಪಿಸಿದನು. ॥೩೬॥

ಹೀಗೆ ಕೋಪದಿಂದ ಕೂಡಿದ ಆ ಮುನಿಗಳಿಬ್ಬರೂ ಒಬ್ಬರಿಗೊಬ್ಬರು ಶಾಪವನ್ನು ಕೊಟ್ಟು ಆ ಕ್ಷಣವೇ ಒಂದು ಸರೋವರದ ಸಮೀಪದಲ್ಲಿ ಆಡಿ ಬಕ ಎಂಬ ಪಕ್ಷಿಗಳಾಗಿ ಜನ್ಮವನ್ನು ಪಡೆದರು. ॥೩೭॥

ವಿಶ್ವಾಮಿತ್ರನು ಬಕನಾಗಿ ಶ್ರೇಷ್ಠವಾದ ಮಾನಸಸರೋವರದ ಸಮೀಪದಲ್ಲಿ ಒಂದು ಮರದಲ್ಲಿ ಗೂಡನ್ನು ಕಟ್ಟಿಕೊಂಡು ಇದ್ದನು. ವಸಿಷ್ಠನೂ ಅದೇ ಸರೋವರದ ದಡದಲ್ಲಿರುವ ಮತ್ತೊಂದು ಮರದಲ್ಲಿ ಆಡಿ ಎಂಬ, ಪಕ್ಷಿಯಾಗಿ ಉತ್ತಮವಾದ ಗೂಡನ್ನು ಕಟ್ಟಿಕೊಂಡಿದ್ದನು. ಈ ಎರಡು ಹಕ್ಕಿಗಳೂ ಒಂದನ್ನೊಂದು ದ್ವೇಷಿಸುತ್ತಾ ಬಹಳ ಕೋಪದಿಂದ ಪ್ರತಿದಿನವೂ ಯುದ್ಧವನ್ನು ಮಾಡುತ್ತಿದ್ದುವು. ॥೩೮-೩೯-೪೦॥

ದುಃಖದೌ ಸರ್ವಲೋಕಾನಾಂ ಕ್ರಂದಮಾನಾವುಭೌ ಭೃಶಂ ।
ಚಂಚುಪಕ್ಷಪ್ರಹಾರೈಸ್ತು ನಖಾಘಾತೈಃ ಪರಸ್ಪರಂ ॥೪೧॥

ಜಘ್ನತುರ್‌ ರುಧಿರಕ್ಲಿನ್ನೌ ಪುಷ್ಪಿತಾವಿವ ಕಿಂಶುಕೌ ।
ಏವಂ ಬಹೂನಿ ವರ್ಷಾಣಿ ಪಕ್ಷಿರೂಪಧರೌ ಮುನೀ ॥೪೨॥

ಸ್ಥಿತೌ ತತ್ರ ಮಹಾರಾಜ ಶಾಪಪಾಶೇನ ಯಂತ್ರಿತೌ ।

॥ ರಾಜೋವಾಚ ॥

ಕಥಂ ಮುಕ್ತೌ ಮುನಿಶ್ರೇಷ್ಠೌ ಶಾಪಾದ್ವಸಿಷ್ಠಕೌಶಿಕೌ ॥೪೩॥

ತನ್ಮಮಾಚಕ್ಷ್ವ ವಿಪ್ರರ್ಷೇ ಪರಂ ಕೌತೂಹಲಂ ಹಿ ಮೇ ।

॥ ವ್ಯಾಸ ಉವಾಚ ॥

ಯುಧ್ಯಮಾನಾವುಭೌ ದೃಷ್ಟ್ವಾ ಬ್ರಹ್ಮಾ ಲೋಕಪಿತಾಮಹಃ ॥೪೪॥

---

ಆ ಎರಡು ಹಕ್ಕಿಗಳೂ ವಿಶೇಷವಾಗಿ ದ್ವೇಷದಿಂದ ಕೂಗಿಕೊಳ್ಳುತ್ತಾ ಸಮಸ್ತ ಲೋಕಗಳಿಗೂ ದುಃಖವನ್ನುಂಟುಮಾಡುತ್ತಿದ್ದುವು. ಕೊಕ್ಕು ಮತ್ತು ರೆಕ್ಕೆಗಳಿಂದ ಒಂದಕ್ಕೊಂದು ಹೊಡೆದಾಡುತ್ತಾ, ಉಗುರುಗಳ ಏಟಿನಿಂದ ತಮ್ಮ ಮೈಯನ್ನು ಗಾಯಗಳ ರಕ್ತದಿಂದ ನೆನಸಿ ಕೆಂಪಗೆ ಮಾಡಿಕೊಳ್ಳುತ್ತಾ ಹೂ ಬಿಟ್ಟ ಮುತ್ತುಗದ ಮರದಂತೆ ಇದ್ದುವು. ದೊಡ್ಡವರಾಗಿ ಬಾಳಿದವರು ಹೀಗೆ ಅಧೋಗತಿಗೆ ಇಳಿಯುತ್ತಿರುವುದನ್ನು ನೋಡಿದರೆ ಜನರಿಗೆ ದುಃಖವಾಗುವುದು ಸ್ವಾಭಾವಿಕವಾದುದು. ಮತ್ತು ಅವರ ಉದಾಹರಣೆಯನ್ನು ತಿಳಿವಳಿಕೆ ಇಲ್ಲದ ಜನರೂ ಅನುಸರಿಸಬಹುದಾದ ಸಂಭವವಿರುವುದರಿಂದಲೂ ಬಳ್ಳಿಯಜನರಿಗೆ ದುಃಖವಾಗುವುದೂ ಸಹಜವೆಂದು ಭಾವವು. ॥೪೧॥

ಹೀಗೆ ಪಕ್ಷಿರೂಪವನ್ನು ಧರಿಸಿದ ಆ ಇಬ್ಬರು ಮುನಿಗಳೂ ಶಾಪವೆಂಬ ಹಗ್ಗದಿಂದ ಕಟ್ಟಲ್ಪಟ್ಟವರಾಗಿ ಅನೇಕವರ್ಷಗಳವರೆಗೆ ಅಲ್ಲಿದ್ದರು. ॥೪೨॥

ಜನಮೇಜಯರಾಜನು ಕೇಳಿದನು—ಓ ಬ್ರಹ್ಮರ್ಷಿಯಾದ ವ್ಯಾಸನೇ, ಆ ವಸಿಷ್ಠ ವಿಶ್ವಾಮಿತ್ರರು ಹೇಗೆ ಶಾಪದಿಂದ ಬಿಡುಗಡೆಯನ್ನು ಹೊಂದಿದರು? ಅದನ್ನು ಕೇಳ ಬೇಕೆಂದು ನನಗೆ ತುಂಬ ಕುತೂಹಲವಿರುವುದು. ಆ ವಿಚಾರವನ್ನು ನನಗೆ ಹೇಳು ಎಂದನು. ॥೪೩॥

ವ್ಯಾಸನು ಹೇಳಿದನು—ಯುದ್ಧಮಾಡುತ್ತಿರುವ ಈ ಇಬ್ಬರು ಋಷಿಗಳನ್ನೂ ನೋಡಿ ಲೋಕವನ್ನೆಲ್ಲ ಸೃಷ್ಟಿಮಾಡಿದ ಬ್ರಹ್ಮನು ದಯಾಶಾಲಿಗಳಾದ ಸಮಸ್ತ ದೇವತೆಗಳೊಡನೆ ಕೂಡಿ ಆ ಪ್ರದೇಶಕ್ಕೆ ಬಂದನು. ಏಕೆಂದರೆ ತ್ರಿಮೂರ್ತಿಗಳಲ್ಲಿ ಒಬ್ಬ

ತತ್ರಾಜಗಾಮಾನಿಮಿಷೈರ್ವೃತಃ ಸರ್ವೈರ್ದಯಾಪರೈಃ ।
ತಾವಾಶ್ವಾಸ್ಯ ಜಗತ್ಕರ್ತಾ ಯುದ್ಧತೋ ವಿನಿವಾರ್ಯ ಚ ॥೪೫॥

ಶಾಪಂ ಸಂಮೋಚಯಾಮಾಸ ತಯೋಃ ಕ್ಷಿಪ್ತಂ ಪರಸ್ಪರಂ ।
ತತೋ ಜಗ್ಮುಃ ಸುರಾಃ ಸರ್ವೇ ಸ್ವಾನಿ ಧಿಷ್ಣ್ಯಾನಿ ಪದ್ಮಭೂಃ ॥೪೬॥

ಸತ್ಯಲೋಕಂ ಜಗಾಮಾಶು ಹಂಸಾರೂಢಃ ಪ್ರತಾಪವಾನ್ ।
ವಿಶ್ವಾಮಿತ್ರೋಽಪ್ಯಗಾತ್ತೂರ್ಣಂ ವಸಿಷ್ಠಃ ಸ್ವಾಶ್ರಮಂ ಗತಃ ॥೪೭॥

---

ನಾದ ಬ್ರಹ್ಮನೂ ಇಂತಹ ದೊಡ್ಡವರು ಹೀಗೆ ಹೀನಸ್ಥಿತಿಗೆ ಬರುತ್ತಿರುವುದನ್ನು ನೋಡಿಯೂ ಉದಾಸೀನನಾದರೆ, ಮೇಲೆ ಸೂಚಿಸಿದಂತೆ ಧರ್ಮಾಚರಣೆಯು, ಧರ್ಮಾಚರಣೆಯ ಕಾರ್ಯವು ಕೆಟ್ಟುಹೋಗಿ ಲೋಕಕ್ಕೆಲ್ಲಕ್ಕೂ ಹಾನಿಯಾಗುವುದನ್ನು ತಪ್ಪಿಸಬೇಕಾದ ಭಾರವನ್ನು ತ್ರಿಮೂರ್ತಿಗಳು ನಿರ್ವಹಿಸಬೇಕಾಗಿರುತ್ತದೆ. ಎಂದು ಭಾವವು. ॥೪೪॥

ಬ್ರಹ್ಮನು ಅವರಿಬ್ಬರನ್ನೂ ಧಾರ್ಮಿಕವಾದ ಮಧ್ಯಸ್ಥತನದಿಂದ ಸಮಾಧಾನಪಡಿಸಿ ಯುದ್ಧವನ್ನು ತಪ್ಪಿಸಿ, ಒಬ್ಬರಿಗೊಬ್ಬರು ಕೊಟ್ಟಿದ್ದ ಶಾಪವನ್ನು ಬಿಡಿಸಿದನು. ಏಕೆಂದರೆ, ಧರ್ಮಾತ್ಮರೂ ಮಹಾತ್ಮರೂ ಆದ ಆ ಇಬ್ಬರು ಮುನಿಶ್ರೇಷ್ಠರಿಗೂ ಸನ್ನಿವೇಶ ವಿಶೇಷದಲ್ಲಿ ವಿಷಗಳಿಗೆಯಲ್ಲಿ ಅಹಂಕಾರ ಮಮಕಾರಗಳಿಂದ ತಾತ್ಕಾಲಿಕವಾಗಿ ಉಂಟಾಗಿದ್ದ ಕ್ರೋಧಾವೇಶದ ವೇಗವು ಕಾಲಕ್ರಮದಲ್ಲಿ ತಗ್ಗುತ್ತಾ ಬಂದಿತ್ತು. ಬ್ರಹ್ಮನ ಉಪದೇಶವಾಣಿಯಿಂದ ಅವರಲ್ಲಿ ಸ್ವಾಭಾವಿಕವಾಗಿದ್ದ ಧರ್ಮಾದರವು ಪುನಃ ಉಜ್ಜೀವನಗೊಂಡುದರಿಂದ ಅವರಿಬ್ಬರೂ ಪುನಃ ಶಾಂತಿಯನ್ನು ಪಡೆದರು. ದ್ವೇಷವು ಪ್ರತೀಕಾರದಿಂದ ಹೆಚ್ಚುತ್ತದೆಯೇ ಹೊರತು ತಗ್ಗುವುದಿಲ್ಲವು. ಎಂಬುದನ್ನು ಅವರು ಮನಗಂಡರೆಂದು ಭಾವವು. ಆ ಮೇಲೆ ದೇವತೆಗಳು ತಮ್ಮ ತಮ್ಮ ಮನೆಗಳಿಗೆ ಹೋದರು. ಬ್ರಹ್ಮನೂ ಸಹ ಹಂಸದ ಮೇಲೆ ಕುಳಿತು ತನ್ನ ವಾಸಸ್ಥಾನವಾದ ಸತ್ಯಲೋಕಕ್ಕೆ ಹಿಂತಿರುಗಿ ಹೋದನು. ಹೀಗೆ ಧರ್ಮರಕ್ಷಣೆಯಿಂದ ಶಾಂತಿಸ್ಥಾಪನೆಯ ಕಾರ್ಯವು ಈ ಪ್ರಪಂಚದಲ್ಲಿ ಆಗಾಗ್ಗೆ ನೆರವೇರುತ್ತಿರುತ್ತದೆ. ಇದು ಧಾರ್ಮಿಕಸಂಸ್ಕೃತಿಯ ಹೆಗ್ಗುರುತಾಗಿದೆ. ಅಲ್ಲದೆ ದ್ವೇಷಪ್ರತೀಕಾರಗಳಿಂದ ಶಾಂತಿಸ್ಥಾಪನೆಯಾಗಲಾರದೆಂಬುದನ್ನು ಈಗಿನ ರಾಷ್ಟ್ರಗಳು ಮನಗಾಣದಿರುವುದು ಎಲ್ಲರ ದೌರ್ಭಾಗ್ಯವಾಗಿದೆ. ॥೪೫-೪೬॥

ಬ್ರಹ್ಮನ ಉಪದೇಶದಿಂದ ವಿಶ್ವಾಮಿತ್ರ ವಸಿಷ್ಠರಿಬ್ಬರೂ ಪರಸ್ಪರ ಸ್ನೇಹವನ್ನು ಮುಂಚಿನಂತೆಯೇ ಈಗಲೂ ಮುಂದುಮಾಡಿಕೊಂಡು ತಮ್ಮ ತಮ್ಮ ಆಶ್ರಮಗಳಿಗೆ ಹೋದರು. ॥೪೭॥

ಮಿಥಃ ಸ್ನೇಹಂ ತತಃ ಕೃತ್ವಾ ಪ್ರಜಾಪತ್ಯುಪದೇಶತಃ ।
ಮೈತ್ರಾವರುಣಿನಾಪ್ಯೇವಂ ಕೃತಂ ಯುದ್ಧಮಕಾರಣಂ ॥೪೮॥

ಕೌಶಿಕೇನ ಸಮಂ ಭೂಪ ದುಃಖದಂ ಚ ಪರಸ್ಪರಂ ।
ಕೋ ನಾಮ ಮಾನವೋ ಲೋಕೇ ದೇವೋ ವಾ ದಾನವೋಽಪಿ ವಾ ॥೪೯॥

ಅಹಂಕಾರಜಯಂ ಕೃ(ಹಿ)ತ್ವಾ ಸರ್ವದಾ ಸುಖಭಾಗ್ಭವೇತ್ ।
ತಸ್ಮಾದ್ರಾಜಂಶ್ಚಿತ್ತಶುದ್ಧಿರ್ಮಹತಾಮಪಿ ದುರ್ಲಭಾ ॥೫೦॥

ಯತ್ನೇನ ಸಾಧನೀಯಾ ಸಾ ತದ್ವಿಹೀನಂ ನಿರರ್ಥಕಂ ।
ತೀರ್ಥದಾನತಪಸ್ಸತ್ಯಂ ಯತ್ಕಿಂಚಿದ್ಧರ್ಮಸಾಧನಂ ॥೫೧॥

[ ಶ್ರದ್ಧಾಽತ್ರತ್ರಿವಿಧಾ ಪ್ರೋಕ್ತಾ ಸಾತ್ವಿಕೀ ರಾಜಸೀ ತಥಾ ।
ತಾಮಸೀ ಸರ್ವದೇಹೇಷು ದೇಹಿನಾಂ ಸರ್ವಕರ್ಮಸು ॥೫೨॥

---

ಎಲೈ ಜನಮೇಜಯನೇ, ಹೀಗೆ ವಸಿಷ್ಠನೂ ಕೂಡ ವಿಶ್ವಾಮಿತ್ರನೊಡನೆ ತಕ್ಕುದಾದ ಕಾರಣವಿಲ್ಲದೆ ಪರಸ್ಪರ ದುಃಖವನ್ನುಂಟುಮಾಡುವ ಯುದ್ಧವನ್ನು ಮಾಡಿದನು. ॥೪೮॥

ಈ ಲೋಕದಲ್ಲಿ ಮನುಷ್ಯನಾಗಲಿ ದೇವನಾಗಲಿ ದಾನವನಾಗಲಿ ಅಹಂಕಾರ ವನ್ನು ಜಯಿಸಿ ಯಾವಾಗಲೂ ಸುಖವಾಗಿರುವವನಾವನಾದರೂ ಇರುವನೇ? ಏಕೆಂದರೆ ಜಿತೇಂದ್ರಿಯರಾದ ಮುನಿಗಳಿಗೂ ಒಂದೊಂದುವೇಳೆ ಆ ಮಹಾಮಾಯೆಯ ಪ್ರಭಾ ವದಿಂದ ಅಹಂಕಾರ ಮಮಕಾರಗಳು ತಲೆ ಎತ್ತಿ, ಕಾಮಕ್ರೋಧಗಳು ಮುಂದಾಗಿ ಅಪಕಾರ ಪ್ರತೀಕಾರ ದುಃಖಗಳಲ್ಲಿ ಪರಿಣಮಿಸುವುದುಂಟು. ಎಂದು ಭಾವವು.॥೪೯॥

ಎಲೈ ರಾಜನೇ, ಮಹಾತ್ಮರಿಗೂ ಚಿತ್ತಶುದ್ಧಿಯು ಒಂದೊಂದುವೇಳೆ ದುರ್ಲ ಭವಾಗುವುದು! ಆದುದರಿಂದ ಪ್ರಯತ್ನದಿಂದ ಆ ಚಿತ್ತಶುದ್ಧಿಯನ್ನು ಸಂಪಾದಿಸ ಬೇಕು. ಅಲ್ಲದೆ ಅದನ್ನು ಎಚ್ಚರಿಕೆಯಿಂದ ಯಾವಾಗಲೂ ಕಾಪಾಡಿಕೊಂಡಿರಬೇಕು. ಅದಿಲ್ಲದಿದ್ದರೆ ಹುಟ್ಟಿದುದೇ ವ್ಯರ್ಥವಾಗುವುದು. ತೀರ್ಥ, ದಾನ, ತಪಸ್ಸು, ಸತ್ಯ ಭಾಷಣ ಇವುಗಳು ಧರ್ಮಕ್ಕೆ ಅಲ್ಪವಾದ ಸಾಧನಗಳು. ಚಿತ್ತಶುದ್ಧಿಯೇ ಮುಖ್ಯ ವಾದ ಸಾಧನವು. ॥೫೦-೫೧॥

ರಾಜಶ್ರೇಷ್ಠನೇ, ಜೀವರು ತಾವು ಮಾಡುವ ಸಮಸ್ತ ಕರ್ಮಗಳ ವಿಷಯ ದಲ್ಲಿಯೂ ಸಾತ್ವಿಕ ರಾಜಸ ತಾಮಸವೆಂಬ ಮೂರು ಬಗೆಯ ಮನೋವೃತ್ತಿಯ

ಸಾತ್ತ್ವಿಕೀ ದುರ್ಲಭಾ ಲೋಕೇ ಯಥೋಕ್ತಫಲದಾ ಸದಾ ।
ತದರ್ಧಫಲದಾ ಪ್ರೋಕ್ತಾ ರಾಜಸೀ ವಿಧಿಸಂಯುತಾ ॥೫೩॥

ತಾಮಸೀ ತ್ವಫಲಾ ರಾಜನ್ನ ತು ಕೀರ್ತಿಕರೀ ಪುನಃ ।
ಕಾಮಕ್ರೋಧಾಭಿಭೂತಾನಾಂ ಜನಾನಾಂ ನೃಪಸತ್ತಮ ] ॥೫೪॥

ವಾಸನಾರಹಿತಂ ಕೃತ್ವಾ ತಚ್ಚಿತ್ತಂ ಶ್ರವಣಾದಿನಾ ।
ತೀರ್ಥಾದಿಷು ವಸೇನ್ನಿತ್ಯಂ ದೇವೀಪೂಜನತತ್ಪರಃ ॥೫೫॥

ದೇವೀನಾಮಾನಿ ವಚಸಾ ಗೃಹ್ಣಂಸ್ತಸ್ಯಾ ಗುಣಾನ್ ಸ್ತುವನ್ ।
ಧ್ಯಾಯಂಸ್ತಸ್ಯಾಃ ಪದಾಂಭೋಜಂ ಕಲಿದೋಷಭಯಾರ್ದಿತಃ ॥೫೬॥

---

ಆಸಕ್ತಿಯನ್ನು ಹೊಂದಿರುವರು. ಫಲಾಪೇಕ್ಷೆಯಿಲ್ಲದ ಕರ್ಮಾಸಕ್ತಿಯೇ ಸಾತ್ವಿಕ ಶ್ರದ್ಧೆಯು. ಈ ಶ್ರದ್ಧೆಯಿಂದ ಕೂಡಿ ಮಾಡಿದ ಕರ್ಮಗಳಿಗೆ ಪೂರ್ಣಫಲವು ಬಂದೇ ಬಿಡುವುದು. ಇಂತಹ ಜೀವರು ಲೋಕದಲ್ಲಿ ದುರ್ಲಭರು. ಫಲಾಪೇಕ್ಷೆಯಿಂದ ವಿಧಿಗನುಸಾರವಾಗಿ ಕರ್ಮ ಮಾಡಲು ಆಸಕ್ತಿಯನ್ನು ರಾಜಸಶ್ರದ್ಧೆ ಎನ್ನುವರು. ಈ ಶ್ರದ್ಧೆಯಿಂದ ಮಾಡಿದ ಕರ್ಮಗಳಿಗೆ ಅರ್ಧ ಫಲವು ಬರುವುದು. ಮನಸ್ಸು ಕಾಮಕ್ರೋಧಗಳಿಂದ ಕೂಡಿ ವಿಧಿಯನ್ನನುಸರಿಸದ ಕರ್ಮಾಸಕ್ತಿಯೇ ತಾಮಸ ಶ್ರದ್ಧೆಯು. ಈ ಶ್ರದ್ಧೆಯಿಂದ ಮಾಡಿದ ಕರ್ಮಗಳಿಗೆ ಫಲವೂ ಎಂದರೆ ಐಹಿಕ ಸುಖವಾಗಲಿ, ಆಮುಷ್ಮಿಕವಾದ ಅಭ್ಯುದಯವಾಗಲಿ, ಇಲ್ಲವು. ಲೋಕದಲ್ಲಿ ಕೀರ್ತಿಯೂ ಬರುವುದಿಲ್ಲವು. ॥೫೨-೫೩-೫೪॥

ಆದುದರಿಂದ ಮನುಷ್ಯನು ತನ್ನ ಮನಸ್ಸನ್ನು ಶಾಸ್ತ್ರಶ್ರವಣಮನನಾದಿಗಳಿಂದ ಫಲಾಭಿಲಾಷೆಯವಾಸನೆಯೂ ಇಲ್ಲದುದನ್ನಾಗಿ ಮಾಡಿಕೊಂಡು ಪ್ರತಿದಿನವೂ ದೇವಿಯ ಪೂಜೆಯಲ್ಲಿ ಆಸಕ್ತನಾಗಿ ತೀರ್ಥಕ್ಷೇತ್ರಗಳಲ್ಲಿ ವಾಸಮಾಡುತ್ತಿರಬೇಕು. ॥೫೫॥

ಕಲಿದೋಷಭಯದಿಂದ ಕಷ್ಟಪಡುವ ಮನುಷ್ಯನು ದೇವಿಯ ನಾಮಗಳನ್ನು ಬಾಯಿಯಲ್ಲಿ ಹೇಳುತ್ತಲೂ ಆ ದೇವಿಯ ಗುಣಗಳನ್ನು ಸ್ತೋತ್ರಮಾಡುತ್ತಲೂ ಮತ್ತು ದೇವಿಯ ಪಾದವನ್ನು ಯಾವಾಗಲೂ ಮನಸ್ಸಿನಲ್ಲಿ ಧ್ಯಾನಮಾಡುತ್ತಲೂ ಇರಬೇಕು. ॥೫೬॥

ಏವಂ ತು ಕುರ್ವತಸ್ತಸ್ಯ ನ ಕದಾಚಿತ್ಕಲೇರ್ಭಯಂ ।
ಅನಾಯಾಸೇನ ಸಂಸಾರಾನ್ಮುಚ್ಯತೇ ಪಾತಕೀ ಜನಃ ॥೫೭॥

ಇತಿ ಶ್ರೀದೇವೀಭಾಗವತೇಮಹಾಪುರಾಣೇ ಷಷ್ಠಸ್ಕಂಧೇ
ತ್ರಯೋದಶೋಽಧ್ಯಾಯಃ.

---

ಹೀಗೆ ಮಾಡುತ್ತಿರುವವನಿಗೆ ಎಂದಿಗೂ ಕಲಿಯ ಭಯವುಂಟಾಗದು. ಪಾಪಿಷ್ಠರಾದ ಜನರಾದರೂ ಹೀಗೆ ಮಾಡುತ್ತಿದ್ದರೆ ಅಂಥವರೂ ಯಾವ ಕಷ್ಟವೂ ಇಲ್ಲದೆ ಜನನಮರಣರೂಪವಾದ ಸಂಸಾರದಿಂದ ಬಿಡುಗಡೆಯನ್ನು ಹೊಂದುವರು. ||೫೭||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

### || ಚತುರ್ದಶೋಽಧ್ಯಾಯಃ ||

### ಹದಿನಾಲ್ಕನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಮೈತ್ರಾವರುಣಿರಿತ್ಯುಕ್ತಂ ನಾಮ ತಸ್ಯ ಮುನೇಃ ಕಥಂ ।**
**ವಸಿಷ್ಠಸ್ಯ ಮಹಾಭಾಗ ಬ್ರಹ್ಮಣಸ್ತನುಜಸ್ಯ ಹ ॥೧॥**

**ಕಿಮಸೌ ಕರ್ಮತೋ ನಾಮ ಪ್ರಾಪ್ತವಾನ್ಗುಣತಸ್ತಥಾ ।**
**ಬ್ರೂಹಿ ಮೇ ವದತಾಂ ಶ್ರೇಷ್ಠ ಕಾರಣಂ ತಸ್ಯ ನಾಮಜಂ ॥೨॥**

|| ವ್ಯಾಸ ಉವಾಚ ||

**ನಿಬೋಧ ನೃಪತಿಶ್ರೇಷ್ಠ ವಸಿಷ್ಠೋ ಬ್ರಹ್ಮಣಃ ಸುತಃ ।**
**ನಿಮಿಶಾಪಾತ್ತನುಂ ತ್ಯಕ್ತ್ವಾ ಪುನರ್ಜಾತೋ ಮಹಾದ್ಯುತಿಃ ॥೩॥**

---

ಮಹಾಮಹಿಮನಾದ ವ್ಯಾಸಮುನಿಯೇ, ಬ್ರಹ್ಮಮಾನಸಪುತ್ರನಾದ ವಸಿಷ್ಠನೆಂಬ ಆ ಮುನಿಗೆ ಮೈತ್ರಾವರುಣಿಯೆಂಬ ಹೆಸರು ಹೇಗೆ ಬಂದಿತು? ||೧||

ಕಥೆಯನ್ನು ಹೇಳುವವರಲ್ಲಿ ಶ್ರೇಷ್ಠನಾದ ಮುನಿಯೇ, ಈ ವಸಿಷ್ಠಮುನಿಯು ಮಿತ್ರಾವರುಣರ ಸಂಬಂಧವಾದ ಕರ್ಮದಿಂದ ಈ ಹೆಸರನ್ನು ಪಡೆದನೇ? ಅಥವಾ ಗುಣದಿಂದ ಪಡೆದನೇ? ಈ ಹೆಸರುಂಟಾಗುವುದಕ್ಕೆ ಕಾರಣವನ್ನು ನನಗೆ ಹೇಳು. ||೨||

ಜನಮೇಜಯನೇ ಕೇಳು — ಬ್ರಹ್ಮಮಾನಸಪುತ್ರನಾದ ಮಹಾತೇಜಸ್ವಿಯಾದ ವಸಿಷ್ಠಮುನಿಯು ನಿಮಿ ಎಂಬ ರಾಜನ ಶಾಪದಿಂದ ತನ್ನ ಶರೀರವನ್ನು ಬಿಟ್ಟು ಮತ್ತೆ ಹುಟ್ಟಿದನು. ||೩||

ಮಿತ್ರಾವರುಣಯೋರ್ಯಸ್ಮಾತ್ತಸ್ಮಾತ್ತನ್ನಾಮವಿಶ್ರುತಂ ।
ಮೈತ್ರಾವರುಣಿರಿತ್ಯಸ್ಮಿನ್ ಲೋಕೇ ಸರ್ವತ್ರ ಪಾರ್ಥಿವ ॥೪॥

॥ ರಾಜೋವಾಚ ॥

ಕಸ್ಮಾಚ್ಛಪ್ತಃ ಸ ಧರ್ಮಾತ್ಮಾ ರಾಜ್ಞಾ ಬ್ರಹ್ಮಾತ್ಮಜೋ ಮುನಿಃ ।
ಚಿತ್ರಮೇತನ್ಮುನಿಂ ಲಗ್ನೋ ರಾಜ್ಞಃ ಶಾಪೋಽತಿದಾರುಣಃ ॥೫॥

ಅನಾಗಸಂ ಮುನಿಂ ರಾಜಾ ಕಿಮಸೌ ಶಪ್ತವಾನ್ಮುನೇ ।
ಕಾರಣಂ ವದ ಧರ್ಮಜ್ಞ ತಸ್ಯ ಶಾಪಸ್ಯ ಮೂಲತಃ ॥೬॥

॥ ವ್ಯಾಸಉವಾಚ ॥

ಕಾರಣಂ ತು ಮಯಾ ಪ್ರೋಕ್ತಂ ತವ ಪೂರ್ವಂ ವಿನಿಶ್ಚಿತಂ ।
ಸಂಸಾರೋಽಯಂತ್ರಿಭಿರ್ವ್ಯಾಪ್ತೋ ರಾಜನ್ಮಾಯಾಗುಣೈಃ ಕಿಲ ॥೭॥

---

ಮಿತ್ರಾವರುಣರ ಪುತ್ರನಾದುದರಿಂದ ಮೈತ್ರಾವರುಣಿಯೆಂದು ಈ ಲೋಕದ ಲ್ಲೆಲ್ಲ ಆ ವಸಿಷ್ಠನ ಹೆಸರು ಪ್ರಸಿದ್ಧಿಗೆ ಬಂದಿರುವುದು. ॥೪॥

ರಾಜನು ಕೇಳಿದನು. ಆ ಬ್ರಹ್ಮಮಾನಸಪುತ್ರನೂ ಧರ್ಮಾತ್ಮನೂ ಆದ ವಸಿಷ್ಠಮುನಿಗೆ ರಾಜನು ಯಾವ ಕಾರಣದಿಂದ ಶಾಪವನ್ನು ಕೊಟ್ಟನು? ಕ್ರೂರ ವಾದ ರಾಜನ ಶಾಪವು ಮುನಿಗೆ ತಗುಲಿದುದು ಆಶ್ಚರ್ಯಕರವಾದುದು! ॥೫॥

ಎಲೈ ವ್ಯಾಸಮುನಿಯೇ, ರಾಜನು ತಪ್ಪುಮಾಡದಿರುವ ಮುನಿಗೆ ಯಾವ ಕಾರಣದಿಂದ ಶಾಪವನ್ನು ಕೊಟ್ಟನು? ಧರ್ಮವನ್ನು ತಿಳಿದ ನೀನು ಆ ಶಾಪಕ್ಕೆ ಮೊದಲಿನಿಂದಲೂ ಉಂಟಾದ ಕಾರಣವನ್ನು ನನಗೆ ಹೇಳು. ॥೬॥

ವ್ಯಾಸಮುನಿಯು ಹೇಳಿದನು— ರಾಜನೇ, ಶಾಪಕ್ಕೆ ನಿಜವಾದ ಕಾರಣವನ್ನು ನಾನು ಮೂರನೆಯ ಮತ್ತು ನಾಲ್ಕನೆಯ ಸ್ಕಂಧಗಳಲ್ಲಿ ಹೇಳಿರುವೆನು. ಈ ಜನನ ಮರಣರೂಪವಾದ ಸಂಸಾರವು ಮಾಯಾಸಂಬಂಧವಾದ ಸತ್ವರಜಸ್ತಮೋಗುಣಗಳ ವಿಷಮಪರಿಣಾಮಗಳಿಂದ ತುಂಬಿರುವುದು. ಆ ಗುಣಗಳು ಯಾವಾಗಲೂ ಹೆಚ್ಚು ಕಡಮೆಗಳಾಗುತ್ತಲೇ ಇರುವುವು. ಆದುದರಿಂದ ಸತ್ವಗುಣವು ಅಧಿಕವಾದಾಗ ಜನರು ಒಳ್ಳೆಯ ಕಾರ್ಯಗಳನ್ನು ಮಾಡುವರು. ರಜಸ್ತಮೋಗುಣಗಳು ಮುಂದಾದಾಗ ಮಹಾತ್ಮರೂ ಕೂಡ ನೀಚಕಾರ್ಯವನ್ನು ಮಾಡುವರು. ಹೀಗಿರುವುದರಿಂದ ಮಹಾತ್ಮರಿಗೆ ಹೇಗೆ ಶಾಪವನ್ನು ಕೊಟ್ಟನೆಂದು ಆಶ್ಚರ್ಯಪಡಬೇಕಾದುದೇ ಇಲ್ಲ. ॥೭॥

ಧರ್ಮಂ ಕರೋತು ಭೂಪಾಲ ಶ್ಚರಂತುತಾಪಸಾಸ್ತ್ರಪಃ ।
ಸರ್ವೇಷಾಂ ತು ಗುಣೈರ್ವಿದ್ಧಂ ನೋಜ್ವಲಂ ತದ್ಭವೇದಿಹ ॥೮॥

ಕಾಮಕ್ರೋಧಾಭಿಭೂತಾಶ್ಚ ರಾಜಾನೋ ಮುನಯಸ್ತಥಾ ।
ಲೋಭಾಹಂಕಾರಸಂಯುಕ್ತಾ ಶ್ಚರಂತಿ ದುಶ್ಚರಂ ತಪಃ ॥೯॥

ಯಜಂತಿ ಕ್ಷತ್ರಿಯಾ ರಾಜನ್ರಜೋಗುಣಸಮಾವೃತಾಃ ।
ಬ್ರಾಹ್ಮಣಾಸ್ತು ತಥಾ ರಾಜನ್ನ ಕೋಽಪಿ ಸತ್ವಸಂಯುತಃ ॥೧೦॥

ಋಷಿಣಾಽಸೌ ನಿಮಿಃ ಶಪ್ತಸ್ತೇನ ಶಪ್ತೋ ಮುನಿಃ ಪುನಃ ।
ದುಃಖಾದ್ದುಃಖತರಂ ಪ್ರಾಪ್ತಾವುಭಾವಪಿ ವಿಧೇರ್ಬಲಾತ್ ॥೧೧॥

ದ್ರವ್ಯಶುದ್ಧಿಃ ಕ್ರಿಯಾಶುದ್ಧಿರ್ಮನಸಃ ಶುದ್ಧಿರುಜ್ವಲಾ ।
ದುರ್ಲಭಾ ಪ್ರಾಣಿನಾಂ ಭೂಪ ಸಂಸಾರೇ ತ್ರಿಗುಣಾತ್ಮಕೇ ॥೧೨॥

---

ರಾಜನು ತನ್ನ ಧರ್ಮವನ್ನು ತಾನು ನಡೆಸಲಿ. ತಪಸ್ವಿಗಳು ತಪಸ್ಸನ್ನು ಮಾಡಲಿ. ಎಲ್ಲರೂ ಸತ್ವರಜಸ್ತಮೋಗುಣಗಳಿಂದ ಕೂಡಿರುವರು! ಅವರು ಮಾಡಿದ ಧರ್ಮಾದಿಗಳು ಸತ್ವಗುಣಪ್ರಧಾನವಾದುವುಗಳೆಂದು ಹೇಳಲಾಗುವುದಿಲ್ಲ. ॥೮॥

ರಾಜನೇ—ರಾಜರೂ ಮುನಿಗಳೂ ಕಾಮಕ್ರೋಧಗಳಿಂದ ಮನಸ್ಸನ್ನು ಕೆಡಿಸಿಕೊಂಡು ಅತ್ಯಾಸೆಯಿಂದಲೂ ಅಹಂಕಾರದಿಂದಲೂ ಕೂಡಿ ಕಷ್ಟವಾದ ತಪಸ್ಸನ್ನು ಮಾಡುವರು. ಕ್ಷತ್ರಿಯರು ರಜೋಗುಣದಿಂದ ಕೂಡಿದವರಾಗಿ ಪೂಜಾದಿಗಳನ್ನು ಮಾಡುವರು. ಬ್ರಾಹ್ಮಣರೂ ಹಾಗೆಯೇ ಮಾಡುವರು. ಯಾರೂ ಸತ್ವಗುಣಪ್ರಧಾನವಾದ ರೀತಿಯಲ್ಲಿ ಧರ್ಮಕರ್ಮಗಳನ್ನು ಮಾಡರು! ॥೮-೧೦॥

ಮೊದಲು ವಸಿಷ್ಠಮುನಿಯು ನಿಮಿರಾಜನಿಗೆ ಶಾಪವನ್ನು ಕೊಟ್ಟನು. ರಾಜನು ಆಮೇಲೆ ಮುನಿಗೆ ಪ್ರತಿಯಾಗಿ ಶಾಪವನ್ನು ಕೊಟ್ಟನು. ಇಬ್ಬರೂ ಪ್ರಾರಬ್ಧಕರ್ಮದಿಂದ ಪ್ರೇರಿತವಾದ ತಮೋಗುಣದ ಬಲದಿಂದ ಅತ್ಯಂತ ದುಃಖವನ್ನು ಹೊಂದಿದರು. ॥೧೧॥

ರಾಜನೇ— ಸತ್ವರಜಸ್ತಮೋಗುಣಗಳ ಪರಿಣಾಮಸ್ವರೂಪವಾದ ಈ ಸಂಸಾರದಲ್ಲಿ ಪ್ರಾಣಿಗಳಿಗೆ ದ್ರವ್ಯಶುದ್ಧಿಯೂ ಕ್ರಿಯಾಶುದ್ಧಿಯೂ ನಿರ್ದೋಷವಾದ ಮನಶ್ಶುದ್ಧಿಯೂ ಬಹು ಕಷ್ಟಪಟ್ಟು ಮಾಡಿದ ಪ್ರಯತ್ನದಿಂದ ಉಂಟಾಗುವುದೇ ಹೊರತು ಸುಲಭವಾಗಿ ಉಂಟಾಗದು. ॥೧೨॥

ಪರಾಶಕ್ತಿಪ್ರಭಾವೋಽಯಂ ನೋಲ್ಲಂಘ್ಯಃ ಕೇನ ಚಿತ್ಕ್ವಚಿತ್ ।
ಯಸ್ಯಾನುಗ್ರಹಮಿಚ್ಛೇತ್ಸಾ ಮೋಚಯತ್ಯೇವ ತಂ ಕ್ಷಣಾತ್ ॥೧೩॥

ಮಹಾಂತೋಽಪಿ ನ ಮುಚ್ಯಂತೇ ಹರಿಬ್ರಹ್ಮಹರಾದಯಃ ।
ಪಾಮರಾ ಅಪಿ ಮುಚ್ಯಂತೇ ಯಥಾ ಸತ್ಯವ್ರತಾದಯಃ ॥೧೪॥

ತಸ್ಯಾಸ್ತು ಹೃದಯಂ ಕೋಽಪಿ ನ ವೇತ್ತಿ ಭುವನತ್ರಯೇ ।
ತಥಾಪಿ ಭಕ್ತವಶ್ಯೇಯಂ ಭವತ್ಯೇವ ಸುನಿಶ್ಚಿತಂ ॥೧೫॥

---

ಮಹಾತ್ಮರಾದವರು ಗುಣತ್ರಯದ ವೇಗವನ್ನು ಏತಕ್ಕೆ ತಡೆಯಬಾರದು ಎಂದರೆ–ಮೂಲಪ್ರಕೃತಿಯಾದ ಭುವನೇಶ್ವರೀದೇವಿಯ ಮಹಿಮಾರೂಪವಾದ ತ್ರಿಗುಣಾನುಸರಣೆಯನ್ನು ಯಾರೂ ಮೀರಲಾರರು. ಜ್ಞಾನಿನಾಮಪಿ ಚೇತಾಂಸಿ ದೇವೀ ಭಗವತೀ ಹಿ ಸಾ । ಬಲಾದಾಕೃಷ್ಯ ಮೋಹಾಯ ಮಹಾಮಾಯಾ ಪ್ರಯಚ್ಛತಿ॥ ಎಂದು ದೇವೀಮಾಹಾತ್ಮ್ಯದಲ್ಲಿಯೂ ಹೇಳಿದೆ. ಅಲ್ಲದೆ ಆ ದೇವಿಯು ಯಾರಿಗೆ ಅನುಗ್ರಹಮಾಡಬೇಕೆಂದು ಅಪೇಕ್ಷಿಸುವಳೋ ಅಂಥವನನ್ನು ಆ ಕ್ಷಣದಲ್ಲಿಯೇ ಸಕಲ ಕಷ್ಟಗಳಿಂದಲೂ ಬಿಡಿಸಿ ಕಾಪಾಡುವಳು. ಈ ಅಂಶವನ್ನು ದೇವೀಮಾಹಾತ್ಮ್ಯ ಪುಟ ೧೨-೧೫ ಗಳಲ್ಲಿ ವಿವರಿಸಿದೆ. ॥೧೩॥

ವಿಷ್ಣುವೂ ಬ್ರಹ್ಮನೂ ಶಿವನೂ ಮುಂತಾದ ದೊಡ್ಡವರೂ ದೇವಿಯ ಸೇವೆಗೋಸ್ಕರವಾಗಿ ಅವರವರ ಅಧಿಕಾರದಲ್ಲಿ ಇನ್ನೂ ಇರುವರು. ಅವರಿಗೆ ಇನ್ನೂ ಮೋಕ್ಷವು ಉಂಟಾಗಲಿಲ್ಲವು. ಮೂರನೆಯ ಸ್ಕಂಧದಲ್ಲಿ ಪುಟ ೧೪೦-೧೭೩ ಹೇಳಿದಂತೆ ಸಾಮಾನ್ಯನಾದ ಸತ್ಯವ್ರತನೆಂಬವನು ದೇವಿಯ ಅನುಗ್ರಹದಿಂದ ಮೋಕ್ಷವನ್ನು ಹೊಂದಿದನು. ಈ ವಿಷಯದಲ್ಲಿ ಶ್ರೀಭುವನೇಶ್ವರೀದೇವಿಯ ಮನಸ್ಸಿನಲ್ಲಿ ಭಕ್ತನನ್ನು ಅನುಗ್ರಹಿಸಬೇಕೆಂದು ಉಂಟಾದ ಇಚ್ಛೆಯೇ ಕಾರಣವು. ॥೧೪॥

ಮೂರುಲೋಕದಲ್ಲಿರುವ ಯಾರಾದರೂ ಆ ದೇವಿಯ ಮನಸ್ಸಿನ ಸ್ಥಿತಿಯನ್ನು ಹೀಗೆಯೇ ಸರಿ ಎಂದು ಖಚಿತವಾಗಿ ತಿಳಿಯಲಾರರು. ಹಾಗಾದರೂ ದಯಾಮಯಳಾದ ಆ ದೇವಿಯು ಭಕ್ತರ ಅಧೀನಳಾಗಿರುವಳೆಂಬುದುಮಾತ್ರ ನಿಶ್ಚಯವಾದುದು! ॥೧೫॥

ತಸ್ಮಾತ್ತದ್ಭಕ್ತಿರಾಸ್ಥೇಯಾ ದೋಷನಿರ್ಮೂಲನಾಯ ಚ ।
ರಾಗದಂಭಾದಿಯುಕ್ತಾ ಚೇತ್ಸಾ ಭಕ್ತಿರ್ನಾಶಿನೀ ಭವೇತ್ ॥೧೬॥

ಇಕ್ಷ್ವಾಕುಕುಲಸಂಭೂತೋ ನಿಮಿರ್ನಾಮ ನರಾಧಿಪಃ ।
ರೂಪವಾನ್ ಗುಣಸಂಪನ್ನೋ ಧರ್ಮಜ್ಞೋ ಲೋಕರಂಜಕಃ॥೧೭॥

ಸತ್ಯವಾದೀ ದಾನಪರೋ ಯಾಜಕೋ ಜ್ಞಾನವಾಞ್ಛುಚಿಃ ।
ದ್ವಾದಶಸ್ತನಯೋ ಧೀಮಾನ್ ಪ್ರಜಾಪಾಲನತತ್ಪರಃ ॥೧೮॥

ಪುರಂ ನಿವೇಶಯಾಮಾಸ ಗೌತಮಾಶ್ರಮಸನ್ನಿಧೌ ।
ಜಯಂತ ಪುರಸಂಜ್ಞಂ ತು ಬ್ರಾಹ್ಮಣಾನಾಂ ಹಿತಾಯ ಸಃ ॥೧೯॥

---

ಆದುದರಿಂದ ದೋಷಗಳನ್ನು ನಾಶಮಾಡಿಕೊಳ್ಳುವುದಕ್ಕಾಗಿ ದೇವಿಯಲ್ಲಿ ನಿರ್ವ್ಯಾಜವಾದ ಭಕ್ತಿಯನ್ನಿಡಬೇಕು. ಈ ಭಕ್ತಿಯೇ ಮಂಗಳವನ್ನುಂಟುಮಾಡುವುದು. ಇಷ್ಟಾರ್ಥಪ್ರಾಪ್ತಿಗಾಗಿಯೂ ಜಂಬಕ್ಕಾಗಿಯೂ ಭಕ್ತಿಯನ್ನು ಮಾಡಿದರೆ ಅದು ನಾಶಕಾರಕವಾಗುವುದು! ಎಂದರೆ ಮಾನವನ ನಿಶ್ರೇಯಸವೆಂಬ ಪರಮ ಪುರುಷಾರ್ಥವು ಈಗಲೇ ಲಭಿಸದಂತೆ ಮಾಡುವುದು. ಆದುದರಿಂದ ಈ ಮಾತು ನಿರ್ವ್ಯಾಜವಾದ ಭಕ್ತಿಯು ಆವಶ್ಯಕವೆಂದು ಹೇಳುವುದರಲ್ಲಿ ತಾತ್ಪರ್ಯವುಳ್ಳದ್ದಾಗಿ ಕಾಮ್ಯಕರ್ಮಾಚರಣೆಯಲ್ಲಿ ಸಾದರಪ್ರವೃತ್ತಿಯುಂಟಾಗದಂತೆ ಭಯವನ್ನು ಹುಟ್ಟಿಸುವ ಮಾತಾಗಿರುವುದು. ಸ್ವಾಭಾವಿಕವಾಗಿ "ಸಹೇಲಂ ವಾ ಸಲೀಲಂ ವಾ ಯಸ್ಯಾಃ ಸ್ಮರಣ ಮಾತ್ರತಃ । ಸಿದ್ಧಯೋಽಷ್ಟೌ ಕರಸ್ಥಾಃ ಸ್ಯುರಂತೇ ಮುಕ್ತಿಶ್ಚ ಶಾಶ್ವತೀ ॥ ಎಂಬ ವಚನದಿಂದ ದೇವಿಯಲ್ಲಿ ಯಾವ ರೀತಿಯಾದ ಭಕ್ತಿಮಾಡಿದರೂ ಅದು ತಕ್ಕ ಫಲವನ್ನು ಕೊಡುವುದರಲ್ಲಿ ಸಂದೇಹವಿಲ್ಲವೆಂದು ತಿಳಿಯಬೇಕು. ॥೧೬॥

ಇಕ್ಷ್ವಾಕು ರಾಜನ ಹನ್ನೆರಡನೆಯ ಮಗನಾದ ನಿಮಿಯೆಂಬ ರಾಜನು ರೂಪವಂತನಾಗಿಯೂ ಗುಣವಂತನಾಗಿಯೂ ಧರ್ಮವನ್ನು ತಿಳಿದವನಾಗಿಯೂ ಸತ್ಯವಂತನಾಗಿಯೂ ದಾನಮಾಡುವುದರಲ್ಲಾಸಕ್ತನಾಗಿಯೂ ಯಜ್ಞಮಾಡಬೇಕೆಂಬಾಸೆಯುಳ್ಳವನಾಗಿಯೂ ಯುಕ್ತಾಯುಕ್ತವಿಚಾರವನ್ನು ಬಲ್ಲವನಾಗಿಯೂ ಪರಿಶುದ್ಧನಾಗಿಯೂ ಇದ್ದು ತನ್ನ ಪ್ರಜೆಗಳನ್ನು ಸಂತೋಷಪಡಿಸುತ್ತಾ ಯಾವಾಗಲೂ ಆ ಪ್ರಜೆಗಳನ್ನು ಕಾಪಾಡುವುದರಲ್ಲಾಸಕ್ತನಾಗಿದ್ದನು. ॥೧೭-೧೮॥

ಆ ನಿಮಿರಾಜನು ಗೌತಮರ ಆಶ್ರಮದ ಸಮೀಪದಲ್ಲಿ ಬ್ರಾಹ್ಮಣಕ್ಷೇಮಕ್ಕೋಸ್ಕರವಾಗಿ ಜಯಂತಪುರವೆಂಬ ಹೆಸರಿನ ಒಂದು ಅಗ್ರಹಾರವನ್ನು ಕಟ್ಟಿಸಿದನು. ॥೧೯॥

ಬುದ್ಧಿಸ್ತಸ್ಯ ಸಮುತ್ಪನ್ನಾ ಯಜೇಯಮಿತಿ ರಾಜಸೀ ।
ಯಜ್ಞೇನ ಬಹುಕಾಲೇನ ದಕ್ಷಿಣಾಸಂಯುತೇನ ಚ ॥೨೦॥

ಇಕ್ಷ್ವಾಕುಂ ಪಿತರಂ ದೃಷ್ಟ್ವಾ ಯಜ್ಞಕಾರ್ಯಾಯ ಪಾರ್ಥಿವ ।
ಕಾರಯಾಮಾಸ ಸಂಭಾರಂ ಯಥೋದ್ದಿಷ್ಟಂ ಮಹಾತ್ಮಭಿಃ ॥೨೧॥

ಭೃಗುಮಂಗಿರಸಂ ಚೈವ ವಾಮದೇವಂ ಚ ಗೌತಮಂ ।
ವಸಿಷ್ಠಂ ಚ ಪುಲಸ್ತ್ಯಂ ಚ ಋಚೀಕಂ ಪುಲಹಂ ಕ್ರತುಂ ॥೨೨॥

ಮುನೀನಾಮಂತ್ರಯಾಮಾಸ ಸರ್ವಜ್ಞಾನ್ವೇದಪಾರಗಾನ್ ।
ಯಜ್ಞವಿದ್ಯಾಪ್ರವೀಣಾಂಶ್ಚ ತಾಪಸಾನ್ವೇದವಿತ್ತಮಾನ್ ॥೨೩॥

ರಾಜಾ ಸಂಭೃತಸಂಭಾರಃ ಸಂಪೂಜ್ಯ ಗುರುಮಾತ್ಮನಃ ।
ವಸಿಷ್ಠಂ ಪ್ರಾಹ ಧರ್ಮಜ್ಞೋ ವಿನಯೇನ ಸಮನ್ವಿತಃ ॥೨೪॥

---

ಆ ರಾಜನಿಗೆ ಬಹಳಕಾಲ ಮಾಡಬಹುದಾದ ದಕ್ಷಿಣೆಯಿಂದ ಕೂಡಿದ ಯಜ್ಞವನ್ನು ಮಾಡಬೇಕೆಂಬ ರಜೋಗುಣದಿಂದ ಕೂಡಿದ ಬುದ್ಧಿಯುಂಟಾಯಿತು. ॥೨೦॥

ಅವನು ತನ್ನ ತಂದೆಯಾದ ಇಕ್ಷ್ವಾಕುರಾಜನ ಅಪ್ಪಣೆಯನ್ನು ಪಡೆದು ಯಜ್ಞಕಾರ್ಯಕ್ಕಾಗಿ ದೊಡ್ಡವರು ಹೇಳಿದಂತೆ ಸಮಸ್ತ ಪದಾರ್ಥಗಳನ್ನೂ ಸಿದ್ಧ ಮಾಡಿದನು. ॥೨೧॥

ಸಮಸ್ತವನ್ನೂ ತಿಳಿದವರೂ, ವೇದವನ್ನು ಸಂಪೂರ್ಣವಾಗಿ ಬಲ್ಲವರೂ, ಯಜ್ಞಕಲ್ಪಗಳ ವಿದ್ಯೆಯಲ್ಲಿ ಬುದ್ಧಿವಂತರೂ, ತಪಸ್ವಿಗಳೂ ಆದ ಭೃಗು, ಅಂಗಿರಸ, ವಾಮದೇವ, ಗೌತಮ, ವಸಿಷ್ಠ, ಪುಲಸ್ತ್ಯ, ಋಚೀಕ, ಪುಲಹ, ಕ್ರತು ಎಂಬ ಮುನಿಗಳನ್ನು ಕರೆಯಿಸಿದನು. ॥೨೩॥

ಆ ನಿಮಿರಾಜನು ಯಜ್ಞಕ್ಕಾಗಿ ಸಕಲ ಪದಾರ್ಥಗಳನ್ನೂ ಸಿದ್ಧಮಾಡಿ ತನ್ನ ಗುರುವಾದ ವಸಿಷ್ಠಋಷಿಯನ್ನು ಪೂಜಿಸಿ ಧರ್ಮವನ್ನು ಬಲ್ಲವನಾದುದರಿಂದ ವಿನಯದಿಂದ ಆ ಗುರುವನ್ನು ಕುರಿತು ಹೀಗೆ ಹೇಳಿದನು. ॥೨೪॥

ಯಜೇಯಂ ಮುನಿಶಾರ್ದೂಲ ಯಾಜಯಸ್ವ ಕೃಪಾನಿಧೇ ।
ಗುರುಸ್ತ್ವಂ ಸರ್ವವೇತ್ತಾಽಸಿ ಕಾರ್ಯಂ ಮೇ ಕುರು ಸಾಂಪ್ರತಂ ॥೨೫॥

ಯಜ್ಞೋಪಕರಣಂ ಸರ್ವಂ ಸಮಾನೀತಂ ಸುಸಂಸ್ಕೃತಂ ।
ಪಂಚವರ್ಷಸಹಸ್ರಂ ತು ದೀಕ್ಷಾಂ ಕರ್ತುಂ ಮತಿಶ್ಚ ಮೇ ॥೨೬॥

ಯಸ್ಮಿನ್ಯಜ್ಞೇ ಸಮಾರಾಧ್ಯಾ ದೇವೀ ಶ್ರೀಜಗದಂಬಿಕಾ ।
ತತ್ಪ್ರೀತ್ಯರ್ಥಮಹಂ ಯಜ್ಞಂ ಕರೋಮಿ ವಿಧಿಪೂರ್ವಕಂ ॥೨೭॥

ತಚ್ಛ್ರುತ್ವಾಽಸೌ ನಿಮೇರ್ವಾಕ್ಯಂ ವಸಿಷ್ಠಃ ಪ್ರಾಹ ಭೂಪತಿಂ ।
ಇಂದ್ರೇಣಾಹಂ ವೃತಃ ಪೂರ್ವಂ ಯಜ್ಞಾರ್ಥಂ ನೃಪಸತ್ತಮ ॥೨೮॥

ಪರಾಶಕ್ತಿಮಖಂ ಕರ್ತುಮುದ್ಯುಕ್ತಃ ಪಾಕಶಾಸನಃ ।
ಸ ದೀಕ್ಷಾಂ ಗಮಿತೋ ದೇವಃ ಪಂಚವರ್ಷಶತಾತ್ಮಿಕಾಂ ॥೨೯॥

---

ಎಲೈ ಮುನಿಶ್ರೇಷ್ಠನೇ, ದಯಾನಿಧಿಯಾದ ನೀನು ಸಮಸ್ತವನ್ನೂ ತಿಳಿದವನು ; ನನಗೆ ಗುರುವಾಗಿರುವೆ. ಐದು ಸಾವಿರ ವರ್ಷಗಳ ವರೆಗೆ ನಿಯಮದಲ್ಲಿದ್ದು ಯಜ್ಞಮಾಡಬೇಕೆಂಬ ಬುದ್ಧಿಯು ನನಗುಂಟಾಗಿರುವುದು ! ಅದಕ್ಕೆ ಬೇಕಾದ ಸಕಲ ಪದಾರ್ಥಗಳನ್ನೂ ತರಿಸಿ ಅಣಿಮಾಡಿಸಿರುವೆನು. ನನ್ನಿಂದ ಆ ಯಜ್ಞವನ್ನು ಮಾಡಿಸು. ॥೨೫-೨೬॥

ಯಾವ ಯಾಗದಲ್ಲಿ ಜಗದಂಬೆಯಾದ ಶ್ರೀಭುವನೇಶ್ವರೀದೇವಿಯೇ ಆರಾಧ್ಯದೇವತೆಯಾಗಿರುವಳೋ ಆ ದೇವಿಯ ಪ್ರೀತ್ಯರ್ಥವಾಗಿ ನಾನು ವಿಧಿಗನುಸಾರವಾಗಿ ಯಜ್ಞವನ್ನು ಮಾಡುವೆನು. ಎಂದನು. ॥೨೭॥

ನಿಮಿರಾಜನು ಹೇಳಿದ ಮಾತನ್ನು ಕೇಳಿ ವಸಿಷ್ಠನು ರಾಜನನ್ನು ಕುರಿತು ಎಲೈ ರಾಜಶ್ರೇಷ್ಠನೇ, ಇದಕ್ಕೆ ಮೊದಲೇ ದೇವೇಂದ್ರನು ತನಗೆ ಯಜ್ಞವನ್ನು ಮಾಡಿಸಬೇಕೆಂದು ನನ್ನನ್ನು ಕರೆದಿರುವನು. ಆ ದೇವೇಂದ್ರನು ಐದುನೂರು ವರ್ಷಗಳವರೆಗೆ ದೀಕ್ಷೆಯನ್ನು ವಹಿಸಿ ದೇವೀ ಯಜ್ಞವನ್ನು ಮಾಡಬೇಕೆಂದಿರುವನು. ಯಜ್ಞದೀಕ್ಷೆಯನ್ನು ವಹಿಸಿರುವನು. ॥೨೮-೨೯॥

ತಸ್ಮಾತ್ತ್ವಮಂತರಂ ತಾವತ್ಪ್ರತಿಪಾಲಯ ಪಾರ್ಥಿವ ।
ಇಂದ್ರಯಜ್ಞೇ ಸಮಾಪ್ತೇಽತ್ರ ಕೃತ್ವಾ ಕಾರ್ಯಂ ದಿವಸ್ಪತೇಃ ॥೩೦॥
ಆಗಮಿಷ್ಯಾಮ್ಯಹಂ ರಾಜಂಸ್ತಾವತ್ತ್ವಂ ಪ್ರತಿಪಾಲಯ ।

॥ ರಾಜೋವಾಚ ॥

ಮಯಾ ನಿಮಂತ್ರಿತಾಶ್ಚಾನ್ಯೇ ಮುನಯೋ ಯಜ್ಞಕಾರಣಾತ್ ॥೩೧॥
ಸಂಭಾರಾಃ ಸಂಭೃತಾಃ ಸರ್ವೇ ಪಾಲಯಾಮಿ ಕಥಂ ಗುರೋ ।
ಇಕ್ಷ್ವಾಕೂಣಾಂ ಕುಲೇ ಬ್ರಹ್ಮನ್ ಗುರುಸ್ತ್ವಂ ವೇದವಿತ್ತಮ ॥೩೨॥
ಕಥಂ ತ್ಯಕ್ತ್ವಾಽದ್ಯ ಮೇ ಕಾರ್ಯಮುದ್ಯತೋ ಗಂತುಮಾಶು ವೈ ।
ನ ತೇ ಯುಕ್ತಂ ದ್ವಿಜಶ್ರೇಷ್ಠ ಯದುತ್ಸೃಜ್ಯ ಮಖಂ ಮಮ ॥೩೩॥
ಗಂತಾಽಸಿ ಧನಲೋಭೇನ ಲೋಭಾಕುಲಿತಚೇತನಃ ।
ನಿವಾರಿತೋಽಪಿ ರಾಜ್ಞಾ ಸ ಜಗಾಮೇಂದ್ರಮಖಂ ಗುರುಃ ॥೩೪॥

---

ಆದುದರಿಂದ ಎಲೈ ರಾಜನೇ. ಅಷ್ಟುಕಾಲದವರೆಗೆ ನೀನು ನನ್ನನ್ನು ನಿರೀಕ್ಷಿಸ ಬೇಕು. ದೇವೇಂದ್ರನ ಯಜ್ಞವು ಮುಗಿದೊಡನೆಯೇ ಅವನ ಕೆಲಸವನ್ನು ಸಫಲ ಗೊಳಿಸಿ ಇಲ್ಲಿಗೆ ಬರುವೆನು. ಅಲ್ಲಿಯವರೆಗೆ ನೀನು ನಿರೀಕ್ಷಿಸುತ್ತಾ ನನಗೆ ಅವಕಾಶ ವನ್ನು ಕೊಡು. ಎಂದನು. ॥೩೦॥

ರಾಜನು ಹೇಳಿದನು— ಓ ಗುರುವೇ, ಯಜ್ಞಕ್ಕೋಸ್ಕರವಾಗಿ ಅನೇಕ ಋಷಿ ಗಳನ್ನು ಕರೆದಿರುವೆನು. ಸಕಲಪದಾರ್ಥಗಳೂ ಸಿದ್ಧವಾಗಿವೆ. ಹೀಗಿರುವಲ್ಲಿ ಅಷ್ಟು ಕಾಲದವರೆಗೆ ನಾನು ಹೇಗೆ ನಿರೀಕ್ಷಿಸಿಕೊಂಡಿರಲಿ? ನಮ್ಮ ಇಕ್ಷ್ವಾಕುವಂಶಕ್ಕೆ ವೇದ ವನ್ನು ಬಲ್ಲವರಲ್ಲಿ ಶ್ರೇಷ್ಠನಾದ ನೀನೇ ಗುರುವಾಗಿರುವೆ. ॥೩೧-೩೨॥

ಓ ಬ್ರಾಹ್ಮಣಶ್ರೇಷ್ಠನೇ, ನನ್ನ ಕೆಲಸವನ್ನು ಬಿಟ್ಟು ಮುಂಚಿತವಾಗಿ ದೇವೇಂದ್ರನ ಯಜ್ಞಕ್ಕೆ ಹೋಗಲು ಹೇಗೆತಾನೆ ಪ್ರಯತ್ನಪಡುವೆ? ನನ್ನ ಯಜ್ಞ ವನ್ನು ಬಿಟ್ಟು ಅತ್ಯಾಸೆಯ ಮನಸ್ಸಿನಿಂದ ಹಣದಾಸೆಗೆ ದೇವೇಂದ್ರನ ಯಜ್ಞಕ್ಕೆ ಹೋಗುವುದು ನಿನಗೆ ಯೋಗ್ಯವಲ್ಲವು! ॥೩೩॥

ಹೀಗೆಂದು ಹೇಳಿ ರಾಜನು ಗುರುವನ್ನು ತಡೆದರೂ ನಿಲ್ಲದೆ ಆ ಗುರುವು ದೇವೇಂದ್ರನ ಯಜ್ಞಕ್ಕೇ ಹೊರಟು ಹೋದನು. ರಾಜನು ತನ್ನ ಮನದಲ್ಲಿ ಈ

ರಾಜಾಽಪಿ ನಿಮಿನಾ ಭೂತ್ವಾ ಗೌತಮಂ ಪ್ರತ್ಯಪೂಜಯತ್ ।
ಇಯಾಜ ಹಿಮವತ್ಪಾರ್ಶ್ವೇ ಸಾಗರಸ್ಯ ಸಮೀಪತಃ ॥೩೫॥

ದಕ್ಷಿಣಾ ಬಹುಲಾ ದತ್ತಾ ವಿಪ್ರೇಭ್ಯೋ ಮಖಕರ್ಮಣಿ.।
ನಿಮಿನಾ ಪಂಚಸಾಹಸ್ರೀ ದೀಕ್ಷಾ ತತ್ರ ಕೃತಾ ನೃಪ ॥೩೬॥

ಋತ್ವಿಜಃ ಪೂಜಿತಾಃ ಕಾಮಂ ಧನೈರ್ಗೋಭಿರ್ಮುದಾ ಯುತಾಃ ।
ಶಕ್ರಯಜ್ಞೇ ಸಮಾಪ್ತೇ ತು ಪಂಚವರ್ಷಶತಾತ್ಮಕೇ ॥೩೭॥

ಆಜಗಾಮ ವಸಿಷ್ಠಸ್ತು ರಾಜ್ಞಃ ಸತ್ರದಿದೃಕ್ಷಯಾ ।
ಆಗತ್ಯ ಸಂಸ್ಥಿತಸ್ತತ್ರ ದರ್ಶನಾರ್ಥಂ ನೃಪಸ್ಯ ಚ ॥೩೮॥

ತದಾ ರಾಜಾ ಪ್ರಸುಪ್ತಸ್ತು ನಿದ್ರಯಾಽಪಹೃತೋ ಭೃಶಂ ।
ನಾಸೌ ಪ್ರಬೋಧಿತೋ ಭೃತ್ಯೈಃ ನಾಗತಸ್ತು ಮುನಿಂ ನೃಪಃ ॥೩೯॥

---

ಗುರುವು ನನ್ನ ಹಿತದಲ್ಲಿ ಆದರವಿಲ್ಲದವನು! ಎಂಬ ವಿರುದ್ಧಭಾವವನ್ನು ಹೊಂದಿ ಗೌತಮನನ್ನು ಪುರೋಹಿತನನ್ನಾಗಿ ಮಾಡಿಕೊಂಡು ಹಿಮವತ್ಪರ್ವತದ ಬಳಿಯಲ್ಲಿ ಸಾಗರಕ್ಕೆ ಸಮೀಪವಾಗಿರುವ ಸ್ಥಳದಲ್ಲಿ ಯಜ್ಞವನ್ನು ಮಾಡಿದನು. ||೩೪-೩೫||

ಆ ಯಜ್ಞದಲ್ಲಿ ದೊರೆಯು ಬ್ರಾಹ್ಮಣರಿಗೆ ವಿಶೇಷವಾಗಿ ದಕ್ಷಿಣೆಯನ್ನು ಕೊಟ್ಟನು. ಜನಮೇಜಯನೇ ಕೇಳು. ನಿಮಿರಾಜನು ಐದುಸಾವಿರವರ್ಷ ದೀಕ್ಷೆಯನ್ನು ವಹಿಸಿ ಯಜ್ಞವನ್ನು ಮಾಡಿ ಋತ್ವಿಕ್ಕುಗಳಿಗೆ ಸಂತೋಷದಿಂದ ಗೋವುಗಳನ್ನೂ ಧನವನ್ನೂ ದಕ್ಷಿಣೆಯಾಗಿ ಕೊಟ್ಟು ಅವರನ್ನು ಪೂಜಿಸಿದನು. ||೩೬||

ಐದುನೂರು ವರ್ಷ ಮಾಡಬೇಕಾದ ದೇವೇಂದ್ರನ ಯಜ್ಞವು ಮುಗಿಯುತ್ತಲು ವಸಿಷ್ಠಮುನಿಯು ರಾಜನ ಯಜ್ಞದ ಯೋಗಕ್ಷೇಮವನ್ನು ನೋಡಬೇಕೆಂಬ ಅಪೇಕ್ಷೆಯಿಂದ ಬಂದನು. ಬಂದೊಡನೆಯೇ ರಾಜನನ್ನು ನೋಡಬೇಕೆಂದು ಅಲ್ಲಿ ನಿಂತನು. ||೩೭-೩೮||

ಆಗ ನಿಮಿರಾಜನು ವಿಶೇಷವಾದ ನಿದ್ರೆಯಿಂದ ಪರವಶನಾಗಿ ಮಲಗಿಕೊಂಡಿದ್ದನು. ಸೇವಕರೂ ರಾಜನನ್ನು ಎಚ್ಚರಗೊಳಿಸಲಿಲ್ಲ. ಆದುದರಿಂದ ಆ ರಾಜನು ಮುನಿಯ ಸಮೀಪಕ್ಕೆ ಬರಲಿಲ್ಲ. ||೩೯||

**ವಸಿಷ್ಠಸ್ಯ ತತೋ ಮನ್ಯುಃ ಪ್ರಾದುರ್ಭೂತೋಽವಮಾನತಃ ।**
**ಅದರ್ಶನಾನ್ನಿಮೇಸ್ತತ್ರ ಚುಕೋಪ ಮುನಿಸತ್ತಮಃ ॥೪೦॥**

**ಶಾಪಂ ಚ ದತ್ತವಾಂಸ್ತಸ್ಮೈ ರಾಜ್ಞೇ ಮನ್ಯುವಶಂ ಗತಃ ।**
**ಯಸ್ಮಾತ್ತ್ವಂ ಮಾಂ ಗುರುಂ ತ್ಯಕ್ತ್ವಾ ಕೃತ್ವಾಽನ್ಯಂ ಗುರುಮಾತ್ಮನಃ ॥೪೧॥**

**ದೀಕ್ಷಿತೋಽಸಿ ಬಲಾನ್ಮಂದ ಮಾಮವಜ್ಞಾಯ ಪಾರ್ಥಿವ ।**
**ವಾರಿತೋಽಪಿ ಮಯಾ ತಸ್ಮಾದ್ವಿದೇಹಸ್ತ್ವಂ ಭವಿಷ್ಯಸಿ ॥೪೨॥**

**ಪತತ್ವಿದಂ ಶರೀರಂ ತೇ ವಿದೇಹೋ ಭವ ಭೂಪತೇ ।**

॥ ವ್ಯಾಸ ಉವಾಚ ॥

**ಇತಿ ತದ್ವ್ಯಾಹೃತಂ ಶ್ರುತ್ವಾ ರಾಜ್ಞಸ್ತು ಪರಿಚಾರಕಾಃ ॥೪೩॥**

**ಸದ್ಯಃ ಪ್ರಬೋಧಯಾಮಾಸುರ್ಮುನಿಮಾಹುಃ ಪ್ರಕೋಪಿತಂ ।**
**ಕುಪಿತಂ ತಂ ಸಮಾಗತ್ಯ ರಾಜಾ ವಿಗತಕಲ್ಮಷಃ ॥೪೪॥**

---

ಆ ಬಳಿಕ ಅಪಮಾನದಿಂದ ವಸಿಷ್ಠನಿಗೆ ಕೋಪವುಂಟಾಯಿತು. ನಿಮಿರಾಜನು ತನ್ನನ್ನು ಬಂದು ನೋಡದೆ ಇದ್ದುದರಿಂದ ಮುನಿಯು ಕೋಪವನ್ನು ಹೊಂದಿ ರಾಜನಿಗೆ ಶಾಪವನ್ನು ಕೊಟ್ಟನು. ॥೪೦॥

ಎಲೈ ನಿಮಿರಾಜನೇ, ಅಲ್ಪಬುದ್ಧಿಯಾದ ನೀನು ಗುರುವಾದ ನನ್ನಲ್ಲಿರ ಬೇಕಾದ ಆದರವನ್ನು ಬಿಟ್ಟು, ಮತ್ತೊಬ್ಬ ಗುರುವನ್ನು ವರಣ ಮಾಡಿಕೊಂಡು, ನಾನು ಬೇಡವೆಂದು ಹೇಳಿದ್ದರೂ ನನ್ನನ್ನು ತಿರಸ್ಕರಿಸಿ, ಬಲಾತ್ಕಾರದಿಂದ ನೀನು ಯಜ್ಞಮಾಡಿದುದರಿಂದ ನೀನು ವಿದೇಹನಾಗುವೆ. ನಿನ್ನ ಶರೀರವು ಬಿದ್ದುಹೋಗಲಿ. ನಿನ್ನ ಜೀವವು ದೇಹವಿಲ್ಲದೆ ಇರಲಿ ! ॥೪೧-೪೨॥

ಹೀಗೆ ಹೇಳಿದ ವಸಿಷ್ಠನ ಶಾಪದ ಮಾತನ್ನು ಕೇಳಿ ರಾಜಸೇವಕರು ಆಗಲೇ ರಾಜನನ್ನು ಎಚ್ಚರಗೊಳಿಸಿ ಮುನಿಯು ಕೋಪಗೊಂಡಿರುವುದನ್ನು ಹೇಳಿದರು. ದೋಷವಿಲ್ಲದ ಆ ರಾಜನು ಕೋಪಗೊಂಡ ಮುನಿಯ ಸಮೀಪಕ್ಕೆ ಬಂದು ಸಕಾರಣವೂ ಯುಕ್ತಿಯುಕ್ತವೂ ನಯವೂ ಆದ ಮಾತನ್ನು ಹೀಗೆ ಹೇಳಿದನು.॥೪೩-೪೪॥

ಉವಾಚ ವಚನಂ ಶ್ಲಕ್ಷ್ಣಂ ಹೇತುಗರ್ಭಂ ಚ ಯುಕ್ತಿಮತ್ ।
ಮಮ ದೋಷೋ ನ ಧರ್ಮಜ್ಞ ಗತಸ್ತ್ವಂ ತೃಷ್ಣಯಾಕುಲಃ ॥೪೫॥

ಹಿತ್ವಾ ಮಾಂ ಯಜಮಾನಂ ವೈ ಪ್ರಾರ್ಥಿತೋಽಪಿ ಮಯಾ ಭೃಶಂ ।
ನ ಲಜ್ಜಸೇ ದ್ವಿಜಶ್ರೇಷ್ಠ ಕೃತ್ವಾ ಕರ್ಮ ಜುಗುಪ್ಸಿತಂ ॥೪೬॥

ಸಂತೋಷೇ ಬ್ರಾಹ್ಮಣಶ್ರೇಷ್ಠ ಜಾನನ್ಧರ್ಮಸ್ಯ ನಿಶ್ಚಯಂ ।
ಪುತ್ರೋಽಸಿ ಬ್ರಹ್ಮಣಃ ಸಾಕ್ಷಾದ್ವೇದವೇದಾಂಗವಿತ್ತಮಃ ॥೪೭॥

ನ ವೇತ್ಸಿ ವಿಪ್ರ ಧರ್ಮಸ್ಯ ಗತಿಂ ಸೂಕ್ಷ್ಮಾಂ ದುರತ್ಯಯಾಂ ।
ಆತ್ಮದೋಷಂ ಮಯಿ ಜ್ಞಾತ್ವಾ ಮೃಷಾ ಮಾಂ ಶಪ್ತುಮಿಚ್ಛಸಿ ॥೪೮॥

ತ್ಯಾಜ್ಯಸ್ತು ಸುಜನೈಃ ಕ್ರೋಧಶ್ಚಂಡಾಲಾದಧಿಕೋ ಯತಃ ।
ವೃಥಾ ಕ್ರೋಧಪರೀತೇನ ಮಯಿ ಶಾಪಃ ಪ್ರಪಾತಿತಃ ॥೪೯॥
ತವಾಪಿ ಚ ಪತತ್ವದ್ಯ ದೇಹೋಽಯಂ ಕ್ರೋಧಸಂಯುತಃ ।

---

ಧರ್ಮವನ್ನು ಬಲ್ಲ ಮುನಿಯೇ, ನನ್ನಲ್ಲಿ ತಪ್ಪಿಲ್ಲವು. ಯಜ್ಞಮಾಡಬೇಕೆಂದಿರುವ ನಾನು ವಿಶೇಷವಾಗಿ ಬೇಡಿಕೊಂಡರೂ ಕೂಡ ನನ್ನನ್ನು ಬಿಟ್ಟು ಆಸೆಯಿಂದ ಪೀಡಿತನಾಗಿ ದೇವೇಂದ್ರನ ಯಜ್ಞಕ್ಕೆ ಹೋಗಿರುತ್ತೀಯೆ! ಬ್ರಾಹ್ಮಣಶ್ರೇಷ್ಠನಾದ ನೀನು ಇಂತಹ ಹೀನಕಾರ್ಯವನ್ನು ಮಾಡಿ ನಾಚಿಕೆ ಪಡುವುದಿಲ್ಲವೆ? ॥೪೫-೪೬॥

ನೀನು ಧರ್ಮವನ್ನು ತಿಳಿದ ಬ್ರಾಹ್ಮಣಶ್ರೇಷ್ಠನಾಗಿರುವೆ. ಬ್ರಹ್ಮನ ಪುತ್ರನಾಗಿರುವೆ. ವೇದವೇದಾಂಗಗಳನ್ನು ತಿಳಿದವರಲ್ಲಿ ಅತ್ಯುತ್ತಮನಾಗಿರುವೆ. ಇಷ್ಟೊಂದು ಯೋಗ್ಯತೆಯಿರುವುದಂಬ ಸಂತೋಷದಲ್ಲಿ ಎಂದರೆ ಅಹಂಕಾರದಲ್ಲಿ ಮೀರಲಸಾಧ್ಯವಾದ ಬ್ರಾಹ್ಮಣಧರ್ಮದ ಸೂಕ್ಷ್ಮ ಸ್ಥಿತಿಯನ್ನು ನೀನು ತಿಳಿಯದೆ ಹೋದೆ! ನಿನ್ನ ದೋಷವನ್ನು ನನ್ನಲ್ಲಿ ಆರೋಪಿಸಿ ತಿಳಿದು ವ್ಯರ್ಥವಾಗಿ ನನಗೆ ಶಾಪವನ್ನು ಕೊಡಬೇಕೆಂದು ಅಪೇಕ್ಷಿಸುತ್ತಿರುವೆ! ॥೪೭-೪೮॥

ಕೋಪವು ಚಂಡಾಲನಿಗಿಂತಲೂ ನೀಚವಾದುದರಿಂದ ಸಜ್ಜನರು ಅದನ್ನು ತ್ಯಾಗಮಾಡುವರು. ನೀನು ವ್ಯರ್ಥವಾದ ಕೋಪದಿಂದ ಕೂಡಿ ನನಗೆ ಶಾಪವನ್ನು ಕೊಟ್ಟೆ. ಆ ಕೋಪದಿಂದ ಕೂಡಿದ ನಿನ್ನ ದೇಹವು ಕೂಡ ಈಗಲೇ ಬಿದ್ದುಹೋಗಲಿ! ಎಂದು ನಿಮಿಯೂ ಪ್ರತಿಯಾಗಿ ಶಪಿಸಿದನು. ॥೪೯॥

ಏವಂ ಶಪ್ತೋ ಮುನೀ ರಾಜ್ಞಾ ರಾಜಾ ಚ ಮುನಿನಾ ತಥಾ ॥೫೦॥
ಪರಸ್ಪರಂ ಪ್ರಾಪ್ಯ ಶಾಪಂ ದುಃಖಿತೌ ತೌ ಬಭೂವತುಃ ।
ವಸಿಷ್ಠಸ್ತ್ವತಿಚಿಂತಾರ್ತೋ ಬ್ರಹ್ಮಾಣಂ ಶರಣಂ ಗತಃ ॥೫೧॥
ನಿವೇದಯಾಮಾಸ ತಥಾ ಶಾಪಂ ಭೂಪಕೃತಂ ಮಹತ್ ।

॥ ವಸಿಷ್ಠ ಉವಾಚ ॥

ರಾಜ್ಞಾ ಶಪ್ತೋಽಸ್ಮಿ ದೇಹೋಽಯಂ ಪತತ್ವದ್ಯ ತವೇತಿ ವೈ ॥೫೨॥
ಕಿಂ ಕರೋಮಿ ಪಿತಃ ಪ್ರಾಪ್ತಂ ಕಷ್ಟಂ ಕಾಯಪ್ರಪಾತಜಂ ।
ಅನ್ಯದೇಹಸಮುತ್ಪತ್ತೌ ಜನಕಂ ವದ ಸಾಂಪ್ರತಂ ॥೫೩॥
ತಥಾ ಮೇ ದೇಹಸಂಯೋಗಃ ಪೂರ್ವವತ್ಸಮುಪದ್ಯತಾಂ ।
ಯಾದೃಶಂ ಜ್ಞಾನಮೇತಸ್ಮಿನ್ದೇಹೇ ತತ್ರಾಽಸ್ತು ತತ್ಪಿತಃ ॥೫೪॥

---

ಈ ರೀತಿಯಾಗಿ ಮುನಿಯು ರಾಜನಿಂದಲೂ ರಾಜನು ಮುನಿಯಿಂದಲೂ ಶಾಪವನ್ನು ಪಡೆದು ಇಬ್ಬರೂ ದುಃಖವನ್ನನುಭವಿಸಿದರು. ||೫೦||

ವಸಿಷ್ಠನು ವಿಶೇಷವಾದ ಚಿಂತೆಯಿಂದ ದುಃಖಿಸುತ್ತಾ ಬ್ರಹ್ಮನನ್ನು ಶರಣು ಹೊಂದಿ, ರಾಜನು ಕೊಟ್ಟ ಶಾಪವನ್ನು ಹೇಳಿಕೊಂಡನು. ||೫೧||

ವಸಿಷ್ಠನು ಹೇಳಿದನು — ಓ ತಂದೆಯೇ, ನನ್ನ ದೇಹವು ಬಿದ್ದುಹೋಗಲೆಂದು ರಾಜನು ನನಗೆ ಶಾಪವನ್ನು ಕೊಟ್ಟಿರುವನು. ಆದುದರಿಂದ ದೇಹಪಾತರೂಪವಾದ ಕಷ್ಟವು ನನಗೂ ಪ್ರಾಪ್ತವಾಯಿತು! ಏನನ್ನು ಮಾಡಲಿ? ನನಗೆ ಮತ್ತೊಂದು ದೇಹವು ಹುಟ್ಟುವ ಸಂದರ್ಭದಲ್ಲಿ ಆ ದೇಹಕ್ಕೆ ತಂದೆಯು ಯಾರಾಗುವರೆಂಬುದನ್ನು ನನಗೆ ಈಗ ಹೇಳು. ||೫೨-೫೩||

ಮತ್ತು ಹಿಂದೆ ಇದ್ದ ದೇಹದಂತೆಯೇ ಮುಂದೆ ಬರುವ ದೇಹವೂ ಇರಬೇಕು. ಓ ತಂದೆಯೇ, ಈ ದೇಹದಲ್ಲಿ ಎಂತಹ ಜ್ಞಾನವಿದ್ದಿತೋ ಆ ದೇಹದಲ್ಲಿಯೂ ಅಂತಹ ಜ್ಞಾನವೇ ಇರಬೇಕು! ಹಾಗೆ ನೀನು ಅನುಗ್ರಹಿಸಬೇಕು. ಏಕೆಂದರೆ ಸಮಸ್ತ ಪ್ರಪಂಚವನ್ನೂ ಸೃಷ್ಟಿಸುವ ನಿನಗೆ ಇಂತಹ ಅನುಗ್ರಹವನ್ನು ಮಾಡಲು ಶಕ್ತಿಯಿರುವುದು. ಎಲ್ಲಕ್ಕೂ ಒಡೆಯನಾದ ಪ್ರಭುವೇ ನನಗೆ ಅನುಗ್ರಹವನ್ನು ಮಾಡು. ||೫೪||

ಸಮುರ್ಥೋಽಸಿ ಮಹಾರಾಜ ಪ್ರಸಾದಂ ಕರ್ತುಮರ್ಹಸಿ ।
ವಸಿಷ್ಠಸ್ಯ ವಚಃ ಶ್ರುತ್ವಾ ಬ್ರಹ್ಮಾಪ್ರ್ಯೋವಾಚ ತಂ ಸುತಂ ॥೫೫॥

ಮಿತ್ರಾವರುಣಯೋಸ್ತೇಜಸ್ತಂ ಪ್ರವಿಶ್ಯ ಸ್ಥಿರೋ ಭವ ।
ತಸ್ಮಾದಯೋನಿಜಃ ಕಾಲೇ ಭವಿತಾ ತ್ವಂ ನ ಸಂಶಯಃ ॥೫೬॥

ಪುನರ್ದೇಹಂ ಸಮಾಸಾದ್ಯ ಧರ್ಮಯುಕ್ತೋ ಭವಿಷ್ಯಸಿ ।
ಭೂತಾತ್ಮಾ ವೇದವಿತ್ಕಾಮಂ ಸರ್ವಜ್ಞಃ ಸರ್ವಪೂಜಿತಃ ॥೫೭॥

ಏವಮುಕ್ತಸ್ತದಾ ಪಿತ್ರಾ ಪ್ರಯಯೌ ವರುಣಾಲಯಂ ।
ಕೃತ್ವಾ ಪ್ರದಕ್ಷಿಣಂ ಪ್ರೀತ್ಯಾ ಪ್ರಣಮ್ಯ ಚ ಪಿತಾಮಹಂ ॥೫೮॥

ವಿವೇಶ ಸ ತಯೋರ್ದೇಹೇ ಮಿತ್ರಾವರುಣಯೋಃ ಕಿಲ ।
ಜೀವಾಂಶೇನ ವಸಿಷ್ಠೋಽಥ ತ್ಯಕ್ತ್ವಾ ದೇಹಮನುತ್ತಮಂ ॥೫೯॥

---

ಆ ವಸಿಷ್ಠನ ಮಾತನ್ನು ಕೇಳಿ ಬ್ರಹ್ಮನು ಆ ತನ್ನ ಮಗನನ್ನು ಕುರಿತು, ನೀನು ಮಿತ್ರಾವರುಣರ ತೇಜಸ್ಸನ್ನು ಪ್ರವೇಶಿಸಿ ಸ್ಥಿರವಾದ ಚಿತ್ತ ಉಳ್ಳವನಾಗಿರು. ಕೆಲವು ಕಾಲದ ಮೇಲೆ ಆ ಮಿತ್ರಾವರುಣರ ತೇಜಸ್ಸಿನಿಂದ ನೀನು ಅಯೋನಿಜನಾಗಿ ಹುಟ್ಟುವೆ! ಈ ವಿಷಯದಲ್ಲಿ ಸಂದೇಹವಿಲ್ಲವು. ॥೫೫-೫೬॥

ಪುನಃ ದೇಹವನ್ನು ಪಡೆದು ಋಷಿಧರ್ಮದಿಂದ ಕೂಡಿದವನಾಗುವೆ. ಹಿಂದೆ ಇದ್ದ ಶರೀರಾದಿಗಳಂತೆ ನಿನಗೆ ಈ ಶರೀರವೂ ಲಭಿಸಿ ಜ್ಞಾನಾದಿಗಳೂ ಉಂಟಾಗಿ ಇರುವುವು. ಸರ್ವಜ್ಞನಾಗಿ ಸರ್ವರಿಗೂ ಪೂಜ್ಯನಾಗುವೆ! ಎಂದನು. ॥೫೭॥

ತಂದೆಯು ಹೇಳಿದ ಈ ಮಾತನ್ನು ಕೇಳಿ, ವಸಿಷ್ಠನು ಪ್ರೀತಿಯಿಂದ ತಾತನಾದ ಬ್ರಹ್ಮನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ವರುಣನ ಮನೆಗೆ ಹೋದನು. ॥೫೮॥

ವಸಿಷ್ಠನು ತನ್ನ ಉತ್ತಮವಾಗಿದ್ದ ಆ ದೇಹವನ್ನು ಬಿಟ್ಟು ಜೀವಾಂಶ ಎಂದರೆ ಲಿಂಗ ದೇಹದಿಂದ ಮಿತ್ರಾವರುಣರ ಸಂಬಂಧಿಯಾದ ಶ್ರೇಷ್ಠವಾದ ದೇಹವನ್ನು ಪ್ರವೇಶಮಾಡಿದನು! ॥೫೯॥

ಕದಾಚಿತ್ತ್ವೂರ್ವಶೀ ರಾಜನ್ನಾಗತಾ ವರುಣಾಲಯಂ ।
ಯದೃಚ್ಛಯಾ ವರಾರೋಹಾ ಸಖೀಗಣಸಮಾವೃತಾ ॥೬೦॥

ದೃಷ್ಟ್ವಾ ತಾಮಪ್ಸರಾಂ ದಿವ್ಯಾಂ ರೂಪಯೌವನಸಂಯುತಾಂ ।
ಜಾತೌ ಕಾಮಾತುರೌ ದೇವೌ ತದಾ ತಾಮೂಚತುರ್ನೃಪ ॥೬೧॥

ನಿವಶೌ ಚಾರುಸರ್ವಾಂಗೀಂ ದೇವಕನ್ಯಾಂ ಮನೋರಮಾಂ ।
ಆವಾಂ ತ್ವಮನವದ್ಯಾಂಗಿ ವರಯಸ್ವ ಸಮಾಕುಲೌ ॥೬೨॥

ವಿಹರಸ್ವ ಯಥಾಕಾಮಂ ಸ್ಥಾನೇಽಸ್ಮಿನ್ವರವರ್ಣಿನಿ ।
ತಥೋಕ್ತಾ ಸಾ ತತೋ ದೇವೀ ತಾಭ್ಯಾಂ ತತ್ರಸ್ಥಿತಾಽವಶಾ ॥೬೩॥

ಕೃತ್ವಾ ಭಾವಂ ಸ್ಥಿರಂ ದೇವೀ ಮಿತ್ರಾವರುಣಯೋರ್ಗೃಹೇ ।
ಸಾ ಗೃಹೀತ್ವಾ ತಯೋರ್ಭಾವಂ ಸಂಸ್ಥಿತಾ ಚಾರುದರ್ಶನಾ ॥೬೪॥

---

ಜನಮೇಜಯರಾಜನೇ ಕೇಳು—ಒಂದಾನೊಂದು ದಿನ ಊರ್ವಶಿಯೆಂಬ ಅಪ್ಸರಸ್ತ್ರೀಯು ತನ್ನ ಸಖಿಯರೊಡನೆ ವರುಣನ ಮನೆಗೆ ಬಂದಳು. ॥೬೦॥

ರೂಪಯೌವನಗಳಿಂದ ಕೂಡಿದ ಸುಂದರಾಂಗಿಯಾದ ಮನೋಹರಳಾದ ಆ ಅಪ್ಸರಸ್ತ್ರೀಯನ್ನು ನೋಡಿ ಮಿತ್ರಾವರುಣರು ಕಾಮಾತುರರಾಗಿ ಆಕೆಯನ್ನು ಕುರಿತು, ॥೬೧॥

ನಿರ್ದುಷ್ಟವಾದ ಶರೀರವುಳ್ಳ ಸ್ತ್ರೀಯೇ, ಕಾಮಾತುರರಾದ ನಮ್ಮನ್ನು ನೀನು ವರಿಸು. ಉತ್ತಮಸ್ತ್ರೀಯಾದ ನೀನು ಈ ಸ್ಥಳದಲ್ಲಿಯೇ ನಮ್ಮೊಡನೆ ನಿನ್ನ ಇಷ್ಟ ಬಂದಂತೆ ವಿಹಾರಮಾಡು. ಎಂದು ಹೇಳಿದರು. ಈ ಮಾತನ್ನು ಕೇಳಿದ ಊರ್ವಶಿಯು ಅಲ್ಲಿ ಅವರ ವಶದಲ್ಲಿದ್ದಳು. ॥೬೨-೬೩॥

ಸುಂದರಿಯಾದ ಆ ಊರ್ವಶೀದೇವಿಯು ಮಿತ್ರಾವರುಣರ ಮನೆಯಲ್ಲಿ ಸ್ಥಿರವಾದ ಪ್ರೀತಿಭಾವದಿಂದಿರುತ್ತಾ ಅವರ ಪ್ರೀತಿಭಾವವನ್ನು ತಾನು ಗ್ರಹಿಸುತ್ತಾ ಅಲಂಕಾರಮಾಡಿಕೊಂಡು ವಿಹರಿಸುತ್ತಿದ್ದಳು. ॥೬೪॥

ತಯೋಃಸ್ತು ಪತಿತಂ ವೀರ್ಯಂ ಕುಂಭೇ ದೈವಾದನಾವೃತೇ ।
ತಸ್ಮಾಜ್ಜಾತೌ ಮುನೀ ರಾಜನ್ನಾವೇವಾಽತಿಮನೋಹರೌ ॥೬೫॥

ಅಗಸ್ತಿಃ ಪ್ರಥಮಸ್ತತ್ರ ವಸಿಷ್ಠಶ್ಚಾಽಪರಸ್ತಥಾ
ಮಿತ್ರಾವರುಣಯೋರ್ವೀರ್ಯಾತ್ತಾಪಸಾವೃಷಿಸತ್ತಮೌ ॥೬೬॥

ಪ್ರಥಮಸ್ತು ವನಂ ಪ್ರಾಪ್ತೋ ಬಾಲ ಏವ ಮಹಾತಪಾಃ ।
ಇಕ್ಷ್ವಾಕುಸ್ತು ವಸಿಷ್ಠಂ ತಂ ಬಾಲಂ ವವ್ರೇ ಪುರೋಹಿತಂ ॥೬೭॥

ವಂಶಸ್ಯಾಽಸ್ಯ ಸುಖಾರ್ಥಂ ತೇ ಪಾಲಯಾಮಾಸ ಪಾರ್ಥಿವ ।
ವಿಶೇಷೇಣ ಮುನಿಂ ಜ್ಞಾತ್ವಾ ಪ್ರೀತ್ಯಾ ಯುಕ್ತೋ ಬಭೂವ ಹ ॥೬೮॥

---

ಆ ಮಿತ್ರಾವರುಣರ ವೀರ್ಯವು ಅದೃಷ್ಟಪರಿಪಾಕದಿಂದ ತೆರೆದಬಾಯುಳ್ಳದ್ದಾಗಿದ್ದ ಒಂದು ಕಲಶದಲ್ಲಿ ಬಿದ್ದಿತು. ಆ ಕಲಶದಿಂದ ಮನೋಹರವಾದ ಆಕಾರವುಳ್ಳ ಇಬ್ಬರು ಮುನಿಗಳು ಹುಟ್ಟಿದರು. ||೬೫||

ಆ ಮಿತ್ರಾವರುಣರ ವೀರ್ಯದಿಂದ ಹುಟ್ಟಿದವರಲ್ಲಿ ಮೊದಲನೆಯವನೇ ಅಗಸ್ತ್ಯನು, ಎರಡನೆಯವನೇ ವಸಿಷ್ಠನು. ಈ ಇಬ್ಬರೂ ತಪಸ್ವಿಗಳಾದ ಋಷಿಶ್ರೇಷ್ಠರು. ||೬೬||

ಮೊದಲನೆಯವನಾದ ಅಗಸ್ತ್ಯನು ಬಾಲಕನಾಗಿದ್ದಾಗಲೇ ಮಹಾತಪಸ್ವಿಯಾಗಿ ವನಕ್ಕೆ ಹೊರಟುಹೋದನು. ಇಕ್ಷ್ವಾಕು ಮಹಾರಾಜನು ಬಾಲಕನಾಗಿದ್ದಾಗಲೇ ಆ ವಸಿಷ್ಠನನ್ನು ಪುರೋಹಿತನನ್ನಾಗಿ ಇಟ್ಟುಕೊಂಡನು. ||೬೭||

ಎಲೈ ಜನಮೇಜಯರಾಯನೇ---ಇಕ್ಷ್ವಾಕು ಮಹಾರಾಜನು ವಸಿಷ್ಠಮುನಿಯ ಸಾಮರ್ಥ್ಯವು ವಿಶೇಷವಾದುದೆಂದು ತಿಳಿದು, ಪ್ರೀತಿಯಿಂದ ಕೂಡಿದವನಾಗಿ ಮುಂದೆ ತನ್ನ ವಂಶದಲ್ಲಿ ಹುಟ್ಟುವ ರಾಜರ ಸುಖಕ್ಕೋಸ್ಕರವಾಗಿ ಈ ಮುನಿಯನ್ನು ಕಾಪಾಡಿಕೊಂಡು ಬಂದನು ! ||೬೮||

**ಏತತ್ತೇ ಸರ್ವಮಾಖ್ಯಾತಂ ವಸಿಷ್ಠಸ್ಯ ಚ ಕಾರಣಂ ।**
**ಶಾಪಾದ್ದೇಹಾಂತರಪ್ರಾಪ್ತಿರ್ಮಿತ್ರಾವರುಣಯೋಃ ಕುಲೇ ॥೬೯॥**

---

ಎಲೈ ರಾಜನೇ, ವಸಿಷ್ಠನಿಗೆ ಶಾಪದಿಂದ ಮಿತ್ರಾವರುಣರ ವಂಶದಲ್ಲಿ ದೇಹಾಂತರಪ್ರಾಪ್ತಿಯಾದುದಕ್ಕೆ ಕಾರಣವನ್ನೆಲ್ಲವನ್ನೂ ವಿಸ್ತಾರವಾಗಿ ಹೇಳಿದೆನು. ॥೬೯॥

**ಇತಿ ಶ್ರೀದೇವೀಭಾಗವತೇಮಹಾಪುರಾಣೇ ಷಷ್ಠಸ್ಕಂಧೇ**
**ಚತುರ್ದಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

### || ಪಂಚದಶೋऽಧ್ಯಾಯಃ ||

### ಹದಿನೈದನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ದೇಹಪ್ರಾಪ್ತಿರ್ವಸಿಷ್ಠಸ್ಯ ಕಥಿತಾ ಭವತಾ ಕಿಲ ।**
**ನಿಮಿಃ ಕಥಂ ಪುನರ್ದೇಹಂ ಪ್ರಾಪ್ತವಾನಿತಿ ಮೇ ವದ ॥೧॥**

|| ವ್ಯಾಸ ಉವಾಚ ||

**ವಸಿಷ್ಠೇನ ಚ ಸಂಪ್ರಾಪ್ತಃ ಪುನರ್ದೇಹೋ ನರಾಧಿಪ ।**
**ನಿಮಿನಾ ನ ತಥಾ ಪ್ರಾಪ್ತೋ ದೇಹಃ ಶಾಪಾದನಂತರಂ ॥೨॥**

**ಯದಾ ಶಪ್ತೋ ವಸಿಷ್ಠೇನ ತದಾ ತೇ ಬ್ರಾಹ್ಮಣಾಃ ಕ್ರತೌ ।**
**ಋತ್ವಿಜೋ ಯೇ ವೃತಾ ರಾಜ್ಞಾ ತೇ ಸರ್ವೇ ಸಮಚಿಂತಯನ್ ॥೩॥**

---

ಓ ವ್ಯಾಸಮುನಿಯೇ, ವಸಿಷ್ಠನಿಗೆ ದೇಹಪ್ರಾಪ್ತಿಯಾದ ವಿಚಾರವನ್ನು ಹೇಳಿದೆಯಲ್ಲವೇ. ನಿಮಿಯು ಮತ್ತೆ ದೇಹವನ್ನು ಹೇಗೆ ಪಡೆದನು? ಅದನ್ನು ನನಗೆ ಹೇಳು. ||೧||

ಜನಮೇಜಯನೇ ಕೇಳು—ವಸಿಷ್ಠನೇನೋ ಪುನಃ ದೇಹವನ್ನು ಪಡೆದನು. ಶಾಪವು ಬಂದಮೇಲೆ ನಿಮಿಯು ಆ ರೀತಿಯಾಗಿ ಸ್ಥೂಲದೇಹವನ್ನು ಪಡೆಯಲಿಲ್ಲವು. ||೨||

ವಸಿಷ್ಠನು ಶಾಪಕೊಟ್ಟ ಮೇಲೆ, ಆ ಯಜ್ಞದಲ್ಲಿ ಋತ್ವಿಕ್ಕುಗಳಾಗಿ ರಾಜನು ವರಿಸಿದ್ದ ಬ್ರಾಹ್ಮಣರೆಲ್ಲರೂ ಕೂಡಿ ಹೀಗೆ ಆಲೋಚನೆಯನ್ನು ಮಾಡಿದರು. ||೩||

ಕಿಂ ಕರ್ತವ್ಯಮಹೋಽಸ್ಮಾಭಿಃ ಶಾಪದಗ್ಧೋ ಮಹೀಪತಿಃ ।
ಅಸ್ಮಿನ್ಯಜ್ಞೇ ತ್ವಸಂಪೂರ್ಣೇ ದೀಕ್ಷಾಯುಕ್ತಶ್ಚ ಧಾರ್ಮಿಕಃ ॥೪॥

ಕಿಂ ಕರ್ತವ್ಯಂ ಕಾರ್ಯಮೇತದ್ವಿಪರೀತಮಭೂತ್ಕಿಲ ।
ಅವಶ್ಯಂಭಾವಿ ಭಾವತ್ವಾದಶಕ್ತಾಃ ಸ್ಮಃ ನಿವಾರಣೇ ॥೫॥

ಮಂತ್ರೈರ್ಬಹುವಿಧೈರ್ದೇಹಂ ತದಾ ತಸ್ಯ ಮಹಾತ್ಮನಃ ।
ರಕ್ಷಿತಂ ಧಾರಯಾಮಾಸುಃ ಕಿಂಚಿಚ್ಛ್ವಸನಸಂಯುತಂ ॥೬॥

ಗಂಧೈರ್ಮಾಲ್ಯೈಶ್ಚ ವಿವಿಧೈಃ ಪೂಜ್ಯಮಾನಂ ಮುಹುರ್ಮುಹುಃ ।
ಮಂತ್ರಶಕ್ತ್ಯಾ ಪ್ರತಿಷ್ಟಭ್ಯ ನಿರ್ವಿಕಾರಂ ಸುಪೂಜಿತಂ ॥೭॥

---

ರಾಜನಿಗೆ ಶಾಪ ಬಂದುದರಿಂದ ಈ ಯಜ್ಞವು ಸಂಪೂರ್ಣವಾಗುವುದಕ್ಕಿಂತ ಮುಂಚೆಯೇ ಯಜ್ಞದೀಕ್ಷೆಯನ್ನು ಹೊಂದಿರುವ ಧಾರ್ಮಿಕನಾದ ರಾಜನು ಶರೀರ ತ್ಯಾಗಮಾಡುವನು! ನಾವು ಈಗ ಏನನ್ನು ಮಾಡಬೇಕು? ॥೪॥

ಈ ಯಜ್ಞಕಾರ್ಯವು ನಮ್ಮ ನಿರೀಕ್ಷಣೆಗೆ ವಿರುದ್ಧವಾಗಿ ಪರಿಣಮಿಸಿತಲ್ಲವೇ? ಅದೃಷ್ಟಾನುಸಾರವಾಗಿ ಆಗಬೇಕಾದುದು ಆಗುತ್ತಿರಲಾಗಿ ನಾವು ಅದನ್ನು ನಿವಾರಣ ಮಾಡಲು ಶಕ್ತರಾಗಿಲ್ಲವು. ॥೫॥

ಹೀಗೆಂದು ಯೋಚಿಸಿ ಆ ಋತ್ವಿಕ್ಕುಗಳು ಆ ಮಹಾತ್ಮನಾದ ನಿಮಿರಾಜನ ಲಿಂಗದೇಹವನ್ನು ಆ ಸ್ಥೂಲದೇಹದಲ್ಲಿಯೇ ಯಜ್ಞಸಮಾಪ್ತಿಯಾಗುವ ವರೆಗೆ ಅನೇಕ ಮಂತ್ರಗಳ ಜಪದ ಶಕ್ತಿಯಿಂದ ಸ್ತಂಭಿಸಿರುವಂತೆ ಮಾಡಿದರು. ಆ ಮಂತ್ರ ಶಕ್ತಿಯಿಂದ ರಾಜನ ಸ್ಥೂಲದೇಹವು ಸ್ವಲ್ಪಮಟ್ಟಿಗೆ ಶ್ವಾಸೋಚ್ಛ್ವಾಸದ ಸಂಬಂಧ ವನ್ನೂ ಹೊಂದಿದ್ದಿತು. ॥೬॥

ರಾಜನ ಸ್ಥೂಲಶರೀರವು ಕೆಡದಂತೆ ಬಗೆಬಗೆಯ ಸುಗಂಧಗಳಿಂದಲೂ ಹೂಗ ಳಿಂದಲೂ ಶರೀರವನ್ನು ಶುಚಿಯಾಗಿಟ್ಟು ಮಂತ್ರಶಕ್ತಿಯಿಂದ ಲಿಂಗಶರೀರವು ಸ್ಥೂಲ ಶರೀರವನ್ನು ಬಿಟ್ಟುಹೋಗದಂತೆಯೂ, ಸ್ಥೂಲದೇಹವು ಕೆಡದಂತೆಯೂ ಮಾಡಿದು ದರಿಂದ ಆ ಸ್ಥೂಲ ಶರೀರವು ಯಾವ ವಿಕಾರವೂ ಇಲ್ಲದೆ ಶುದ್ಧವಾಗಿದ್ದಿತು! ॥೭॥

ಸಮಾಪ್ತೇ ಚ ಕ್ರತೌ ತತ್ರ ದೇವಾಃ ಸರ್ವೇ ಸಮಾಗತಾಃ ।
ಋತ್ವಿಗ್ಭಿಸ್ತು ಸ್ತುತಾಃ ಸರ್ವೇ ಸುಪ್ರೀತಾಶ್ಚಾಭವನ್ನೃಪ ॥೮॥

ವಿಜ್ಞಪ್ತಾ ಮುನಿಭಿಃ ಸ್ತೋತ್ರೈರ್ನಿರ್ವಿಣ್ಣಾತ್ಮಾನಮಬ್ರುವನ್ ।
ಪ್ರಸನ್ನಾಃ ಸ್ಮಃ ಮಹೀಪಾಲ ವರಂ ವರಯ ಸುವ್ರತ ॥೯॥

ಯಜ್ಞೇನಾನೇನ ರಾಜರ್ಷೇ ವರಂ ಜನ್ಮ ವಿಧೀಯತೇ ।
ದೇವದೇಹಂ ನೃದೇಹಂ ವಾ ಯತ್ತೇ ಮನಸಿ ವಾಂಛಿತಂ ॥೧೦॥

ದೃಷ್ಟಃ ಕಾಮಂ ಪುರೋಧಾಸ್ತೇ ಮೃತ್ಯುಲೋಕೇ ಯಥಾಸುಖಂ ।
ಏವಮುಕ್ತೋ ನಿಮೇರಾತ್ಮಾ ಸಂತುಷ್ಟಸ್ತಾನುವಾಚ ಹ ॥೧೧॥

ನ ದೇಹೇ ಮಮ ವಾಂಛಾಽಸ್ತಿ ಸರ್ವದೈವ ವಿನಶ್ವರೇ ।
ವಾಸೋ ಮೇ ಸರ್ವಸತ್ವಾನಾಂ ದೃಷ್ಟಾವಸ್ತು ಸುರೋತ್ತಮಾಃ ॥೧೨॥

---

ಜನಮೇಜಯನೇ, ದೇವೀಯಜ್ಞವು ಪೂರ್ತಿಯಾಗುತ್ತಿರಲಾಗಿ ಇಂದ್ರಾದಿ ಸಮಸ್ತ ದೇವತೆಗಳೂ ಅಲ್ಲಿಗೆ ಬಂದರು. ಋತ್ವಿಕ್ಕುಗಳು ಅವರನ್ನು ಸ್ತೋತ್ರ ಮಾಡಿದರು. ಆ ದೇವತೆಗಳೆಲ್ಲರೂ ಸಂತೋಷಪಟ್ಟರು. ||೮||

ಆ ಋತ್ವಿಕ್‌ಗಳು ಮಾಡಿದ ಸ್ತೋತ್ರಗಳಿಂದ ಸಂತೋಷ ಹೊಂದಿದ ದೇವತೆಗಳು ವೈರಾಗ್ಯವನ್ನು ಹೊಂದಿದ್ದ ಆ ನಿಮಿರಾಜನನ್ನು ಕುರಿತು ಎಲೈ ರಾಜನೇ, ನಾವು ಪ್ರಸನ್ನರಾಗಿರುತ್ತೇವೆ. ಒಳ್ಳೆಯ ವ್ರತಫಲವುಳ್ಳ ನೀನು ನಿನಗಿಷ್ಟವಾದ ವರವನ್ನು ಕೇಳು. ||೯||

ಎಲೈ ರಾಜರ್ಷಿಯೇ, ಈ ಯಜ್ಞದಿಂದ ಉತ್ತಮವಾದ ಜನ್ಮವು ಪ್ರಾಪ್ತವಾಗುತ್ತದೆ. ನಿನಗೆ ಆ ಜನ್ಮದಲ್ಲಿ ದೇವತೆಗಳ ದೇಹವು ಬೇಕೋ? ಮನುಷ್ಯದೇಹವು ಬೇಕೋ? ನಿನಗಿಷ್ಟವಾದುದನ್ನು ಹೇಳು. ||೧೦||

ನಿನ್ನ ಪುರೋಹಿತನಾದ ವಸಿಷ್ಠನು ನಿನ್ನ ಶಾಪದಿಂದ ಮೊದಲಿನ ದೇಹವನ್ನು ಬಿಟ್ಟು ಸುಖವಾಗಿ ಈ ಮನುಷ್ಯಲೋಕದಲ್ಲಿ ಹಿಂದಿನ ದೇಹಕ್ಕೆ ಸಮಾನವಾದ ಎರಡನೆಯ ದೇಹವನ್ನು ಧರಿಸಿ ಗರ್ವದಿಂದಿರುವನು. ಹಾಗೆಯೇ ನಿನ್ನ ಅಪೇಕ್ಷೆಯೂ ಇದ್ದರೆ ಆ ವರವನ್ನೇ ಆದರೂ ಕೇಳು. ಎಂಬುದು ಆ ದೇವತೆಗಳ ಅಭಿಪ್ರಾಯವು. ||೧೧||

ಹೀಗೆಂದು ಹೇಳುತ್ತಲು ವಸಿಷ್ಠನ ಶಾಪದಿಂದ ದೇಹಾಭಿಮಾನವನ್ನು ಬಿಟ್ಟು ಹೊರಡುವುದಕ್ಕೆ ಸಿದ್ಧವಾಗಿದ್ದು ಮಂತ್ರಬಲದಿಂದ ಸ್ತಂಭಿತವಾಗಿದ್ದ ಲಿಂಗಶರೀರಾಭಿ

ನೇತ್ರೇಷು ಸರ್ವಭೂತಾನಾಂ ವಾಯುಭೂತಶ್ಚರಾಮ್ಯಹಂ ।
ಏವಮುಕ್ತಾಃ ಸುರಾಸ್ತತ್ರ ನಿಮೇರಾತ್ಮಾನಮಬ್ರುವನ್ ॥೧೩॥

ಪ್ರಾರ್ಥಯಸ್ವ ಮಹಾರಾಜ ದೇವೀಂ ಸರ್ವೇಶ್ವರೀಂ ಶಿವಾಂ ।
ಮಖೇನಾಽನೇನ ಸಂತುಷ್ಟಾ ಸಾ ತೇಽಭೀಷ್ಟಂ ವಿಧಾಸ್ಯತಿ ॥೧೪॥

ಸ ದೇವೈರೇವಮುಕ್ತಸ್ತು ಪ್ರಾರ್ಥಯಾಮಾಸ ದೇವತಾಂ ।
ಸ್ತೋತ್ರೈರ್ನಾನಾವಿಧೈರ್ದಿವ್ಯೈರ್ಭಕ್ತ್ಯಾ ಗದ್ಗದಯಾ ಗಿರಾ ॥೧೫॥

ಪ್ರಸನ್ನಾ ಸಾ ತದಾ ದೇವೀ ಪ್ರತ್ಯಕ್ಷಂ ದರ್ಶನಂ ದದೌ ।
ಕೋಟಿಸೂರ್ಯಪ್ರತೀಕಾಶಂ ರೂಪಂ ಲಾವಣ್ಯದೀಪಿತಂ ॥೧೬॥
ದೃಷ್ಟ್ವಾ ಪ್ರಮುದಿತಾಃ ಸರ್ವೇ ಕೃತಕೃತ್ಯಾಶ್ಚ ಚೇತಸಿ ।

---

ಮಾನವುಳ್ಳ ನಿಮಿಯ ಆತ್ಮವು, ಸಂತೋಷದಿಂದ ಆ ದೇವತೆಗಳನ್ನು ಕುರಿತು, ಯಾವಾಗಲೂ ನಾಶವಾಗತಕ್ಕ ಧರ್ಮವುಳ್ಳ ಈ ದೇಹದಲ್ಲಿ ನನಗೆ ಅಪೇಕ್ಷೆಯಿಲ್ಲವು. ದೇವಶ್ರೇಷ್ಠರೇ, ನಾನು ಸಮಸ್ತ ಪ್ರಾಣಿಗಳ ಕಣ್ಣಿನಲ್ಲಿಯೂ ವಾಸವಾಗಿರಬೇಕೆಂದು ಅಪೇಕ್ಷಿಸುವೆನು. ಈ ವರವನ್ನು ನನಗೆ ಕೊಡಬೇಕು. ಅಲ್ಲದೆ ॥೧೨॥

ಸಮಸ್ತ ಪ್ರಾಣಿಗಳ ಕಣ್ಣಿನಲ್ಲಿಯೂ ವಾಯುಸ್ವರೂಪನಾಗಿ ನಾನು ಸಂಚರಿಸುತ್ತಿರುವೆನು. ಎಂದು ಆ ನಿಮಿರಾಜನು ಕೇಳಿಕೊಂಡನು. ಹೀಗೆಂದು ಹೇಳಿದ ನಿಮಿಯ ಮಾತನ್ನು ಕೇಳಿದ ದೇವತೆಗಳು ಆ ನಿಮಿಯ ಆತ್ಮನನ್ನು ಕುರಿತು, ಎಲೈ ಮಹಾರಾಜನೇ, ಈ ಯಜ್ಞದಿಂದ ಸಂತೋಷವನ್ನು ಹೊಂದಿದ ಸರ್ವೇಶ್ವರಿಯೂ ಮಂಗಳಸ್ವರೂಪಳೂ ಆದ ದೇವಿಯನ್ನು ಪ್ರಾರ್ಥಿಸು. ಆ ದೇವಿಯೇ ನಿನ್ನ ಇಷ್ಟವನ್ನು ನೆರವೇರಿಸುವಳು. ಎಂದರು. ॥೧೪॥

ದೇವತೆಗಳು ಹೇಳಿದ ಮಾತನ್ನು ಕೇಳಿ ನಿಮಿರಾಜನು ಭಕ್ತಿಯಿಂದುಂಟಾದ ಗದ್ಗದ ಧ್ವನಿಯಿಂದ ಶ್ರೇಷ್ಠವಾದ ಬಗೆಬಗೆಯ ಸ್ತೋತ್ರಗಳಿಂದ ದೇವಿಯನ್ನು ಪ್ರಾರ್ಥನೆ ಮಾಡಿದನು. ॥೧೫॥

ಆಗ ದೇವಿಯು ಪ್ರಸನ್ನಳಾಗಿ ಪ್ರತ್ಯಕ್ಷವಾಗಿ ದರ್ಶನವನ್ನು ಕೊಟ್ಟಳು. ಕೋಟಿಸೂರ್ಯರ ಪ್ರಕಾಶದಂತೆ ಕಾಂತಿಯುಳ್ಳ, ಸೌಂದರ್ಯದಿಂದ ಹೊಳೆಯುತ್ತಿರುವ

ಪ್ರಸನ್ನಾಯಾಂ ದೇವತಾಯಾಂ ರಾಜಾ ವವ್ರೇ ವರಂ ನೃಪ ॥೧೭॥

ಜ್ಞಾನಂ ತದ್ವಿಮಲಂ ದೇಹಿ ಯೇನ ಮೋಕ್ಷೋ ಭವೇದಪಿ ।
ನೇತ್ರೇಷು ಸರ್ವಭೂತಾನಾಂ ನಿವಾಸೋ ಮೇ ಭವೇದಿತಿ ॥೧೮॥

ತತಃ ಪ್ರಸನ್ನಾ ದೇವೇಶೀ ಪ್ರೋವಾಚ ಜಗದಂಬಿಕಾ ।
ಜ್ಞಾನಂ ತೇ ವಿಮಲಂ ಭೂಯಾತ್ಪ್ರಾರಬ್ಧಸ್ಯಾವಶೇಷತಃ ॥೧೯॥

ನೇತ್ರೇಷು ಸರ್ವಭೂತಾನಾಂ ನಿವಾಸೋಽಪಿ ಭವಿಷ್ಯತಿ ।
ನಿಮಿಷಂ ಯಾಂತಿ ಚಕ್ಷೂಂಷಿ ತ್ವತ್ಕೃತೇನೈವ ದೇಹಿನಾಂ ॥೨೦॥

ತವ ವಾಸಾತ್ಸನಿಮಿಷಾ ಮಾನವಾಃ ಪಶವಸ್ತಥಾ ।
ಪತಂಗಾಶ್ಚ ಭವಿಷ್ಯಂತಿ ಪುನಶ್ಚಾನಿಮಿಷಾಃ ಸುರಾಃ ॥೨೧॥

---

ದೇವಿಯ ರೂಪವನ್ನು ನೋಡಿ ಸರ್ವರೂ ಕೃತಾರ್ಥರಾಗಿ ಮನಸ್ಸಿನಲ್ಲಿ ಸಂತೋಷವನ್ನು ಹೊಂದಿದರು. ॥೧೬॥

ಜನಮೇಜಯರಾಜನೇ, ದೇವಿಯು ಪ್ರತ್ಯಕ್ಷಳಾಗುತ್ತಲು ರಾಜನು ವರವನ್ನು ಹೀಗೆ ಕೇಳಿದನು. ಓ ದೇವಿಯೇ, ಯಾವ ಜ್ಞಾನದಿಂದ ಮೋಕ್ಷವುಂಟಾಗುವುದೋ ಅಂತಹ ನಿರ್ಮಲವಾದ ಜ್ಞಾನವನ್ನು ಕೊಡು. ಪ್ರಾರಬ್ಧಕರ್ಮ ಕ್ಷಯವಾಗುವ ವರೆಗೂ ನಾನು ಸಮಸ್ತ ಪ್ರಾಣಿಗಳ ಕಣ್ಣುಗಳಲ್ಲಿ ವಾಸವಾಗಿರುವೆನು. ಅಂತಹ ಶಕ್ತಿಯನ್ನೂ ನನಗೆ ಕೊಡು. ॥೧೭-೧೮॥

ಆ ಬಳಿಕ ಪ್ರಸನ್ನಳಾದ ಜಗದಂಬೆಯು ರಾಜನನ್ನು ಕುರಿತು, ನಿನಗೆ ನಿರ್ಮಲವಾದ ಜ್ಞಾನವುಂಟಾಗಲಿ. ಮತ್ತು ಪ್ರಾರಬ್ಧಕರ್ಮವು ಕ್ಷಯವಾಗುವ ವರೆಗೂ ಸಮಸ್ತ ಪ್ರಾಣಿಗಳ ಕಣ್ಣುಗಳಲ್ಲಿ ನೀನು ವಾಸಮಾಡುತ್ತಿರುವೆ! ॥೧೯॥

ಪ್ರಾಣಿಗಳ ಕಣ್ಣುಗಳು ನಿನ್ನ ಅವಲಂಬನದಿಂದಲೇ ರೆಪ್ಪೆಯನ್ನು ಚಲಿಸುವುವು. ನೀನು ಆ ಕಣ್ಣಿನಲ್ಲಿ ವಾಸವಾಗಿರುವುದರಿಂದಲೇ ಮನುಷ್ಯರೂ ಪಶುಗಳೂ ಪಕ್ಷಿಗಳೂ ರೆಪ್ಪೆಯನ್ನು ಮುಚ್ಚಿಕೊಳ್ಳುವುದಕ್ಕೂ ತೆರೆಯುವುದಕ್ಕೂ ಶಕ್ತಗಳಾಗಿ ಇರುವುವು. ಆದರೆ ದೇವತೆಗಳು ಮಾತ್ರ ರೆಪ್ಪೆಯನ್ನು ಮುಚ್ಚದೆ ಇರುವರು. ಇದು ಎಂದರೆ ನಿಮೀಲನ ಉನ್ಮೀಲನಗಳು ವಾಯುವಿನ ಕಾರ್ಯವು. ಆದುದರಿಂದ ವಾಯುರೂಪವಾದ ನಿನ್ನ ಶಕ್ತಿಯ ಕಾರ್ಯವೇ ಆಗಿರುವುದು. ॥೨೧॥

ಇತಿ ದತ್ವಾ ವರಂ ತಸ್ಮೈ ತದಾ ಶ್ರೀವರದೇವತಾ ।
ಆಮಂತ್ರ್ಯ ಚ ಮುನೀನ್ಸರ್ವಾಂಸ್ತತ್ರೈವಾಂತರ್ಹಿತಾಽಭವತ್ ॥೨೨॥

ಅಂತರ್ಹಿತಾಯಾಂ ದೇವ್ಯಾಂ ತು ಮುನಯಸ್ತತ್ರ ಸಂಸ್ಥಿತಾಃ ।
ವಿಚಿಂತ್ಯ ವಿಧಿವತ್ಸರ್ವೇ ನಿಮೇರ್ದೇಹಂ ಸಮಾಹರನ್ ॥೨೩॥

ಅರಣಿಂ ತತ್ರ ಸಂಸ್ಥಾಪ್ಯ ಮಮಂಥುರ್ಮಂತ್ರವತ್ತದಾ ।
ಮಂತ್ರಹೋಮೈರ್ಮಹಾತ್ಮಾನಃ ಪುತ್ರಹೇತೋರ್ನಿಮೇರಥ ॥೨೪॥

ಅರಣ್ಯಾಂ ಮಥ್ಯಮಾನಾಯಾಂ ಪುತ್ರಃ ಪ್ರಾದುರಭೂತ್ತದಾ ।
ಸರ್ವಲಕ್ಷಣಸಂಪನ್ನಃ ಸಾಕ್ಷಾನ್ನಿಮಿರಿವಾಪರಃ ॥೨೫॥

ಅರಣ್ಯಾ ಮಥನಾಜ್ಜಾತಸ್ತಸ್ಮಾನ್ಮಿಥಿರಿತಿ ಸ್ಮೃತಃ ।
ಯೇನಾಽಯಂ ಜನಕಾಜ್ಜಾತಸ್ತೇನಾಽಸೌ ಜನಕೋಽಭವತ್ ॥೨೬॥

---

ಆ ಭುವನೇಶ್ವರೀದೇವಿಯು ಆ ರಾಜನಿಗೆ ಹೀಗೆ ವರವನ್ನು ಕೊಟ್ಟು ಅಲ್ಲಿದ್ದ ಸಕಲ ಮುನಿಗಳನ್ನೂ ಕೇಳಿ ಅವರ ಯೋಗಕ್ಷೇಮಗಳನ್ನೂ ಅನುಗ್ರಹಿಸಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದಳು. ||೨೨||

ದೇವಿಯು ಮರೆಯಾದ ಮೇಲೆ ಅಲ್ಲಿದ್ದ ಮುನಿಗಳು ಆಲೋಚನೆಯನ್ನು ಮಾಡಿ ವೇದವಿಧಿಗನುಸಾರವಾಗಿ ನಿಮಿಯ ದೇಹವನ್ನು ತಂದರು. ||೨೩||

ಮಹಾತ್ಮರಾದ ಮುನಿಗಳು ಅವನ ದೇಹದಲ್ಲಿ ಮಂತ್ರಪೂರ್ವಕವಾಗಿ ಅರಣಿಯನ್ನಿಟ್ಟು ಪುತ್ರಾರ್ಥವಾದ ಹೋಮಮಂತ್ರಗಳಿಂದ ಆ ಅರಣಿಯನ್ನು ಮಥನ ಮಾಡಿದರು. ||೨೪||

ಅರಣಿಯನ್ನು ಮಥಿಸುತ್ತಿರಲು ಮತ್ತೊಬ್ಬನಿಮಿಯೋ ಎಂಬಂತೆ ಸಕಲ ರಾಜಲಕ್ಷಣಗಳಿಂದ ಕೂಡಿದ ಪುತ್ರನು ಹುಟ್ಟಿದನು. ಆ ಪುತ್ರನಿಗೆ ಅರಣಿಯ ಮಥನದಿಂದ ಹುಟ್ಟಿದುದರಿಂದ ಮಿಥಿ ಎಂದೂ, ತಂದೆಯಿಂದ ಹುಟ್ಟಿದುದರಿಂದ ಜನಕನೆಂದೂ, ಹೆಸರಾಯಿತು. ||೨೫-೨೬||

ವಿದೇಹಸ್ತು ನಿಮಿರ್ಜಾತೋ ಯಸ್ಮಾತ್ತಸ್ಮಾತ್ತದನ್ವಯೇ ।
ಸಮುದ್ಭೂತಾಸ್ತು ರಾಜಾನೋ ವಿದೇಹಾ ಇತಿ ಕೀರ್ತಿತಾಃ ॥೨೭॥

ಏವಂ ನಿಮಿಸುತೋ ರಾಜಾ ಪ್ರಥಿತೋ ಜನಕೋಽಭವತ್ ।
ನಗರೀ ನಿರ್ಮಿತಾ ತೇನ ಗಂಗಾತೀರೇ ಮನೋಹರಾ ॥೨೮॥

ಮಿಥಿಲೇತಿ ಸುವಿಖ್ಯಾತಾ ಗೋಪುರಾಟ್ಟಾಲಸಂಯುತಾ ।
ಧನಧಾನ್ಯಸಮಾಯುಕ್ತಾ ಹಟ್ಟಶಾಲಾವಿರಾಜಿತಾ ॥೨೯॥

ವಂಶೇಽಸ್ಮಿನ್ಯೇಽಪಿ ರಾಜಾನಸ್ತೇ ಸರ್ವೇ ಜನಕಾಸ್ತಥಾ ।
ವಿಖ್ಯಾತಾ ಜ್ಞಾನಿನಃ ಸರ್ವೇ ವಿದೇಹಾಃ ಪರಿಕೀರ್ತಿತಾಃ ॥೩೦॥

ಏತತ್ತೇ ಕಥಿತಂ ರಾಜನ್ನಿಮೇರಾಖ್ಯಾನಮುತ್ತಮಂ ।
ಶಾಪಾದ್ಯಸ್ಯ ವಿದೇಹತ್ವಂ ವಿಸ್ತರಾದುದಿತಂ ಮಯಾ ॥೩೧॥

॥ ರಾಜೋವಾಚ ॥

ಭಗವನ್ಭವತಾ ಪ್ರೋಕ್ತಂ ನಿಮಿಶಾಪಸ್ಯ ಕಾರಣಂ ।
ಶ್ರುತ್ವಾ ಸಂದೇಹಮಾಪನ್ನಂ ಮನೋ ಮೇಽತೀವ ಚಂಚಲಂ ॥೩೨॥

---

ನಿಮಿಯು ವಿದೇಹ ಎಂದರೆ ದೇಹವಿಲ್ಲದವನಾದುದರಿಂದ ಅವನ ವಂಶದಲ್ಲಿ ಹುಟ್ಟಿದ ರಾಜರೆಲ್ಲರೂ ವಿದೇಹರೆಂಬ ಹೆಸರನ್ನು ಹೊಂದಿದರು. ॥೨೭॥

ಈ ರೀತಿಯಲ್ಲಿ ನಿಮಿಯ ಪುತ್ರನಾದ ಜನಕನು ಪ್ರಸಿದ್ಧನಾದನು. ಅವನು ಗಂಗಾನದಿಯ ದಡದಲ್ಲಿ ಮನೋಹರವಾದ ಮಿಥಿಲಾ ಎಂದು ಪ್ರಸಿದ್ಧವಾದ ಉಪ್ಪರಿಗೆಯ ಮನೆಗಳಿಂದಲೂ ಗೋಪುರಗಳಿಂದಲೂ ಗೋಶಾಲೆಗಳಿಂದಲೂ ಕೂಡಿ ಧನಧಾನ್ಯಗಳಿಂದ ತುಂಬಿದ ಪಟ್ಟಣವನ್ನು ಕಟ್ಟಿಸಿದನು. ॥೨೮-೨೯॥

ಈ ವಂಶದಲ್ಲಿ ಹುಟ್ಟಿದ ರಾಜರೆಲ್ಲರಿಗೂ ಜನಕನೆಂದೇ ಹೆಸರು. ಅವರೆಲ್ಲರೂ ಜ್ಞಾನಿಗಳು ಮತ್ತು ಅವರಿಗೆ ವಿದೇಹರೆಂದೂ ಹೆಸರು. ॥೩೦॥

ಎಲೈ ರಾಜನೇ ಶ್ರೇಷ್ಠವಾದ ನಿಮಿರಾಜನ ಚರಿತ್ರೆಯನ್ನು ಹೇಳಿದೆನು ಮತ್ತು ಶಾಪದಿಂದ ಅವನಿಗೆ ವಿದೇಹತ್ವವು ಬಂದುದನ್ನು ವಿಸ್ತಾರವಾಗಿ ಹೇಳಿದೆನು. ॥೩೧॥

ರಾಜನು ಹೇಳಿದನು—ಮಹಾಮಹಿಮರಾದ ವ್ಯಾಸರೇ, ನಿಮಿರಾಜನಿಗೆ ಶಾಪವು ಬರುವುದಕ್ಕೆ ಕಾರಣವನ್ನೇನೋ ಹೇಳಿದಿರಿ. ಇದನ್ನು ಕೇಳಿ ಚಂಚಲವಾದ ನನ್ನ ಮನಸ್ಸು ವಿಶೇಷವಾಗಿ ಸಂದೇಹವನ್ನು ಹೊಂದಿರುವುದು. ॥೩೨॥

ವಸಿಷ್ಠೋ ಬ್ರಾಹ್ಮಣಶ್ರೇಷ್ಠೋ ರಾಜ್ಞಶ್ಚೈವ ಪುರೋಹಿತಃ ।
ಪುತ್ರಃ ಪಂಕಜಯೋನೇಸ್ತು ರಾಜ್ಞಾ ಶಪ್ತಃ ಕಥಂ ಮುನಿಃ ॥೩೩॥

ಗುರುಂ ಚ ಬ್ರಾಹ್ಮಣಂ ಜ್ಞಾತ್ವಾ ನಿಮಿನಾ ನ ಕೃತಾ ಕ್ಷಮಾ ।
ಯಜ್ಞಕರ್ಮಶುಭಂ ಕೃತ್ವಾ ಕಥಂ ಕ್ರೋಧಮುಪಾಗತಃ ॥೩೪॥

ಜ್ಞಾತ್ವಾ ಧರ್ಮಸ್ಯ ವಿಜ್ಞಾನಂ ಕಥಮಿಕ್ಷ್ವಾಕುಸಂಭವಃ ।
ಕ್ರೋಧಸ್ಯ ವಶಮಾಪನ್ನಃ ಶಪ್ತವಾನ್ಬ್ರಾಹ್ಮಣಂ ಗುರುಂ ॥೩೫॥

॥ ವ್ಯಾಸ ಉವಾಚ ॥

ಕ್ಷಮಾಽತಿದುರ್ಲಭಾ ರಾಜನ್ ಪ್ರಾಣಿಭಿರಜಿತಾತ್ಮಭಿಃ ।
ಕ್ಷಮಾವಾನ್ ದುರ್ಲಭೋ ಲೋಕೇ ಸುಸಮರ್ಥೋಽ ವಿಶೇಷತಃ॥೩೬॥

---

ಆ ವಸಿಷ್ಠನು ಬ್ರಾಹ್ಮಣರಲ್ಲಿ ಶ್ರೇಷ್ಠನು ಮತ್ತು ರಾಜನ ಪುರೋಹಿತನೂ ಅಲ್ಲದೆ ಬ್ರಹ್ಮನ ಮಗನೂ ಆಗಿರುವಾಗ ಇಂತಹವನನ್ನೂ ರಾಜನು ಹೇಗೆ ಶಪಿಸಿದನು? ॥೩೩॥

ನಿಮಿಯು, ತನ್ನ ವಂಶದ ಗುರುವಾದ ಬ್ರಾಹ್ಮಣಶ್ರೇಷ್ಠನು ಎಂಬುದನ್ನು ತಿಳಿದೂ ಏಕೆ ಕ್ಷಮಾಗುಣವನ್ನು ವಹಿಸಿ ಕ್ಷಮಿಸಲಿಲ್ಲ? ಅಲ್ಲದೆ ಶುಭವಾದ ಯಜ್ಞವನ್ನು ಮಾಡುತ್ತಿರುವ ಕಾಲದಲ್ಲಿಯೂ ಕೋಪಕ್ಕೆ ಅಧೀನನಾದುದು ಹೇಗೆ? ॥೩೪॥

ಇಷ್ಟೇ ಅಲ್ಲದೆ ತಾನೂ ಇಕ್ಷ್ವಾಕುಮಹಾರಾಜನ ಮಗನಾಗಿ ಧರ್ಮಸೂಕ್ಷ್ಮವನ್ನು ಬಲ್ಲವನಾಗಿದ್ದರೂ ನಿಮಿರಾಜನು ಕೋಪಕ್ಕೆ ಅಧೀನನಾಗಿ ಗುರುವೂ ಬ್ರಾಹ್ಮಣನೂ ಆದ ವಸಿಷ್ಠನನ್ನೂ ಹೇಗೆ ಎಂದರೆ ಯಾವ ಕಾರಣದಿಂದ ಶಪಿಸಿದನು?॥೩೫॥

ವ್ಯಾಸಋಷಿಯು ಹೇಳಿದನು— ಜನಮೇಜಯರಾಜನೇ, ಮನಸ್ಸನ್ನು ನಿಗ್ರಹಿಸದೆ ಇರುವ ಪ್ರಾಣಿಗಳಿಗೆ ಕ್ಷಮಾಗುಣವು ಬರುವುದು ಕಷ್ಟವಾದುದು. ಲೋಕದಲ್ಲಿ ಕ್ಷಮಾವಂತನು ದೊರೆಯುವುದೇ ಕಷ್ಟವು. ಅದರಲ್ಲಿಯೂ ಸಮರ್ಥನಾದವನಿಗೆ ಎಂದರೆ ಶೂರನಾದ ಕ್ಷತ್ರಿಯನಿಗೆ ಕ್ಷಮಾಗುಣವಿರುವುದು ಇನ್ನೂ ವಿರಳವಾದುದು! ॥೩೬॥

ಸರ್ವಸಂಗಪರಿತ್ಯಾಗೀ ಮುನಿರ್ಭವತು ತಾಪಸಃ ।
ನಿದ್ರಾಕ್ಷುಧೋರ್ವಿಜೇತಾ ಚ ಯೋಗಾಭ್ಯಾಸೇ ಸುನಿಶ್ಚಿತಃ ॥೩೭॥

ಕಾಮಃ ಕ್ರೋಧಸ್ತಥಾ ಲೋಭೋ ಹ್ಯಹಂಕಾರಶ್ಚತುರ್ಥಕಃ ।
ದುರ್ಜ್ಞೇಯಾ ದೇಹಮಧ್ಯಸ್ಥಾ ರಿಪವಸ್ತೇನ ಸರ್ವಥಾ ॥೩೮॥

ನ ಭೂತಪೂರ್ವಃ ಸಂಸಾರೇ ನ ಚೈವ ವರ್ತತೇಽಧುನಾ ।
ಭವಿತಾ ನ ಪುಮಾನ್ ಕಶ್ಚಿದ್ಯೋ ಜಯೇತ ರಿಪೂನಿಮಾನ್ ॥೩೯॥

ನ ಸ್ವರ್ಗೇ ನ ಚ ಭೂಲೋಕೇ ಬ್ರಹ್ಮಲೋಕೇ ಹರೇಃ ಪದೇ ।
ಕೈಲಾಸೇ ನೇದೃಶಃ ಕಶ್ಚಿದ್ಯೋ ಜಯೇತ ರಿಪೂನಿಮಾನ್ ॥೪೦॥

ಮುನಯೋ ಬ್ರಹ್ಮಪುತ್ರಾಶ್ಚ ತಥಾಽನ್ಯೇ ತಾಪಸೋತ್ತಮಾಃ ।
ತೇಽಪಿ ಗುಣತ್ರಯಾವಿದ್ಧಾಃ ಕಿಂ ಪುನರ್ಮಾನವಾ ಭುವಿ ॥೪೧॥

---

ವೈರಾಗ್ಯದಿಂದ ಸರ್ವಸಂಗಪರಿತ್ಯಾಗಮಾಡಿದ ಸನ್ಯಾಸಿಯಾಗಲಿ, ತಪಸ್ಸು ಮಾಡತಕ್ಕ ಮೌನವ್ರತವನ್ನು ಧರಿಸಿದ ಮುನಿಯಾಗಲಿ, ನಿದ್ರೆಯನ್ನೂ ಹಸಿವನ್ನೂ ಜಯಿಸಿ ಯೋಗಾಭ್ಯಾಸದಲ್ಲಿ ಆಸಕ್ತನಾದವನಾಗಲಿ, ಇಂಥವರೂ ಕೂಡ ತಮ್ಮ ಶರೀರದ ಒಳಗೆ ಇರುವ ಕಾಮ ಕ್ರೋಧ ಲೋಭ, ಅಹಂಕಾರ ಎಂಬ ಈ ನಾಲ್ಕು ಶತ್ರುಗಳನ್ನೂ ತಿಳಿಯಲಾರರು! ಎಂದರೆ ಈ ನಾಲ್ಕು ಶತ್ರುಗಳೂ ಅವರೊಳಗೇ ಇರುತ್ತಾ ಅವರಿಗೆ ತಿಳಿಯದಂತೆಯೇ ಅವರ ಮೇಲೆ ಅಧಿಕಾರಮಾಡುತ್ತಿರುವುದರಿಂದ ಅವುಗಳನ್ನು ಜಯಿಸಲಸಾಧ್ಯವೆಂದಭಿಪ್ರಾಯವು. ॥೩೭-೩೮॥

ಈ ನಾಲ್ಕು ಶತ್ರುಗಳನ್ನು ಜಯಿಸಿದ ಪುರುಷನು ಈ ಪ್ರಪಂಚದಲ್ಲಿ ಹಿಂದೆ ಇರಲಿಲ್ಲವು. ಈಗಲೂ ಇಲ್ಲವು. ಮುಂದೆಯೂ ಇರುವುದಿಲ್ಲವು. ಸ್ವರ್ಗದಲ್ಲಿಯಾಗಲಿ ಭೂಲೋಕದಲ್ಲಿಯಾಗಲಿ ಬ್ರಹ್ಮಲೋಕದಲ್ಲಿಯಾಗಲಿ ವೈಕುಂಠ ಕೈಲಾಸಗಳಲ್ಲಿ ಯಾಗಲಿ ಇಂತಹ ಪುರುಷನು ಸಿಕ್ಕಲಾರನು! ॥೩೯-೪೦॥

ಬ್ರಹ್ಮನ ಮಾನಸಪುತ್ರರಾದ ಮುನಿಗಳೂ ಇತರ ತಾಪಸಶ್ರೇಷ್ಠರೂ ಕೂಡ ಒಂದೊಂದು ಸಮಯದಲ್ಲಿ ಸತ್ವರಜಸ್ತಮೋಗುಣಗಳ ಆವೇಶದಿಂದ ಕೂಡಿದವರಾಗಿ ರುವರು! ಇನ್ನು ಭೂಮಿಯಲ್ಲಿರುವ ಮನುಷ್ಯರ ವಿಷಯವನ್ನು ಹೇಳುವುದೇನು? ॥೪೧॥

ಕಪಿಲಃ ಸಾಂಖ್ಯವೇತ್ತಾ ಚ ಯೋಗಾಭ್ಯಾಸರತಃ ಶುಚಿಃ ।
ತೇನಾಪಿ ದೈವಯೋಗಾದ್ಧಿ ಪ್ರದಗ್ಧಾಃ ಸಗರಾತ್ಮಜಾಃ ॥೪೨॥

ತಸ್ಮಾದ್ರಾಜನ್ನಹಂಕಾರಾತ್ಸಂಜಾತಂ ಭುವನತ್ರಯಂ ।
ಕಾರ್ಯಕಾರಣಭಾವಾತ್ತು ತದ್ವಿಯುಕ್ತಂ ಕಥಂ ಭವೇತ್ ॥೪೩॥

ಬ್ರಹ್ಮಾ ಗುಣತ್ರಯಾವಿಷ್ಟೋ ವಿಷ್ಣುಶ್ಚೈವಾಥ ಶಂಕರಃ ।
ಪ್ರಭವಂತಿ ಶರೀರೇಷು ತೇಷಾಂ ಭಾವಾಃ ಪೃಥಕ್ಪೃಥಕ್ ॥೪೪॥

ಮಾನವಾನಾಂ ಚ ಕಾ ವಾರ್ತಾ ಸತ್ತ್ವೈಕಾಂತವ್ಯವಸ್ಥಿತಾ ।
ಗುಣಾನಾಂ ಸಂಕರೋ ರಾಜನ್ ಸರ್ವತ್ರ ಸಮುವಸ್ಥಿತಃ ॥೪೫॥

---

ಕಪಿಲಮುನಿಯು ಸಾಂಖ್ಯಶಾಸ್ತ್ರವನ್ನು ಬಲ್ಲವನು. ಯಾವಾಗಲೂ ಯೋಗಾಭ್ಯಾಸದಲ್ಲಾಸಕ್ತನು. ಪರಿಶುದ್ಧನಾದವನು! ಇಂಥವನೂ ಅದೃಷ್ಟಪರಿಪಾಕದಿಂದ ಸಗರ ಚಕ್ರವರ್ತಿಯ ಅರವತ್ತುಸಾವಿರ ಮಕ್ಕಳನ್ನೂ ಸುಟ್ಟುಬಿಟ್ಟನು. ॥೪೨॥

ಆದುದರಿಂದ ಎಲೈ ರಾಜನೇ, ಈ ಅಹಂಕಾರದಿಂದಲೇ ಮೂರು ಲೋಕವೂ ಹುಟ್ಟಿರುವುದು. 'ಕಾರಣಗುಣಾಃ ಕಾರ್ಯೇಸಂಕ್ರಾಮಂತಿ.' ಎಂಬ ನ್ಯಾಯದಿಂದ ಕಾರಣವಾದ ಅಹಂಕಾರದ ಗುಣದ ಆವೇಶವು ಕಾರ್ಯವಾದ ಪ್ರಪಂಚದಲ್ಲಿ ಬಂದೇ ಬರುವುದು! ಬಿಟ್ಟಿರುವುದಿಲ್ಲವು. ॥೪೩॥

ಬ್ರಹ್ಮವಿಷ್ಣುಮಹೇಶ್ವರ ಮುಂತಾದ ದೊಡ್ಡವರೂ ಕೂಡ ಸತ್ವರಜಸ್ತಮೋಗುಣಗಳಿಂದ ಕೂಡಿರುವರು! ಅವರ ಶರೀರಗಳಲ್ಲಿಯೂ ಗುಣತ್ರಯಗಳ ಹೆಚ್ಚು ಕಡಮೆಗಳಿಂದುಂಟಾದ ಸ್ವಭಾವಗಳು ಬೇರೆ ಬೇರೆಯಾಗಿ ನಾನಾಬಗೆಗಳಲ್ಲಿ ವ್ಯಕ್ತವಾಗುವುವು. ॥೪೪॥

ಹೀಗಿರುವಲ್ಲಿ ಸತ್ವಗುಣವೊಂದೇ ಯಾಗಲೂ ಸ್ಥಿರವಾಗಿರುವ ಸಂಭವವು ಮನುಷ್ಯರಿಗೆ ಎಲ್ಲಿ ದೊರೆಯುವುದು? ಎಲೈ ರಾಜನೇ, ಈ ಮೂರು ಗುಣಗಳೂ ಬೆರಿಕೆಯಾಗಿರುವಿಕೆಯು ದೇವತೆಗಳೇ ಮೊದಲಾದ ಸಮಸ್ತ ಪ್ರಾಣಿಗಳ ದೇಹಗಳಲ್ಲಿಯೂ ಇದ್ದೇ ಇರುವುದು! ॥೪೫॥

ಕದಾಚಿತ್ಸತ್ತ್ವವೃದ್ಧಿಃ ಸ್ಯಾತ್ಕದಾಚಿದ್ರಜಸಃ ಕಿಲ ।
ಕದಾಚಿತ್ತಮಸೋ ವೃದ್ಧಿಃ ಸಮಭಾವಃ ಕದಾಚ ನ ॥೪೬॥

ನಿರ್ಗುಣಃ ಪರಮಾತ್ಮಾಽಸೌ ನಿರ್ಲೇಪಃ ಪರತೋಽವ್ಯಯಃ ।
ಅಲಕ್ಷ್ಯಃ ಸರ್ವಸತ್ತ್ವಾನಾಮಪ್ರಮೇಯಃ ಸನಾತನಃ ॥೪೭॥

ತಥೈವ ಪರಮಾ ಶಕ್ತಿರ್ನಿರ್ಗುಣಾ ಬ್ರಹ್ಮಸಂಸ್ಥಿತಾ ।
ದುರ್ಜ್ಞೇಯಾ ಚಾಲ್ಪಮತಿಭಿಃ ಸರ್ವಭೂತವ್ಯವಸ್ಥಿತಿಃ ॥೪೮॥

ಪರಾತ್ಮನಸ್ತಥಾ ಶಕ್ತೇಸ್ತಯೋರೈಕ್ಯಂ ಸದೈವ ಹಿ ।
ಅಭಿನ್ನಂ ತದ್ವಪುರ್ಜ್ಞಾತ್ವಾ ಮುಚ್ಯತೇ ಸರ್ವದೋಷತಃ ॥೪೯॥

---

ಒಂದು ಕಾಲದಲ್ಲಿ ಸತ್ತ್ವಗುಣವೂ, ಮತ್ತೊಂದು ಕಾಲದಲ್ಲಿ ರಜೋಗುಣವೂ, ಇನ್ನೊಂದು ಸಮಯದಲ್ಲಿ ತಮೋಗುಣವೂ, ಹೆಚ್ಚಾಗಿ ಮುಂದಾಗಿ ಕಾಣುವುದು. ಈ ಮೂರುಗುಣಗಳ ಸಮಾನಭಾವವು ಯಾವಾಗಲೂ ಉಂಟಾಗಿರುವುದಿಲ್ಲವು.॥೪೬॥

ನಾಶರಹಿತನಾದ ಶ್ರೇಷ್ಠನಾದ ಪರಮಾತ್ಮನೊಬ್ಬನೇ ಗುಣಗಳೊಡನೆ ನಾನು ನನ್ನದು ಎಂಬ ಅಭಿಮಾನದ ಸಂಬಂಧವಿಲ್ಲದವನಾಗಿ ಅನಾದಿಯಾಗಿ ಎಲ್ಲೆಡೆಯಲ್ಲಿ ಇದ್ದರೂ ಯಾರಿಗೂ ಯಾವ ಲೌಕಿಕ ಪ್ರಮಾಣಗಳಿಂದಲೂ ಗೋಚರವಾಗದವನಾಗಿರುವನು! ಹಾಗೆಯೇ ಆ ಪರಬ್ರಹ್ಮನಲ್ಲಿ ಚಂದ್ರನಲ್ಲಿ ಬೆಳದಿಂಗಳಿನಂತೆಯೂ, ಬೆಂಕಿಯಲ್ಲಿ ಸುಡುವ ಶಕ್ತಿಯಂತೆಯೂ, ಅವಿನಾಭಾವದಿಂದ ಅಭಿನ್ನವಾಗಿ ಇರುವ ಶ್ರೇಷ್ಠವಾದ ಮಾಯಾಶಕ್ತಿಯೂ ಕೂಡ ಗುಣಸಂಬಂಧವಿಲ್ಲದುದಾಗಿ ಅಲ್ಪಬುದ್ಧಿಯವರಾದ ಜನಗಳಿಂದ ತಿಳಿಯಲಸಾಧ್ಯವಾದುದಾಗಿರುವುದು. ಈ ಲೋಕದಲ್ಲಿರುವ ಸಮಸ್ತಪ್ರಾಣಿಗಳ ಸ್ಥಿತಿಯೂ ಕೂಡ ಹೀಗೆ ಕ್ಲೃಪ್ತವಾದುದಾಗಿರುವುದು! ಈ ಲೋಕದಲ್ಲಿ ಶಕ್ತಿಯುಳ್ಳವಸ್ತುವಿಗಿಂತ ಪ್ರತ್ಯೇಕವಾಗಿ ಶಕ್ತಿಯು ಹೇಗೆ ಕಾಣಬರುವುದಿಲ್ಲವೋ ಹಾಗೆ ಬ್ರಹ್ಮತತ್ವದಲ್ಲಿ ಈ ಶಕ್ತಿಯೂ ಇರುತ್ತದೆ. ಈ ಶಕ್ತಿಯು ಯಾವಾಗ ಅಂತರ್ಮುಖವಾಗಿ ಅಡಗಿರುತ್ತದೋ ಆಗ ಅದು ಬ್ರಹ್ಮಾಭಿನ್ನವಾಗಿರುತ್ತದೆ. ಹಾಗಿಲ್ಲದೆ ಇದು ಯಾವಾಗ ಗುಣವೈಷಮ್ಯದಿಂದ ಈ ಪ್ರಪಂಚರೂಪವಾಗಿ ಪರಿಣಮಿಸುತ್ತದೋ ಆಗ ಇದು ಪ್ರತ್ಯೇಕವಾಗಿರುವಂತೆ ತೋರುತ್ತಿರುತ್ತದೆ. ಎಂಬುದು ತಾತ್ಪರ್ಯವು. ಆದುದರಿಂದ ॥೪೭-೪೮॥

ಪರಮಾತ್ಮನಿಗೂ ಶಕ್ತಿಗೂ ಏಕತ್ವವು ಯಾವಾಗಲೂ ಇದ್ದೇ ಇರುವುದು. ಪರಮಾತ್ಮನ ಮತ್ತು ಶಕ್ತಿಯ ಶರೀರವು ಬೇರೆ ಬೇರೆ ಅಲ್ಲವು. ಒಂದೇ. ಎಂದು

**ತಜ್ಜ್ಞಾನಾದೇವ ಮೋಕ್ಷಃ ಸ್ಯಾದಿತಿವೇದಾಂತಡಿಂಡಿಮಃ ।**
**ಯೋ ವೇದ ಸ ವಿಮುಕ್ತೋಽಸ್ಮಿನ್ ಸಂಸಾರೇ ತ್ರಿಗುಣಾತ್ಮಕೇ॥೫೦॥**

---

ಯಾವನು ತಿಳಿವನೋ ಅವನು ತನ್ನ ಸಮಸ್ತ ದೋಷಗಳನ್ನೂ ಕಳೆದುಕೊಂಡು ಮೋಕ್ಷವನ್ನು ಹೊಂದುವನು. ಚಂದ್ರನಿಗೂ ಬೆಳದಿಂಗಳಿಗೂ, ಅಗ್ನಿಗೂ ಸುಡುವ ಶಕ್ತಿಗೂ, ಹೇಗೆ ಭೇದವಿಲ್ಲವೋ ಹಾಗೆ ಶಕ್ತಿಗೂ ಶಕ್ತಿಯುಳ್ಳ ಪದಾರ್ಥಕ್ಕೂ ಭೇದ ವಿಲ್ಲ. ಶಕ್ತಿಯುಳ್ಳ ಪದಾರ್ಥಗಳಿಂದ ಶಕ್ತಿಯು ಬೇರೆಯಾಗಿ ಎಲ್ಲಿಯೂ ಕಾಣುವು ದಿಲ್ಲ. ಪರಬ್ರಹ್ಮನಲ್ಲಿರುವ ಶಕ್ತಿಯೂ ಹಾಗೆಯೇ. ಆ ಶಕ್ತಿಯು ಅಂತರ್ಮುಖವಾಗಿ ರುವಾಗ ಬ್ರಹ್ಮನಿಗಿಂತ ಬೇರೆಯಾಗಿ ಕಾಣುವುದೇ ಇಲ್ಲವು. ಅಭೇದವಾಗಿರುತ್ತದೆ. ಆ ಶಕ್ತಿಯು ಬಹಿರ್ಮುಖವಾದಾಗ ಚೈತನ್ಯಕ್ಕಿಂತ ಬೇರೆಯಾಗಿರುವಂತೆ ತೋರು ತ್ತದೆ. ಬ್ರಹ್ಮನಿಗೂ ಶಕ್ತಿಗೂ ಭೇದವಿಲ್ಲವೆಂಬುದು ಅಂತರ್ಮುಖ ಶಕ್ತಿವಿಶಿಷ್ಟವಾದ ಬ್ರಹ್ಮಸ್ವರೂಪವನ್ನುದ್ದೇಶಿಸಿ ಹೇಳಿದ ಮಾತಾಗಿರುವುದು. ಈ ಅಂತರ್ಮುಖ ಶಕ್ತಿವಿಶಿಷ್ಟವಾದ ಬ್ರಹ್ಮಸ್ವರೂಪವನ್ನು ತಿಳಿದವರು ಅವಿದ್ಯಾಪರಿಣಾಮರೂಪವಾದ ಮತ್ತೆ ಗುಣತ್ರಯಕಾರ್ಯರೂಪವಾದ ದೋಷಗಳನ್ನೂ, ಅಜ್ಞಾನದಿಂದ ತೋರುತ್ತಿದ್ದ ನಾನು ನನ್ನದು ಎಂಬ ಅಭಿಮಾನ ಮೂಲಕವಾದ ಸಂಬಂಧಗಳನ್ನೂ, ಅವುಗಳಿಂದ ಉಂಟಾಗುತ್ತಿದ್ದ ಸುಖದುಃಖಗಳನ್ನೂ ತತ್ವಜ್ಞಾನದಿಂದ ಕಳೆದುಕೊಳ್ಳುವರೆಂದು ತಾತ್ಪರ್ಯವು. ॥೪೯॥

ತೇ ಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿ ಗೂಢಾಂ' ಎಂದು ಶ್ವೇತಾಶ್ವತರೋಪನಿಷತ್ತಿನಲ್ಲಿಯೂ, 'ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಾವಿ ಬ್ರಹ್ಮ ಶಾಶ್ವತಂ । ಅಭಿನ್ನಂ ತದ್ವಪುರ್ಜ್ಞಾತ್ವಾ ಮುಚ್ಯತೇ ಭವಬಂಧನಾತ್' ಎಂದು ಉಮಾಸಂಹಿತೆಯಲ್ಲಿಯೂ, 'ಅಂತರ್ಮುಖಾ ಶಕ್ತಿರೇವ ವಿದ್ಯಾ' ಎಂದು ಶೈವಾಗಮದಲ್ಲಿಯೂ ಹೇಳಿರುವಂತೆ, (ಇದರಿಂದ ಬಹಿರ್ಮುಖಾ ಶಕ್ತಿ ರೇವ ಅವಿದ್ಯಾ ಎಂದೂ ತಿಳಿಯಬಹುದು.) ಅಂತರ್ಮುಖವಾಗಿರುವ ಶಕ್ತಿಯಿಂದ ವಿಶಿಷ್ಟವಾದ ಪರಮಾತ್ಮನ ಸಾಕ್ಷಾತ್ಕಾರಜ್ಞಾನದಿಂದಲೇ ಮೋಕ್ಷವುಂಟಾಗುವುದೆಂದು ವೇದಾಂತಶಾಸ್ತ್ರವು ಗಟ್ಟಿಯಾಗಿ ಕೂಗಿ ಸಾರಿ ಹೇಳುತ್ತಿರುವುದು. ಯಾರು ಇದನ್ನು ತಿಳಿವರೋ ಅವರು ತ್ರಿಗುಣಾತ್ಮಕವಾದ ಈ ಸಂಸಾರದಲ್ಲಿದ್ದರೂ ಮುಕ್ತರಾಗಿರುವರು. ಇಂಥವರಿಗೇ ಜೀವನ್ಮುಕ್ತರೆಂದೂ ವ್ಯವಹಾರವಿರುತ್ತದೆ. ॥೫೦॥

ಜ್ಞಾನಂ ತು ದ್ವಿವಿಧಂ ಪ್ರೋಕ್ತಂ ಶಾಬ್ದಿಕಂ ಪ್ರಥಮಂ ಸ್ಮೃತಂ ।
ವೇದಶಾಸ್ತ್ರಾರ್ಥವಿಜ್ಞಾನಾತ್ತದ್ಭವೇದ್ಬುದ್ಧಿಯೋಗತಃ ॥೫೧॥

ವಿಕಲ್ಪಾಸ್ತತ್ರ ಬಹವೋ ಭವಂತಿ ಮತಿಕಲ್ಪಿತಾಃ ।
ಅನುಭವಾಖ್ಯಂ ದ್ವಿತೀಯಂ ತು ಜ್ಞಾನಂ ತದ್ದುರ್ಲಭಂ ನೃಪ ॥೫೨॥

ತತ್ತದಾ ಪ್ರಾಪ್ಯತೇ ತಸ್ಯ ವೇತ್ತುಃ ಸಂಗೋ ಯದಾ ಭವೇತ್ ।
ಶಬ್ದಜ್ಞಾನಾನ್ನಕಾರ್ಯಸ್ಯ ಸಿದ್ಧಿರ್ಭವತಿ ಭಾರತ ॥೫೩॥

ತಸ್ಮಾನ್ನಾನುಭವಜ್ಞಾನಂ ಸಂಭವತ್ಯತಿಮಾನುಷಂ ।
ಅಂತರ್ಗತಂ ತಮಶ್ಛೇತ್ತುಂ ಶಾಬ್ದಬೋಧೋ ಹಿ ನ ಕ್ಷಮಃ ॥೫೪॥
ಯಥಾ ನ ನಶ್ಯತಿ ತಮಃ ಕೃತಯಾ ದೀಪವಾರ್ತಯಾ ।

---

ಆದುದರಿಂದ ಜ್ಞಾನವು ಎರಡು ವಿಧವಾಗಿರುವುದು. ಮೊದಲನೆಯದು, ಶಬ್ದಸಂಬಂಧವಾದ ಜ್ಞಾನವು. ಇದು ವೇದಶಾಸ್ತ್ರಗಳನ್ನು ಅಭ್ಯಾಸಮಾಡುವುದರಿಂದಲೂ ಸೂಕ್ಷ್ಮಬುದ್ಧಿಶಕ್ತಿಯಿಂದಲೂ ಉಂಟಾಗುತ್ತಿರುವುದು. ॥೫೧॥

" ಕುತರ್ಕಕಲ್ಪಿತಾಃ ಕೇಚಿತ್ಸುತರ್ಕಕಲ್ಪಿತಾಃ ಪರೇ ।
ವಿತರ್ಕೈರ್ವಿಭ್ರಮೋತ್ಪತ್ತಿಃ ವಿಭ್ರಮಾದ್ಬುದ್ಧಿಭ್ರಂಶಿತಾ ।
ಬುದ್ಧಿಭ್ರಂಶಾತ್ ಜ್ಞಾನನಾಶಃ ಪ್ರಾಣಿನಾಂ ಪರಿಕೀರ್ತಿತಃ ॥ "

ಕೆಲವರು ತಮ್ಮ ತಮ್ಮ ಬುದ್ಧಿ ಕಲ್ಪಿತವಾಗುತ್ತಿರುವ ಕುತರ್ಕವನ್ನು ಮಾಡುವರು, ಮತ್ತೆ ಕೆಲವರು ಒಳ್ಳೆಯ ಪ್ರಾಮಾಣಿಕವಾದ ವಿಚಾರಮಾಡುವರು. ವಿರುದ್ಧವಾದ ವಿಚಾರದಿಂದ ಭ್ರಾಂತಿಯುಂಟಾಗುವುದು. ಭ್ರಾಂತಿಯಿಂದ ಒಳ್ಳೆಯ ಬುದ್ಧಿಯು ನಾಶವಾಗಿ ಆದರಿಂದ ಪ್ರಾಣಿಗಳಿಗೆ ಶ್ರೇಯಸ್ಕರವಾದ ಜ್ಞಾನದ ನಾಶವೂ ಆಗುವುದು.

ಎರಡನೆಯದು, ಅನುಭವದಿಂದುಂಟಾಗುವ ಅಪರೋಕ್ಷಜ್ಞಾನವು. ಎಲೈ ರಾಜನೇ, ಈ ಜ್ಞಾನವು ಎಲ್ಲರಿಗೂ ಸುಲಭವಾಗಿ ದೊರೆಯತಕ್ಕುದಲ್ಲ. ಈ ಅಪರೋಕ್ಷಜ್ಞಾನವನ್ನನುಭವಿಸುತ್ತಿರುವವನ ಸಂಗವು ಯಾವಾಗ ಯಾವನಿಗೆ ಆಗುವುದೋ ಆಗ ಅವನಿಗೆ ಅದು ಉಂಟಾಗುವುದು. ಈ ಅಂಶವನ್ನು ' ಅನನ್ಯಪ್ರೋಕ್ತೇಽ ಗತಿರತ್ರನಾಸ್ತಿ' ಎಂದು ಕಠೋಪನಿಷತ್ತಿನಲ್ಲೂ ಹೇಳಿರುವುದು. ॥೫೨॥

ಭರತವಂಶದಲ್ಲಿ ಹುಟ್ಟಿದ ಜನಮೇಜಯನೇ, ಶಬ್ದಜ್ಞಾನದಿಂದ ಕಾರ್ಯಸಿದ್ಧಿಯಾಗುವುದಿಲ್ಲವು. ಏಕೆಂದರೆ ಆ ಶಬ್ದಜ್ಞಾನದಿಂದ ಮನುಷ್ಯನ ಸಾಮಾನ್ಯ

**ತತ್ಕರ್ಮ ಯನ್ನ ಬಂಧಾಯ ಸಾ ವಿದ್ಯಾ ಯಾ ವಿಮುಕ್ತಯೇ ॥೫೫॥**

**ಆಯಾಸಾಯಾಪರಂ ಕರ್ಮ ವಿದ್ಯಾಽನ್ಯಾ ಶಿಲ್ಪನೈಪುಣಂ ।**
**ಶೀಲಂ ಪರಹಿತತ್ವಂ ಚ ಕೋಪಾಭಾವಃ ಕ್ಷಮಾ ಧೃತಿಃ ॥೫೬॥**

**ಸಂತೋಷಶ್ಚೇತಿ ವಿದ್ಯಾಯಾಃ ಪರಿಪಾಕೋಜ್ವಲಂ ಫಲಂ ।**
**ವಿದ್ಯಯಾ ತಪಸಾ ವಾಽಪಿ ಯೋಗಾಭ್ಯಾಸೇನ ಭೂಪತೇ ॥೫೭॥**

---

ಪ್ರಯತ್ನಕ್ಕೆ ಮೀರಿದ ಅನುಭವಜ್ಞಾನವು ಉಂಟಾಗುವುದಿಲ್ಲವು. ಒಳಗಿನ ಕತ್ತಲೆಯನ್ನು ಎಂದರೆ ಮನಸ್ಸಿನ ಅಜ್ಞಾನವನ್ನು ನಾಶಮಾಡಲು ಶಬ್ದಗಳಿಗೆ ಸ್ವತಂತ್ರವಾಗಿ ಸಾಮರ್ಥ್ಯವಿಲ್ಲವು. ದೀಪದ ಹೆಸರನ್ನು ಹೇಳಿದ ಮಾತ್ರಕ್ಕೇ ಕತ್ತಲೆಯು ಹೋಗುವುದಿಲ್ಲವು! ॥೫೩-೫೪॥

ಯಾವುದು ಸಂಸಾರಬಂಧಕ್ಕೆ ಕಾರಣವಾಗುವುದಿಲ್ಲವೋ ಅದೇ ಕರ್ಮವು. ಯಾವುದು ಮೋಕ್ಷಕ್ಕೆ ಸಾಧನವಾದ ತಿಳಿವಳಿಕೆಯೋ ಅದೇ ವಿದ್ಯೆಯು. ಮಿಕ್ಕ ಕರ್ಮಗಳು ಆಯಾಸವನ್ನು ಮಾತ್ರ ಉಂಟುಮಾಡುವುವು! ಮಿಕ್ಕ ತಿಳಿವಳಿಕೆಗಳು ಕುಶಲವಿದ್ಯೆಗಳ ಶಕ್ತಿಯನ್ನು ಮಾತ್ರ ತೋರ್ಪಡಿಸುತ್ತಿರುವುವು! ॥೫೫॥

ಒಳ್ಳೆಯ ನಡತೆಯೂ, ಪರೋಪಕಾರಮಾಡುವುದೂ, ಕೋಪವಿಲ್ಲದಿರುವುದೂ, ಸಹನೆಯೂ, ಧೈರ್ಯವೂ, ತೃಪ್ತಿಯೂ, ಇವುಗಳು ವಿದ್ಯೆಯ ಪರಿಪಾಕದ ಎಂದರೆ ಪರಿಪಕ್ವವಾದ ಜ್ಞಾನದಿಂದ ಉಂಟಾಗುವ ಶ್ರೇಷ್ಠವಾದ ಫಲಗಳು. ಈ ಗುಣಗಳು ಯಾರಲ್ಲಿರುವುವೋ ಅವರೇ ವಿದ್ವಾಂಸರೆಂದು ಅರ್ಥವು. ॥೫೬॥

ಎಲೈ ರಾಜನೇ, ಯುಕ್ತಾಯುಕ್ತವಿವೇಚನೆ, ತಪಸ್ಸು, ಯೋಗಾಭ್ಯಾಸ, ಇವುಗಳಲ್ಲಿ ಯಾವುದಾದರೊಂದು ಇಲ್ಲದಿದ್ದರೂ ಕಾಮಾದಿಶತ್ರುಗಳನ್ನು ನಾಶಮಾಡಲಾಗುವುದಿಲ್ಲವು. "ಮನಸ್ತು ಚಂಚಲಂ ರಾಜನ್ ಸ್ವಭಾವಾದತಿದುರ್ಗ್ರಹಂ ! ತದ್ವಶಃ ಸರ್ವಥಾ ಪ್ರಾಣೀ ತ್ರಿವಿಧೋ ಭುವನತ್ರಯೇ ॥" ಎಲೈ ರಾಜನೇ, ಮನಸ್ಸು ಸ್ವಭಾವವಾಗಿ ಚಂಚಲವಾದುದು. ಅದನ್ನು ಹಿಡಿತದಲ್ಲಿ ಇಟ್ಟುಕೊಂಡಿರುವುದೇ ಕಷ್ಟವಾದುದು. ಈ ಮೂರುಲೋಕಗಳಲ್ಲಿಯೂ ಇರುವ ಸಮಸ್ತ ಪ್ರಾಣಿಗಳೂ ಆ ಮನಸ್ಸಿಗೆ ಅಧೀನವಾಗಿರುವುವು. ॥೫೭॥

ವಿನಾ ಕಾಮಾದಿಶತ್ರೂಣಾಂ ನೈವ ನಾಶಃ ಕದಾಚನ ।
ಕಾಮಕ್ರೋಧಾದಯೋ ಭಾವಾಶ್ಚಿತ್ತಜಾಃ ಪರಿಕೀರ್ತಿತಾಃ ॥೫೮॥

ತೇ ತದಾ ನ ಭವಂತ್ಯೇವ ಯದಾ ವೈ ನಿರ್ಜಿತಂ ಮನಃ ।
ತಸ್ಮಾತ್ತು ನಿಮಿನಾ ರಾಜನ್ನ ಕ್ಷಮಾ ವಿಹಿತಾ ಮುನೌ ॥೫೯॥

ಯಥಾ ಯಯಾತಿನಾ ಪೂರ್ವಂ ಕೃತಾ ಶುಕ್ರೇ ಕೃತಾಗಸಿ ।
ಭೃಗುಪುತ್ರೇಣ ಶಪ್ತೋಽಪಿ ಯಯಾತಿರ್ನೃಪಸತ್ತಮಃ ॥೬೦॥

ನ ಶಶಾಪ ಮುನಿಂ ಕ್ರೋಧಾಜ್ಜರಾಂ ರಾಜಾ ಗೃಹೀತವಾನ್ ।
ಕಶ್ಚಿತ್ಸೌಮ್ಯೋ ಭವೇತ್ಕಶ್ಚಿತ್ಕ್ರೂರೋ ಭವತಿ ಪಾರ್ಥಿವಃ ॥೬೧॥

ಸ್ವಭಾವಭೇದಾ ನ್ನೃಪತೇ ಕಸ್ಯ ದೋಷೋಽತ್ರ ಕಲ್ಪ್ಯತೇ ।
ಹೈಹಯಾ ಭಾರ್ಗವಾನ್ಪೂರ್ವಂ ಧನಲೋಭಾತ್ಪುರೋಹಿತಾನ್॥೬೨॥

---

ಕಾಮಕ್ರೋಧಾದಿಭಾವಗಳು ಮನಸ್ಸಿನಲ್ಲಿ ಹುಟ್ಟತಕ್ಕವುಗಳು! ಮನಸ್ಸನ್ನು ಚನ್ನಾಗಿ ಜಯಿಸಿ ಯಾವಾಗಲೂ ಸ್ವಾಧೀನದಲ್ಲಿಟ್ಟುಕೊಂಡಿರುವವರಿಗೆ ಮಾತ್ರ ಕಾಮಕ್ರೋಧಾದಿಗಳು ಬರುವುದೇ ಇಲ್ಲವು. ಆ ಕಾರಣದಿಂದ, ಎಂದರೆ ನಿಮಿರಾಜನು ಮನಸ್ಸನ್ನು ಜಯಿಸಿ ತನ್ನಧೀನದಲ್ಲಿ ಇಟ್ಟುಕೊಂಡಿರದೆ ಇದ್ದುದರಿಂದ, ಅವನಿಗೆ ವಸಿಷ್ಠಮುನಿಯ ವಿಷಯದಲ್ಲಿ ಸಹನೆಯುಂಟಾಗಲಿಲ್ಲವು. ॥೫೮-೫೯॥

ಪೂರ್ವದಲ್ಲಿ ಭೃಗುಪುತ್ರನಾದ ಶುಕ್ರನು ಯಯಾತಿರಾಜನಿಗೆ ಶಾಪವನ್ನು ಕೊಟ್ಟರೂ ರಾಜನು ಕೋಪದಿಂದ ಶುಕ್ರನಿಗೆ ಪ್ರತಿಶಾಪವನ್ನು ಕೊಡದೆ ಕ್ಷಮೆಯನ್ನು ವಹಿಸಿ ಆ ಶಾಪಫಲವಾದ ಮುಪ್ಪನ್ನು ಅನುಭವಿಸಿದನು. ॥೬೦॥

ರಾಜನೇ, ಸ್ವಭಾವಕ್ಕನುಸಾರವಾಗಿ ಒಬ್ಬ ರಾಜನು ಸಾತ್ವಿಕನಾಗಿಯೂ, ಮತ್ತೊಬ್ಬನು ಕ್ರೂರನಾಗಿಯೂ ಇರುವನು. ಹೀಗಿರುವಲ್ಲಿ ಯಾರಲ್ಲಿ ನಾವು ದೋಷವನ್ನು ಕಲ್ಪಿಸಬೇಕು? ॥೬೧॥

ಹೈಹಯದೇಶದ ರಾಜಪುತ್ರರು ಪೂರ್ವದಲ್ಲಿ ಭೃಗುವಂಶದಲ್ಲಿ ಹುಟ್ಟಿದ ತಮ್ಮ ಪುರೋಹಿತರಾದ ಬ್ರಾಹ್ಮಣರನ್ನು ಹಣದಾಸೆಯಿಂದಲೂ ಕೋಪದಿಂದಲೂ ಕೂಡಿದವರಾಗಿ ಬ್ರಹ್ಮಹತ್ಯೆಯ ಪಾಪವನ್ನೂ ಲೆಕ್ಕಿಸದೆ ಆ ವಂಶದ ಹೆಸರೇ ಇಲ್ಲದಂತೆ

ಬ್ರಾಹ್ಮಣಾನ್ಮೂಲತಃ ಸರ್ವಾಂಶ್ಚಿಚ್ಛಿದುಃ ಕ್ರೋಧಮೂರ್ಛಿತಾಃ ।
ಪಾತಕಂ ಪೃಷ್ಠತಃ ಕೃತ್ವಾ ಬ್ರಹ್ಮಹತ್ಯಾಸಮುದ್ಭವಂ ॥೬೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ
ಪಂಚದಶೋಽಧ್ಯಾಯಃ

---

ಅವರನ್ನೆಲ್ಲರನ್ನೂ ಕೊಂದರು ! ಕ್ರೂರರಾದ ರಾಜರಿಗೆ ಇದು ದೃಷ್ಟಾಂತವು. ಹೀಗೆ ಬ್ರಾಹ್ಮಣರಲ್ಲೂ ಕ್ಷತ್ರಿಯರಲ್ಲೂ ಎರಡು ಬಗೆಯ ಉದಾಹರಣೆಗಳೂ ಎಂದರೆ ಕಾಮ ಕ್ರೋಧಗಳನ್ನು ಜಯಿಸಿ ಸದ್ಗತಿಯನ್ನು ಪಡೆದವರ, ಮತ್ತು ಅಂತಹ ಮನೋ ಜಯವಿಲ್ಲದ ಸುಖ, ದುಃಖ, ಅಪಕಾರ, ಪ್ರತೀಕಾರ, ರಾಗ, ದ್ವೇಷಗಳಿಗೆ ಅಧೀನ ರಾಗಿದ್ದವರ, ಉದಾಹರಣೆಗಳೂ ಇವೆ ಎಂದು ವಿವರಿಸಲಾಗಿದೆ. ಇದೇ ಮಹಾಪುರಾಣ ಗಳ ರೀತಿನೀತಿಯಾಗಿರುತ್ತದೆ. ॥೬೨-೬೩॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಹದಿನೈದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಷಷ್ಠಸ್ಕಂಧೇ

### || ಷೋಡಶೋಽಧ್ಯಾಯಃ ||

### ಹದಿನಾರನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಕುಲೇ ಕಸ್ಯ ಸಮುತ್ಪನ್ನಾಃ ಕ್ಷತ್ರಿಯಾ ಹೈಹಯಾಶ್ಚ ಯೇ(ತೇ)ೀ ।**
**ಬ್ರಹ್ಮಹತ್ಯಾಮನಾದೃತ್ಯ ನಿಜಘ್ನುರ್ಭಾರ್ಗವಾಂಶ್ಚ ಯೇ ॥೧॥**

**ವೈರಸ್ಯ ಕಾರಣಂ ತೇಷಾಂ ಕಿಂ ಮೇ ಬ್ರೂಹಿ ಪಿತಾಮಹ ।**
**ನಿಮಿತ್ತೇನ ವಿನಾ ಕ್ರೋಧಂ ಕಥಂ ಕುರ್ವಂತಿ ಸತ್ತಮಾಃ ॥೨॥**

**ವೈರಂ ಪುರೋಹಿತೈಃ ಸಾರ್ಧಂ ಕಸ್ಮಾತ್ತೇಷಾಮಜಾಯತ ।**
**ನಾಲ್ಪಹೇತೋರ್ಹಿ ತದ್ವೈರಂ ಕ್ಷತ್ರಿಯಾಣಾಂ ಭವಿಷ್ಯತಿ ॥೩॥**

---

ಓ ವ್ಯಾಸಮಹರ್ಷಿಯೇ, ಬ್ರಹ್ಮಹತ್ಯೆಯ ಪಾಪವನ್ನೂ ಲೆಕ್ಕಿಸದೆ ಭೃಗು ಋಷಿಯ ಪುತ್ರರನ್ನು ಕೊಂದ ಆ ಹೈಹಯರೆಂಬ ಕ್ಷತ್ರಿಯರು ಯಾರ ವಂಶದಲ್ಲಿ ಹುಟ್ಟಿದವರು ? ||೧||

ಪಿತಾಮಹನಾದ ವ್ಯಾಸನೇ, ಆಹೈಹಯರಿಗೆ ಋಷಿಪುತ್ರರಲ್ಲಿ ದ್ವೇಷಕ್ಕೆ ಕಾರಣ ವೇನು ? ಸತ್ಪುರುಷರು ಕಾರಣವಿಲ್ಲದೆ ಕೋಪವನ್ನು ಮಾಡುವುದಿಲ್ಲ. ಅದರಲ್ಲಿಯೂ ಪುರೋಹಿತರ ಮೇಲೆ ವೈರವೇತಕ್ಕೆ ಬಂದಿತು ? ಕ್ಷತ್ರಿಯರಾದ ಅವರಿಗೆ ಆ ವೈರವು ಅಲ್ಪಕಾರಣದಿಂದುಂಟಾಗಿರಲಾರದು. ಆದುದರಿಂದ ಆ ಬಲವಾದ ಕಾರಣವನ್ನು ನನಗೆ ಹೇಳಬೇಕು. ||೨-೩||

ಅನ್ಯಥಾ ಬ್ರಾಹ್ಮಣಾನ್ಪೂಜ್ಯಾನ್ ಕಥಂ ಜಘ್ನುರನಾಗಸಃ ।
ಬಾಹುಜಾ ಬಲವಂತೋಽಪಿ ಪಾಪಭೀತಾಃ ಕಥಂ ನ ತೇ ॥೪॥

ಸ್ವಲ್ಪೇಽಪರಾಧೇ ಕೋ ಹನ್ಯಾದ್ವಾಡವಾನ್ ಕ್ಷತ್ರಿಯರ್ಷಭಃ ।
ಸಂದೇಹೋ ನೋ ಮುನಿಶ್ರೇಷ್ಠ ಕಾರಣಂ ವಕ್ತುಮರ್ಹಸಿ ॥೫॥

॥ ಸೂತ ಉವಾಚ ॥

ಇತಿ ಪೃಷ್ಟಸ್ತದಾ ತೇನ ರಾಜ್ಞಾ ಸತ್ಯವತೀಸುತಃ ।
ಉವಾಚ ಪರಮಪ್ರೀತಃ ಕಥಾಂ ಸಂಸ್ಮೃತ್ಯ ಚೇತಸಾ ॥೬॥

॥ ವ್ಯಾಸ ಉವಾಚ ॥

ಶೃಣು ಪಾರಿಕ್ಷಿತೇ ವಾರ್ತಾಂ ಕ್ಷತ್ರಿಯಾಣಾಂ ಪುರಾತನೀಂ ।
ಆಶ್ಚರ್ಯಕಾರಿಣೀಂ ಸಮ್ಯಗ್ವಿದಿತಾಂ ಚ ಪುರಾ ಮಯಾ ॥೭॥

ಕಾರ್ತವೀರ್ಯೇತಿ ನಾಮ್ನಾಽಭೂತ್‌ಹೈಹಯಃ ಪೃಥಿವೀಪತಿಃ ।
ಸಹಸ್ರಬಾಹುರ್ಬಲವಾನ್ ಅರ್ಜುನೋ ಧರ್ಮತತ್ಪರಃ ॥೮॥

---

ಬಲವಾದಕಾರಣವಿಲ್ಲದಿದ್ದರೆ ತಪ್ಪುಮಾಡದ ಇರತಕ್ಕ ಪೂಜ್ಯರಾದ ಬ್ರಾಹ್ಮಣರನ್ನು ಹೇಗೆ ಕೊಂದಾರು? ಕ್ಷತ್ರಿಯರು ಬಲಶಾಲಿಗಳಾದರೂ ಅವರು ಪಾಪಕ್ಕೆ ಏಕೆ ಭಯಪಡಲಿಲ್ಲ? ಕ್ಷತ್ರಿಯಶ್ರೇಷ್ಠರಾದವರು ಸ್ವಲ್ಪ ತಪ್ಪಿಗೆ ಬ್ರಾಹ್ಮಣರನ್ನು ಯಾರು ತಾನೇ ಕೊಲ್ಲುವರು? ಮುನಿಶ್ರೇಷ್ಠನಾದ ವ್ಯಾಸನೇ, ನನ್ನ ಈ ಸಂದೇಹಕ್ಕೆ ಸಮಾಧಾನರೂಪವಾದ ಕಾರಣವನ್ನು ಹೇಳಬೇಕು. ॥೫॥

ಹೀಗೆಂದು ರಾಜನು ಪ್ರಶ್ನೆಮಾಡುತ್ತಲು, ಸತ್ಯವತಿಯ ಪುತ್ರನಾದ ವ್ಯಾಸನು ಸಂತೋಷದಿಂದ ತನ್ನ ಮನಸ್ಸಿನಲ್ಲಿ ಆ ಕಥೆಯನ್ನು ಜ್ಞಾಪಿಸಿಕೊಂಡು ಹೇಳುವುದಕ್ಕೆ ಪ್ರಾರಂಭಿಸಿದನು. ॥೬॥

ವ್ಯಾಸಮುನಿಯು ಹೇಳಿದನು -- ಪರೀಕ್ಷಿತರಾಜನ ಪುತ್ರನಾದ ಜನಮೇಜಯನೇ ಕೇಳು, ಹಿಂದೆಯೇ ನಾನು ಚೆನ್ನಾಗಿ ತಿಳಿದುಕೊಂಡಿರುವ ಆಶ್ಚರ್ಯಕರವಾದ ಬಹಳ ಪುರಾತನವಾದ ಆ ಕ್ಷತ್ರಿಯರ ಕಥೆಯನ್ನು ಹೇಳುವೆನು. ॥೭॥

ಹೈಹಯ ದೇಶದಲ್ಲಿ ಬಲಿಷ್ಠನೂ ಧರ್ಮಾಸಕ್ತನೂ ಸಾವಿರ ತೋಳುಗಳುಳ್ಳವನೂ ಆದ ಕಾರ್ತವೀರ್ಯಾರ್ಜುನನೆಂಬ ಹೆಸರಿನ ರಾಜನಿದ್ದನು. ॥೮॥

ದತ್ತಾತ್ರೇಯಸ್ಯ ಶಿಷ್ಯೋಽಭೂದವತಾರೋ ಹರೇರಿವ ।
ಸಿದ್ಧಃ ಸರ್ವಾರ್ಥದಃ ಶಾಕ್ತೋ ಭೃಗೂಣಾಂ ಯಾಜ್ಯ ಏವ ಸಃ ॥೯॥

ಯಜ್ವಾ ಪರಮಧರ್ಮಿಷ್ಠಃ ಸದಾ ದಾನಪರಾಯಣಃ ।
ದದೌ ವಿತ್ತಂ ಭೃಗುಭ್ಯೋಽಸೌ ಕೃತ್ವಾ ಯಜ್ಞಾನನೇಕಶಃ ॥೧೦॥

ಧನಿನಸ್ತೇ ದ್ವಿಜಾ ಜಾತಾ ಭೃಗವೋ ನೃಪದಾನತಃ ।
ಹಯರತ್ನಸಮೃದ್ಧ್ಯಾಢ್ಯಾಃ ಸಂಜಾತಾಃ ಪ್ರಥಿತಾ ಭುವಿ ॥೧೧॥

ಸ್ವರ್ಯಾತೇ ನೃಪಶಾರ್ದೂಲೇ ಕಾರ್ತವೀರ್ಯಾರ್ಜುನೇ ಪುನಃ ।
ಹೈಹಯಾ ನಿರ್ಧನಾ ಜಾತಾಃ ಕಾಲೇನ ಮಹತಾ ನೃಪ ॥೧೨॥

ಧನಕಾರ್ಯಂ ಸಮುತ್ಪನ್ನಂ ಹೈಹಯಾನಾಂ ಕದಾಚನ ।
ಯಾಚಿಷ್ಣವೋಽಭಿಜಗ್ಮುಸ್ತಾನ್ ಭೃಗೂಂಸ್ತೇ ಹೈಹಯಾ ನೃಪ॥೧೩॥

---

ಆ ರಾಜನು ವಿಷ್ಣುವಿನ ಅವತಾರವಾದ ದತ್ತಾತ್ರೇಯನ ಶಿಷ್ಯನಾಗಿದ್ದನು. ಮತ್ತು ಅವನು ಪರಾಶಕ್ತಿಯ ಉಪಾಸಕನಾಗಿಯೂ, ತಪಸ್ಸಿದ್ಧನಾಗಿಯೂ, ಸಮಸ್ತ ಇಷ್ಟಾರ್ಥಗಳನ್ನೂ ಯಾಚಕರಿಗೆ ಕೊಡತಕ್ಕವನಾಗಿಯೂ, ಭೃಗುಪುತ್ರರ ಗೃಹಸ್ಥನಾಗಿಯೂ ಇದ್ದನು. ॥೯॥

ಆ ರಾಜನು ಮಹಾಧರ್ಮಿಷ್ಠನಾಗಿಯೂ, ಯಾಗಮಾಡತಕ್ಕವನಾಗಿಯೂ, ಯಾವಾಗಲೂ ದಾನಮಾಡುವುದರಲ್ಲಾಸಕ್ತನಾಗಿಯೂ ಇದ್ದು, ಅನೇಕ ಯಾಗಗಳನ್ನು ಮಾಡಿ ಪುರೋಹಿತರಾದ ಭೃಗುಪುತ್ರರಿಗೆ ವಿಶೇಷವಾಗಿ ಧನವನ್ನು ಕೊಟ್ಟನು. ॥೧೦॥

ರಾಜನು ಕೊಟ್ಟ ದಾನದಿಂದ ಭೃಗುಪುತ್ರರು ಧನವಂತರಾಗಿಯೂ, ಕುದುರೆಗಳು ರತ್ನಗಳು ಮುಂತಾದ ಸಂಪತ್ತಿನಿಂದ ಕೂಡಿದವರಾಗಿಯೂ, ಭೂಮಿಯಲ್ಲಿ ಪ್ರಸಿದ್ಧರಾದರು. ॥೧೧॥

ರಾಜಶ್ರೇಷ್ಠನಾದ ಕಾರ್ತವೀರ್ಯಾರ್ಜುನನು ಸ್ವರ್ಗಕ್ಕೆ ಹೋದ ಮೇಲೆ ಬಹಳ ಕಾಲವು ಕಳೆಯಲು ಅವನ ವಂಶದಲ್ಲಿ ಹುಟ್ಟಿದ ರಾಜರು ದರಿದ್ರರಾದರು. ॥೧೨॥

ರಾಜನೇ ಕೇಳು—ಆ ಹೈಹಯರಿಗೆ ಒಂದಾನೊಂದು ಕಾಲದಲ್ಲಿ ರಾಜ್ಯರಕ್ಷಣೆಗೋಸ್ಕರ ಹೆಚ್ಚಾಗಿ ಹಣವು ಬೇಕಾಯಿತು. ಆಗ ಅವರು ಭೃಗುಪುತ್ರರಲ್ಲಿ ವಿಶೇಷ

ವಿನಯಂ ಕ್ಷತ್ರಿಯಾಃ ಕೃತ್ವಾಽಪ್ಯಯಾಚಂತ ಧನಂ ಬಹು ।
ನ ದದುಸ್ತೇಽತಿಲೋಭಾರ್ತಾ ನಾಸ್ತಿ ನಾಸ್ತೀತಿ ವಾದಿನಃ ॥೧೪॥

ಭೂಮೌ ಚ ನಿದಧುಃ ಕೇಚಿದ್ಭೃಗವೋ ಧನಮುತ್ತಮಂ ।
ದದುಃ ಕೇಚಿದ್ದ್ವಿಜಾತಿಭ್ಯೋ ಜ್ಞಾತ್ವಾ ಕ್ಷತ್ರಿಯತೋ ಭಯಂ ॥೧೫॥

ಕೃತ್ವಾ ಸ್ಥಾನಾಂತರೇ ದ್ರವ್ಯಂ ಬ್ರಾಹ್ಮಣಾ ಭಯವಿಹ್ವಲಾಃ ।
ತ್ಯಕ್ತ್ವಾಽಽಶ್ರಮಾನ್ಯಯುಃ ಸರ್ವೇ ಭೃಗವಸ್ತೃಷ್ಣಯಾಽನ್ವಿತಾಃ॥೧೬॥

ಯಾಜ್ಯಾಂಶ್ಚ ದುಃಖಿತಾನ್ ದೃಷ್ಟ್ವಾ ನ ದದುರ್ಲೋಭಮೋಹಿತಾಃ ।
ಪಲಾಯಿತ್ವಾ ಗತಾಃ ಸರ್ವೇ ಗಿರಿದುರ್ಗಾನುಪಾಶ್ರಿತಾಃ ॥೧೭॥

ತತಸ್ತೇ ಹೈಹಯಾಸ್ತಾತ ದುಃಖಿತಾಃ ಕಾರ್ಯಗೌರವಾತ್ ।
ಭೃಗೂಣಾಮಾಶ್ರಮಾಜ್ಜಗ್ಮುಃ ದ್ರವ್ಯಾರ್ಥಂ ಕ್ಷತ್ರಿಯರ್ಷಭಾಃ॥೧೮॥

---

ಧನವಿರುವುದನ್ನು ತಿಳಿದು ಅವರನ್ನು ಕೇಳುವುದಕ್ಕಾಗಿ ಅವರ ಸಮೀಪಕ್ಕೆ ಹೋದರು. ॥೧೩॥

ಆ ಕ್ಷತ್ರಿಯರು ವಿನಯದಿಂದ ವಿಶೇಷವಾಗಿ ಧನವನ್ನು ಕೇಳಿದರು. ಆ ಬ್ರಾಹ್ಮಣರು ಅತ್ಯಾಸೆಯಿಂದ ಕೂಡಿದವರಾಗಿ ಇಲ್ಲ ಇಲ್ಲ ಎಂದು ಹೇಳುತ್ತಾ ಧನವನ್ನು ಕೊಡಲಿಲ್ಲ. ॥೧೪॥

ಆ ಭಾರ್ಗವರಲ್ಲಿ ಕೆಲವರು ಕ್ಷತ್ರಿಯರಿಂದ ತಮಗೆ ಭಯವುಂಟಾಗುವುದೆಂದು ತಿಳಿದು ತಮ್ಮಲ್ಲಿದ್ದ ಉತ್ತಮವಾದ ಧನವನ್ನು ಭೂಮಿಯಲ್ಲಿ ಹೂಳಿದರು ಮತ್ತೆ ಕೆಲವರು ಬ್ರಾಹ್ಮಣರಿಗೆ ಕೊಟ್ಟರು. ॥೧೫॥

ಆ ಬ್ರಾಹ್ಮಣರು ಭಯಭ್ರಾಂತರಾಗಿ ತಮ್ಮಲ್ಲಿದ್ದ ದ್ರವ್ಯವನ್ನು ಬೇರೆ ಸ್ಥಳಕ್ಕೆ ಸಾಗಿಸಿ ಅತ್ಯಾಸೆಯಿಂದ ಕೂಡಿದವರಾಗಿ ತಮ್ಮ ಆಶ್ರಮಗಳನ್ನು ಬಿಟ್ಟು ಬೆಟ್ಟ ಕಾಡು ಮುಂತಾದ ಪ್ರದೇಶಗಳಿಗೆ ಹೊರಟುಹೋದರು. ॥೧೬॥

ತಮ್ಮ ಶಿಷ್ಯರಾದ ಹೈಹಯರು ದುಃಖಕ್ಕೆ ಗುರಿಯಾಗಿರುವುದನ್ನು ನೋಡಿಯೂ, ಆ ಬ್ರಾಹ್ಮಣರು ಅತ್ಯಾಸೆಯಿಂದ ಅಜ್ಞಾನಿಗಳಾಗಿ ಓಡಿಹೋಗಿ ಬೆಟ್ಟದ ಗವಿಗಳನ್ನು ಆಶ್ರಯಿಸಿದರು. ॥೧೭॥

ಆಮೇಲೆ ಆ ಹೈಹಯರಾದ ಕ್ಷತ್ರಿಯಶ್ರೇಷ್ಠರು ಕಾರ್ಯಗೌರವದಿಂದ ದುಃಖಪಡುತ್ತಾ ಹಣಕ್ಕಾಗಿ ಆ ಭೃಗುಪುತ್ರರ ಆಶ್ರಮಕ್ಕೆ ಹೋದರು. ॥೧೮॥

ಭೃಗೂಂಸ್ತು ನಿರ್ಗತಾನ್ವೀಕ್ಷ್ಯ ಶೂನ್ಯಾಂಸ್ತ್ಯಕ್ತ್ವಾ ಗೃಹಾನಥ ।
ಚಖನುರ್ಭೂತಲಂ ತತ್ರ ದ್ರವ್ಯಾರ್ಥಂ ಹೈಹಯಾ ಭೃಶಂ ॥೧೯॥

ಖನತಾಽಧಿಗತಂ ವಿತ್ತಂ ಕೇನಚಿದ್ಭೃಗುವೇಶ್ಮನಿ ।
ದದೃಶುಃ ಕ್ಷತ್ರಿಯಾಃ ಸರ್ವೇ ತದ್ವಿತ್ತಂ ಶ್ರಮಕರ್ಶಿತಾಃ ॥೨೦॥

ಯತ್ರ ತತ್ರ ಸಮುತ್ಪನ್ನಂ ಭೂರಿ ದ್ರವ್ಯಂ ಮಹೀತಲಾತ್ ।
ತದಾ ತೇ ಪಾರ್ಶ್ವಭಾಗಸ್ಥಬ್ರಾಹ್ಮಣಾನಾಂ ಗೃಹಾಣ್ಯಪಿ ॥೨೧॥

ನಿರ್ಭಿದ್ಯ ಹೈಹಯಾ ದ್ರವ್ಯಂ ದದೃಶುರ್ಧನಲಿಪ್ಸಯಾ ।
ಬ್ರಾಹ್ಮಣಾಶ್ಚುಕ್ರುಶುಃ ಸರ್ವೇ ಭೀತಾಶ್ಚ ಶರಣಂ ಗತಾಃ ॥೨೨॥

ಅತಿಖಿನ್ನಸ್ತು ವಿಪ್ರಾಣಾಂ ಭವನಾನ್ನಿಸ್ಸೃತಂ ಬಹು ।
ನಿಜಘ್ನುಸ್ತಾಞ್ಛರೈಃ ಕೋಪಾದ್ವಾಡವಾಞ್ಛರಣಾಗತಾನ್ ॥೨೩॥

---

ಬರಿದಾದ ಮನೆಯನ್ನು ಬಿಟ್ಟು ಭೃಗುಪುತ್ರರು ಹೊರಟುಹೋಗಿರುವುದನ್ನು ನೋಡಿ ಹೈಹಯರು ದ್ರವ್ಯಾರ್ಥವಾಗಿ ಆ ಮನೆಗಳಲ್ಲಿ ನೆಲವನ್ನು ಅಗೆದರು. ಹೀಗೆ ಅಗೆಯುತ್ತಿರುವಾಗ ಒಬ್ಬ ಭೃಗುಪುತ್ರನ ಮನೆಯಲ್ಲಿ ಧನವು ಸಿಕ್ಕಿತು. ಬಹಳ ಆಯಾಸಪಟ್ಟ ಆ ಕ್ಷತ್ರಿಯರು ಆ ಧನವನ್ನು ಕಂಡರು. ॥೧೯-೨೦॥

ಭೂಮಿಯಲ್ಲಿ ಅಲ್ಲೆಲ್ಲ ಅಗೆಯುತ್ತಾ ವಿಶೇಷವಾಗಿ ಧನವು ಸಿಕ್ಕುತ್ತಲು, ಅವರು ಆ ಭೃಗುಪುತ್ರರ ಮನೆಯ ಪಕ್ಕದಲ್ಲಿರುವ ಬ್ರಾಹ್ಮಣರ ಮನೆಗಳನ್ನೂ ಅಗೆದು ಧನದಾಸೆಯಿಂದ ಹುಡುಕುವುದಕ್ಕೆ ಮೊದಲು ಮಾಡಿದರು. ॥೨೧॥

ಬ್ರಾಹ್ಮಣರೆಲ್ಲರೂ ಹೆದರಿ ಅಳುತ್ತಾ ಆ ಹೈಹಯರಿಗೆ ಶರಣಾಗತರಾದರು. ಆ ಕ್ಷತ್ರಿಯರು ವಿಶೇಷವಾಗಿ ಹುಡುಕುತ್ತಿರಲು ಆ ಬ್ರಾಹ್ಮಣರ ಮನೆಯಲ್ಲಿ ವಿಶೇಷವಾಗಿ ಹಣವು ಸಿಕ್ಕಿತು. ಆಗ ಆ ಹೈಹಯರು ಹಣವಿಲ್ಲವೆಂದು ಹೇಳಿದ ಬ್ರಾಹ್ಮಣರ ಮೇಲೆ ಕೋಪಗೊಂಡು ಸುಳ್ಳುಹೇಳಿದ ಅವರನ್ನು ಶರಣಾಗತರಾದರೂ ಕೂಡ ಬಿಡದೆ ಬಾಣದಿಂದ ಹೊಡೆದು ಕೊಂದರು! ॥೨೨-೨೩॥

**ಯಯುಸ್ತೇ ಗಿರಿದುರ್ಗಾಂಶ್ಚ ಯತ್ರ ವೈ ಭೃಗವಃ ಸ್ಥಿತಾಃ ।**
**ಆಗರ್ಭಾದನುಕೃಂತಂತಶ್ಚೇರುಶ್ಚೈವ ಮಹೀಮಿಮಾಂ ॥೨೪॥**

**ಪ್ರಾಪ್ತಾನ್ ಪ್ರಾಪ್ತಾನ್ ಭೃಗೂನ್ ಸರ್ವಾನ್ ನಿಜಘ್ನುರ್ನಿಶಿತೈಃ ಶರೈಃ ।**
**ಆಬಾಲವೃದ್ಧಾನಪರಾನವಮುನ್ಯ ಚ ಪಾತಕಂ ॥೨೫॥**

**ಏವಮುತ್ಪಾಟ್ಯಮಾನೇಷು ಭಾರ್ಗವೇಷು ಯತಸ್ತತಃ ।**
**ಹನ್ಯುರ್ಗರ್ಭಾಂಶ್ಚ ನಾರೀಣಾಂ ಗೃಹೀತ್ವಾ ಹೈಹಯಾ ಭೃಶಂ ॥೨೬॥**

**ರುರುದುಸ್ತಾಃ ಸ್ತ್ರಿಯಃ ಕಾಮಂ ಕುರರ್ಯ ಇವ ದುಃಖಿತಾಃ ।**
**ಗರ್ಭಾಶ್ಚ ಕೃಂತಿತಾ ಯಾಸಾಂ ಕ್ಷತ್ರಿಯೈಃ ಪಾಪನಿಶ್ಚಯೈಃ ॥೨೭॥**

**ಅನ್ಯೇऽಪ್ಯಾಹುಶ್ಚ ತಾನ್ದೃಷ್ಟ್ವಾ ಮುನಯಸ್ತೀರ್ಥವಾಸಿನಃ ।**
**ಮುಂಚಂತು ಕ್ಷತ್ರಿಯಾಃ ಕ್ರೋಧಂ ಬ್ರಾಹ್ಮಣೇಷು ಭಯಾವಹಂ ॥೨೮॥**
**ಅಯುಕ್ತಮೇತದಾರಬ್ಧಂ ಭವದ್ಭಿಃ ಕರ್ಮಗರ್ಹಿತಂ ।**

---

ಬಳಿಕ ಆ ಹೈಹಯರು ಭೃಗುಪುತ್ರರಿದ್ದ ಗಿರಿದುರ್ಗಗಳಿಗೆ ಹೋಗಿ ಅವರ ವಂಶದಲ್ಲಿ ಗರ್ಭದಲ್ಲಿರುವ ಮಕ್ಕಳವರೆಗೂ ಎಲ್ಲರನ್ನೂ ಕೊಲ್ಲುತ್ತಾ ಭೂಮಿಯಲ್ಲಿ ಸಂಚರಿಸುತ್ತಿದ್ದರು. ತಮಗೆ ಭೃಗುವಂಶದವರು ಯಾರು ಸಿಕ್ಕಿದರೂ ಬಾಲಕರು ವೃದ್ಧರು ವಯಸ್ಕರು ಎಂಬ ಯಾವ ವಿವೇಚನೆಯನ್ನೂ ಮಾಡದೆ ಪಾಪಕ್ಕೂ ಹೆದರದೆ ಕ್ರೂರವಾದ ಬಾಣಗಳಿಂದ ಅವರನ್ನು ಕೊಂದರು! ॥೨೪-೨೫॥

ಹೀಗೆ ಆ ಭಾರ್ಗವರನ್ನೆಲ್ಲರನ್ನೂ ಕೊಂದಮೇಲೆ ಹೈಹಯರು ಆ ವಂಶದ ಸ್ತ್ರೀಯರಲ್ಲಿ ಗರ್ಭಿಣಿಯರಾಗಿದ್ದವರನ್ನೂ ಹಿಡಿದು ಅವರ ಗರ್ಭಗಳನ್ನೂ ನಾಶಮಾಡಿದರು. ॥೨೬॥

ಪಾಪಿಗಳಾದ ಆ ಕ್ಷತ್ರಿಯರು ಯಾರ ಗರ್ಭವನ್ನು ನಾಶಮಾಡುತ್ತಿದ್ದರೋ ಆ ಸ್ತ್ರೀಯರು ದುಃಖದಿಂದ ಕುರರೀ ಪಕ್ಷಿಯಂತೆ ವಿಶೇಷವಾಗಿ ಅತ್ತರು. ॥೨೭॥

ತೀರ್ಥವಾಸಿಗಳಾದ ಬೇರೆ ವಂಶದ ಮುನಿಗಳು ಗರ್ವಿತರಾದ ಆ ಹೈಹಯರನ್ನು ಕುರಿತು ಎಲೈ ಕ್ಷತ್ರಿಯರೇ, ಕೋಪವನ್ನು ಬಿಡಿ. ಬ್ರಾಹ್ಮಣರಲ್ಲಿ ನೀವು ಮಾಡುವ ಕೋಪವು ಭಯವನ್ನುಂಟುಮಾಡುವುದು. ನೀವು ಅತ್ಯಂತ ನೀಚವಾದ ಕಾರ್ಯವನ್ನು ಮಾಡಲು ಪ್ರಾರಂಭಿಸಿರುವಿರಿ! ಬ್ರಾಹ್ಮಣಜಾತಿದ್ವೇಷವು ಕೆಟ್ಟದು. ಎಂದರು. ॥೨೮॥

ಯದ್ಗರ್ಭಾನ್ಭೃಗುಪತ್ನೀನಾಂ ನಿಹನ್ಯುಃ ಕ್ಷತ್ರಿಯರ್ಷಭಾಃ ॥೨೯॥
ಅತ್ಯುಗ್ರಪುಣ್ಯಪಾಪಾನಾಮಿಹೈವ ಫಲಮಾಪ್ನುಯಾತ್ ।
ತಸ್ಮಾಜ್ಜುಗುಪ್ಸಿತಂ ಕರ್ಮ ತ್ಯಕ್ತವ್ಯಂ ಭೂತಿಮಿಚ್ಛತಾ ॥೩೦॥

ತಾನಾಹುರ್ಹೈಹಯಾಃ ಕ್ರುದ್ಧಾ ಮುನೀನಥ ದಯಾಪರಾನ್ ।
ಭವಂತಃ ಸಾಧವಃ ಸರ್ವೇ ನಾಽರ್ಥಜ್ಞಾಃ ಪಾಪಕರ್ಮಣಾಂ ॥೩೧॥

ಏಭಿರ್ಹೃತಂ ಧನಂ ಸರ್ವಂ ಪೂರ್ವಜಾನಾಂ ಮಹಾತ್ಮನಾಂ ।
ವಂಚಯಿತ್ವಾ ಛಲಾಭಿಜ್ಞೈಃ ಮಾರ್ಗೇ ಪಾಟಚ್ಚರೈರಿವ ॥೩೨॥

ಏತೇ ಪ್ರತಾರಕಾ ದಂಭಾಸ್ತಾದೃಶಾ ಬಕವೃತ್ತಯಃ ।
ಉತ್ಪನ್ನೇ ಚ ಮಹಾಕಾರ್ಯೇ ಪ್ರಾರ್ಥಿತಾ ವಿನಯೇನ ತೇ ॥೩೩॥

ನ ದದುಃ ಪ್ರಾರ್ಥಿತಂ ವಿಪ್ರಾಃ ಪಾದವೃದ್ಧ್ಯಾಽಪಿ ಯಾಚಿತಾಃ ।
ನಾಸ್ತೀತಿ ವಾದಿನಃ ಸ್ತಬ್ಧಾ ದುಃಖಿತಾನ್ವೀಕ್ಷ್ಯ ಯಾಜ್ಯಕಾನ್ ॥೩೪॥

---

ಓ ಹೈಹಯರಾಜರೇ, ನೀವು ಕ್ಷತ್ರಿಯಶ್ರೇಷ್ಠರಾಗಿದ್ದು ಭೃಗುವಂಶದ ಸ್ತ್ರೀಯರ ಗರ್ಭವನ್ನೂ ನಾಶಮಾಡುತ್ತಿರುವಿರಿ! ಕ್ರೂರವಾದ ಪಾಪಗಳನ್ನೂ ಪುಣ್ಯಗಳನ್ನೂ ಮಿತಿಮಿಾರಿ ಮಾಡುವ ಜನರು ಈ ಜನ್ಮದಲ್ಲಿಯೇ ಈಗಲೇ ಅಂಥಾ ಪುಣ್ಯಪಾಪಗಳ ಫಲವನ್ನು ಹೊಂದುವರು! ಆದುದರಿಂದ ಸಂಪತ್ತನ್ನಪೇಕ್ಷಿಸುವ ಮನುಷ್ಯನು ನೀಚ ಕೆಲಸವನ್ನು ಬಿಡಬೇಕು. ಎಂದು ಹೇಳಿದರು. ॥೨೯-೩೦॥

ಕೋಪವನ್ನು ಹೊಂದಿದ ಹೈಹಯರು ದಯಾವಂತರಾದ ಆ ಮುನಿಗಳನ್ನು ಕುರಿತು, ನೀವೆಲ್ಲರೂ ಸಜ್ಜನರು. ಪಾಪಕಾರ್ಯದ ಅರ್ಥವನ್ನು ತಿಳಿದವರಲ್ಲ. ಈ ಭೃಗುವಂಶದ ಬ್ರಾಹ್ಮಣರು ಮಹಾತ್ಮರಾದ ನಮ್ಮ ವಂಶದ ಪೂರ್ವದ ರಾಜರ ಧನವನ್ನೆಲ್ಲವನ್ನೂ ಮೋಸದಿಂದ ಕಳ್ಳರಂತೆ ಅಪಹರಿಸಿರುವರು! ॥೩೧-೩೨॥

ಈ ಬ್ರಾಹ್ಮಣರು ವಂಚಕರು, ಜಂಭಕ್ಕಾಗಿ ಧರ್ಮವನ್ನಾಚರಿಸುವವರು! ಬಕಪಕ್ಷಿಯಂತೆ ತಪಸ್ಸು ಮಾಡುವವರು! ನಮಗೆ ಅತ್ಯುತ್ತಮವಾದ ಕಾರ್ಯಕ್ಕಾಗಿ ಧನವು ಬೇಕಾಗಲು ವಿನಯದಿಂದ ಈ ಬ್ರಾಹ್ಮಣರನ್ನು ನಾವು ಪ್ರಾರ್ಥಿಸಿದರೂ, ಮೂಲದ್ರವ್ಯದಲ್ಲಿ ನಾಲ್ಕನೆಯ ಒಂದು ಭಾಗದಷ್ಟು ಬಡ್ಡಿಯನ್ನು ಸೇರಿಸಿ ಕೊಡುತ್ತೇವೆಂದು ಕೇಳಿದರೂ, ತಮ್ಮ ಶಿಷ್ಯರಾದ ನಾವು ದುಃಖದಲ್ಲಿರುವುದನ್ನು ತಿಳಿದಿದ್ದರೂ, ನಮ್ಮಲ್ಲಿ ಧನವಿಲ್ಲವೆಂದು ಹೇಳುತ್ತಾ, ಇದ್ದ ಹಣವನ್ನು ಕೊಡಲಿಲ್ಲ! ॥೩೩-೩೪॥

ಧನಂ ಪ್ರಾಪ್ತಂ ಕಾರ್ತವೀರ್ಯಾದ್ರಕ್ಷಿತಂ ಕೇನ ಹೇತುನಾ ।
ನ ಕೃತಾಃ ಕ್ರತವಃ ಕಿಂ ತೈರ್ದಾನಂ ಚಾಽರ್ಥಿಷು ಭೂರಿಶಃ ॥೩೫॥

ನ ಸಂಚಿತವ್ಯಂ ವಿಪ್ರೈಸ್ತು ಧನಂ ಕ್ವಾಪಿ ಕದಾಚನ ।
ಯಷ್ಟವ್ಯಂ ವಿಧಿವದ್ದೇಯಂ ಭೋಕ್ತವ್ಯಂ ಚ ಯಥಾಸುಖಂ ॥೩೬॥

ದ್ರವ್ಯೇ ಚೌರಭಯಂ ಪ್ರೋಕ್ತಂ ತಥಾ ರಾಜಭಯಂ ದ್ವಿಜಾಃ ।
ವಹ್ನೇರ್ಭಯಂ ಮಹಾಘೋರಂ ತಥಾ ಧೂರ್ತಭಯಂ ಮಹತ್ ॥೩೭॥

ಯೇನ ಕೇನಾಪ್ಯುಪಾಯೇನ ಧನಂ ತ್ಯಜತಿ ರಕ್ಷಕಂ ।
ಅಥವಾಽಸೌ ಮೃತೋ ಯಾತಿ ದ್ರವ್ಯಂ ತ್ಯಕ್ತ್ವಾ ಹ್ಯಸದ್ಗತಿಂ ॥೩೮॥

ಪಾದವೃದ್ಧ್ಯಾ ತಥಾಽಸ್ಮಾಭಿಃ ಪ್ರಾರ್ಥಿತಂ ವಿನಯಾನ್ವಿತೈಃ ।
ತಥಾಪಿ ಲೋಭಸಂದಿಗ್ಧೈರ್ನ ದತ್ತಃ ನಃ ಪುರೋಹಿತೈಃ ॥೩೯॥

---

ಕಾರ್ತವೀರ್ಯಾರ್ಜುನನಿಂದ ಪಡೆದ ಧನವನ್ನು ಇವರು ಯಾವ ಕಾರಣ ದಿಂದ ಕೂಡಿಟ್ಟರು? ಅವರು ಯಜ್ಞಗಳನ್ನೇಕೆ ಮಾಡಲಿಲ್ಲ? ಯಾಚಕರಿಗೆ ವಿಶೇಷ ವಾಗಿ ದಾನವನ್ನೇಕೆ ಕೊಡಲಿಲ್ಲ? ಬ್ರಾಹ್ಮಣರು ಎಲ್ಲಿಯೂ ಎಂದಿಗೂ ಧನವನ್ನು ಕೂಡಿಡಬಾರದು! ವೇದವಿಧಿಗನುಸಾರವಾಗಿ ಯಜ್ಞಗಳನ್ನು ಮಾಡಬೇಕು, ದಾನ ವನ್ನಾದರೂ ಮಾಡಬೇಕು. ಅಥವಾ ಸುಖವಾಗಿ ಅನುಭವಿಸಬೇಕು. ॥೩೫-೩೬॥

ಹೆಚ್ಚಾಗಿ ಹಣವಿದ್ದರೆ ಅದಕ್ಕೆ ಕಳ್ಳರು, ರಾಜರು, ಅಗ್ನಿ, ವಂಚಕರು, ಇವರ ದೆಸೆಯಿಂದ ಭಯವಿದ್ದೇ ಇರುವುದು. ಇವುಗಳಲ್ಲಿ ಯಾವುದಾದರೊಂದು ರೀತಿ ಯಿಂದ ಆ ಧನವು ತನ್ನನ್ನು ಕಾಪಾಡುವವನನ್ನು ಬಿಟ್ಟುಹೋಗುವುದು! ಹಾಗಿಲ್ಲ ದಿದ್ದರೆ ಆ ರಕ್ಷಕನೇ ಧನವನ್ನು ಬಿಟ್ಟು ಮರಣಹೊಂದಿ ನರಕವೇ ಮುಂತಾದ ದುರ್ಗ ತಿಗೆ ಹೋಗುವನು. ॥೩೭-೩೮॥

ಕಾಲುಭಾಗ ಬಡ್ಡಿಯನ್ನು ಸೇರಿಸಿಕೊಡುತ್ತೇವೆಂದು ವಿನಯದಿಂದ ಕೇಳಿ ಕೊಂಡರೂ ನಮ್ಮ ಪುರೋಹಿತರಾದ ಇವರು ಅತ್ಯಾಸೆಯಿಂದ ಕೂಡಿದವರಾಗಿ ಹಣ ವನ್ನು ಕೊಡದೆ ಹೋದರು! ೩೯॥

ದಾನಂ ಭೋಗಸ್ತಥಾ ನಾಶೋ ಧನಸ್ಯ ಗತಿರೀದೃಶೀ ।
ದಾನಭೋಗೌ ಕೃತೀನಾಂ ಚ ನಾಶಃ ಪಾಪಾತ್ಮನಾಂ ಕಿಲ ॥೪೦॥

ನ ದಾತಾ ನ ಚ ಯೋ ಭೋಕ್ತಾ ಕೃಪಣೋ ಗುಪ್ತಿತತ್ಪರಃ ।
ರಾಜ್ಞಾಽಸೌ ಸರ್ವಥಾ ದಂಡ್ಯೋ ವಂಚಕೋ ದುಃಖಭಾಙ್ನರಃ॥೪೧॥

ತಸ್ಮಾದ್ವಯಂ ಗುರೂನೇತಾನ್ವಂಚಕಾನ್ಬ್ರಾಹ್ಮಣಾಧಮಾನ್ ।
ಹಂತುಂ ಸಮುದ್ಯತಾಃ ಸರ್ವೇ ನ ಕ್ರೋದ್ಧವ್ಯಂ ಮಹಾತ್ಮಭಿಃ ॥೪೨॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ಹೇತುಮುದ್ವಾಕ್ಯಂ ತಾನಾಶ್ವಾಸ್ಯ ಮುನೀನಥ ।
ವಿಚೇರುಶ್ಚ ವಿಚಿನ್ವಾನಾ ಭೃಗುದಾರಾನನೇಕಶಃ ॥೪೩॥

ಭಯಾರ್ತಾ ಭೃಗುಪತ್ನ್ಯಸ್ತು ಹಿಮವಂತಂ ಧರಾಧರಂ ।
ಪ್ರಪೇದಿರೇ ರುದಂತ್ಯಶ್ಚ ವೇಪಮಾನಾಃ ಕೃಶಾ ಭೃಶಂ ॥೪೪॥

---

ಧನಕ್ಕೆ ದಾನ, ಸುಖಾನುಭವ, ನಾಶ ಈ ಮೂರು ದಾರಿಯಲ್ಲಿ ಹೋಗುವುದು ತಪ್ಪದು. ಪುಣ್ಯವಂತರು ದಾನಮಾಡುವರು ಅಥವಾ ಸುಖವನ್ನನುಭವಿಸುವರು. ಪಾಪಿಗಳ ಧನವು ನಾಶವೇ ಆಗುವುದು. ||೪೦||

ಯಾವನು ತನ್ನಲ್ಲಿರುವ ಧನವನ್ನು ದಾನಮಾಡದೆಯೂ, ತಾನನುಭವಿಸದೆಯೂ ಲೋಭಿಯಾಗಿ ಮುಚ್ಚಿಡುವನೋ, ಅಂಥವನನ್ನು ರಾಜನು ಶಿಕ್ಷಿಸಬೇಕು. ತನಗೂ ಇತರರಿಗೂ ಮೋಸಗಾರನಾದ ಅವನು ದುಃಖವನ್ನೇ ಅನುಭವಿಸುವನು! ||೪೧||

ಆ ಕಾರಣದಿಂದ ನಾವು ನಮ್ಮ ಪುರೋಹಿತರಾದರೂ ಮೋಸಗಾರರೂ ನೀಚ ಬ್ರಾಹ್ಮಣರೂ ಆದ ಇವರನ್ನು ಕೊಲ್ಲುತ್ತೇವೆ. ಮಹಾತ್ಮರಾದ ತಾವು ಕೋಪಮಾಡಬಾರದು. ಎಂದು ಹೇಳಿದರು. ||೪೨||

ಆ ಹೈಹಯರು ಸಕಾರಣವಾದ ಈ ಮಾತನ್ನು ಹೇಳಿ, ಆ ಮುನಿಗಳನ್ನು ಸಮಾಧಾನಪಡಿಸಿ, ಆ ಭೃಗುವಂಶದ ಸ್ತ್ರೀಯರನ್ನೂ ಹುಡುಕುತ್ತಾ ಎಲ್ಲ ಕಡೆಯಲ್ಲೂ ಸಂಚಾರಮಾಡುತ್ತಿದ್ದರು! ||೪೩||

ಆ ಭೃಗುವಂಶದ ಸ್ತ್ರೀಯರು ಭಯದಿಂದ ಪೀಡಿತರಾಗಿ ಆಹಾರವಿಲ್ಲದೆ ಕೃಶರಾಗಿ ನಡುಗುತ್ತಾ ಅಳುತ್ತಾ ಹಿಮವತ್ಪರ್ವತಕ್ಕೆ ಹೋಗಿ ಸೇರಿಕೊಂಡರು. ||೪೪||

ಏವಂ ತೇ ಹೈಹಯೈರ್ವಿಪ್ರಾಃ ಪೀಡಿತಾ ಧನಕಾಮುಕೈಃ ।
ನಿಹತಾಶ್ಚ ಯಥಾಕಾಮಂ ಸಂರಬ್ಧೈಃ ಪಾಪಕರ್ಮಭಿಃ ॥೪೫॥

ಲೋಭ ಏವ ಮನುಷ್ಯಾಣಾಂ ದೇಹಸಂಸ್ಥೋ ಮಹಾರಿಪುಃ ।
ಸರ್ವದುಃಖಾಕರಃ ಪ್ರೋಕ್ತೋ ದುಃಖದಃ ಪ್ರಾಣನಾಶಕಃ ॥೪೬॥

ಸರ್ವಪಾಪಸ್ಯ ಮೂಲಂ ಹಿ ಸರ್ವದಾ ತೃಷ್ಣಯಾನ್ವಿತಃ ।
ವಿರೋಧಕೃತ್ತ್ರಿವರ್ಣಾನಾಂ ಸರ್ವಾರ್ತೇಃ ಕಾರಣಂ ತಥಾ ॥೪೭॥

ಲೋಭಾತ್ತ್ಯಜಂತಿ ಧರ್ಮಂ ವೈ ಕುಲಧರ್ಮಂ ತಥೈವ ಹಿ ।
ಮಾತರಂ ಭ್ರಾತರಂ ಹಂತಿ ಪಿತರಂ ಬಾಂಧವಂ ತಥಾ ॥೪೮॥

ಗುರುಂ ಮಿತ್ರಂ ತಥಾ ಭಾಮಂ ಪುತ್ರಂ ಚ ಭಗಿನೀಂ ತಥಾ ।
ಲೋಭಾವಿಷ್ಟೋ ನ ಕಿಂ ಕುರ್ಯಾದಕೃತ್ಯಂ ಪಾಪಮೋಹಿತಃ॥೪೯॥

---

ಈ ರೀತಿಯಾಗಿ ಹಣದಾಸೆಯುಳ್ಳವರೂ ಪಾಪಕಾರ್ಯವನ್ನು ಮಾಡುವ ಪ್ರತಿಜ್ಞೆಯುಳ್ಳವರೂ ಆದ ಆ ಹೈಹಯರಿಂದ ಆ ಬ್ರಾಹ್ಮಣರು ಬಹಳ ಬಾಧೆಯನ್ನು ಹೊಂದಿದರು. ಮತ್ತು ಅನೇಕರು ಮರಣವನ್ನೂ ಹೊಂದಿದರು. ॥೪೫॥

ಲೋಭವೆಂಬುದೇ ಮನುಷ್ಯರ ಶರೀರದಲ್ಲಿಯೇ ಇರುವ ದೊಡ್ಡ ಶತ್ರುವು! ಇದು ಸಮಸ್ತ ದುಃಖಗಳಿಗೂ ಕಾರಣವಾದುದು. ಈ ಅತ್ಯಾಸೆಯು ಪ್ರಾಣಿಗಳಿಗೆ ಎಲ್ಲ ಬಗೆಯ ದುಃಖವನ್ನೂ ಕೊಟ್ಟು ಪ್ರಾಣವನ್ನೂ ನಾಶಮಾಡುವುದು. ॥೪೬॥

ಯಾವಾಗಲೂ ಅತ್ಯಾಸೆಯಿಂದ ಕೂಡಿದ ಮನುಷ್ಯನು ಸಮಸ್ತ ಪಾಪಕರ್ಮಗಳಿಗೂ ಕಾರಣನಾಗುವನು ಮತ್ತು ಬ್ರಹ್ಮ ಕ್ಷತ್ರಿಯ ವೈಶ್ಯರೆಂಬ ಮೂರು ವರ್ಣದವರಿಗೂ ಪರಸ್ಪರ ವಿರೋಧವನ್ನುಂಟುಮಾಡಿ ಸಮಸ್ತ ದುಃಖಗಳಿಗೂ ಕಾರಣನಾಗುವನು. ॥೪೭॥

ಮನುಷ್ಯನು ಅತ್ಯಾಸೆಯೆಂಬ ದುಷ್ಟಗುಣದಿಂದ ಸಾಮಾನ್ಯಧರ್ಮವನ್ನೂ ವಂಶಕ್ರಮಾಗತವಾದ ಧರ್ಮವನ್ನೂ ಬಿಟ್ಟುಬಿಡುವನು. ತಂದೆತಾಯಿಗಳನ್ನೂ, ಸಹೋದರರನ್ನೂ, ಬಂಧುಗಳನ್ನೂ, ಗುರುವನ್ನೂ, ಸ್ನೇಹಿತನನ್ನೂ, ಭಾವಮೈದುನರನ್ನೂ, ಸಹೋದರಿಯನ್ನೂ, ಮಗನನ್ನೂ, ಕೊಂದುಬಿಡುವನು. ಮನಸ್ಸು ಅತ್ಯಾಸೆ

ಕ್ರೋಧಾತ್ಕಾಮಾದಹಂಕಾರಾಲ್ಲೋಭ ಏವ ಮಹಾರಿಪುಃ ।
ಪ್ರಾಣಾಂಸ್ತ್ಯಜತಿ ಲೋಭೇನ ಕಿಂ ಪುನಃ ಸ್ಯಾದನಾವೃತಂ ॥೫೦॥

ಪೂರ್ವಜಾಸ್ತೇ ಮಹಾರಾಜ ಧರ್ಮಜ್ಞಾಃ ಸತ್ಪಥೇ ಸ್ಥಿತಾಃ ।
ಪಾಂಡವಾಃ ಕೌರವಾಶ್ಚೈವ ಲೋಭೇನ ನಿಧನಂ ಗತಾಃ ॥೫೧॥

ಯತ್ರ ಭೀಷ್ಮಶ್ಚ ದ್ರೋಣಶ್ಚ ಕೃಪಃ ಕರ್ಣಶ್ಚ ಬಾಹ್ಲಿಕಃ ।
ಭೀಮಸೇನೋ ಧರ್ಮಪುತ್ರಸ್ತಥೈವಾರ್ಜುನಕೇಶವೌ ॥೫೨॥

ತಥಾಪಿ ಯುದ್ಧಮತ್ಯುಗ್ರಂ ಕೃತಂ ತೈಶ್ಚ ಪರಸ್ಪರಂ ।
ಕುಟುಂಬಕದನಂ ಭೂರಿ ಕೃತಂ ಲೋಭಾತುರೈರಿಹ ॥೫೩॥

ಹತೋ ದ್ರೋಣೋ ಹತೋ ಭೀಷ್ಮಸ್ತಥೈವ ಪಾಂಡವಾತ್ಮಜಾಃ ।
ಭ್ರಾತರಃ ಪಿತರಃ ಪುತ್ರಾಃ ಸರ್ವೇ ವೈ ನಿಹತಾ ರಣೇ ॥೫೪॥

---

ಯಿಂದ ಕೂಡಿದರೆ ಮನುಷ್ಯನು ಯಾವ ಪಾಪಕಾರ್ಯವನ್ನು ತಾನೇ ಮಾಡನು? ಅಂಥವನು ಅಜ್ಞಾನಿಯಾಗಿ ಅನೇಕ ಕೆಟ್ಟಕೆಲಸಗಳನ್ನು ಮಾಡುವನು. ॥೪೮-೪೯॥

ಕಾಮಕ್ರೋಧ ಅಹಂಕಾರಗಳಿಗಿಂತಲೂ ಲೋಭವೆಂಬುದು ದೊಡ್ಡ ಶತ್ರುವಾಗಿರುವುದು. ಅತ್ಯಾಸೆಯಿಂದ ಕೂಡಿದ ಮನುಷ್ಯನು ಪ್ರಾಣಾಪಾಯಕರವಾದ ಕೆಲಸಗಳಿಗೆ ಪ್ರಯತ್ನ ಪಟ್ಟು ಪ್ರಾಣವನ್ನೇ ಕಳೆದುಕೊಳ್ಳುವನು! ಎಂದ ಮೇಲೆ ವಿಸ್ತರಿಸಿ ಹೇಳಬೇಕಾದುದೇನಿರುವುದು? ಇದೆಲ್ಲವೂ ಸ್ಪಷ್ಟವಾಗಿಯೇ ಇದೆ. ॥೫೦॥

ಎಲೈ ಜನಮೇಜಯರಾಯನೇ, ನಿನ್ನ ವಂಶದಲ್ಲಿ ಹುಟ್ಟಿದ ಪೂರ್ವಿಕರಾದ ಪಾಂಡವರು ಧರ್ಮವನ್ನು ತಿಳಿದವರಾಗಿ ಸನ್ಮಾರ್ಗದಲ್ಲಿ ನಡೆಯುತ್ತಾ ಇದ್ದರು. ಕೌರವರು ಅತ್ಯಾಸೆಯಿಂದ ಕೂಡಿದವರಾಗಿದ್ದುದರಿಂದಲೇ ನಾಶಹೊಂದಿದರು. ॥೫೧॥

ಭೀಷ್ಮ, ದ್ರೋಣ, ಕೃಪ, ಕರ್ಣ, ಬಾಹ್ಲಿಕ, ಭೀಮ, ಧರ್ಮರಾಜ, ಅರ್ಜುನ, ಕೃಷ್ಣ, ಇವರೆಲ್ಲರೂ ಸೇರಿದ್ದರೂ ಲೋಭಾಸಕ್ತರಾಗಿ ಕುಟುಂಬ ಕದನವನ್ನು ಮಾಡಿ ಕಡೆಗೆ ಪರಸ್ಪರ ದೊಡ್ಡಯುದ್ಧದಲ್ಲಿ ದ್ರೋಣನೂ ಭೀಷ್ಮನೂ ಪಾಂಡವರ ಮಕ್ಕಳೂ ಸಹೋದರರೂ ತಂದೆಗಳೂ ಮಕ್ಕಳೂ ಎಲ್ಲರೂ ಮಡಿದರು. ॥೫೨-೫೩-೫೪॥

**ತಸ್ಮಾಲ್ಲೋಭಾಭಿಭೂತಸ್ತು ಕಿಂ ನ ಕುರ್ಯಾನ್ನರಃ ಕಿಲ ।**
**ಹೈಹಯೈರ್ನಿಹತಾಃ ಸರ್ವೇ ಭೃಗವಃ ಪಾಪಬುದ್ಧಿಭಿಃ ॥೫೫॥**

**ಇತಿ ಶ್ರೀದೇವೀಭಾಗವತೇಮಹಾಪುರಾಣೇ ಷಷ್ಠಸ್ಕಂಧೇ**
**ಷೋಡಶೋಽಧ್ಯಾಯಃ.**

---

ಆದುದರಿಂದ ಅತ್ಯಾಸೆಯಿಂದ ಕೂಡಿದ ಮನುಷ್ಯನು ಯಾವ ದುಷ್ಕಾರ್ಯವನ್ನು ತಾನೇ ಮಾಡುವುದಿಲ್ಲ? ಈ ಕಾರಣದಿಂದಲೇ ಪಾಪಿಗಳಾದ ಹೈಹಯರು ಭೃಗುವಂಶದ ಬ್ರಾಹ್ಮಣರನ್ನೆಲ್ಲರನ್ನೂ ನಾಶಮಾಡಿದರು. ॥೫೫॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಹದಿನಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

### || ಸಪ್ತದಶೋಽಧ್ಯಾಯಃ ||

### ಹದಿನೇಳನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಕಥಂ ತಾಶ್ಚ ಸ್ತ್ರಿಯಃ ಸರ್ವಾ ಭೃಗೂಣಾಂ ದುಃಖಸಾಗರಾತ್ ।**
**ಮುಕ್ತಾ ವಂಶಃ ಪುನಸ್ತೇಷಾಂ ಬ್ರಾಹ್ಮಣಾನಾಂ ಸ್ಥಿರೋಽಭವತ್॥೧॥**

**ಹೈಹಯೈಃ ಕಿಂ ಕೃತಂ ಕಾರ್ಯಂ ಹತ್ವಾ ತಾನ್ಬ್ರಾಹ್ಮಣಾನಪಿ ।**
**ಕ್ಷತ್ರಿಯೈರ್ಲೋಭಸಂಯುಕ್ತೈಃ ಪಾಪಾಚಾರೈರ್ವದಸ್ವ ತತ್ ॥೨॥**

**ನ ತೃಪ್ತಿರಸ್ತಿ ಮೇ ಬ್ರಹ್ಮನ್ಪಿಬತಸ್ತೇ ಕಥಾಮೃತಂ ।**
**ಪಾವನಂ ಸುಖದಂ ನೄಣಾಂ ಪರಲೋಕೇ ಫಲಪ್ರದಂ ॥೩॥**

---

ಜನಮೇಜಯನು ಹೇಳಿದನು—ಓ ವ್ಯಾಸಮುನಿಯೇ, ಆ ಭೃಗುವಂಶದ ಸ್ತ್ರೀಯರು ದುಃಖಸಾಗರವನ್ನು ಹೇಗೆ ದಾಟಿದರು ? ಆ ಬ್ರಾಹ್ಮಣರ ವಂಶವು ಹೇಗೆ ಈ ಭೂಮಿಯಲ್ಲಿ ನೆಲೆಸಿತು ? ||೧||

ಅತ್ಯಾಸೆಯುಳ್ಳವರೂ ಪಾಪಕಾರ್ಯಾಸಕ್ತರೂ ಆದ ಆ ಹೈಹಯರೆಂಬ ಕ್ಷತ್ರಿಯರು ಆ ಬ್ರಾಹ್ಮಣರನ್ನು ಕೊಂದು ಏನು ಕೆಲಸವನ್ನು ಮಾಡಿದರು ? ಅದನ್ನು ಹೇಳು. ||೨||

ಓ ಬ್ರಹ್ಮಜ್ಞಾನಿಯಾದ ವ್ಯಾಸಮಹರ್ಷಿಯೇ, ಪರಿಶುದ್ಧವೂ, ಮನುಷ್ಯರಿಗೆ ಸುಖವನ್ನುಂಟುಮಾಡುವುದೂ, ಸ್ವರ್ಗಫಲವನ್ನು ಕೊಡುವುದೂ, ಆದ ಅಮೃತ ಸಮಾನವಾದ ನೀನು ಹೇಳುವ ಕಥೆಯನ್ನು ಕೇಳುತ್ತಿರುವ ನನಗೆ ತೃಪ್ತಿಯೇ

॥ ವ್ಯಾಸ ಉವಾಚ ॥

ಶೃಣು ರಾಜನ್ ಪ್ರವಕ್ಷ್ಯಾಮಿ ಕಥಾಂ ಪಾಪಪ್ರಣಾಶಿನೀಂ ।
ಯಥಾ ಸ್ತ್ರಿಯಸ್ತು ತಾ ಮುಕ್ತಾ ದುಃಖಾತ್ತಸ್ಮಾದ್ದುರತ್ಯಯಾತ್ ॥೪॥

ಭೃಗುಪತ್ನ್ಯೋ ಯದಾ ರಾಜನ್ ಹಿಮವಂತಂ ಗಿರಿಂ ಗತಾಃ ।
ಭಯತ್ರಸ್ತಾ ನಿಭಗ್ನಾಶಾ ಹೈಹಯೈಃ ಪೀಡಿತಾ ಭೃಶಂ ॥೫॥

ಗೌರೀಂ ತತ್ರ ತು ಸಂಸ್ಥಾಪ್ಯ ಮೃಣ್ಮಯೀಂ ಸರಿತಸ್ತಟೇ ।
ಉಪೋಷಣಪರಾಶ್ಚಕ್ರುರ್ನಿಶ್ಚಯಂ ಮರಣಂ ಪ್ರತಿ ॥೬॥

ಸ್ವಪ್ನೇ ಗತ್ವಾ ತದಾ ದೇವೀ ಪ್ರಾಹ ತಾಃ ಪ್ರಮದೋತ್ತಮಾಃ ।
ಯುಷ್ಮಾಸು ಮಧ್ಯೇ ಕಸ್ಯಾಶ್ಚಿದ್ಭವಿತಾ ಚೋರುಜಃ ಪುಮಾನ್ ॥೭॥
ಮದಂಶಶಕ್ತಿಸಂಭಿನ್ನಃ ಸ ವಃ ಕಾರ್ಯಂ ವಿಧಾಸ್ಯತಿ ।

---

ಉಂಟಾಗುವುದಿಲ್ಲ. ಎಂದರೆ ಇನ್ನೂ ಹೆಚ್ಚುಹೆಚ್ಚಾಗಿ ಕೇಳಬೇಕೆನ್ನಿಸುತ್ತಿದೆ. ಎಂದು ರಾಜನು ಕೇಳಿದನು. ॥೩॥

ವ್ಯಾಸನು ಹೇಳಿದನು—ಎಲೈ ರಾಜನೇ, ಆ ಭೃಗುವಂಶದ ಸ್ತ್ರೀಯರು ತಡೆಯಲಾರದ ಅಂತಹ ದುಃಖದಿಂದ ಹೇಗೆ ಬಿಡುಗಡೆಯನ್ನು ಹೊಂದಿದರೋ, ಆ ಪಾಪಪರಿಹಾರಕವಾದ ಕಥೆಯನ್ನು ಹೇಳುವೆನು ಕೇಳು. ಪುರಾಣಗಳನ್ನು ಕೇಳುವುದರಿಂದ ಪಾಪಗಳ ಪರಿಹಾರವೂ, ಪುಣ್ಯಗಳ ಪ್ರಾಪ್ತಿಯೂ ಮಾನವರಿಗೆ ಹೇಗೆ ಉಂಟಾಗುತ್ತದೆ? ಎಂಬ ವಿಷಯವು ತಿಳಿಯಬರುತ್ತದೆ. ॥೪॥

ಎಲೈ ರಾಜನೇ, ಹೈಹಯರಿಂದ ವಿಶೇಷಬಾಧೆಯನ್ನು ಪಡೆದ ಭೃಗುಪತ್ನಿಯರು ಭಯದಿಂದ ನಡುಗುತ್ತಾ ತಮ್ಮ ಮಾನ ಮತ್ತುಪ್ರಾಣಗಳ ಮೇಲಿನ ಆಸೆಯನ್ನು ತೊರೆದು, ಹಿಮವತ್ಪರ್ವತಕ್ಕೆ ಹೋದ ಮೇಲೆ, ಅಲ್ಲಿ ನದಿಯ ತೀರದಲ್ಲಿ ಮಣ್ಣಿನಿಂದ ಗೌರೀದೇವಿಯ ವಿಗ್ರಹವನ್ನು ಮಾಡಿಟ್ಟು ಪೂಜಿಸಿ, ಆಹಾರವನ್ನು ತೊರೆದು ಪ್ರಾಣತ್ಯಾಗಮಾಡಬೇಕೆಂದು ನಿಶ್ಚಯಿಸಿದರು. ॥೫-೬॥

ಆ ಸಮಯದಲ್ಲಿ ಗೌರೀದೇವಿಯು ಆ ಉತ್ತಮ ಸ್ತ್ರೀಯರ ಸ್ವಪ್ನದಲ್ಲಿ ಅವರಿಗೆ ಕಾಣಿಸಿಕೊಂಡು ಅವರನ್ನು ಕುರಿತು ' ನಿಮ್ಮಲ್ಲಿ ಒಬ್ಬಾಕೆಯ ತೊಡೆಯಲ್ಲಿ ನನ್ನ ಅಂಶದಿಂದ ಕೂಡಿದ ಶಕ್ತಿಯುಳ್ಳ ಒಬ್ಬ ಮನುಷ್ಯನು ಹುಟ್ಟುವನು. ಅವನು ನಿಮ್ಮ ಕಾರ್ಯವನ್ನು ನೆರವೇರಿಸುವನು ' ಎಂದು ಹೇಳಿದಳು. ॥೭॥

ಇತ್ಯಾದಿಶ್ಯ ಪರಾಂಬಾ ಸಾ ಪಶ್ಚಾದಂತರ್ಹಿತಾಽಭವತ್ ॥೮॥

ಜಾಗೃತಾಸ್ತು ತತಃ ಸರ್ವಾ ಮುದಮಾಪುರ್ವರಾಂಗನಾಃ ।
ಕಾ ಚಿತ್ತಾಸಾಂ ಭಯೋದ್ವಿಗ್ನಾ ಕಾಮಿನೀ ಚತುರಾ ಭೃಶಂ ॥೯॥

ದಧಾರ ಚೋರುಣೈಕೇನ ಗರ್ಭಂ ಸಾ ಕುಲವೃದ್ಧಯೇ ।
ಪಲಾಯನಪರಾ ದೃಷ್ಟ್ವಾ ಕ್ಷತ್ರಿಯೈರ್ಬ್ರಾಹ್ಮಣೀ ಯದಾ ॥೧೦॥

ವಿಹ್ವಲಾ ತೇಜಸಾ ಯುಕ್ತಾ ತದಾ ತೇ ದುದ್ರುವುರ್ಭೃಶಂ ।
ಗೃಹ್ಯತಾಂ ವಧ್ಯತಾಂ ನಾರೀ ಸಗರ್ಭಾ ಯಾತಿ ಸತ್ವರಾ ॥೧೧॥

ಇತಿ ಬ್ರುವಂತಃ ಸಂಪ್ರಾಪ್ತಾಃ ಕಾಮಿನೀಂ ಖಡ್ಗಪಾಣಯಃ ।
ಸಾ ಭಯಾರ್ತಾ ತು ತಾನ್ದೃಷ್ಟ್ವಾ ರುರೋದ ಸಮುಪಾಗತಾನ್॥೧೨॥

ಗರ್ಭಸ್ಯ ರಕ್ಷಣಾರ್ಥಂ ಸಾ ಚುಕ್ರೋಶಾತಿಭಯಾತುರಾ ।
ರುದತೀಂ ಮಾತರಂ ಶ್ರುತ್ವಾ ದೀನಾಂ ತ್ರಾಣವಿವರ್ಜಿತಾಂ ॥೧೩॥

---

ಗೌರೀದೇವಿಯು ಈ ಅಪ್ಪಣೆಯನ್ನು ಮಾಡಿ ಅಂತರ್ಧಾನವಾಗುತ್ತಲು ಆ ಸ್ತ್ರೀಯರೆಲ್ಲರೂ ಎಚ್ಚರ ಹೊಂದಿ ಸಂತೋಷಪಡುತ್ತಿದ್ದರು. ॥೮॥

ಆ ಸ್ತ್ರೀಯರಲ್ಲಿ ಭಯದಿಂದ ಕೂಡಿದ ಚತುರಳಾದ ಒಬ್ಬ ಸುಂದರಿಯು ವಂಶವೃದ್ಧಿಗಾಗಿ ತನ್ನ ಒಂದು ತೊಡೆಯಲ್ಲಿ ಗರ್ಭವನ್ನು ಧರಿಸಿದಳು. ಈ ಶಕ್ತಿಯು ಆಕೆಗೆ ದೇವಿಯ ಅನುಗ್ರಹದಿಂದಲೇ ಉಂಟಾಯಿತು. ॥೯॥

ಆ ಗರ್ಭದಲ್ಲಿ ಅವತರಿಸಿದ್ದ ಶಕ್ತಿಯ ಅಂಶರೂಪವಾದ ದೇವಿಯ ತೇಜಸ್ಸಿನಿಂದ ಕೂಡಿದ ಆ ಬ್ರಾಹ್ಮಣಸ್ತ್ರೀಯು ಭಯಭ್ರಾಂತಳಾಗಿ ಓಡಿಹೋಗುತ್ತಿರುವಾಗ ಹೈಹಯರು, "ಗರ್ಭಿಣಿಯಾದ ಆ ಹೆಂಗಸು ಓಡಿಹೋಗುತ್ತಿರುವಳು. ಅವಳನ್ನು ಹಿಡಿದುಕೊಂಡು ಕೊಲ್ಲಿರಿ." ಎಂದು ಹೇಳುತ್ತಾ ಆಕೆಯ ಹಿಂದೆ ಓಡಿದರು. ॥೧೦-೧೧॥

ಹೀಗೆ ಹೇಳುತ್ತಾ ಹೈಹಯರು ಕೈಯ್ಯಲ್ಲಿ ಕತ್ತಿಯನ್ನು ಹಿಡಿದುಕೊಂಡು ಆ ಸ್ತ್ರೀಯ ಸಮಿಪಕ್ಕೆ ಹೋದರು. ಆಕೆಯು ತನ್ನ ಸಮಿಪಕ್ಕೆ ಬಂದ ಅವರನ್ನು ಕಂಡು ಭಯದಿಂದ ಅತ್ತಳು. ॥೧೨॥

ತನ್ನ ಗರ್ಭದ ರಕ್ಷಣೆಗಾಗಿ ಆಕೆಯು ಅತ್ಯಂತ ಭಯದಿಂದ ಕೂಗಿಕೊಂಡು ಅತ್ತಳು; ದೀನಳಾಗಿ ಶಕ್ತಿಹೀನಳಾಗಿ ಕ್ಷತ್ರಿಯರ ಹಿಂಸೆಯನ್ನನುಭವಿಸುತ್ತಾ, ರಕ್ಷಕ

ನಿರಾಧಾರಾಂ ಕ್ರಂದಮಾನಾಂ ಕ್ಷತ್ರಿಯೈರ್ಭೃಶತಾಪಿತಾಂ ।
ಗೃಹೀತಾಮಿವ ಸಿಂಹೇನ ಸಗರ್ಭಾಂ ಹರಿಣೀಂ ತಥಾ ॥೧೪॥

ಸಾಶ್ರುನೇತ್ರಾಂ ವೇಪಮಾನಾಂ ಸಂಕ್ರುಧ್ಯ ಬಾಲಕಸ್ತದಾ ।
ಭಿತ್ತ್ವೋರುಂ ನಿರ್ಜಗಾಮಾಶು ಗರ್ಭಃ ಸೂರ್ಯ ಇವಾಪರಃ ॥೧೫॥

ಮುಷ್ಣನ್ದೃಷ್ಟೀಃ ಕ್ಷತ್ರಿಯಾಣಾಂ ತೇಜಸಾ ಬಾಲತಃ ಶುಭಃ ।
ದರ್ಶನಾದ್ಬಾಲಕಸ್ಯಾಶು ಸರ್ವೇ ಜಾತಾ ವಿಲೋಚನಾಃ ॥೧೬॥

ಬಭ್ರಮುರ್ಗಿರಿದುರ್ಗೇಷು ಜನ್ಮಾಂಧಾ ಇವ ಕ್ಷತ್ರಿಯಾಃ ।
ಚಿಂತಿತಂ ಮನಸಾ ಸರ್ವೈಃ ಕಿಮೇತದಿತಿ ಸಾಂಪ್ರತಂ ॥೧೭॥

ಸರ್ವೇ ಚಕ್ಷುರ್ವಿಹೀನಾ ಯಜ್ಜಾತಾಃ ಸ್ಮ ಬಾಲದರ್ಶನಾತ್ ।
ಬ್ರಾಹ್ಮಣ್ಯಾಸ್ತು ಪ್ರಭಾವೋಽಯಂ ಸತೀವ್ರತಬಲಂ ಮಹತ್ ॥೧೮॥

---

ರಿಲ್ಲದೆ ಸಿಂಹವು ಹಿಡಿದುಕೊಂಡ ಗರ್ಭಿಣಿಯಾದ ಜಿಂಕೆಯಂತೆ, ಅಳುತ್ತಿರುವ ತನ್ನ ತಾಯಿಯ ಅಳುವನ್ನು ಕೇಳಿ ಗರ್ಭದಲ್ಲಿದ್ದ ಬಾಲಕನು ಕೋಪಿಸಿಕೊಂಡು॥೧೩-೧೪॥

ಬೇರೊಬ್ಬ ಸೂರ್ಯನೋ ಎಂಬಂತೆ ತೊಡೆಯನ್ನು ಭೇದಿಸಿಕೊಂಡು ಬೇಗನೆ ಹೊರಕ್ಕೆ ಬಂದನು. ॥೧೫॥

ಆ ಮಂಗಳಕರನಾದ ಬಾಲಕನು ಪರಾಶಕ್ತಿಯ ಅಂಶದಿಂದ ಕೂಡಿದ್ದವನಾದುದರಿಂದ ತನ್ನ ತೇಜಸ್ಸಿನಿಂದ ಆ ಕ್ಷತ್ರಿಯರ ಕಣ್ಣಿನ ನೋಟದ ಶಕ್ತಿಯನ್ನು ಅಪಹರಿಸಿದನು. ಆ ಕ್ಷತ್ರಿಯರೆಲ್ಲರೂ ಆ ಬಾಲಕನನ್ನು ನೋಡಿದ ಕ್ಷಣವೇ ಕುರುಡರಾದರು ! ॥೧೬॥

ಬಳಿಕ ಕ್ಷತ್ರಿಯರು ಹುಟ್ಟು ಕುರುಡರಂತೆ ಬೆಟ್ಟಗಳಲ್ಲಿರುವ ದುರ್ಗಪ್ರದೇಶಗಳಲ್ಲಿ ಅಲೆಯುತ್ತಿದ್ದರು. ಮತ್ತು ಆಗ ಅವರೆಲ್ಲರೂ ಇದೇನೆಂದು ಮನದಲ್ಲಿ ಯೋಚಿಸ ತೊಡಗಿದರು. ॥೧೭॥

ಆ ಬಾಲಕನನ್ನು ನೋಡಿದುದರಿಂದ ನಾವೆಲ್ಲರೂ ಕುರುಡರಾದೆವು. ಇದು ಆ ಬ್ರಾಹ್ಮಣಸ್ತ್ರೀಯ ಪಾತಿವ್ರತ್ಯದ ಮಹಿಮೆಯು ! ಒಂದು ಕ್ಷಣದೊಳಗಾಗಿ ನಾವೆಲ್ಲರೂ ನಮ್ಮ ಮನಸ್ಸಿನ ಆಸೆಯನ್ನು ಕಳೆದುಕೊಂಡೆವು ! ದುಃಖವನ್ನು ಹೊಂದಿದವರು ವ್ಯತ್ರೇನನ್ನು ಮಾಡಬಲ್ಲರು ? ಹೀಗೆಂದು ಮನದಲ್ಲಿಯೇ ಯೋಚಿಸುತ್ತಾ

ಕ್ಷಣಾದ್ವಾ ಮೋಘಸಂಕಲ್ಪಾಃ ಕಿಂ ಕರಿಷ್ಯಂತಿ ದುಃಖಿತಾಃ ।
ಇತಿ ಸಂಚಿಂತ್ಯ ಮನಸಾ ನೇತ್ರಹೀನಾ ನಿರಾಶ್ರಯಾಃ ॥೧೯॥

ಬ್ರಾಹ್ಮಣೀಂ ಶರಣಂ ಜಗ್ಮುರ್ಹೈಹಯಾ ಗತಚೇತಸಃ ।
ಪ್ರಣೇಮುಸ್ತಾಂ ಭಯತ್ರಸ್ತಾಂ ಕೃತಾಂಜಲಿಪುಟಾಶ್ಚ ತೇ ॥೨೦॥

ಊಚುಶ್ಚೈನಾಂ ಭಯೋದ್ವಿಗ್ನಾಂ ದೃಷ್ಟ್ವಾರ್ಥಂ ಕ್ಷತ್ರಿಯರ್ಷಭಾಃ ।
ಪ್ರಸೀದ ಸುಭಗೇ ಮಾತಃ ಸೇವಕಾಸ್ತೇ ವಯಂ ಕಿಲ ॥೨೧॥

ಕೃತಾಪರಾಧಾ ರಂಭೋರು ಕ್ಷತ್ರಿಯಾಃ ಪಾಪಬುದ್ಧಯಃ ।
ದರ್ಶನಾತ್ತವ ತನ್ವಂಗಿ ಜಾತಾಃ ಸರ್ವೇ ವಿಲೋಚನಾಃ ॥೨೨॥

ಮುಖಂ ತೇ ನೈವ ಪಶ್ಯಾಮೋ ಜನ್ಮಾಂಧಾ ಇವ ಭಾಮಿನಿ ।
ಅದ್ಭುತಂ ತೇ ತಪೋವೀರ್ಯಂ ಕಿಂ ಕುರ್ಮಃ ಪಾಪಕಾರಿಣಃ ॥೨೩॥

ಶರಣಂ ತೇ ಪ್ರಪನ್ನಾಃ ಸ್ಮೋ ದೇಹಿ ಚಕ್ಷೂಂಷಿ ಮಾನದೇ ।
ಅಂಧತ್ವಂ ಮರಣಾದುಗ್ರಂ ಕೃಪಾಂ ಕರ್ತುಂ ತ್ವಮರ್ಹಸಿ ॥೨೪॥

---

ಕಣ್ಣು ಕಾಣದೆ ರಕ್ಷಕರಿಲ್ಲದೆ ಆ ಹೈಹಯರು ಪ್ರಾಣಹೋದವರಂತಾಗಿ ಆ ಬ್ರಾಹ್ಮಣ ಸ್ತ್ರೀಯನ್ನೇ ಮರೆಹೊಕ್ಕರು ! ॥೧೮-೧೯॥

ಆ ಶ್ರೇಷ್ಠಕ್ಷತ್ರಿಯರಾದ ಹೈಹಯರು ಕೈಜೋಡಿಸಿಕೊಂಡು ಭಯದಿಂದ ನಡುಗುತ್ತಿರುವ ಆಕೆಗೆ ನಮಸ್ಕಾರ ಮಾಡಿ ತಾವು ಕಣ್ಣನ್ನು ಪಡೆಯುವುದಕ್ಕಾಗಿ ಆಕೆಯನ್ನು ಕುರಿತು ಮುಂದಿನ ಮಾತನ್ನು ಹೀಗೆ ಹೇಳಿದರು. ॥೨೦॥

ಓ ಸೌಭಾಗ್ಯವತಿಯಾದ ತಾಯಿಯೇ, ಕ್ಷತ್ರಿಯರಾದರೂ ಪಾಪಬುದ್ಧಿಯುಳ್ಳವರಾಗಿದ್ದ ನಾವು ತಪ್ಪುಮಾಡಿರುವೆವು. ಆದರೂ ನಾವೆಲ್ಲರೂ ನಿನ್ನ ಸೇವಕರಾಗಿದೇವೆ. ನೀನು ಪ್ರಸನ್ನಳಾಗು. ॥೨೧॥

ಕೃಶಾಂಗಿಯಾದ ತಾಯಿಯೇ, ನಿನ್ನ ತಪಸ್ಸಿನ ಮಹಿಮೆಯು ಆಶ್ಚರ್ಯಕರವಾದುದು ! ನಿನ್ನನ್ನು ನೋಡಿದುದರಿಂದಲೇ ನಮ್ಮೆಲ್ಲರ ಕಣ್ಣುಗಳೂ ಕುರುಡಾದುವು ! ನಿನ್ನ ಮುಖವನ್ನು ನಾವು ಈಗ ನೋಡಲಾರೆವು. ಹುಟ್ಟುಕುರುಡರಂತಾದೆವು ! ಪಾಪಿಗಳಾದ ನಾವೇನನ್ನು ಮಾಡೋಣ ? ॥೨೨-೨೩॥

ಶತ್ರುಗಳ ದುರಭಿಮಾನವನ್ನು ನಾಶಮಾಡಬಲ್ಲ ಮತ್ತು ಮಾನವನ್ನು ಕೊಡತಕ್ಕವಳೇ, ನಾವು ನಿನ್ನನ್ನು ಮರೆಹೊಕ್ಕಿರುವೆವು ! ನಮಗೆ ಕಣ್ಣುಗಳನ್ನು

ಪುನರ್ದೃಷ್ಟಿಪ್ರದಾನೇನ ಸೇವಕಾನ್ಕ್ಷತ್ರಿಯಾನ್ಕುರು ।
ಉಪರಮ್ಯ ಚ ಗಚ್ಛೇಮ ಸಹಿತಾಃ ಪಾಪಕರ್ಮಣಃ ॥೨೫॥

ಅತಃ ಪರಂ ನ ಕರ್ತವ್ಯಮೀದೃಶಂ ಕರ್ಮ ಕರ್ಹಿಚಿತ್ ।
ಭಾರ್ಗವಾಣಾಂ ತು ಸರ್ವೇಷಾಂ ಸೇವಕಾಃ ಸ್ಮೋ ವಯಂ ಕಿಲ ॥೨೬॥

ಅಜ್ಞಾನಾದ್ಯತ್ಕೃತಂ ಪಾಪಂ ಕ್ಷಂತವ್ಯಂ ತತ್ತ್ವಯಾಽಧುನಾ ।
ವೈರಂ ನಾತಃ ಪರಂ ಕ್ವಾಽಪಿ ಭೃಗುಭಿಃ ಕ್ಷತ್ರಿಯೈಃ ಸಹ ॥೨೭॥

ಕರ್ತವ್ಯಂ ಶಪಥೈಃ ಸಮ್ಯಗ್ವರ್ತಿತವ್ಯಂ ತು ಹೈಹಯೈಃ ।
ಸಪುತ್ರಾ ಭವ ಸುಶ್ರೋಣಿ ಪ್ರಣತಾಃ ಸ್ಮೋ ವಯಂ ಚ ತೇ ॥೨೮॥

ಪ್ರಸಾದಂ ಕುರು ಕಲ್ಯಾಣಿ ನ ದ್ವಿಷ್ಯಾಮಃ ಕದಾಚನ ।

॥ ವ್ಯಾಸ ಉವಾಚ ॥

ಇತಿ ತೇಷಾಂ ವಚಃ ಶ್ರುತ್ವಾ ಬ್ರಾಹ್ಮಣೀ ವಿಸ್ಮಯಾನ್ವಿತಾ ॥೨೯॥

---

ಕೊಡು. ಕುರುಡುತನವು ಮರಣಕ್ಕಿಂತ ಕಷ್ಟವಾದುದು. ನಮ್ಮಲ್ಲಿ ನೀನು ದಯೆಯನ್ನು ತೋರಿಸು. ॥೨೪॥

ಕ್ಷತ್ರಿಯರಾದ ನಮಗೆ ಮತ್ತೆ ಕಣ್ಣನ್ನು ಕೊಟ್ಟು ನಿನ್ನ ಸೇವಕರನ್ನಾಗಿ ಮಾಡಿಕೋ. ನಮ್ಮ ದುಷ್ಕಾರ್ಯವನ್ನು ಬಿಟ್ಟು ಹೊರಟುಹೋಗುತ್ತೇವೆ! ॥೨೫॥

ಇಲ್ಲಿಂದ ಮುಂದೆ ಈ ರೀತಿಯಾದ ಪಾಪಕಾರ್ಯವನ್ನು ನಾವೆಲ್ಲಿಯೂ ಮಾಡುವುದಿಲ್ಲವು. ನಾವು ಭೃಗುವಂಶದ ಬ್ರಾಹ್ಮಣರ ಶಿಷ್ಯರಾಗಿಯೇ ಇರುವೆವು. ॥೨೬॥

ನೀನು ಈಗ ನಾವು ಅಜ್ಞಾನದಿಂದ ಮಾಡಿದ ಪಾಪಗಳನ್ನು ಕ್ಷಮಿಸಬೇಕು. ಇಲ್ಲಿಂದ ಮುಂದೆ ಭೃಗುವಂಶದ ಬ್ರಾಹ್ಮಣರಿಗೂ ಕ್ಷತ್ರಿಯರಿಗೂ ವೈರವಿಲ್ಲದಂತಾಗಲಿ. ॥೨೭॥

ಹೈಹಯರಾದ ನಾವೆಲ್ಲರೂ ಪ್ರತಿಜ್ಞೆಯನ್ನು ಮಾಡುತ್ತೇವೆ. ಮುಂದೆ ಒಳ್ಳೆಯ ನಡತೆಯಿಂದ ಇರುತ್ತೇವೆ. ಯಾರನ್ನೂ ಯಾವಾಗಲೂ ದ್ವೇಷಿಸುವುದಿಲ್ಲ. ನಾವೆಲ್ಲರೂ ನಿನಗೆ ನಮಸ್ಕಾರಮಾಡಿದ್ದೇವೆ. ಪುತ್ರಸಹಿತಳಾದ ನೀನು ನಮ್ಮ ಮೇಲೆ ಪ್ರಸನ್ನಳಾಗು ಮತ್ತು ನಮ್ಮನ್ನು ಅನುಗ್ರಹಿಸು. ॥೨೮॥

ವ್ಯಾಸಮುನಿಯು ಹೇಳಿದನು— ಈ ರೀತಿಯಾಗಿ ಪ್ರಾರ್ಥಿಸುತ್ತಿರುವ ಆ ಕ್ಷತ್ರಿಯರ ಮಾತನ್ನು ಕೇಳಿದ ಆ ಬ್ರಾಹ್ಮಣಸ್ತ್ರೀಯು ಆಶ್ಚರ್ಯದಿಂದ ಕೂಡಿ, ಕಣ್ಣನ್ನು

ತಾನಾಹ ಪ್ರಣತಾನ್ದುಃಸ್ಥಾನಾಶ್ವಾಸ್ಯ ಗತಲೋಚನಾನ್ ।
ಗೃಹೀತಾ ನ ಮಯಾ ದೃಷ್ಟಿರ್ಯುಷ್ಮಾಕಂ ಕ್ಷತ್ರಿಯಾಃ ಕಿಲ ॥೩೦॥

ನಾಹಂ ರುಷಾಽನ್ವಿತಾ ಸತ್ಯಂ ಕಾರಣಂ ಶೃಣುತಾಽದ್ಯ ಯತ್ ।
ಅಯಂ ಚ ಭಾರ್ಗವೋ ನೂನಮೂರುಜಃ ಕುಪಿತೋಽದ್ಯವಃ ॥೩೧॥

ಚಕ್ಷೂಂಷಿ ತೇನ ಯುಷ್ಮಾಕಂ ಸ್ತಂಭಿತಾನಿ ರುಷಾವತಾ ।
ಸ್ವಬಂಧೂನ್ನಿಹತಾನ್ ಜ್ಞಾತ್ವಾ ಗರ್ಭಸ್ಥಾನಪಿ ಕ್ಷತ್ರಿಯೈಃ ॥೩೨॥

ಅನಾನಸೋ ಧರ್ಮಪರಾಂಸ್ತಾಪಸಾನ್ಧನಕಾಮ್ಯಯಾ ।
ಗರ್ಭಾನಪಿ ಯದಾ ಯೂಯಂ ಭೃಗೂನಘ್ನಂಸ್ತು ಪುತ್ರಕಾಃ ॥೩೩॥

ತದಾಽಯಮೂರುಣಾ ಗರ್ಭೋ ಮಯಾ ವರ್ಷಶತಂ ಧೃತಃ ।
ಷಡಂಗಶ್ಚಾಖಿಲೋ ವೇದೋ ಗೃಹೀತೋಽನೇನ ಚಾಂಜಸಾ ॥೩೪॥

---

ಕಳೆದುಕೊಂಡು ದುಃಖವನ್ನು ಹೊಂದಿ ನಮಸ್ಕಾರಮಾಡಿದ ಅವರನ್ನು ಕುರಿತು, ಎಲೈ ಕ್ಷತ್ರಿಯರೇ, ನಾನು ನಿಮ್ಮ ದೃಷ್ಟಿಶಕ್ತಿಯನ್ನು ನಾಶಮಾಡಲಿಲ್ಲವು. ನಿಜವಾಗಿಯೂ ನನಗೆ ನಿಮ್ಮ ಮೇಲೆ ಕೋಪವಿಲ್ಲವು. ಕಾರಣವನ್ನು ಹೇಳುವೆನು.ಕೇಳಿ. ||೨೯-೩೦||

ಕ್ಷತ್ರಿಯರಾದ ನೀವು ಹಣದಾಸೆಯಿಂದ ಪಾಪವಿಲ್ಲದವರೂ ಧರ್ಮಸಕ್ತರೂ ತಪಸ್ವಿಗಳೂ ಆದ ನಮ್ಮ ವಂಶದವರನ್ನೂ ಮತ್ತು ಗರ್ಭದಲ್ಲಿರತಕ್ಕವರೂ ಆದ ತನ್ನ ಬಂಧುಗಳನ್ನೂ ಕೊಂದರೆಂಬುದನ್ನು ತಿಳಿದ ಈ ಭೃಗುವಂಶದವನಾದ ನನ್ನ ತೊಡೆಯಲ್ಲಿ ಹುಟ್ಟಿದ ಈ ಬಾಲಕನು ಕೋಪದಿಂದ ನಿಮ್ಮ ಕಣ್ಣುಗಳನ್ನು ಸ್ತಂಭಿಸಿರುವನು ಎಂದರೆ ದೃಷ್ಟಿಪಾಟವವನ್ನು ತಡೆದಿರುವನು. ||೩೧-೩೨||

ಎಲೈ ಕ್ಷತ್ರಿಯಪುತ್ರರೇ, ನೀವು ಭೃಗುಪತ್ನಿಯರ ಗರ್ಭವನ್ನೂ ಯಾವಾಗ ನಾಶಮಾಡುವುದಕ್ಕೆ ಪ್ರಾರಂಭಿಸಿದಿರೋ ಆಗ, ಈ ಬಾಲಕನಿಗಾಗಿ ನಾನು ತೊಡೆಯಲ್ಲಿ ಗರ್ಭವನ್ನು ಧರಿಸಿದೆನು. ನಮ್ಮ ಭೃಗುವಂಶವೃದ್ಧಿಗಾಗಿ ನಾನು ಹಾಗೆ ಗರ್ಭವನ್ನು ಧರಿಸಿ ನೂರು ವರ್ಷಗಳಾದುವು! ಈ ಬಾಲಕನು ಆರು ಅಂಗಗಳಿಂದ ಕೂಡಿದ ವೇದವನ್ನೂ ಕ್ಷಣಮಾತ್ರದಲ್ಲಿ ಗರ್ಭದಲ್ಲಿಯೇ ಕಲಿತಿರುವನು. ||೩೩-೩೪||

ಗರ್ಭಸ್ಥೇನಾಪಿ ಬಾಲೇನ ಭೃಗುವಂಶವಿವೃದ್ಧಯೇ ।
ಸೋಽಪಿ ಪಿತೃವಧಾನ್ಮೂನಂ ಕ್ರೋಧೇದ್ಧೋಽಹಂತುಮಿಚ್ಛತಿ ॥೩೫॥

ಭಗವತ್ಯಾಃ ಪ್ರಸಾದೇನ ಜಾತೋಽಯಂ ಮಮ ಬಾಲಕಃ ।
ತೇಜಸಾ ಯಸ್ಯ ದಿವ್ಯೇನ ಚಕ್ಷೂಂಷಿ ಮುಷಿತಾನಿ ಚ ॥೩೬॥

ತಸ್ಮಾದೌರ್ವಂ ಸುತಂ ಮೇಽದ್ಯ ಯಾಚಧ್ವಂ ವಿನಯಾನ್ವಿತಾಃ ।
ಪ್ರಣಿಪಾತೇನ ತುಷ್ಟೋಽಸೌ ದೃಷ್ಟಿಂ ವಃ ಪ್ರತಿನೋಕ್ಷ್ಯತಿ ॥೩೭॥

॥ ವ್ಯಾಸ ಉವಾಚ ॥

ತಚ್ಛ್ರುತ್ವಾ ವಚನಂ ತಸ್ಯಾ ಹೈಹಯಾಸ್ತುಷ್ಟುವುಶ್ಚ ತಂ ।
ಪ್ರಣೇಮುರ್ವಿನಯೋಪೇತಾ ಊರುಜಂ ಮುನಿಸತ್ತಮಂ ॥೩೮॥

ಸ ಸಂತುಷ್ಟೋ ಬಭೂವಾಥ ತಾನುವಾಚ ವಿಚಕ್ಷುಷಃ ।
ಗಚ್ಛಧ್ವಂ ಸ್ವಗೃಹಾನ್ಭೂಪಾ ಮಮಾಖ್ಯಾನಕೃತಂ ವಚಃ ॥೩೯॥

---

ಆ ಬಾಲಕನೂ ಕೂಡ ತನ್ನ ಪಿತೃಗಳನ್ನು ನೀವು ಕೊಂದುದಕ್ಕಾಗಿ ಹೆಚ್ಚಾಗಿ ಕೋಪವನ್ನು ಹೊಂದಿ ನಿಮ್ಮನ್ನು ಕೊಲ್ಲಬೇಕೆಂದು ಅಪೇಕ್ಷಿಸುತ್ತಿರುವನು. ನನ್ನ ಈ ಪುತ್ರನು ಜಗನ್ಮಾತೆಯಾದ ಭುವನೇಶ್ವರೀದೇವಿಯ ಅನುಗ್ರಹದಿಂದ ಹುಟ್ಟಿದವನು. ಅವನ ದಿವ್ಯವಾದ ತೇಜಸ್ಸಿನಿಂದ ನಿಮ್ಮ ಕಣ್ಣಿನ ದೃಷ್ಟಿಗಳು ಅಪಹೃತವಾಗಿವೆ. ॥೩೫-೩೬॥

ಆ ಕಾರಣದಿಂದ ನನ್ನ ತೊಡೆಯಲ್ಲಿ ಹುಟ್ಟಿದ ಪುತ್ರನನ್ನು ನೀವು ವಿನಯದಿಂದ ಕೇಳಿಕೊಳ್ಳಿರಿ. ಅವನು ನಮಸ್ಕಾರಮಾಡಿದ ನಿಮಗೆ ಮುಂಚಿನಂತೆಯೇ ದೃಷ್ಟಿಶಕ್ತಿಯನ್ನು ಸಂತೋಷದಿಂದ ಉಂಟುಮಾಡಿಕೊಡುವನು. ॥೩೭॥

ವ್ಯಾಸಮುನಿಯು ಹೇಳಿದನು—ಹೈಹಯರು ಆಕೆಯ ಮಾತನ್ನು ಕೇಳಿ ತೊಡೆಯಲ್ಲಿ ಹುಟ್ಟಿದ ಆ ಮುನಿಶ್ರೇಷ್ಠನನ್ನು ಸ್ತೋತ್ರಮಾಡಿ ನಮ್ರತೆಯಿಂದ ಅವನಿಗೆ ನಮಸ್ಕರಿಸಿದರು. ॥೩೮॥

ಆ ಮುನಿಬಾಲಕನು ಸಂತೋಷಹೊಂದಿ ಕಣ್ಣುಗಳಿಲ್ಲದ ಆ ಕ್ಷತ್ರಿಯರನ್ನು ಕುರಿತು, ಎಲೈ ರಾಜರೇ, ನೀವು ನಿಮ್ಮ ಮನೆಗಳಿಗೆ ಹೋಗಿರಿ. ನನ್ನ ಕಥೆಯಿಂದ

ಅವಶ್ಯಂಭಾವಿಭಾವಾಸ್ತೇ ಭವಂತಿ ದೇವನಿರ್ಮಿತಾಃ ।
ನಾತ್ರ ಶೋಕಸ್ತು ಕರ್ತವ್ಯಃ ಪುರುಷೇಣ ವಿಜಾನತಾ ॥೪೦॥

ಪೂರ್ವವದ್ದೃಷ್ಟಯಸ್ಸರ್ವೇ ಪ್ರಾಪ್ನುವಂತು ಯಥಾಸುಖಂ ।
ವ್ರಜಂತು ವಿಗತಕ್ರೋಧಾ ಭವನಾನಿ ಯಥಾಸುಖಂ ॥೪೧॥

ಇತಿ ತೇನ ಸಮಾದಿಷ್ಟಾ ಹೈಹಯಾಃ ಪ್ರಾಪ್ತಲೋಚನಾಃ ।
ಔರ್ವಮಾಮಂತ್ರ್ಯ ಜಗ್ಮುಸ್ತೇ ಸದನಾನಿ ಯಥಾರುಚಿ ॥೪೨॥

ಬ್ರಾಹ್ಮಣೀ ತಂ ಸುತಂ ದಿವ್ಯಂ ಗೃಹೀತ್ವಾ ಸ್ವಾಶ್ರಮಂ ಗತಾ ।
ಪಾಲಯಾಮಾಸ ಭೂಪಾಲ ತೇಜಸ್ವಿನಮತಂದ್ರಿತಾ ॥೪೩॥

---

ನಿಮಗೆ ದೊರೆತ ಈ ಮುಂದೆ ಹೇಳುವ ಮಾತುಗಳನ್ನು ಯಾವಾಗಲೂ ಹೇಳುತ್ತಿರಿ. ಇದರಿಂದ ನಿಮಗೆ ವೈರಾಗ್ಯವುಂಟಾಗುವುದು. ಆ ಮಾತುಗಳಾವುವೆಂದರೆ—॥೩೯॥

"ಅದೃಷ್ಟದ ಕ್ರಮವನ್ನು ಅನುಸರಿಸಿ ದೇವರ ಇಚ್ಛಾನುಸಾರವಾಗಿ ಆಗ ಬೇಕಾದ ಕಾರ್ಯಗಳು ಆಗಿಯೇ ಆಗುವುವು. ತಿಳಿವಳಿಕೆಯುಳ್ಳವರು ಈ ವಿಷಯ ದಲ್ಲಿ ದುಃಖಪಡಬಾರದು." ॥೪೦॥

ಓ ಹೈಹಯರಾಜರೇ, ಹಿಂದಿನಂತೆಯೇ ನಿಮ್ಮ ಕಣ್ಣುಗಳನ್ನು ನೀವು ಸುಖ ವಾಗಿ ಪಡೆಯಿರಿ. ನೀವು ಕೋಪವನ್ನು ಬಿಟ್ಟು ನಿಮ್ಮ ನಿಮ್ಮ ಮನೆಗಳಿಗೆ ಸುಖವಾಗಿ ಪ್ರಯಾಣಮಾಡಿರಿ. ॥೪೧॥

ಹೀಗೆಂದು ಅನುಗ್ರಹವನ್ನು ಮಾಡಿದ ಔರ್ವನ ಮಾತನ್ನು ಕೇಳಿ ಹೈಹಯರು ಕಣ್ಣುಗಳನ್ನು ಪಡೆದು, ಆ ಮುನಿಯ ಅನುಮತಿಯನ್ನು ಕೇಳಿಕೊಂಡು ತಮ್ಮ ಇಷ್ಟಾನುಸಾರವಾಗಿ ತಂತಮ್ಮ ಮನೆಗಳಿಗೆ ಹೋದರು. ॥೪೨॥

ಜನಮೇಜಯನೇ, ಕೇಳು. ಆ ಬ್ರಾಹ್ಮಣಸ್ತ್ರೀಯು ತೇಜಸ್ಸಿನಿಂದ ಕೂಡಿದ ಆ ಬಾಲಕನನ್ನು ಕರೆದುಕೊಂಡು ತನ್ನ ಆಶ್ರಮಕ್ಕೆ ಹೋಗಿ ಅವನನ್ನು ಸುಖವಾಗಿ ಜಾಗರೂಕತೆಯಿಂದ ಕಾಪಾಡಿದಳು. ॥೪೩॥

ಏವಂ ತೇ ಕಥಿತಂ ರಾಜನ್ಭೃಗೂಣಾಂ ತು ವಿನಾಶನಂ ।
ಲೋಭಾವಿಷ್ಟೈಃ ಕ್ಷತ್ರಿಯೈಶ್ಚ ಯತ್ಕೃತಂ ಪಾತಕಂ ಕಿಲ ॥೪೪॥

॥ ಜನಮೇಜಯ ಉವಾಚ ॥

ಶ್ರುತಂ ಮಯಾ ಮಹತ್ಕರ್ಮ ಕ್ಷತ್ರಿಯಾಣಾಂ ಚ ದಾರುಣಂ ।
ಕಾರಣಂ ಲೋಭ ಏವಾತ್ರ ದುಃಖದಶ್ಚೋಭಯೋಸ್ತು ಸಃ ॥೪೫॥

ಕಿಂಚಿತ್ಪ್ರಷ್ಟುಮಿಹೇಚ್ಛಾಮಿ ಸಂಶಯಂ ವಾಸವೀಸುತ ।
ಹೈಹಯಾಸ್ತೇ ಕಥಂ ನಾಮ್ನಾ ಖ್ಯಾತಾ ಭುವಿ ನೃಪಾತ್ಮಜಾಃ ॥೪೬॥

ಯದೋಸ್ತು ಯಾದವಾಃ ಕಾಮಂ ಭರತಾದ್ಭಾರತಾಸ್ತಥಾ ।
ಹೈಹಯಃ ಕೋಽಪಿ ರಾಜಾಽಭೂತ್ತೇಷಾಂ ವಂಶೇ ಪ್ರತಿಷ್ಠಿತಃ ॥೪೭॥

ತದಹಂ ಶ್ರೋತುಮಿಚ್ಛಾಮಿ ಕಾರಣಂ ಕರುಣಾನಿಧೇ ।
ಹೈಹಯಾಸ್ತೇ ಕಥಂ ಜಾತಾಃ ಕ್ಷತ್ರಿಯಾಃ ಕೇನ ಕರ್ಮಣಾ ॥೪೮॥

---

ಎಲೈ ರಾಜನೇ, ಅತ್ಯಾಸೆಯಿಂದ ಕೂಡಿದ ಕ್ಷತ್ರಿಯರು ಯಾವ ಪಾಪವನ್ನು ಮಾಡಿದರೆಂಬುದನ್ನೂ ಭೃಗುವಂಶದ ಮುನಿಗಳು ನಾಶದಿಂದ ಉಳಿದುಕೊಂಡ ವೃತ್ತಾಂತವನ್ನೂ ನಿನಗೆ ಹೇಳಿದೆನು. ॥೪೪॥

ಜನಮೇಜಯನು ಹೇಳಿದನು—ಸತ್ಯವತಿಯ ಪುತ್ರನಾದ ವ್ಯಾಸನೇ, ಕ್ಷತ್ರಿಯರು ಮಾಡಿದ ತುಂಬ ಕ್ರೂರವಾದ ಆ ದೊಡ್ಡಪಾಪಕಾರ್ಯವನ್ನೂ ಕೇಳಿದೆನು. ಕ್ಷತ್ರಿಯ ಬ್ರಾಹ್ಮಣರಿಬ್ಬರಿಗೂ ದುಃಖವನ್ನುಂಟುಮಾಡಿದ ಆ ಕೆಟ್ಟಕಾರ್ಯಕ್ಕೆ ಕಾರಣವು ಅತ್ಯಾಸೆ ಎಂಬುದೇ ಸ್ಪಷ್ಟವಾಯಿತು. ಆದರೂ ನನಗೆ ಒಂದು ಸಂದೇಹವಿರುವುದು. ಅದರ ನಿವಾರಣೆಗೆ ಈ ಪ್ರಶ್ನೆಯನ್ನು ಮಾಡಬೇಕೆಂದಪೇಕ್ಷಿಸುವೆನು. ॥೪೫॥

ಹೈಹಯರೆಂದು ಆ ರಾಜಪುತ್ರರಿಗೆ ಈ ಲೋಕದಲ್ಲಿ ಹೆಸರು ಬರಲು ಕಾರಣವೇನು? ಯದುವಿನ ವಂಶದವರು ಯಾದವರು; ಭರತನ ವಂಶದವರು ಭಾರತರು; ಎಂಬಂತೆ ಹೈಹಯನೆಂಬ ಒಬ್ಬ ರಾಜನು ಅವರಿಗೆ ಮೂಲಪುರುಷನಾಗಿ ಪ್ರಸಿದ್ಧನಾಗಿದ್ದನೇ? ಹೈಹಯರೆಂಬ ಹೆಸರು ಆ ಕ್ಷತ್ರಿಯರಿಗೆ ಅವರ ಕಾರ್ಯದಿಂದ ಬಂದಿತೇ? ಕರುಣೆಯ ಗಣಿಯಾದ ವ್ಯಾಸನೇ, ಆ ಹೆಸರು ಆ ಕ್ಷತ್ರಿಯರಿಗೆ ಬಂದ ಕಾರಣವನ್ನು ನನಗೆ ವಿವರಿಸಬೇಕು. ॥೪೬-೪೭-೪೮॥

॥ ವ್ಯಾಸ ಉವಾಚ ॥

ಹೈಹಯಾನಾಂ ಸಮುತ್ಪತ್ತಿಂ ಶೃಣು ಭೂಪ ಸವಿಸ್ತರಾಂ ।
ಪುರಾತನಾಂ ಸುಪುಣ್ಯಾಂ ಚ ಕಥಾಂ ಪಾಪಪ್ರಣಾಶಿನೀಂ ॥೪೯॥

ಕಸ್ಮಿಂಶ್ಚಿತ್ಸಮಯೇ ಭೂಪ ಸೂರ್ಯಪುತ್ರಃ ಸುಶೋಭನಃ ।
ರೇವಂತೇತಿ ಚ ವಿಖ್ಯಾತಃ ರೂಪವಾನಮಿತಪ್ರಭಃ ॥೫೦॥

ಉಚ್ಚೈಃಶ್ರವಸಮಾರುಹ್ಯ ಹಯರತ್ನಂ ಮನೋಹರಂ ।
ಜಗಾಮ ವಿಷ್ಣುಸದನಂ ವೈಕುಂಠಂ ಭಾಸ್ಕರಾತ್ಮಜಃ ॥೫೧॥

ಭಗವದ್ದರ್ಶನಾಕಾಂಕ್ಷೀ ಹಯಾರೂಢೋ ಯದಾಗತಃ ।
ಹಯಸ್ಥಸ್ತು ತದಾ ದೃಷ್ಟೋ ಲಕ್ಷ್ಮ್ಯಾಸೌ ರವಿನಂದನಃ ॥೫೨॥

ರಮಾ ವೀಕ್ಷ್ಯ ಹಯಂ ದಿವ್ಯಂ ಭ್ರಾತರಂ ಸಾಗರೋದ್ಭವಂ ।
ರೂಪೇಣ ವಿಸ್ಮಿತಾ ತಸ್ಯ ತಸ್ಥೌ ಸ್ತಂಭಿತಲೋಚನಾ ॥೫೩॥

---

ವ್ಯಾಸಮುನಿಯು ಹೇಳಿದನು---ಜನಮೇಜಯರಾಜನೇ, ಹೈಹಯರ ಉತ್ಪತ್ತಿ ಸಂಬಂಧವಾದ ಪುರಾತನವೂ ಪುಣ್ಯಪ್ರದವೂ ಪಾಪನಾಶಕವೂ ಆದ ವಿಸ್ತಾರವಾದ ಕಥೆಯನ್ನು ಹೇಳುವೆನು ಕೇಳು. ॥೪೯॥

ಎಲೈ ರಾಜನೇ, ಒಂದಾನೊಂದು ಕಾಲದಲ್ಲಿ ಸೂರ್ಯಪುತ್ರನೂ ಸುಂದರನೂ ಆದ ರೇವಂತನೆಂಬ ಮಹಾಕಾಂತಿವಂತನಾದ ದೇವನು, ಕುದುರೆಗಳಲ್ಲಿ ಶ್ರೇಷ್ಠವಾದ ಮನೋಹರವಾದ ದೇವೇಂದ್ರನ ಉಚ್ಚೈಃಶ್ರವಸ್ಸೆಂಬ ಕುದುರೆಯನ್ನೇರಿ, ವಿಷ್ಣು ಲೋಕವಾದ ವೈಕುಂಠಕ್ಕೆ ಹೋದನು. ॥೫೦-೫೧॥

ಸೂರ್ಯಪುತ್ರನು ಮಹಾಮಹಿಮನಾದ ವಿಷ್ಣುವನ್ನು ದರ್ಶನಮಾಡಬೇಕೆಂಬ ಅಪೇಕ್ಷೆಯಿಂದ ಕುದುರೆಯನ್ನೇರಿ ಹೋದಾಗ ಲಕ್ಷ್ಮೀದೇವಿಯು ಕುದುರೆಯ ಮೇಲಿರುವ ಆ ರೇವಂತನನ್ನೂ, ತನ್ನ ಜತೆಯಲ್ಲಿ ಸಮುದ್ರದಲ್ಲಿ ಹುಟ್ಟಿದ ದಿವ್ಯವಾದ ಆ ಕುದುರೆಯನ್ನೂ ನೋಡಿ, ಆ ಕುದುರೆಯ ರೂಪಕ್ಕೆ ಆಶ್ಚರ್ಯಪಡುತ್ತಾ ಅದನ್ನೇ ನೋಡುತ್ತಿದ್ದಳು. ॥೫೨-೫೩॥

**ಭಗವಾನಪಿ ತಂ ದೃಷ್ಟ್ವಾ ಹಯಾರೂಢಂ ಮನೋಹರಂ ।**
**ಆಗಚ್ಛಂತಂ ರಮಾಂ ವಿಷ್ಣುಃ ಪಪ್ರಚ್ಛ ಪ್ರಣಯಾತ್ಪ್ರಭುಃ ॥೫೪॥**

**ಕೋಽಯಮಾಯಾತಿ ಚಾರ್ವಂಗಿ ಹಯಾರೂಢ ಇವಾಽಪರಃ ।**
**ಸ್ಮರತೇಜಸ್ತನುಃ ಕಾಂತೇ ಮೋಹಯನ್ ಭುವನತ್ರಯಂ ॥೫೫॥**

**ಪ್ರೇಕ್ಷಮಾಣಾ ತದಾ ಲಕ್ಷ್ಮೀಸ್ತಚ್ಚಿತ್ತಾ ದೈವಯೋಗತಃ ।**
**ನೋವಾಚ ವಚನಂ ಕಿಂಚಿತ್ಪೃಷ್ಟಾಽಪಿ ಚ ಪುನಃಪುನಃ ॥೫೬॥**

॥ ವ್ಯಾಸ ಉವಾಚ ॥

**ಅಶ್ವಾಸಕ್ತಮತಿಂ ವೀಕ್ಷ್ಯ ಕಾಮಿನೀಮತಿಮೋಹಿತಾಂ ।**
**ಪಶ್ಯಂತೀಂ ಪರಮಪ್ರೇಮ್ಣಾ ಚಂಚಲಾಕ್ಷೀಂ ಚ ಚಂಚಲಾಂ ॥೫೭॥**

**ತಾಮಾಹ ಭಗವಾನ್ ಕ್ರುದ್ಧಃ ಕಿಂ ಪಶ್ಯಸಿ ಸುಲೋಚನೇ ।**
**ಮೋಹಿತಾ ಚ ಹರಿಂ ದೃಷ್ಟ್ವಾ ಪೃಷ್ಟಾ ನೈವಾಽಭಿಭಾಷಸೇ ॥೫೮॥**

---

ಮಹಾಮಹಿಮನಾದ ಆ ವಿಷ್ಣುವೂ ಕುದುರೆಯನ್ನೇರಿ ಬರುತ್ತಿರುವ ಸುಂದರನಾದ ಅವನನ್ನು ನೋಡಿ, ಲಕ್ಷ್ಮಿಯನ್ನು ಕುರಿತು, ಪ್ರೀತಿಯಿಂದ ಎಲ್ಲೈ ಮನೋಹರಳಾದ ದೇವಿಯೇ, ಕುದುರೆಯನ್ನೇರಿ ಎರಡನೆಯ ಮನ್ಮಥನೋ ಎಂಬಂತೆ ಕಾಂತಿಯುಕ್ತವಾದ ಶರೀರದಿಂದ ಕೂಡಿ ಮೂರು ಲೋಕವನ್ನೂ ಮೋಹಗೊಳಿಸುತ್ತಾ ಬರುತ್ತಿರುವವನಾರು ? ಎಂದು ಕೇಳಿದನು. ||೫೪-೫೫||

ಆಗ ಲಕ್ಷ್ಮಿಯು ದೈವಯೋಗದಿಂದ ಆ ಕುದುರೆಯನ್ನೇ ನೋಡುತ್ತಾ ಅದರಲ್ಲಿಯೇ ಮನಸ್ಸಿಟ್ಟವಳಾಗಿ ವಿಷ್ಣುವು ಮತ್ತೆ ಮತ್ತೆ ಕೇಳಿದರೂ ಉತ್ತರವನ್ನು ಕೊಡಲಿಲ್ಲ. ||೫೬||

ವ್ಯಾಸಮುನಿಯು ಹೇಳಿದನು—ಲಕ್ಷ್ಮಿಯು ಚಂಚಲವಾದ ಮನಸ್ಸಿನಿಂದಲೂ ಕಣ್ಣುಗಳಿಂದಲೂ ಕೂಡಿ ಕುದುರೆಯ ಮೇಲೆ ಅತ್ಯಂತ ಪ್ರೀತಿಯಿಂದ ಅದನ್ನೇ ನೋಡುತ್ತಿರುವುದನ್ನು ಕಂಡ ವಿಷ್ಣುವು, ಕೋಪದಿಂದ ಆ ದೇವಿಯನ್ನು ಕುರಿತು, ಎಲ್ಲೈ ಸುಂದರವಾದ ಕಣ್ಣುಗಳುಳ್ಳ ದೇವಿಯೇ, ಏನನ್ನು ನೋಡುತ್ತಿರುವೆ? ಕುದುರೆಯನ್ನು ನೋಡಿ ಮೋಹದಿಂದ ನಾನು ಮಾತನಾಡಿಸಿದರೂ ಉತ್ತರವನ್ನು ಕೊಡದೆ ಇರುವೆ ! ||೫೭-೫೮||

ಸರ್ವತ್ರ ರಮಸೇ ಯಸ್ಮಾದ್ರಮಾ ತಸ್ಮಾದ್ಭವಿಷ್ಯಸಿ ।
ಚಂಚಲತ್ವಾಚ್ಚಲೇತ್ಯೇವಂ ಸರ್ವಥೈವ ನ ಸಂಶಯಃ ॥೫೯॥

ಪ್ರಾಕೃತಾ ಚ ಯಥಾ ನಾರೀ ನೂನಂ ಭವತಿ ಚಂಚಲಾ ।
ತಥಾ ತ್ವಮಪಿ ಕಲ್ಯಾಣಿ ಸ್ಥಿರಾ ನೈವ ಕದಾಚನ ॥೬೦॥

ತ್ವಂ ಹಯಂ ಮತ್ಸಮೀಪಸ್ಥಾ ಸಮೀಕ್ಷ್ಯ ಯದಿ ಮೋಹಿತಾ ।
ವಡವಾ ಭವ ವಾಮೋರು ಮರ್ತ್ಯಲೋಕೇಽತಿದಾರುಣೇ ॥೬೧॥

ಇತಿ ಶಪ್ತಾ ರಮಾ ದೇವೀ ಹರಿಣಾ ದೈವಯೋಗತಃ ।
ರುರೋದ ವೇಪಮಾನಾ ಸಾ ಭಯಭೀತಾಽತಿದುಃಖಿತಾ ॥೬೨॥

ತಮುವಾಚ ರಮಾನಾಥಂ ಶಂಕಿತಾ ಚಾರುಹಾಸಿನೀ ।
ಪ್ರಣಮ್ಯ ಶಿರಸಾ ದೇವಂ ಸ್ವಪತಿಂ ವಿನಯಾನ್ವಿತಾ ॥೬೩॥

ದೇವದೇವ ಜಗನ್ನಾಥ ಕರುಣಾಕರ ಕೇಶವ ।
ಸ್ವಲ್ಪೇಽಪರಾಧೇ ಗೋವಿಂದ ಕಸ್ಮಾಚ್ಛಾಪಂ ದದಾಸಿ ಮೇ ॥೬೪॥

---

ನೀನು ಎಲ್ಲೆಡೆಯೂ ವಿನೋದಪಡುವಳಾದುದರಿಂದ ರಮಾ ಎಂದೂ, ಚಂಚಲಸ್ವಭಾವದಿಂದ ಚಂಚಲೆ ಎಂದೂ, ಹೆಸರನ್ನು ಪಡೆಯುವೆ! ಸಾಮಾನ್ಯ ಸ್ತ್ರೀಯಂತೆ ನೀನೂ ಚಂಚಲೆಯಾಗಿರುವುದರಿಂದ ಎಂದಿಗೂ ಎಲ್ಲಿಯೂ ಸ್ಥಿರವಾಗಿರುವವಳಾಗುವುದಿಲ್ಲವು! ॥೫೯-೬೦॥

ನೀನು ನನ್ನ ಸಮೀಪದಲ್ಲಿದ್ದೂ ಕುದುರೆಯನ್ನು ನೋಡಿ ಮೋಹಗೊಂಡುದರಿಂದ, ಸುಂದರವಾದ ತೊಡೆಯುಳ್ಳ ನೀನು ಸಾವಿನಿಂದ ಭಯಂಕರವಾದ ಭೂಲೋಕದಲ್ಲಿ ಕುದುರೆಯಾಗಿ ಹುಟ್ಟು. ॥೬೧॥

ದೈವಯೋಗದಿಂದ ಹೀಗೆ ಶಾಪವನ್ನು ಪಡೆದ ಲಕ್ಷ್ಮೀದೇವಿಯು ಭಯದಿಂದ ನಡುಗುತ್ತಾ ಅತ್ತಳು. ಮತ್ತು ಆತಂಕದಿಂದ ಸಂದೇಹಗೊಂಡು ಮನೋಹರವಾದ ಮುಗುಳುನಗೆಯುಳ್ಳ ಆ ಲಕ್ಷ್ಮಿಯು ಕಾಂತನಿಗೆ ನಮಸ್ಕಾರ ಮಾಡಿ ನಯದಿಂದ ತನ್ನ ಪತಿಯಾದ ಆ ದೇವನನ್ನು ಕುರಿತು ಹೀಗೆ ಮಾತನ್ನಾಡಿದಳು. ॥೬೨-೬೩॥

ಓ ಪ್ರಭುವೇ, ದೇವತೆಗಳಿಗೆಲ್ಲ ದೇವನಾಗಿ ಲೋಕಕ್ಕೆಲ್ಲ ಒಡೆಯನಾಗಿರುವವನೇ, ಕರುಣೆಯ ಗಣಿಯಾದವನೇ, ಅಲ್ಪವಾದ ತಪ್ಪಿಗೆ ನನಗೇಕೆ ಇಂತಹ ಅತಿ

ನ ಕದಾಚಿನ್ಮಯಾ ದೃಷ್ಟಃ ಕ್ರೋಧಸ್ತೇ ಹೀದೃಶಃ ಪ್ರಭೋ ।
ಕ್ವ ಗತಸ್ತೇ ಮಯಿ ಸ್ನೇಹಃ ಸಹಜೋ ನ ತು ನಶ್ವರಃ ॥೬೫॥

ವಜ್ರಪಾತಸ್ತು ಶತ್ರೌ ವೈ ತರ್ಕವ್ಯೋ ನ ಸುಹೃಜ್ಜನೇ ।
ಸದಾಽಹಂ ವರಯೋಗ್ಯಾ ತೇ ಶಾಪಯೋಗ್ಯಾ ಕಥಂ ಕೃತಾ ॥೬೬॥

ಪ್ರಾಣಾಂಸ್ತ್ಯಕ್ಷ್ಯಾಮಿ ಗೋವಿಂದ ಪಶ್ಯತೋಽದ್ಯತವಾಗ್ರತಃ ।
ಕಥಂ ಜೀವೇ ತ್ವಯಾ ಹೀನಾ ವಿರಹಾನಲತಾಪಿತಾ ॥೬೭॥

ಪ್ರಸಾದಂ ಕುರು ದೇವೇಶ ಶಾಪಾದಸ್ಮಾತ್ಸುದಾರುಣಾತ್ ।
ಕದಾ ಮುಕ್ತಾ ಸಮೀಪಂ ತೇ ಪ್ರಾಪ್ನೋಮಿ ಸುಖದಂ ವಿಭೋ॥೬೮॥

॥ ಹರಿರುವಾಚ ॥

ಯದಾ ತೇ ಭವಿತಾ ಪುತ್ರಃ ಪೃಥಿವ್ಯಾಂ ಮತ್ಸಮಃ ಪ್ರಿಯೇ ।
ತದಾ ಮಾಂ ಪ್ರಾಪ್ಯ ತನ್ವಂಗಿ ಸುಖಿತಾ ತ್ವಂ ಭವಿಷ್ಯಸಿ ॥೬೯॥

---

ಹೆಚ್ಚಾದ ಶಾಪವನ್ನು ಕೊಡುತ್ತೀಯೆ? ಇಂತಹ ಕೋಪವು ನಿನಗೂ ಬಂದುದನ್ನು ನಾನು ಯಾವಾಗಲೂ ನೋಡಲಿಲ್ಲ! ನನ್ನಲ್ಲಿ ನಿನಗಿದ್ದ ಎಂದಿಗೂ ನಾಶವಾಗದ ಸ್ವಾಭಾವಿಕವಾದ ಸ್ನೇಹವು ಈಗ ಎಲ್ಲಿ ಹೋಯಿತು? ॥೬೪-೬೫॥

ವಜ್ರಾಯುಧಕ್ಕೆ ಸಮಾನವಾದ ಇಂತಹ ಶಾಪವನ್ನು ಶತ್ರುಗಳ ಮೇಲೆ ಪ್ರಯೋಗಿಸಬೇಕು. ಸ್ನೇಹಿತರ ಮೇಲಲ್ಲ. ನಾನು ಯಾವಾಗಲೂ ನಿನ್ನ ವರಕ್ಕೆ ಎಂದರೆ ಅನುಗ್ರಹಕ್ಕೆ ಪಾತ್ರಳಾದವಳು. ಹಾಗಿದ್ದರೂ ಓ ಪ್ರಿಯನೇ, ಈಗ ನಾನು ನಿನ್ನ ಶಾಪಕ್ಕೆ ಹೇಗೆ ಪಾತ್ರಳಾಗಿ ಮಾಡಲ್ಪಟ್ಟೆನು? ನೀನು ನೋಡುತ್ತಿರಲು ನಿನ್ನೆ ದುರಿಗೇ ಪ್ರಾಣತ್ಯಾಗವನ್ನು ಮಾಡುವೆನು. ನೀನಿಲ್ಲದೆ ನಿನ್ನ ಅಗಲಿಕೆಯ ಬೆಂಕಿಯ ತಾಪದಿಂದ ನಾನು ಹೇಗೆ ಬದುಕುವೆನು? ॥೬೬-೬೭॥

ಓ ದೇವದೇವನೇ, ಪ್ರಸನ್ನನಾಗು. ಈ ಕ್ರೂರವಾದ ಶಾಪದಿಂದ ನಾನು ಯಾವಾಗ ಬಿಡುಗಡೆಯನ್ನು ಹೊಂದುವೆನು? ಸುಖಕರವಾದ ನಿನ್ನ ಸಮೀಪಕ್ಕೆ ನಾನು ಹಿಂತಿರುಗಿ ಯಾವಾಗ ಬರುವೆನು? ಎಂದು ಕೇಳಿಕೊಂಡಳು. ॥೬೮॥

ಹರಿಯು ಹೇಳಿದನು—ಎಲೈ ಕೃಶೋದರಿಯಾದ ಪ್ರೀತಿಪಾತ್ರಳಾದ ಲಕ್ಷ್ಮೀ ದೇವಿಯೇ, ಭೂಮಿಯಲ್ಲಿ ನನಗೆ ಸಮಾನನಾದ ಪುತ್ರನು ನಿನಗೆ ಯಾವಾಗ ಹುಟ್ಟು

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ ಸಪ್ತದಶೋಽಧ್ಯಾಯಃ

---

ವನೋ ಆಗ ನೀನು ಪುನಃ ನನ್ನನ್ನು ಪಡೆದು ಸುಖವನ್ನು ಅನುಭವಿಸುವೆ ಎಂದು ವಿಶಾಪವನ್ನು ಅನುಗ್ರಹಿಸಿದನು. ॥೬೯॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ ಹದಿನೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

### ॥ ಅಷ್ಟಾದಶೋಽಧ್ಯಾಯಃ ॥

### ಹದಿನೆಂಟನೆಯ ಅಧ್ಯಾಯವು

॥ ಜನಮೇಜಯ ಉವಾಚ ॥

**ಇತಿ ಶಪ್ತಾ ಭಗವತಾ ಸಿಂಧುಜಾ ಕೋಪಯೋಗತಃ ।**
**ಕಥಂ ಸಾ ವಡವಾ ಜಾತಾ ರೇವಂತೇನ ಚ ಕಿಂ ಕೃತಂ ॥೧॥**

**ಕಸ್ಮಿನ್ದೇಶೇಽಬ್ಧಿಜಾ ದೇವೀ ವಡವಾ ರೂಪಧಾರಿಣೀ ।**
**ಸಂಸ್ಥಿತೈಕಾಕಿನೀ ಬಾಲಾ ಪರೋಷಿತ್ಪತಿಕಾ ಯಥಾ ॥೨॥**

**ಕಾಲಂ ಕಿಯಂತಮಾಯುಷ್ಯಂ ವಿಯುಕ್ತಾ ಪತಿನಾ ರಮಾ ।**
**ಸಂಸ್ಥಿತಾ ವಿಜನೇಽರಣ್ಯೇ ಕಿಂ ಕೃತಂ ಚ ತಯಾ ಪುನಃ ॥೩॥**

---

ಜನಮೇಜಯರಾಯನು ಹೇಳಿದನು—ಮಹಾಮಹಿಮನಾದ ವಿಷ್ಣುವು ಕೋಪದ ಸಂಬಂಧದಿಂದ ಸಮುದ್ರಪುತ್ರಿಯಾದ ಲಕ್ಷ್ಮೀದೇವಿಗೆ ಶಾಪವನ್ನು ಕೊಟ್ಟ ಮೇಲೆ, ಆ ದೇವಿಯು ಹೇಗೆ ಕುದುರೆಯಾಗಿ ಹುಟ್ಟಿದಳು? ರೇವಂತನೇನನ್ನು ಮಾಡಿದನು? ಲಕ್ಷ್ಮಿಯು ಯಾವ ದೇಶದಲ್ಲಿ ಕುದುರೆಯ ರೂಪದಿಂದ ಒಬ್ಬಳೇ ಪತಿಯಿಂದ ಅಗಲಿದ ಪತ್ನಿಯಂತೆ ವಿರಹ ವ್ಯಥೆಯಿಂದಿದ್ದಳು? ॥೧-೨॥

ಲಕ್ಷ್ಮಿಯು ತನ್ನ ಆಯುಸ್ಸಿನಲ್ಲಿ ಎಷ್ಟು ವರ್ಷಗಳು ಕಳೆಯುವವರೆಗೆ ಹಾಗೆ ಪತಿಯನ್ನಗಲಿದ್ದಳು? ಅಲ್ಲದೆ ನಿರ್ಜನವಾದ ಕಾಡಿನಲ್ಲಿದ್ದು ಏನನ್ನು ಮಾಡಿದಳು? ॥೩॥

**ಸಮಾಗಮಂ ಕದಾ ಪ್ರಾಪ್ತಾ ವಾಸುದೇವಸ್ಯ ಸಿಂಧುಜಾ ।**
**ಪುತ್ರಃ ಕಥಂ ತಯಾ ಪ್ರಾಪ್ತೋ ನಾರಾಯಣವಿಯುಕ್ತಯಾ ॥೪॥**

**ಏತದ್ವೃತ್ತಾಂತಮಾರ್ಯೇಶ ಕಥಯಸ್ವ ಸವಿಸ್ತರಂ ।**
**ಶ್ರೋತುಕಾಮೋಽಸ್ಮಿ ವಿಪ್ರೇಂದ್ರ ಕಥಾಖ್ಯಾನಮನುತ್ತಮಂ ॥೫॥**

॥ ಸೂತ ಉವಾಚ ॥

**ಇತಿ ಪೃಷ್ಟಸ್ತದಾ ವ್ಯಾಸಃ ಪರೀಕ್ಷಿತ್ತನಯೇನ ವೈ ।**
**ಕಥಯಾಮಾಸ ಭೋ ವಿಪ್ರಾಃ ಕಥಾಮೇತಾಂ ಸುವಿಸ್ತರಾಂ ॥೬॥**

॥ ವ್ಯಾಸ ಉವಾಚ ॥

**ಶೃಣು ರಾಜನ್ಪ್ರವಕ್ಷ್ಯಾಮಿ ಕಥಾಂ ಪೌರಾಣಿಕೀಂ ಶುಭಾಂ ।**
**ಪಾವನೀಂ ಸುಖದಾಂ ಕರ್ಣೇ ವಿಶದಾಕ್ಷರಸಂಯುತಾಂ ॥೭॥**

**ರೇವಂತಸ್ತು ರಮಾಂ ದೃಷ್ಟ್ವಾ ಶಪ್ತಾಂ ದೇವೇನ ಕಾಮಿನೀಂ ।**
**ಭಯಾರ್ತಃ ಪ್ರಯಯೌ ದೂರಾತ್ಪ್ರಣಮ್ಯ ಜಗತಾಂ ಪತಿಂ ॥೮॥**

---

ಲಕ್ಷ್ಮೀದೇವಿಯು ಯಾವಾಗ ಹಿಂತಿರುಗಿ ಬಂದು ವಿಷ್ಣುವಿನೊಡನೆ ಸೇರಿದಳು? ನಾರಾಯಣನ ಸಂಬಂಧವಿಲ್ಲದೆ ಅವಳು ಮಗನನ್ನು ಹೇಗೆ ಪಡೆದಳು? ಪೂಜ್ಯರಲ್ಲಿ ಶ್ರೇಷ್ಠನಾದ ವ್ಯಾಸನೇ, ಈ ವೃತ್ತಾಂತವನ್ನೆಲ್ಲವನ್ನೂ ವಿಸ್ತಾರವಾಗಿ ಹೇಳು. ಶ್ರೇಷ್ಠವಾದ ಈ ಕಥೆಯನ್ನು ಕೇಳಬೇಕೆಂದು ಆಶಿಸುವೆನು. ॥೪-೫॥

ಸೂತನು ಶೌನಕಾದಿಋಷಿಗಳನ್ನು ಕುರಿತು ಹೇಳಿದನು—ಎಲೈ ಬ್ರಾಹ್ಮಣರೇ, ಕೇಳಿ. ಪರೀಕ್ಷಿತನ ಮಗನಾದ ಜನಮೇಜಯನು ವ್ಯಾಸಮುನಿಯನ್ನು ಹೀಗೆ ಪ್ರಶ್ನೆ ಮಾಡುತ್ತಲು, ವ್ಯಾಸನು ಈಕಥೆಯನ್ನು ವಿಸ್ತಾರವಾಗಿ ಹೀಗೆ ಹೇಳಿದನು. ॥೬॥

ವ್ಯಾಸಮುನಿಯು ಹೇಳಿದನು—ಎಲೈ ರಾಜನೇ ಕೇಳು. ಮಂಗಳಕರವಾದ ಪರಿಶುದ್ಧವೂ ಸುಖಕರವೂ ಆದ ಪುರಾತನವಾದ ಕಥೆಯನ್ನು ಹೇಳುವೆನು. ರೇವಂತನು ಲಕ್ಷ್ಮೀದೇವಿಗೆ ನಾರಾಯಣನು ಶಾಪ ಕೊಟ್ಟದ್ದನ್ನು ಕಂಡು, ಭಯದಿಂದ ಪೀಡಿತನಾಗಿ ಜಗತ್ಪತಿಯಾದ ಆ ನಾರಾಯಣನಿಗೆ ದೂರದಿಂದಲೇ ನಮಸ್ಕಾರವನ್ನು ಮಾಡಿ ದೂರದಿಂದಲೇ ಹೊರಟುಹೋದನು. ॥೭-೮॥

**ಪಿತುಃ ಸಕಾಶಂ ತ್ವರಿತೋ ವೀಕ್ಷ್ಯ ಕೋಪಂ ಜಗತ್ಪತೇಃ ।**
**ನಿವೇದಯಾಮಾಸ ಕಥಾಂ ಭಾಸ್ಕರಾಯ ಸ ಶಾಪಜಾಂ ॥೯॥**

**ದುಃಖಿತಾ ಸಾ ರಮಾ ದೇವೀ ಪ್ರಣಮ್ಯ ಜಗದೀಶ್ವರಂ ।**
**ಆಜ್ಞಾಪ್ತಾ ಮಾನುಷಂ ಲೋಕಂ ಪ್ರಾಪ್ತಾ ಕಮಲಲೋಚನಾ ॥೧೦॥**

**ಸೂರ್ಯಪತ್ನ್ಯಾ ತಪಸ್ತಪ್ತಂ ಯತ್ರ ಪೂರ್ವಂ ಸುದಾರುಣಂ ।**
**ತತ್ರೈವ ಸಾ ಯಯಾವಾಶು ವಡವಾರೂಪಧಾರಿಣೀ ॥೧೧॥**

**ಕಾಲಿಂದೀತಮಸಾಸಂಗೇ ಸುಪರ್ಣಾಕ್ಷಸ್ಯ ಚೋತ್ತರೇ ।**
**ಸರ್ವಕಾಮಪ್ರದೇ ಸ್ಥಾನೇ ಸುರಮ್ಯವನಮಂಡಿತೇ ॥೧೨॥**

**ತತ್ರ ಸ್ಥಿತಾ ಮಹಾದೇವಂ ಶಂಕರಂ ವಾಂಛಿತಪ್ರದಂ ।**
**ದಧ್ಯೌ ಚೈಕೇನ ಮನಸಾ ಶೂಲಿನಂ ಚಂದ್ರಶೇಖರಂ ॥೧೩॥**

---

ಆ ರೇವಂತನು ನಾರಾಯಣನ ಕೋಪವನ್ನು ಕಂಡು ವೇಗವಾಗಿ ತನ್ನ ತಂದೆಯಾದ ಸೂರ್ಯನ ಸಮೀಪಕ್ಕೆ ಹೋಗಿ, ಲಕ್ಷ್ಮೀದೇವಿಗೆ ನಾರಾಯಣನು ಶಾಪವನ್ನು ಕೊಟ್ಟ ಸಂಗತಿಯನ್ನು ಅವನಿಗೆ ಹೇಳಿದನು. ||೯||

ಇತ್ತಲಾಗಿ ಕಮಲದಂತಿರುವ ಕಣ್ಣುಳ್ಳ ಆ ಲಕ್ಷ್ಮೀದೇವಿಯು ದುಃಖದಿಂದ ಜಗತ್ಪತಿಯಾದ ನಾರಾಯಣನಿಗೆ ನಮಸ್ಕರಿಸಿ, ಅವನ ಅನುಮತಿಯ ಅಪ್ಪಣೆಯಿಂದ ಮನುಷ್ಯ ಲೋಕಕ್ಕೆ ಬಂದಳು. ||೧೦||

ಆ ಲಕ್ಷ್ಮೀದೇವಿಯು ಕುದುರೆಯ ರೂಪವನ್ನು ಧರಿಸಿ, ಸೂರ್ಯಪತ್ನಿಯಾದ ಛಾಯಾದೇವಿಯು ತಪಸ್ಸುಮಾಡಿದ್ದ ಸ್ಥಳವಾದ ಯಮುನಾ ಮತ್ತು ತಮಸಾ ನದಿಯ ಸಂಗಮ ಸ್ಥಳದಲ್ಲಿ, ಸುಪರ್ಣಾಕ್ಷವೆಂಬ ಸ್ಥಲದ ಉತ್ತರ ದಿಕ್ಕಿನಲ್ಲಿ, ಸಮಸ್ತ ಇಷ್ಟಾರ್ಥಗಳನ್ನೂ ಕೊಡುವ ಸುಂದರವಾದ ವನದಿಂದ ಅಲಂಕಾರವಾದ ಪ್ರದೇಶದಲ್ಲಿ, ಬಂದು ನೆಲಸಿದಳು. ||೧೧-೧೨||

ಆ ಸ್ಥಲದಲ್ಲಿ ನೆಲಸಿ ಒಂದೇ ಮನಸ್ಸಿನಿಂದ ಐದು ಮುಖವುಳ್ಳವನೂ, ಹತ್ತು ತೋಳುಗಳುಳ್ಳವನೂ ಆಗಿರುವ, ತನ್ನರ್ಧ ಶರೀರದಲ್ಲಿ ಗೌರೀದೇವಿಯನ್ನು ಧರಿಸಿ, ಕರ್ಪೂರದಂತೆ ನಿರ್ಮಲವಾಗಿ ಬೆಳ್ಳಗಿರುವ ಶರೀರಕಾಂತಿಯಿಂದ ಕೂಡಿ, ವಿಷದಿಂದ

ಪಂಚಾನನಂ ದಶಭುಜಂ ಗೌರೀದೇಹಾರ್ಧಧಾರಿಣಂ ।
ಕರ್ಪೂರಗೌರದೇಹಾಭಂ ನೀಲಕಂಠಂ ತ್ರಿಲೋಚನಂ ॥೧೪॥

ವ್ಯಾಘ್ರಾಜಿನಧರಂ ದೇವಂ ಗಜಚರ್ಮೋತ್ತರೀಯಕಂ ।
ಕಪಾಲಮಾಲಾಕಲಿತಂ ನಾಗಯಜ್ಞೋಪವೀತಿನಂ ॥೧೫॥

ಸಾಗರಸ್ಯ ಸುತಾ ಕೃತ್ವಾ ಹಯೀರೂಪಂ ಮನೋಹರಂ ।
ತಸ್ಮಿಂಸ್ತೀರ್ಥೇ ರಮಾದೇವೀ ಚಕಾರ ದುಶ್ಚರಂ ತಪಃ ॥೧೬॥

ಧ್ಯಾಯಮಾನಾ ಪರಂ ದೇವಂ ವೈರಾಗ್ಯಂಸಮುಪಾಶ್ರಿತಾ ।
ದಿವ್ಯಂ ವರ್ಷಸಹಸ್ರಂ ತು ಗತಂ ತತ್ರ ಮಹೀಪತೇ ॥೧೭॥

ತತಸ್ತುಷ್ಟೋ ಮಹಾದೇವೋ ವೃಷಾರೂಢಸ್ತ್ರಿಲೋಚನಃ ।
ಪ್ರತ್ಯಕ್ಷೋಽಭೂನ್ಮಹೇಶಾನಃ ಪಾರ್ವತೀಸಹಿತಃ ಪ್ರಭುಃ ॥೧೮॥

ತತ್ರೈತ್ಯ ಸಗಣಃ ಶಂಭುಸ್ತಾಮಾಹ ಹರಿವಲ್ಲಭಾಂ ।
ತಪಸ್ಯಂತೀಂ ಮಹಾಭಾಗಾಮಶ್ವಿನೀರೂಪಧಾರಿಣೀಂ ॥೧೯॥

---

ನೀಲವಾದ ಕುತ್ತಿಗೆಯೂ ಮೂರು ಕಣ್ಣುಗಳೂ ತ್ರಿಶೂಲಾಯುಧವೂ ಉಳ್ಳವನಾಗಿ, ಹುಲಿಯ ಚರ್ಮವನ್ನುಟ್ಟು, ಆನೆಯ ಚರ್ಮವನ್ನು ಹೊದೆದುಕೊಂಡು, ಕಪಾಲಗಳ ಮಾಲೆಯನ್ನೂ ಹಾವುಗಳ ಯಜ್ಞೋಪವೀತವನ್ನೂ ಧರಿಸಿ, ತಲೆಯಲ್ಲಿ ಚಂದ್ರನನ್ನು ಧರಿಸಿರುವ, ಭಕ್ತರಿಗೆ ಇಷ್ಟಾರ್ಥವನ್ನು ಕೊಡುವ, ಸುಖಕರನಾದ ಶಿವನನ್ನು ಧ್ಯಾನಿಸಿದಳು. ॥೧೩-೧೪-೧೫॥

ಕ್ಷೀರಸಮುದ್ರಪುತ್ರಿಯಾದ ಲಕ್ಷ್ಮೀದೇವಿಯು ಸುಂದರವಾದ ಹೆಣ್ಣುಕುದುರೆಯ ರೂಪವನ್ನು ಹೊಂದಿ, ಆ ತೀರ್ಥಕ್ಷೇತ್ರದಲ್ಲಿ ವೈರಾಗ್ಯದಿಂದ ಪರಮೇಶ್ವರನನ್ನು ಧ್ಯಾನಿಸುತ್ತಾ ಕಷ್ಟಸಾಧ್ಯವಾದ ತಪಸ್ಸನ್ನು ಮಾಡುತ್ತಿದ್ದಳು. ॥೧೬॥

ಎಲೈ ಜನಮೇಜಯನೇ, ಲಕ್ಷ್ಮಿಯು ಹೀಗೆ ದೇವಮಾನದಲ್ಲಿ ಒಂದು ಸಾವಿರ ವರ್ಷಗಳವರೆಗೆ ತಪಸ್ಸನ್ನು ಮಾಡಿದಳು. ಆ ತಪಸ್ಸಿಗೆ ಮೆಚ್ಚಿ ಶಿವನು ಪಾರ್ವತಿಯೊಡನೆ ವೃಷಭಾರೂಢನಾಗಿ ಪ್ರತ್ಯಕ್ಷವಾಗಿ ಅಲ್ಲಿಗೆ ಬಂದನು. ॥೧೭-೧೮॥

ಶಿವನು ತನ್ನ ಗಣಗಳೊಂದಿಗೆ ಅಲ್ಲಿಗೆ ಬಂದು, ಹೆಣ್ಣುಕುದುರೆಯ ರೂಪದಿಂದ ತಪಸ್ಸು ಮಾಡುತ್ತಿರುವ ಮಹಾಮಹಿಮಳಾದ ವಿಷ್ಣುಪತ್ನಿಯಾದ ಲಕ್ಷ್ಮಿಯನ್ನು

ಕಿಂ ತಪಸ್ಯಸಿ ಕಲ್ಯಾಣಿ ಜಗನ್ಮಾತರ್ವದಸ್ವ ಮೇ ।
ಸರ್ವಾರ್ಥದಃ ಪತಿಸ್ತೇಽಸ್ತಿ ಸರ್ವಲೋಕವಿಧಾಯಕಃ ॥೨೦॥

ಹರಿಂ ತ್ಯಕ್ತ್ವಾಽದ್ಯ ಮಾಂ ಕಸ್ಮಾತ್ಸ್ತೌಷಿ ದೇವಿ ಜಗತ್ಪತಿಂ ।
ವಾಸುದೇವಂ ಜಗನ್ನಾಥಂ ಭುಕ್ತಿಮುಕ್ತಿಪ್ರದಾಯಕಂ ॥೨೧॥

ವೇದೋಕ್ತಂ ವಚನಂ ಕಾರ್ಯಂ ನಾರೀಣಾಂ ದೇವತಾ ಪತಿಃ ।
ನಾಽನ್ಯಸ್ಮಿನ್ ಸರ್ವಥಾ ಭಾವಃ ಕರ್ತವ್ಯಃ ಕರ್ಹಿಚಿತ್ಕ್ವಚಿತ್ ॥೨೨॥

ಪತಿಶುಶ್ರೂಷಣಂ ಸ್ತ್ರೀಣಾಂ ಧರ್ಮ ಏವ ಸನಾತನಃ ।
ಯಾದೃಶಸ್ತಾದೃಶಸ್ಸೇವ್ಯಃ ಸರ್ವಥಾ ಶುಭಕಾಮ್ಯಯಾ ॥೨೩॥

ನಾರಾಯಣಸ್ತು ಸರ್ವೇಷಾಂ ಸೇವ್ಯೋ ಯೋಗ್ಯಃ ಸದೈವ ಹಿ ।
ತಂ ತ್ಯಕ್ತ್ವಾ ದೇವದೇವೇಶಂ ಕಿಂ ಮಾಂ ಧ್ಯಾಯಸಿ ಸಿಂಧುಜೇ॥೨೪॥

---

ಕುರಿತು, ಲೋಕಕ್ಕೆ ತಾಯಿಯಾದ ಮಂಗಳಕರಳಾದ ಲಕ್ಷ್ಮಿಯೇ, ನೀನೇಕೆ ತಪಸ್ಸನ್ನು ಮಾಡುತ್ತಿರುವೆ? ಹೇಳು ಎಂದು ಕೇಳಿದನು. ||೧೯||

ಸಮಸ್ತ ಲೋಕವನ್ನೂ ಸೃಷ್ಟಿಮಾಡುವ, ಸಕಲ ಇಷ್ಟಾರ್ಥಗಳನ್ನೂ ಕೊಡುವ, ಪತಿಯು ನಿನಗಿರುವನು. ಲೋಕಕ್ಕೆ ಒಡೆಯನಾದ ಭುಕ್ತಿಮುಕ್ತಿಗಳನ್ನು ಕೊಡುವ ಹರಿಯನ್ನು ಬಿಟ್ಟು, ಈಗ ನನ್ನನ್ನು ಯಾವ ಕಾರಣದಿಂದ ಸ್ತೋತ್ರ ಮಾಡುತ್ತಿರುವೆ ? ||೨೦-೨೧||

ಎಲ್ಲರೂ ವೇದದಲ್ಲಿ ಹೇಳಿರುವಂತೆ ನಡೆಯಬೇಕು. ಸ್ತ್ರೀಯರಿಗೆ ಪತಿಯೇ ದೇವರು. ಸರ್ವಪ್ರಕಾರದಿಂದಲೂ ಸ್ತ್ರೀಯರು ಪರಪುರುಷರಲ್ಲಿ ಮನಸ್ಸನ್ನಿಡಬಾರದು. ಸ್ತ್ರೀಯರಿಗೆ ಪತಿಸೇವೆಯನ್ನು ಮಾಡುವುದೇ ಅನಾದಿಯಾದ ಕಾಲದಿಂದ ಬಂದಿರುವ ಧರ್ಮವು. ಮಂಗಳವನ್ನಪೇಕ್ಷಿಸುವವಳು ಪತಿಯು ಹೇಗಿದ್ದರೂ ಅವನನ್ನೇ ಸೇವಿಸಬೇಕು. ನಾರಾಯಣನಾದರೋ ಯಾವಾಗಲೂ ಸಮಸ್ತರಿಗೂ ಪೂಜ್ಯನಾಗಿರುವನು. ಎಲೈ ಲಕ್ಷ್ಮಿಯೇ, ದೇವದೇವನಾದ ಅವನನ್ನು ಬಿಟ್ಟು ನನ್ನನ್ನೇಕೆ ಧ್ಯಾನಮಾಡುತ್ತಿರುವೆ? ಎಂದು ಕೇಳಿದನು. ||೨೨-೨೩-೨೪||

|| ಲಕ್ಷ್ಮೀರುವಾಚ ||

ಆಶುತೋಷ ಮಹೇಶಾನ ಶಪ್ತಾಽಹಂ ಪತಿನಾ ಶಿವ ।
ಮಾಂ ಸಮುದ್ಧರ ದೇವೇಶ ಶಾಪಾದಸ್ಮಾದ್ದಯಾನಿಧೇ ||೨೫||

ತದೋಕ್ತಂ ಹರಿಣಾ ಶಂಭೋ ಶಾಪಾನುಗ್ರಹಕಾರಣಂ ।
ವಿಜ್ಞಪ್ತೇನ ಮಯಾ ಕಾಮಂ ದಯಾಯುಕ್ತೇನ ವಿಷ್ಣುನಾ ||೨೬||

ಯದಾ ತೇ ಭವಿತಾ ಪುತ್ರಸ್ತದಾ ಶಾಪಸ್ಯ ಮೋಕ್ಷಣಂ ।
ಭವಿಷ್ಯತಿ ಚ ವೈಕುಂಠವಾಸಸ್ತೇ ಕಮಲಾಲಯೇ ||೨೭||

ಇತ್ಯುಕ್ತ್ವಾಽಹಂ ತಪಸ್ತಪ್ತುಮಾಗತಾಽಸ್ಮಿ ತಪೋವನೇ ।
ಆರಾಧಿತೋ ಮಯಾ ದೇವ ತ್ವಂ ಸರ್ವಾರ್ಥಪ್ರದಾಯಕಃ ||೨೮||

ಪತಿಸಂಗಂ ವಿನಾ ಪುತ್ರಂ ದೇವದೇವ ಲಭೇ ಕಥಂ ।
ಸ ತು ತಿಷ್ಠತಿ ವೈಕುಂಠೇ ತ್ಯಕ್ತ್ವಾ ವಾಮಾಮನಾಗಸಂ ||೨೯||
ವರಂ ಮೇ ದೇಹಿ ದೇವೇಶ ಯದಿ ತುಷ್ಟೋಽಸಿ ಶಂಕರ ।

---

ಲಕ್ಷ್ಮೀದೇವಿಯು ಹೇಳಿದಳು—ಭಕ್ತರ ವಿಷಯದಲ್ಲಿ ಬೇಗನೆ ಸಂತೋಷ ಪಡುವ, ಮಂಗಲಕರನಾದ ಮಹಾದೇವನೇ, ನನ್ನ ಪತಿಯು ನನಗೆ ಶಾಪವನ್ನು ಕೊಟ್ಟಿರುವನು. ಕರುಣೆಯ ಗಣಿಯಾದ ನೀನು ಈ ಶಾಪದಿಂದ ನನ್ನನ್ನು ಉದ್ಧಾರ ಮಾಡು. ||೨೫||

ಶಾಪವನ್ನು ಕೊಟ್ಟಾಗ ನಾನು ವಿಜ್ಞಾಪನೆ ಮಾಡಿಕೊಂಡುದರಿಂದ ದಯಾಶಾಲಿಯಾದ ವಿಷ್ಣುವು ಶಾಪನಿವಾರಣೆಯ ಕಾಲವನ್ನೂ ಕಾರಣವನ್ನೂ ಹೀಗೆ ಹೇಳಿರುವನು. ||೨೬||

ಓ ಮಹಾದೇವನೇ, ವಿಷ್ಣುವು ನನ್ನನ್ನು ಕುರಿತು, ಎಲೈ ಲಕ್ಷ್ಮಿಯೇ, ಯಾವಾಗ ನಿನಗೆ ಪುತ್ರನಾಗುವನೋ ಆಗ ನಿನ್ನ ಈ ಶಾಪವು ಮುಗಿದು ಅದರಿಂದ ನಿನಗೆ ಬಿಡುಗಡೆಯಾಗುವುದು. ಬಳಿಕ ನಿನಗೆ ಈ ವೈಕುಂಠಲೋಕದ ವಾಸವು ಪುನಃ ಪ್ರಾಪ್ತವಾಗುವುದು. ||೨೭||

ಹೀಗೆಂದು ನಾರಾಯಣನು ಹೇಳಿದ ಮೇಲೆ, ನಾನು ತಪಸ್ಸನ್ನು ಮಾಡುವುದಕ್ಕಾಗಿ ಈ ತಪೋವನಕ್ಕೆ ಬಂದೆನು. ಸಮಸ್ತ ಇಷ್ಟಾರ್ಥಗಳನ್ನೂ ಕೊಡತಕ್ಕ ದೇವನಾದ ನಿನ್ನನ್ನು ಪೂಜಿಸಿದೆನು. ||೨೮||

ತವ ತಸ್ಯ ದ್ವಿಧಾಭಾವೋ ನಾಸ್ತಿ ನೂನಂ ಕದಾಚನ ॥೩೦॥

ಮಯ್ಯೈತದ್ಗಿರಿಜಾಕಾಂತ ಜ್ಞಾತಂ ಪತ್ಯುಃ ಪುರೋ ಹರ ।
ಯಸ್ತ್ವಂ ಸೋಽಸೌ ಪುನರ್ಯೋಽಸೌ ಸ ತ್ವಂ ನಾಸ್ತ್ಯತ್ರ ಸಂಶಯಃ ॥೩೧॥

ಏಕತ್ವಂ ಚ ಮಯಾ ಜ್ಞಾತ್ವಾ ಮಯಾ ತೇ ಸ್ಮರಣಂ ಕೃತಂ ।
ಅನ್ಯಥಾ ಮಮ ದೋಷಸ್ಸ್ಯಾತ್ತ್ವಾಮಾಶ್ರಯಂತ್ಯಾ ಭವೇಚ್ಛಿವ ॥೩೨॥

॥ ಶಿವ ಉವಾಚ ॥

ಕಥಂ ಜ್ಞಾತಸ್ತ್ವಯಾ ದೇವಿ ಮಮ ತಸ್ಯ ಚ ಸುಂದರಿ ।
ಐಕ್ಯಭಾವೋ ಹರೇರ್ನೂನಂ ಸತ್ಯಂ ಮೇ ವದ ಸಿಂಧುಜೇ ॥೩೩॥

ಏಕತ್ವಂ ಚ ನ ಜಾನಂತಿ ದೇವಾಶ್ಚ ಮುನಯಸ್ತಥಾ ।
ಜ್ಞಾನಿನೋ ವೇದತತ್ವಜ್ಞಾಃ ಕುತರ್ಕೋಪಹತಾಃ ಕಿಲ ॥೩೪॥

---

ಭಕ್ತರಪಾಪಗಳನ್ನು ನಿವಾರಿಸಿ ಕಾಪಾಡುವ ಓ ಹರನೇ, ನಿನಗೂ ಆ ನಾರಾಯಣನಿಗೂ ಎಂದಿಗೂ ಭೇದವಿಲ್ಲವು. ಓ ಗಿರಿಜಾಪತಿಯಾದ ಶಿವನೇ, ನನ್ನ ಪತಿಯ ಇದುರಿಗೇ ಈ ಅಭೇದವನ್ನು ನಾನು ತಿಳಿದಿರುವೆನು. ನೀನೇ ಅವನು. ಅವನೇ ನೀನು. ಈ ವಿಷಯದಲ್ಲಿ ಸಂದೇಹವಿಲ್ಲವು! ನೀವಿಬ್ಬರೂ ತತ್ವಸ್ವರೂಪದಲ್ಲಿ ಒಂದೇ ಎಂದು ತಿಳಿದೇ ನಾನು ನಿನ್ನನ್ನು ಸ್ಮರಿಸಿದೆನು. ಹಾಗಿಲ್ಲದೆ ಹೋದರೆ ನಿನ್ನನ್ನು ಆಶ್ರಯಿಸಿದ ನನಗೆ ಪಾಪವುಂಟಾಗುತ್ತಿದ್ದಿತು! ॥೩೦-೩೧-೩೨॥

ಶಿವನು ಹೇಳಿದನು—ಕ್ಷೀರಸಮುದ್ರಪುತ್ರಿಯಾದ ಲಕ್ಷ್ಮಿಯೇ, ನನಗೂ, ಆ ನಾರಾಯಣನಿಗೂ ನಿಜವಾಗಿಯೂ ಐಕ್ಯಭಾವವಿರುವುದೆಂಬುದನ್ನು ನೀನು ಹೇಗೆ ತಿಳಿದಿರುವೆ? ನಿಜವಾದ ಮಾತನ್ನು ನನಗೆ ಹೇಳು. ॥೩೩॥

ದೇವತೆಗಳೂ ಮುನಿಗಳೂ ಕೂಡ ನಮ್ಮಿಬ್ಬರ ಐಕ್ಯವನ್ನು ತಿಳಿದಿಲ್ಲವು. ವೇದದ ತತ್ವವನ್ನು ಬಲ್ಲ ಜ್ಞಾನಿಗಳೂ ಕೂಡ ಕುತ್ಸಿತವಾದ ಯುಕ್ತಿಗಳುಳ್ಳ ಹೇತುವಾದದಿಂದ ಕೂಡಿದ ವಿಚಾರಬುದ್ಧಿಯಿಂದ ಭ್ರಾಂತರಾಗಿರುವರು. ಈ ವಾದಿಗಳು ಪರಸ್ಪರರ ಯುಕ್ತಿಗಳನ್ನು ಸುಲಭವಾಗಿ ಖಂಡಿಸುತ್ತಾ ನೆಲೆಗಾಣದೆ ಇರುವರು.॥೩೪॥

ಮದ್ಭಕ್ತಾ ವಾಸುದೇವಸ್ಯ ನಿಂದಕಾ ಬಹವಸ್ತಥಾ ।
ವಿಷ್ಣುಭಕ್ತಾಸ್ತು ಬಹವೋ ಮಮ ನಿಂದಾಪರಾಯಣಾಃ ॥೩೫॥

ಭವಂತಿ ಕಾಲಭೇದೇನ ಕಲೌ ದೇವಿ ವಿಶೇಷತಃ ।
ಕಥಂ ಜ್ಞಾತಸ್ತ್ವಯಾ ಭದ್ರೇ ದುರ್ಜ್ಞೇಯೋ ಹ್ಯಕೃತಾತ್ಮಭಿಃ॥೩೬॥

ಸರ್ವಥಾ ತ್ವೈಕ್ಯಭಾವಸ್ತು ಹರೇರ್ಮಮ ಚ ದುರ್ಲಭಃ ।

॥ ವ್ಯಾಸ ಉವಾಚ ॥

ಇತಿ ಸಾ ಶಂಭುನಾ ಪೃಷ್ಟಾ ತುಷ್ಟೇನ ಹರಿವಲ್ಲಭಾ ॥೩೭॥

ವೃತ್ತಾಂತಂ ತಸ್ಯ ವಿಜ್ಞಾತಂ ಪ್ರವಕ್ತುಮುಪಚಕ್ರಮೇ ।
ಶಿವಂ ಪ್ರತಿ ರಮಾ ತತ್ರ ಪ್ರಸನ್ನವದನಾ ಭೃಶಂ ॥೩೮॥

---

ಓ ಲಕ್ಷ್ಮಿಯೇ, ನನ್ನ ಭಕ್ತರಲ್ಲಿ ಅನೇಕರು ತತ್ವವನ್ನರಿಯದವರಾಗಿ ನಾರಾಯಣನನ್ನು ನಿಂದಿಸುವರು. ವಿಷ್ಣುಭಕ್ತರಲ್ಲಿಯೂ ಅನೇಕರು ಹಾಗೆಯೇ ನನ್ನನ್ನು ನಿಂದಿಸುವುದರಲ್ಲಿ ಆಸಕ್ತರಾಗಿರುವರು ! ॥೩೫॥

ಈ ನಿಂದಾಬುದ್ಧಿಯು ಜನರಿಗೆ ಕಾಲವಿಶೇಷದ ಪ್ರಭಾವದಿಂದ ಉಂಟಾಗುವುದು. ಕಲಿಯುಗದಲ್ಲಿ ಈ ಬುದ್ಧಿಯು ವಿಶೇಷವಾಗಿ ಮುಂದಾಗಿರುವುದು. ಎಲೈ ಮಂಗಲಸ್ವರೂಪಳೇ, ಪುಣ್ಯವಂತರಲ್ಲದ ಚಿತ್ತಶುದ್ಧಿಯಿಂದ ಜ್ಞಾನವನ್ನು ಪಡೆಯದೆ ಇರುವವರಿಗೆ ತಿಳಿಯಲಸಾಧ್ಯವಾದ ಈ ಹರಿಹರರ ಏಕತ್ವವನ್ನು ನೀನು ಹೇಗೆ ತಿಳಿದಿರುವೆ ? ಈ ಲೌಕಿಕವಾದ ವ್ಯವಹಾರದ ದೃಷ್ಟಿಯಿಂದ ಹೇಗೆ ಯೋಚಿಸಿದರೂ, ಹರಿಗೂ ನನಗೂ ಇರುವ ಐಕ್ಯದ ಜ್ಞಾನವು ಜನರಿಗೆ ದುರ್ಲಭವಾದುದು ! ॥೩೬॥

ವ್ಯಾಸನು ಹೇಳಿದನು—ಸಂತುಷ್ಟನಾದ ಶಿವನು ಹೀಗೆಂದು ಪ್ರಶ್ನೆ ಮಾಡುತ್ತಲು ಲಕ್ಷ್ಮೀದೇವಿಯು ಬಹಳ ಸಂತೋಷಗೊಂಡವಳಾಗಿ ಶಿವನನ್ನು ಕುರಿತು, ತನಗೆ ತಿಳಿದ ವೃತ್ತಾಂತವನ್ನು ಹೇಳುವುದಕ್ಕೆ ಪ್ರಾರಂಭಿಸಿದಳು. ಅವಳು ಹರಿಹರರ ಏಕತ್ವವನ್ನು ಹೇಗೆ ಮನಗಂಡಳೆಂಬುದನ್ನು ಹೀಗೆ ವಿವರಿಸಿ ಹೇಳಿದಳು. ॥೩೮॥

॥ ಲಕ್ಷ್ಮೀರುವಾಚ ॥

ಏಕದಾ ದೇವದೇವೇಶ ವಿಷ್ಣುರ್ಧ್ಯಾನಪರೋ ರಹಃ ।
ದೃಷ್ಟೋ ಮಯಾ ತಪಃ ಕುರ್ವನ್ ಪದ್ಮಾಸನಗತೋ ಯದಾ॥೩೯॥

ತದಾಽಹಂ ವಿಸ್ಮಿತಾ ದೇವಂ ತಮಪೃಚ್ಛಂ ಪತಿಂ ಕಿಲ ।
ಪ್ರಬುದ್ಧಂ ಸುಪ್ರಸನ್ನಂ ಚ ಜ್ಞಾತ್ವಾ ವಿನಯಪೂರ್ವಕಂ ॥೪೦॥

ದೇವದೇವ ಜಗನ್ನಾಥ ಯದಾಽಹಂ ನಿರ್ಗತಾಽರ್ಣವಾತ್ ।
ಮಥ್ಯಮಾನಾತ್ಸುರೈರ್ದೈತ್ಯೈಃ ಸರ್ವೈರ್ಬ್ರಹ್ಮಾದಿಭಿಃ ಪ್ರಭೋ॥೪೧॥

ವೀಕ್ಷಿತಾಶ್ಚ ಮಯಾ ಸರ್ವೇ ಪತಿಕಾಮನಯಾ ತದಾ ।
ವೃತಸ್ತ್ವಂ ಸರ್ವದೇವೇಭ್ಯಃ ಶ್ರೇಷ್ಠೋಽಸೀತಿ ವಿನಿಶ್ಚಯಾತ್ ॥೪೨॥

ತ್ವಂ ಕಂ ಧ್ಯಾಯಸಿ ಸರ್ವೇಶ ಸಂಶಯೋಽಯಂ ಮಹಾನ್ಮಮ ।
ಪ್ರಿಯೋಽಸಿ ಕೈಟಭಾರೇ ಮೇ ಕಥಯಸ್ವ ಮನೋಗತಂ ॥೪೩॥

---

ದೇವತೆಗಳಿಗೆ ಒಡೆಯನಾದ ಓ ಶಿವನೇ, ಒಂದಾನೊಂದುಕಾಲದಲ್ಲಿ ವಿಷ್ಣುವು ಪದ್ಮಾಸನದಲ್ಲಿ ಕುಳಿತು ಧ್ಯಾನಾಸಕ್ತನಾಗಿ ಗುಟ್ಟಾಗಿ ತಪಸ್ಸು ಮಾಡುತ್ತಿರುವುದನ್ನು ನಾನು ನೋಡಿದೆನು. ಆಗ ನಾನು ಆಶ್ಚರ್ಯಗೊಂಡು ಆ ನನ್ನ ಪತಿಯು ಧ್ಯಾನ ವನ್ನು ಬಿಟ್ಟು ಬಹಿರ್ಮುಖನಾಗಿ ಸಂತೋಷದಿಂದಿದ್ದುದನ್ನು ಕಂಡು ವಿನಯದಿಂದ ಹೀಗೆ ಪ್ರಶ್ನೆಯನ್ನು ಮಾಡಿದೆನು. ॥೩೯-೪೦॥

ದೇವತೆಗಳಿಗೂ ದೇವನಾದ ಲೋಕಕ್ಕೆ ಸ್ವಾಮಿಯಾದ ಓ ನಾರಾಯಣನೇ, ದೇವತೆಗಳೂ ರಾಕ್ಷಸರೂ ಬ್ರಹ್ಮಾದಿಗಳೂ ಕ್ಷೀರಸಮುದ್ರವನ್ನು ಕಡೆದಾಗ ನಾನು ಆ ಸಮುದ್ರದಲ್ಲಿ ಹುಟ್ಟಿ ಮೇಲಕ್ಕೆ ಬಂದು ನನಗೆ ಪತಿಯಾಗಿರಲು ಯಾರು ಯೋಗ್ಯರೆಂದು ಎಲ್ಲರನ್ನೂ ನೋಡಿದೆನು. ಆಗ ನೀನು ಸಕಲ ದೇವತೆಗಳಿಗಿಂತಲೂ ಶ್ರೇಷ್ಠನೆಂದು ತಿಳಿದು ನಿನ್ನನ್ನೇ ವರಿಸಿದೆನು. ॥೪೧-೪೨॥

ಕೈಟಭಾಸುರನನ್ನು ಕೊಂದ ಸರ್ವೇಶ್ವರನಾದ ನಾರಾಯಣನೇ, ಈಗ ನೀನು ಯಾರನ್ನು ಧ್ಯಾನಿಸುತ್ತಿರುವೆ ? ನಿನಗಿಂತಲೂ ದೊಡ್ಡವರು ಯಾರು ಇರುವರು ? ಹೀಗೆಂದು ನನಗೆ ದೊಡ್ಡ ಸಂದೇಹವು ಬಂದಿರುವುದು. ನನಗೆ ಪ್ರೀತಿಪಾತ್ರನಾದ ನೀನು ನಿನ್ನ ಮನಸ್ಸಿನಲ್ಲಿರುವುದೇನೆಂಬುದನ್ನು ಹೇಳು. ॥೪೩॥

|| ವಿಷ್ಣುರುವಾಚ ||

ಶೃಣು ಕಾಂತೇ ಪ್ರವಕ್ಷ್ಯಾಮಿ ಯಂ ಧ್ಯಾಯಾಮಿ ಸುರೋತ್ತಮಂ ।
ಆಶುತೋಷಂ ಮಹೇಶಾನಂ ಗಿರಿಜಾವಲ್ಲಭಂ ಹೃದಿ ॥೪೪॥

ಕದಾಚಿದ್ದೇವದೇವೋ ಮಾಂ ಧ್ಯಾಯತ್ಯಮಿತವಿಕ್ರಮಃ ।
ಧ್ಯಾಯಾಮ್ಯಹಂ ಚ ದೇವೇಶಂ ಶಂಕರಂ ತ್ರಿಪುರಾಂತಕಂ ॥೪೫॥

ಶಿವಸ್ಯಾಹಂ ಪ್ರಿಯಃ ಪ್ರಾಣಃ ಶಂಕರಸ್ತು ತಥಾ ಮಮ ।
ಉಭಯೋರಂತರಂ ನಾಸ್ತಿ ಮಿಥಃ ಸಂಸಕ್ತಚೇತಸೋಃ ॥೪೬॥

ನರಕಂ ಯಾಂತಿ ತೇ ನೂನಂ ಯೇ ದ್ವಿಷಂತಿ ಮಹೇಶ್ವರಂ ।
ಭಕ್ತಾ ಮಮ ವಿಶಾಲಾಕ್ಷಿ ಸತ್ಯಮೇತದ್ಬ್ರವೀಮ್ಯಹಂ ॥೪೭॥

ಇತ್ಯುಕ್ತಂ ದೇವದೇವೇನ ವಿಷ್ಣುನಾ ಪ್ರಭವಿಷ್ಣುನಾ ।
ಏಕಾಂತೇ ಕಿಲ ಪೃಷ್ಟೇನ ಮಯಾ ಶೈಲಸುತಾಪ್ರಿಯ ॥೪೮॥

---

ವಿಷ್ಣುವು ಹೇಳಿದನು—ಪ್ರೀತಿಪಾತ್ರಳಾದ ಲಕ್ಷ್ಮೀದೇವಿಯೇ, ಕೇಳು. ಬೇಗನೆ ಸಂತೋಷಪಡತಕ್ಕವನೂ ಗಿರಿಜಾಪತಿಯೂ ದೇವಶ್ರೇಷ್ಠನೂ ಮಹೇಶ್ವರನೂ ಆದ ಶಿವನನ್ನು ನಾನು ಧ್ಯಾನಿಸುತ್ತಿರುವೆನು. ||೪೪||

ಒಂದಾನೊಂದು ಸಮಯದಲ್ಲಿ ಮಹಾಪರಾಕ್ರಮಿಯಾದ ದೇವತೆಗಳೆಲ್ಲರಿಗೂ ದೇವನಾದ ಶಿವನೂ ನನ್ನನ್ನು ಧ್ಯಾನಿಸುವನು! ನಾನೂ ಕೂಡ ತ್ರಿಪುರಸಂಹಾರಕನೂ ಸುಖಕರನೂ ಆದ ಶಿವನನ್ನು ಧ್ಯಾನಿಸುವೆನು! ||೪೫||

ಶಿವನಿಗೆ ನಾನು ಪ್ರಾಣಪ್ರಿಯನು, ನನಗೆ ಶಿವನೂ ಹಾಗೆಯೇ ಪ್ರಾಣ ಪ್ರಿಯನು. ಪರಸ್ಪರವಾಗಿ ಕೂಡಿದ ಮನಸ್ಸುಳ್ಳ ನಮ್ಮಲ್ಲಿ ಮೇಲು, ಕೀಳು, ಹೆಚ್ಚು ಕಡಿಮೆ, ಎಂದು ಮುಂತಾದ ವ್ಯತ್ಯಾಸವಿಲ್ಲವು. ||೪೬||

ವಿಸ್ತಾರವಾದ ಕಣ್ಣುಗಳುಳ್ಳ ಲಕ್ಷ್ಮೀದೇವಿಯೇ, ನನ್ನ ಭಕ್ತರು ಯಾರು ಶಿವನನ್ನು ದ್ವೇಷಿಸುತ್ತಾರೆಯೋ ಅವರು ನರಕಕ್ಕೆ ಹೋಗುವರೆಂದು ನಾನು ನಿಜವಾಗಿ ಹೇಳುವೆನು. ||೪೭||

ಗಿರಿಜಾಪ್ರಿಯನಾದ ಶಿವನೇ, ಏಕಾಂತದಲ್ಲಿ ನಾನು ಪ್ರಶ್ನೆ ಮಾಡಿದಾಗ ಸರ್ವ ಶಕ್ತನೂ ದೇವದೇವನೂ ಮಹಾಮಹಿಮನೂ ಆದ ವಿಷ್ಣುವು ಹೀಗೆ ಹೇಳಿದನು.||೪೮||

ತಸ್ಮಾತ್ತ್ವಾಂ ವಲ್ಲಭಂ ವಿಷ್ಣೋ ಜ್ಞಾತ್ವಾ ಧ್ಯಾತವತೀ ಹ್ಯಹಂ ।
ತಥಾ ಕುರು ಮಹೇಶಾನ ಯಥಾ ಮೇ ಪ್ರಿಯಸಂಗಮಃ ॥೪೯॥

॥ ವ್ಯಾಸ ಉವಾಚ ॥

ಇತಿ ಶ್ರೇಯೋ ವಚಃ ಶ್ರುತ್ವಾ ಪ್ರತ್ಯುವಾಚ ಮಹೇಶ್ವರಃ ।
ತಾಮಾಶ್ವಾಸ್ಯ ಪ್ರಿಯೈರ್ವಾಕ್ಯೈರ್ಯಥಾರ್ಥಂ ವಾಕ್ಯಕೋವಿದಃ ॥೫೦॥

ಸ್ವಸ್ಥಾ ಭವ ಪೃಥುಶ್ರೋಣಿ ತುಷ್ಟೋಽಹಂ ತಪಸಾ ತವ ।
ಸಮಾಗಮಸ್ತೇ ಪತಿನಾ ಭವಿಷ್ಯತಿ ನ ಸಂಶಯಃ ॥೫೧॥

ಅತ್ರೈವ ಹಯರೂಪೇಣ ಭಗವಾನ್ ಜಗದೀಶ್ವರಃ ।
ಆಗಮಿಷ್ಯತಿ ತೇ ಕಾಮಂ ಪೂರ್ಣಂ ಕರ್ತುಂ ಮಯೇರಿತಃ ॥೫೨॥

ತಥಾಽಹಂ ಪ್ರೇರಯಿಷ್ಯಾಮಿ ತಂ ದೇವಂ ಮಧುಸೂದನಂ ।
ಯಥಾಽಸೌ ಹಯರೂಪೇಣ ತ್ವಾಮೇಷ್ಯತಿ ಮದಾತುರಃ ॥೫೩॥

---

ಓ ಮಹೇಶ್ವರನೇ, ವಿಷ್ಣುವು ನನಗೆ ಹೇಳಿದ ಮಾತಿನಿಂದ ನೀನು ಆ ಮಹಾ ವಿಷ್ಣುವಿಗೆ ಪ್ರೀತಿಪಾತ್ರನೆಂದು ತಿಳಿದು ನಾನು ನಿನ್ನನ್ನು ಧ್ಯಾನಮಾಡಿದೆನು. ನನಗೆ ನನ್ನ ಪ್ರಿಯನಾದ ವಿಷ್ಣುವಿನ ಸಂಗವು ಇಲ್ಲಿಯೇ ಬೇಗನೆ ಲಭಿಸುವಂತೆ ಅನುಗ್ರಹ ವನ್ನು ಮಾಡು. ॥೪೮॥

ಹೀಗೆಂದು ಹೇಳಿದ ಲಕ್ಷ್ಮೀದೇವಿಯ ಮಾತನ್ನು ಕೇಳಿ ಶ್ರೇಯಸ್ಕರವಾದ ಮಾತಿನಲ್ಲಿ ಚತುರನಾದ ಮಹೇಶ್ವರನು ಪ್ರಿಯವಾದ ಮಾತುಗಳಿಂದ ಆಕೆಯನ್ನು ಸಮಾಧಾನಪಡಿಸಿ ಹೀಗೆ ಪ್ರತ್ಯುತ್ತರವನ್ನು ಹೇಳಿದನು. ॥೫೦॥

ಎಲೈ ಲಕ್ಷ್ಮೀದೇವಿಯೇ, ನೀನು ಶಾಂತವಾದ ಮನಸ್ಸನ್ನು ಹೊಂದು. ನಿನ್ನ ತಪಸ್ಸಿನಿಂದ ನಾನು ಸಂತೋಷವನ್ನು ಪಡೆದೆನು. ನಿನಗೆ ನಿನ್ನ ಪತಿಯೊಡನೆ ಸಂಬಂಧವಾಗುವುದರಲ್ಲಿ ಸಂದೇಹವಿಲ್ಲವು. ನನ್ನ ಮಾತಿನಿಂದ ಇಲ್ಲಿಗೇ ಆ ಮಹಾ ಮಹಿಮನಾದ ವಿಷ್ಣುವು ಕುದುರೆಯ ರೂಪದಿಂದ ಬರುವನು. ನಿನ್ನ ಇಷ್ಟಾರ್ಥ ವನ್ನು ಪೂರ್ಣಮಾಡಲು ಆ ವಿಷ್ಣುವು ಕುದುರೆಯ ರೂಪದಿಂದ ಕಾಮಾತುರನಾಗಿ ನಿನ್ನ ಸಮೀಪಕ್ಕೆ ಬರುವಂತೆ ನಾನು ಪ್ರೇರಿಸುವೆನು! ॥೫೧-೫೨-೫೩॥

ಪುತ್ರಸ್ತೇ ಭವಿತಾ ಸುಭ್ರು ನಾರಾಯಣಸಮಃ ಕ್ಷಿತೌ ।
ಭವಿಷ್ಯತಿ ಸ ಭೂಪಾಲಃ ಸರ್ವಲೋಕನಮಸ್ಕೃತಃ ॥೫೪॥

ಸುತಂ ಪ್ರಾಪ್ಯ ಮಹಾಭಾಗೇ ತ್ವಂ ತೇನ ಪತಿನಾ ಸಹ ।
ಗಂತಾಽಸಿ ದಿವಿ ವೈಕುಂಠಂ ಪ್ರಿಯಾ ತಸ್ಯ ಭವಿಷ್ಯಸಿ ॥೫೫॥

ಏಕವೀರೇತಿ ನಾಮ್ನಾಽಸೌ ಖ್ಯಾತಿಂ ಯಾಸ್ಯತಿ ತೇ ಸುತಃ ।
ತಸ್ಮಾತ್ತು ಹೈಹಯೋ ವಂಶೋ ಭುವಿ ವಿಸ್ತಾರಮೇಷ್ಯತಿ ॥೫೬॥

ಪರಂ ತು ವಿಸ್ಮೃತಾಽಸಿತ್ವಂ ಹೃದಿಸ್ಥಾಂ ಪರಮೇಶ್ವರೀಂ ।
ಮದಾಂಧಾ ಮತ್ತಚಿತ್ತಾ ಚ ತೇನ ತೇ ಫಲಮೀದೃಶಂ ॥೫೭॥

ಅತಸ್ತದ್ದೋಷಶಾಂತ್ಯರ್ಥಂ ಹೃದಿಸ್ಥಾಂ ಪರದೇವತಾಂ ।
ಶರಣಂ ಯಾಹಿ ಸರ್ವಾತ್ಮಭಾವೇನ ಜಲಧೇಃ ಸುತೇ ॥೫೮॥

---

ಒಳ್ಳೆಯ ಹುಬ್ಬುಗಳುಳ್ಳ ಲಕ್ಷ್ಮಿಯೇ, ಆ ನಾರಾಯಣನಿಗೆ ಸಮನಾದ ಮಗನೂ ನಿನಗೆ ಆಗುವನು. ಅಲ್ಲದೆ ಅವನು ರಾಜನಾಗುವನು. ಅವನಿಗೆ ಸಕಲ ಜನರೂ ನಮಸ್ಕರಿಸುವರು. ||೫೪||

ಮಹಾಪುಣ್ಯವತಿಯೇ, ನೀನು ಮಗನನ್ನು ಪಡೆದು ಆ ಪತಿಯಾದ ನಾರಾಯಣನೊಡನೆ ವೈಕುಂಠಕ್ಕೆ ಹೋಗಿ ಆ ನಾರಾಯಣನಿಗೆ ಮುಂಚಿನಂತೆಯೇ, ಪ್ರೀತಿಪಾತ್ರಳಾಗಿರುವೆ. ||೫೫||

ನಿನ್ನ ಮಗನು ಏಕವೀರನೆಂಬ ಹೆಸರಿನಿಂದ ಪ್ರಸಿದ್ಧನಾಗುವನು. ಅವನಿಂದ ಈ ಭೂಮಂಡಲದಲ್ಲಿ ಹೈಹಯ ವಂಶವು ದೊಡ್ಡದಾಗಿ ಬೆಳೆಯುವುದು. ||೫೬||

ಆದರೂ ಈ ಕಾರ್ಯಸಿದ್ಧಿಗಾಗಿ ನಾನೊಂದು ಗುಟ್ಟಿನ ಮಾತನ್ನು ಹೇಳುವೆನು, ಕೇಳು. ನೀನು ಮದಿಸಿದ ಮನಸ್ಸುಳ್ಳವಳಾಗಿ ಮುಂದಾಗುವುದನ್ನು ತಿಳಿಯದೆ ನಿನ್ನ ಹೃದಯಾಕಾಶದಲ್ಲಿ ತೋರುವ ಭುವನೇಶ್ವರೀದೇವಿಯನ್ನು ಮರೆತು ಬಿಟ್ಟಿರುವೆ ! ಅದರಿಂದಲೇ ನಿನಗೆ ಈ ರೀತಿಯಾದ ದುಃಖವುಂಟಾಗಿರುವುದು ! ||೫೭||

ಎಲೈ ಸಮುದ್ರಪುತ್ರಿಯಾದ ಲಕ್ಷ್ಮಿಯೇ, ಆ ದೋಷಶಾಂತಿಗಾಗಿ ನಿನ್ನ ಹೃದಯಾಕಾಶದಲ್ಲಿಯೂ ಕಾಣಬರುವ ಆ ಭುವನೇಶ್ವರೀದೇವಿಯನ್ನು ಸರ್ವಾತ್ಮಭಾವದಿಂದ ಶರಣುಹೊಂದು. ||೫೮||

|| ವ್ಯಾಸ ಉವಾಚ ||

**ಅನ್ಯಥಾ ತವ ಚಿತ್ತಂ ತು ಕಥಂ ಗಚ್ಛೇದ್ಧಯೋತ್ತಮೇ ।**
**ಇತಿ ದತ್ವಾ ವರಂ ದೇವ್ಯೈ ಭಗವಾನ್ ಶೈಲಜಾಪತಿಃ ||೫೯||**

**ಅಂತರ್ಧಾನಂ ಗತಃ ಸಾಕ್ಷಾದುಮಯಾ ಸಹಿತಃ ಶಿವಃ ।**
**ಸಾಽಪಿ ತತ್ರೈವ ಚಾರ್ವಂಗೀ ಸಂಸ್ಥಿತಾ ಕಮಲಾಸನಾ ||೬೦||**

**ಧ್ಯಾಯಂತೀ ಚರಣಾಂಭೋಜಂ ದೇವ್ಯಾಃ ಪರಮಶೋಭನಂ ।**
**ದೇವಾಸುರ ಶಿರೋರತ್ನ ನಿಘೃಷ್ಟ ನಖಮಂಡಲಂ ||೬೧||**

**ಪ್ರೇಮಗದ್ಗದಯಾ ವಾಚಾ ತುಷ್ಟಾವ ಚ ಮುಹುರ್ಮುಹುಃ ।**
**ಪ್ರತೀಕ್ಷಮಾಣಾ ಭರ್ತಾರಂ ಹಯರೂಪಧರಂ ಹರಿಂ ||೬೨||**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ ಅಷ್ಟಾದಶೋಽಧ್ಯಾಯಃ.**

---

ಸಚ್ಚಿದಾನಂದಸ್ವರೂಪಿಣಿಯಾದ ಭಗವತಿಯಲ್ಲಿ ನಿನ್ನ ಮನಸ್ಸು ಆಸಕ್ತವಾಗಿದ್ದರೆ ರೇವಂತನು ಏರಿಬಂದ ಕುದುರೆಯ ಮೇಲೆ ನಿನ್ನ ಮನಸ್ಸು ಹೇಗೆ ಹೋಗುತ್ತಿದ್ದಿತು ? ಇದರಿಂದಲೇ ಭಗವತಿಯಲ್ಲಿ ನಿನ್ನ ಮನಸ್ಸು ಇರದೆ ಚಲಿಸಿತ್ತೆಂದು ಅಭಿಪ್ರಾಯವು.

ಹೀಗೆ ಗಿರಿಜಾಪತಿಯಾದ ಮಹಾಜ್ಞಾನಿಯಾದ ಶಿವನು ಲಕ್ಷ್ಮೀದೇವಿಗೆ ವರವನ್ನು ಕೊಟ್ಟು ಪಾರ್ವತಿಯೊಡನೆ ಅಂತರ್ಧಾನನಾದನು.( ಮರೆಯಾದನು) ||೫೯||

ಕಮಲವೇ ಪೀಠವಾಗಿ ಉಳ್ಳ ಆ ಸುಂದರಿಯಾದ ಲಕ್ಷ್ಮೀದೇವಿಯು ಆ ಮಾತನ್ನು ಕೇಳಿ ಅಲ್ಲಿಯೇ ದೇವಾಸುರರೂ ನಮಸ್ಕಾರಮಾಡತಕ್ಕ ಅತ್ಯಂತ ಮಂಗಲಕರವಾದ ದೇವಿಯ ಪಾದಕಮಲವನ್ನು ಧ್ಯಾನಮಾಡುತ್ತಾ ಇದ್ದಳು. ||೬೧||

ಮತ್ತು ಪುನಃ ಪುನಃ ಪ್ರೀತಿಯಿಂದ ಕೂಡಿದ ಗದ್ಗದಧ್ವನಿಯ ಮಾತಿನಿಂದ ದೇವಿಯನ್ನು ಸ್ತೋತ್ರಮಾಡುತ್ತಾ ಕುದುರೆಯ ರೂಪವನ್ನು ಧರಿಸಿದ ತನ್ನ ಪತಿಯಾದ ಹರಿಯು ಬರುವುದನ್ನೇ ನಿರೀಕ್ಷಿಸುತ್ತಿದ್ದಳು. ||೬೨||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ ಹದಿನೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

|| ಏಕೋನವಿಂಶೋಽಧ್ಯಾಯಃ ||

### ಹತ್ತೊಂಬತ್ತನೆಯ ಅಧ್ಯಾಯವು

|| ವ್ಯಾಸ ಉವಾಚ ||

**ತಸ್ಯೈ ದತ್ವಾ ವರಂ ಶಂಭುಃ ಕೈಲಾಸಂ ತ್ವರಿತೋ ಯಯೌ ।**
**ರಮ್ಯಂ ದೇವಗಣೈರ್ಜುಷ್ಟಮಪ್ಸರೋಭಿಶ್ಚ ಮಂಡಿತಂ ॥೧॥**

**ತತ್ರ ಗತ್ವಾ ಚಿತ್ರರೂಪಂ ಗಣಂ ಕಾರ್ಯವಿಶಾರದಂ ।**
**ಪ್ರೇಷಯಾಮಾಸ ವೈಕುಂಠೇ ಲಕ್ಷ್ಮೀಕಾರ್ಯಾರ್ಥಸಿದ್ಧಯೇ ॥೨॥**

|| ಶಿವ ಉವಾಚ ||

**ಚಿತ್ರರೂಪ ಹರಿಂ ಗತ್ವಾ ಬ್ರೂಹಿ ತ್ವಂ ವಚನಾನ್ಮಮ ।**
**ಯಥಾಽಸೌ ದುಃಖಿತಾಂ ಪತ್ನೀಂ ವಿಶೋಕಾಂ ಚ ಕರಿಷ್ಯತಿ ॥೩॥**

---

ಶಿವನು ಲಕ್ಷ್ಮೀದೇವಿಗೆ ಹೀಗೆ ವರವನ್ನು ಕೊಟ್ಟು ದೇವತೆಗಳ ಗುಂಪಿನಿಂದಲೂ ಅಪ್ಸರ ಸ್ತ್ರೀಯರಿಂದಲೂ ಕೂಡಿ ಅಲಂಕೃತವಾಗಿರುವ ಮನೋಹರವಾದ ಕೈಲಾಸಕ್ಕೆ ಬೇಗನೆ ಹಿಂತಿರುಗಿ ಹೋದನು. ||೧||

ಅಲ್ಲಿಗೆ ಹೋಗಿ ಲಕ್ಷ್ಮೀದೇವಿಯ ಕಾರ್ಯವನ್ನು ನೆರವೇರಿಸಿಕೊಂಡು ಬರುವುದಕ್ಕಾಗಿ ಕೆಲಸಮಾಡುವುದರಲ್ಲಿ ಚತುರನಾದ ಚಿತ್ರರೂಪನೆಂಬ ಗಣಮುಖ್ಯನನ್ನು ಕುರಿತು ಹೀಗೆ ಹೇಳಿ ವೈಕುಂಠಕ್ಕೆ ಕಳುಹಿಸಿಕೊಟ್ಟನು. ||೨||

ಶಿವನು ಚಿತ್ರರೂಪನನ್ನು ಕುರಿತು, 'ಎಲೈ ಚಿತ್ರರೂಪನೇ, ನಾನು ಹೇಳುವುದನ್ನು ಕೇಳು. ನೀನು ಹರಿಯ ಸಮೀಪಕ್ಕೆ ಹೋಗಿ ಆ ದೇವನು ವಿಯೋಗ

ಇತ್ಯುಕ್ತಶ್ಚಿತ್ರರೂಪೋಽಥ ನಿರ್ಜಗಾಮ ತ್ವರಾನ್ವಿತಃ ।
ವೈಕುಂಠಂ ಪರಮಂ ಸ್ಥಾನಂ ವೈಷ್ಣವೈಶ್ಚ ಗಣೈರ್ವೃತಂ ॥೪॥

ನಾನಾದ್ರುಮಗಣಾಕೀರ್ಣಂ ವಾಪೀಶತವಿರಾಜಿತಂ ।
ಸಂಜುಷ್ಟಂ ಹಂಸಕಾರಂಡಮಯೂರಶುಕಕೋಕಿಲೈಃ ॥೫॥

ಉಚ್ಚಪ್ರಾಸಾದಸಂಯುಕ್ತಂ ಪತಾಕಾಭಿರಲಂಕೃತಂ ।
ನೃತ್ಯಗೀತಕಲಾಪೂರ್ಣಂ ಮಂದಾರದ್ರುಮಸಂಯುತಂ ॥೬॥

ಬಕುಲಾಶೋಕತಿಲಕಚಂಪಕಾಲಿವಿಮಂಡಿತಂ ।
ಕೂಜಿತೈರ್ವಿಹಗಾನಾಂ ತು ಕರ್ಣಾಹ್ಲಾದಕರೈರ್ಯುತಂ ॥೭॥

---

ದುಃಖವನ್ನು ಹೊಂದಿರುವ ತನ್ನ ಪತ್ನಿಯಾದ ಲಕ್ಷ್ಮೀದೇವಿಯ ದುಃಖವನ್ನು ನಿವಾರಣೆಮಾಡಲು ಪ್ರಯತ್ನಮಾಡುವಂತಹ ಮಾತುಗಳನ್ನು ನಾನು ಹೇಳಿದೆನೆಂದು ಹೇಳು ಎಂದನು. ॥೩॥

ಹೀಗೆ ಹೇಳಿದ ಶಿವನ ಮಾತನ್ನು ಕೇಳಿದ ಚಿತ್ರರೂಪನು ವಿಷ್ಣುಭಕ್ತರಿಂದಲೂ ವಿಷ್ಣುಗಣಗಳಿಂದಲೂ ತುಂಬಿದ ಶ್ರೇಷ್ಠವಾದ ಪ್ರದೇಶವೂ ಆದ ವೈಕುಂಠಲೋಕಕ್ಕೆ ಬೇಗನೆ ಪ್ರಯಾಣಮಾಡಿದನು. ॥೪॥

ಆ ವೈಕುಂಠಲೋಕವು ಬಗೆ ಬಗೆಯ ಮರಗಳ ಗುಂಪಿನಿಂದ ತುಂಬಿದ್ದಿತು. ಅನೇಕ ಸರೋವರಗಳು ಅಲ್ಲಿದ್ದುವು. ಅವುಗಳಲ್ಲಿ ಹಂಸ ಚಕ್ರವಾಕ ನವಿಲು ಗಿಣಿ ಕೋಗಿಲೆ ಮುಂತಾದ ಹಕ್ಕಿಗಳು ವಾಸವಾಗಿ ವಿಹರಿಸುತ್ತಿದ್ದುವು ಎತ್ತರವಾದ ಉಪ್ಪರಿಗೆಯ ಮನೆಗಳೂ ಬಾವುಟಗಳಿಂದ ಅಲಂಕಾರವಾಗಿದ್ದುವು. ಅಲ್ಲದೆ ಆ ಲೋಕವು ಮಂದಾರವೆಂಬ ಕಲ್ಪವೃಕ್ಷದಿಂದಲೂ ನೃತ್ಯಗೀತಕಲೆಗಳಿಂದಲೂ ಕೂಡಿ ರಮ್ಯವಾಗಿದ್ದಿತು. ॥೫-೬॥

ಮತ್ತು ಸಗಡೆ ಹೂವಿನ ಮರ, ಅಶೋಕವೃಕ್ಷ, ತಿಲಕದಮರ, ಸಂಪಿಗೆಯ ಮರ, ಇವುಗಳಿಂದ ಅಲಂಕಾರವಾಗಿರುತ್ತಾ, ಕಿವಿಗಿಂಪಾದ ಸ್ವರವುಳ್ಳ ಹಕ್ಕಿಗಳ ಧ್ವನಿಯಿಂದಲೂ ಕೂಡಿ ಮನೋಹರವಾಗಿದ್ದಿತು! ॥೭॥

ಸಂವೀಕ್ಷ್ಯ ಭವನಂ ವಿಷ್ಣೋರ್ದ್ವಾಃಸ್ಥೌ ಪ್ರಾಹ ಪ್ರಣಮ್ಯ ಚ ।
ಜಯವಿಜಯನಾಮಾನೌ ವೇತ್ರಪಾಣೀ ಸ್ಥಿತಾವುಭೌ ॥೮॥

|| ಚಿತ್ರರೂಪ ಉವಾಚ ||

ಭೋ ನಿವೇದಯತಂ ಶೀಘ್ರಂ ಹರಯೇ ಪರಮಾತ್ಮನೇ ।
ದೂತಂ ಪ್ರಾಪ್ತಂ ಹರಸ್ಯಾತ್ರ ಪ್ರೇರಿತಂ ಶೂಲಪಾಣಿನಾ ॥೯॥

ತಚ್ಛ್ರುತ್ವಾ ವಚನಂ ತಸ್ಯ ಜಯಃ ಪರಮಬುದ್ಧಿಮಾನ್ ।
ಗತ್ವಾ ಹರಿಂ ಪ್ರಣಮ್ಯಾಹ ಕೃತಾಂಜಲಿಪುಟಃ ಪುರಃ ॥೧೦॥

ದೇವದೇವ ರಮಾಕಾಂತ ಕರುಣಾಕರ ಕೇಶವ ।
ದ್ವಾರಿ ತಿಷ್ಠತಿ ದೂತೋಽತ್ರ ಶಂಕರಸ್ಯ ಸಮಾಗತಃ ॥೧೧॥

ಆಜ್ಞಾಪಯ ಪ್ರವೇಷ್ಟವ್ಯೋ ನ ವೇತಿ ಗರುಡಧ್ವಜ ।
ಚಿತ್ರರೂಪಧರೋಽಸ್ತ್ಯಸ್ತಿ ನ ಜಾನೇ ಕಾರ್ಯಗೌರವಂ ॥೧೨॥

---

ಚಿತ್ರರೂಪನು ವಿಷ್ಣುವಿನ ಮನೆಯನ್ನು ನೋಡಿ, ಅದರ ಬಾಗಿಲಿನಲ್ಲಿ ಕೈಯಲ್ಲಿ ಬೆತ್ತವನ್ನು ಹಿಡಿದು ನಿಂತಿದ್ದ ಜಯವಿಜಯರೆಂಬ ಇಬ್ಬರು ದ್ವಾರಪಾಲಕರನ್ನು ಕಂಡು, ಅವರಿಗೆ ನಮಸ್ಕರಿಸಿ ಹೀಗೆ ಹೇಳಿದನು. ||೮||

ಎಲೈ ದ್ವಾರಪಾಲಕರೇ, ಶೂಲಪಾಣಿಯಾದ ಶಿವನು ಕಳುಹಿಸಿಕೊಟ್ಟಿರುವ ದೂತನು ಇಲ್ಲಿಗೆ ಬಂದಿರುವನೆಂದು, ಬೇಗನೆ ಪರಮಾತ್ಮನಾದ ಹರಿಗೆ ವಿಜ್ಞಾಪನೆ ಮಾಡಿ. ಎಂದನು. ||೯||

ಅವನ ಮಾತನ್ನು ಕೇಳಿ ಮಹಾಬುದ್ಧಿಶಾಲಿಯಾದ ಜಯನು ಹರಿಯ ಸಮೀಪಕ್ಕೆ ಹೋಗಿ ನಮಸ್ಕರಿಸಿ ಕೈಜೋಡಿಸಿಕೊಂಡು ಇದುರಿಗೆ ನಿಂತು, ಹೀಗೆ ಹೇಳಿದನು. ||೧೦||

ದೇವತೆಗಳಿಗೆಲ್ಲ ದೇವನಾದ ಲಕ್ಷ್ಮೀಪತಿಯಾದ ಕರುಣೆಯುಗಣಿಯಾದ ಕೇಶವನೇ, ಶಿವನ ಕಡೆಯಿಂದ ಬಂದ ದೂತನು ಈ ಬಾಗಿಲಿನಲ್ಲಿ ನಿಂತಿರುವನು. ಅವನು ವಿಚಿತ್ರವಾದ ರೂಪವನ್ನು ಧರಿಸಿರುವನು! ಅವನ ಕೆಲಸವೇನೋ ನಮಗೆ ತಿಳಿಯದು. ಅವನನ್ನು ಒಳಗೆ ಬಿಡಬೇಕೋ ಬೇಡವೋ ನಮಗೆ ಅಪ್ಪಣೆ ಮಾಡಬೇಕು ಎಂದು ಅರಿಕೆಮಾಡಿದನು. ||೧೧-೧೨||

ಇತ್ಯಾಕರ್ಣ್ಯ ಹರಿಃ ಪ್ರಾಹ ಜಯಂ ಪ್ರಜ್ಞಾತಕಾರಣಃ ।
ಪ್ರವೇಶಯಾತ್ರ ರುದ್ರಸ್ಯ ಭೃತ್ಯಂ ಸಮಯಸಂಸ್ಥಿತಂ ॥೧೩॥

ಇತ್ಯಾಕರ್ಣ್ಯ ಜಯಸ್ತೂರ್ಣಂ ಗತ್ವಾ ತಂ ಪರಮಾದ್ಭುತಂ ।
ಏಹೀತ್ಯಾಕಾರಯಾಮಾಸ ಜಯಃ ಶಂಕರಸೇವಕಂ ॥೧೪॥

ಪ್ರವೇಶಿತೋ ಜಯೇನಾಽಥ ಚಿತ್ರರೂಪಸ್ತಥಾಕೃತಿಃ ।
ಪ್ರಣಮ್ಯ ದಂಡವದ್ವಿಷ್ಣುಂ ಕೃತಾಂಜಲಿಪುಟಃ ಸ್ಥಿತಃ ॥೧೫॥

ದೃಷ್ಟ್ವಾ ತಂ ವಿಸ್ಮಯಂ ಪ್ರಾಪ ಭಗವಾನ್ ಗರುಡಧ್ವಜಃ ।
ಚಿತ್ರರೂಪಧರಂ ಶಂಭೋಃ ಸೇವಕಂ ವಿನಯಾನ್ವಿತಂ ॥೧೬॥

ಪಪ್ರಚ್ಛ ತಂ ಸ್ಮಿತಂ ಕೃತ್ವಾ ಚಿತ್ರರೂಪಂ ರಮಾಪತಿಃ ।
ಕುಶಲಂ ದೇವದೇವಸ್ಯ ಸಕುಟುಂಬಸ್ಯ ಚಾಽನಘ ॥೧೭॥

---

ಆ ಹರಿಯು ಸರ್ವಜ್ಞನಾದುದರಿಂದ ಚಿತ್ರರೂಪನು ಬಂದ ಕಾರಣವನ್ನು ತಿಳಿದು, ಜಯನು ಹೇಳಿದ ಮಾತನ್ನು ಕೇಳಿ, ಸಮಯವನ್ನು ನಿರೀಕ್ಷಿಸುತ್ತಿರುವ ಶಿವನ ಭೃತ್ಯನನ್ನು ಒಳಗೆ ಕರೆದುಕೊಂಡು ಬಾರೆಂದನು. ||೧೩||

ಹರಿಯ ಮಾತನ್ನು ಕೇಳಿದ ಆ ಜಯನೆಂಬ ದ್ವಾರಪಾಲಕನು ಬೇಗನೆ ಹೋಗಿ ಶಿವನ ದೂತನೂ ಆಶ್ಚರ್ಯಕರವಾದ ರೂಪವುಳ್ಳವನೂ ಆದ ಅವನನ್ನು ಬಾರೆಂಬುದಾಗಿ ಕರೆದನು. ||೧೪||

ಜಯನು ಅವನನ್ನು ಒಳಕ್ಕೆ ಕರೆದುಕೊಂಡು ಹೋಗುತ್ತಲು, ಹೆಸರಿಗೆ ತಕ್ಕಂತೆ ವಿಚಿತ್ರವಾಗಿರುವ ಆಕಾರದಿಂದ ಕೂಡಿದ ಆ ಚಿತ್ರರೂಪನು ವಿಷ್ಣುವಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿ, ಕೈಜೋಡಿಸಿಕೊಂಡು ನಿಂತುಕೊಂಡನು.||೧೫||

ಮಹಾಮಹಿಮನಾದ ಗರುಡಧ್ವಜನು ವಿಚಿತ್ರವಾದ ಆಕಾರವನ್ನು ಧರಿಸಿದ್ದ ವಿನಯದಿಂದ ಕೂಡಿದ್ದ ಆ ಶಿವನ ದೂತನನ್ನು ನೋಡಿ ಆಶ್ಚರ್ಯವನ್ನು ಹೊಂದಿದನು. ||೧೬||

ಲಕ್ಷ್ಮೀಪತಿಯಾದ ನಾರಾಯಣನು ನಗುತ್ತಾ ಚಿತ್ರರೂಪನನ್ನು ಕುರಿತು ಹೀಗೆ ಪ್ರಶ್ನೆಮಾಡಿದನು. ಎಲೈ ಪಾಪರಹಿತನಾದ ಚಿತ್ರರೂಪನೇ, ದೇವದೇವನಾದ ಶಿವನು ಕುಟುಂಬಸಹಿತನಾಗಿ ಕುಶಲಿಯಾಗಿರುವನೇ? ನೀನು ಯಾವ ಕಾರಣದಿಂದ

ಕಸ್ಮಾತ್ತ್ವಂ ಪ್ರೇಷಿತೋಽಸ್ಯತ್ರ ಬ್ರೂಹಿ ಕಾರ್ಯಂ ಹರಸ್ಯ ಕಿಂ ।
ಅಥವಾ ದೇವತಾನಾಂ ಚ ಕಿಂಚಿತ್ಕಾರ್ಯಂ ಸಮುತ್ಥಿತಂ ॥೧೮॥

॥ ದೂತ ಉವಾಚ ॥

ಕಿಮಜ್ಞಾತಂ ತವಾಸ್ತೀಹ ಸಂಸಾರೇ ಗರುಡಧ್ವಜ ।
ವರ್ತಮಾನಂ ತ್ರಿಕಾಲಜ್ಞ ಯದಹಂ ಪ್ರಬ್ರವೀಮಿ ವೈ ॥೧೯॥

ಪ್ರೇಷಿತೋಽಸ್ಮಿ ಭವೇನಾತ್ರ ವಿಜ್ಞಪ್ತುಂ ತ್ವಾಂ ಜನಾರ್ದನ ।
ಹರಸ್ಯ ವಚನಾದ್ವಾಕ್ಯಂ ಪ್ರಬ್ರವೀಮಿ ತ್ವಯಿ ಪ್ರಭೋ ॥೨೦॥

ತೇನೋಕ್ತಮೇತದ್ದೇವೇಶ ಭಾರ್ಯಾ ತೇ ಕಮಲಾಲಯಾ ।
ತಪಸ್ತಪತಿ ಕಾಲಿಂದೀ ತಮಸಾ ಸಂಗಮೇ ವಿಭೋ ॥೨೧॥

ಹಯಿರೂಪಧರಾ ದೇವೀ ಸರ್ವಾರ್ಥಸಿದ್ಧಿದಾಯಿನೀ ।
ಧ್ಯಾತುಂ ಯೋಗ್ಯಾಽಮರಗಣೈರ್ಮಾನವೈರ್ಯಕ್ಷಕಿನ್ನರೈಃ ॥೨೨॥

---

ಇಲ್ಲಿಗೆ ಬಂದಿರುವೆ ? ಶಿವನ ಕೆಲಸವೇನಾದರೂ ಇರುವುದೇ ? ಅಥವಾ ದೇವತೆಗಳ ಕಾರ್ಯವೇನಾದರೂ ಆಗಬೇಕಾಗಿ ಇರುವುದೇ ? ಹೇಳು. ಎಂದನು. ॥೧೭-೧೮॥

ಆ ದೂತನು ಓ ಗರುಡಧ್ವಜನಾದ ವಿಷ್ಣುವೇ, ಈ ಜಗತ್ತಿನಲ್ಲಿ ನಿನಗೆ ತಿಳಿಯದುದು ಏನಿರುವುದು ? ಭೂತಭವಿಷ್ಯದ್ವರ್ತಮಾನವೆಂಬ ಮೂರು ಕಾಲಗಳಲ್ಲಿಯೂ ನಡೆವ ಕಾರ್ಯಗಳನ್ನು ಬಲ್ಲ ನಿನಗೆ ನಾನು ವರ್ತಮಾನಕಾಲದ ವಿಷಯವನ್ನೇನನ್ನು ಹೇಳಲಿ? ಓ ಜನಾರ್ದನನೇ, ನಿನಗೆ ವಿಜ್ಞಾಪನೆಮಾಡಬೇಕೆಂದು ಶಿವನು ನನ್ನನ್ನು ಕಳುಹಿಸಿರುವನು. ಆದುದರಿಂದ ಆ ಶಿವನ ಮಾತನ್ನು ನಿನ್ನಲ್ಲಿ ವಿಜ್ಞಾಪಿಸಿಕೊಳ್ಳುವೆನು. ॥೧೯-೨೦॥

ದೇವತೆಗಳಿಗೆ ಒಡೆಯನಾದ ಓ ವಿಷ್ಣುವೇ, ಆ ಶಿವನು ಹೇಳಿದ ಮಾತು ಇದು :—' ನಿನ್ನ ಪತ್ನಿಯಾದ ಕಮಲವಾಸಿನಿಯಾದ ಲಕ್ಷ್ಮೀದೇವಿಯು ಹೆಣ್ಣು ಕುದುರೆಯ ರೂಪವನ್ನು ಧರಿಸಿ ಯಮುನಾ ಮತ್ತು ತಮಸಾ ನದಿಯ ಸಂಗಮಸ್ಥಲದಲ್ಲಿ ತಪಸ್ಸನ್ನು ಮಾಡುತ್ತಿರುವಳು ! ಓ ಸರ್ವವ್ಯಾಪಿಯಾದ ನಾರಾಯಣನೇ, ಆ ಲಕ್ಷ್ಮೀದೇವಿಯು ಸಮಸ್ತರಿಗೂ ಸಂಪತ್ತನ್ನು ಕೊಡತಕ್ಕವಳು. ದೇವತೆಗಳೂ ಮನುಷ್ಯರೂ ಯಕ್ಷರೂ ಕಿನ್ನರರೂ ಆ ದೇವಿಯನ್ನು ಧ್ಯಾನಮಾಡುತ್ತಿರುವರು. ॥೨೧-೨೨॥

ವಿನಾ ತಯಾ ನರಃ ಕೋಽಪಿ ಸುಖಭಾಗೀ ಭವೇದ್ಭುವಿ ।
ತಾಂ ತ್ಯಕ್ತ್ವಾ ಪುಂಡರೀಕಾಕ್ಷ ಪ್ರಾಪ್ನೋಷಿ ಕಿಂ ಸುಖಂ ಹರೇ ॥೨೩॥

ದುರ್ಬಲೋಽಪಿ ಸ್ತ್ರಿಯಂ ಪಾತಿ ನಿರ್ಧನೋಽಪಿ ಜಗತ್ಪತೇ ।
ವಿನಾಽಪರಾಧಂ ಚ ವಿಭೋ ಕಿಂ ತ್ಯಕ್ತಾ ಜಗದೀಶ್ವರೀ ॥೨೪॥

ದುಃಖಂ ಪ್ರಾಪ್ನೋತಿ ಸಂಸಾರೇ ಯಸ್ಯ ಭಾರ್ಯಾ ಜಗದ್ಗುರೋ ।
ಧಿಕ್ತಸ್ಯ ಜೀವಿತಂ ಲೋಕೇ ನಿಂದಿತಂ ತ್ವರಿಮಂಡಲೇ ॥೨೫॥

ಸಕಾಮಾ ರಿಪವಸ್ತೇಽದ್ಯ ದೃಷ್ಟ್ವಾ ತಾಂ ದುಃಖಿತಾಂ ಭೃಶಂ ।
ತ್ವಾಂ ವಿಯುಕ್ತಂ ಚ ರಮಯಾ ಹಸಿಷ್ಯಂತಿ ದಿವಾನಿಶಂ ॥೨೬॥

ರಮಾಂ ರಮಯ ದೇವೇಶ ತ್ವದುತ್ಸಂಗಗತಾಂ ಕುರು ।
ಸರ್ವಲಕ್ಷಣಸಂಪನ್ನಾಂ ಸುಶೀಲಾಂ ಚ ಸುರೂಪಿಣೀಂ ॥೨೭॥

---

ಆ ಲಕ್ಷ್ಮೀದೇವಿಯ ಅನುಗ್ರಹವಿಲ್ಲದೆ ಭೂಮಿಯಲ್ಲಿ ಯಾವ ಮನುಷ್ಯನೂ ಸುಖವನ್ನು ಪಡೆಯಲಾರನು. ಇಂತಹ ದೇವಿಯನ್ನು ಬಿಟ್ಟು ಕಮಲದಂತೆ ಕಣ್ಣುಗಳುಳ್ಳ ನೀನು ಯಾವ ಸುಖವನ್ನು ಪಡೆಯುವೆ? ॥೨೩॥

ಜಗತ್ತಿಗೊಡೆಯನಾದ ಓ ಸ್ವಾಮಿಯೇ, ಹಣವಿಲ್ಲದವನಾಗಲಿ, ಅಲ್ಪಬಲವುಳ್ಳವನಾಗಲಿ, ತನ್ನ ಪತ್ನಿಯನ್ನು ಕಾಪಾಡುವನು. ಸರ್ವವ್ಯಾಪಿಯಾದ ನೀನು ಯಾವ ತಪ್ಪೂ ಇಲ್ಲದಿರುವ ಲೋಕಕ್ಕೆಲ್ಲ ಒಡೆಯಳಾದ ಆ ಲಕ್ಷ್ಮೀದೇವಿಯನ್ನು ಏಕೆ ಬಿಟ್ಟಿರುತ್ತೀಯೆ? ॥೨೪॥

ಲೋಕಕ್ಕೆಲ್ಲ ಗುರುವಾದ ಓ ವಿಷ್ಣುವೇ, ಪ್ರಪಂಚದಲ್ಲಿ ಯಾವನ ಪತ್ನಿಯು ದುಃಖವನ್ನು ಹೊಂದಿರುವಳೋ ಅವನ ಬದುಕು ವ್ಯರ್ಥವಾಗುವುದು. ಶತ್ರುಗಳೂ ಅವನನ್ನು ನಿಂದಿಸುವರು. ವಿಶೇಷವಾಗಿ ದುಃಖವನ್ನು ಹೊಂದಿದ ಆ ಲಕ್ಷ್ಮೀದೇವಿಯನ್ನು ನೋಡಿ ನಿನ್ನ ಶತ್ರುಗಳು ಈಗ ಸಂತೋಷಪಡುತ್ತಿರುವರು! ಮತ್ತು ಲಕ್ಷ್ಮಿಯಿಂದ ಬಿಟ್ಟಿರುವ ನಿನ್ನನ್ನು ಹಗಲೂ ರಾತ್ರಿಯೂ ಹಾಸ್ಯಮಾಡುತ್ತಲೂ ಇರುವರು. ॥೨೫-೨೬॥

ದೇವತೆಗಳಿಗೆ ಅಧಿಪತಿಯಾದ ಓ ದೇವನೇ, ಲಕ್ಷ್ಮೀದೇವಿಯನ್ನು ಸಂತೋಷಪಡಿಸಿ ಸಮಸ್ತ ಲಕ್ಷಣಗಳಿಂದಲೂ ಕೂಡಿದ ಒಳ್ಳೆಯ ನಡತೆಯುಳ್ಳ ಸುಂದರಿಯಾದ

ಸುಖಿತೋ ಭವ ತಾಂ ಪ್ರಾಪ್ಯ ವಲ್ಲಭಾಂ ಚಾರುಹಾಸಿನೀಂ ।
ಕಾಂತಾವಿರಹಜಂ ದುಃಖಂ ಸ್ಮರಾಮ್ಯಹಮನಾತುರಃ ॥೨೮॥

ಮಮ ಭಾರ್ಯಾ ಮೃತಾ ವಿಷ್ಣೋ ದಕ್ಷಯಜ್ಞೇ ಸತೀ ಯದಾ ।
ತದಾಽಹಂ ದುಃಸಹಂ ದುಃಖಂ ಭುಕ್ತವಾನಂಬುಜೇಕ್ಷಣ ॥೨೯॥

ಸಂಸಾರೇಽಸ್ಮಿನ್ನರಃ ಕೋಽಪಿ ಮಾಭೂನ್ಮತ್ಸದೃಶೋಽಪರಃ ।
ಮನಸಾಽಕರವಂ ಶೋಕಂ ತಸ್ಯಾ ವಿರಹಪೀಡಿತಃ ॥೩೦॥

ಕಾಲೇನ ಮಹತಾ ಪ್ರಾಪ್ತಾ ಮಯಾ ಗಿರಿಸುತಾ ಪುನಃ ।
ತಪಸ್ತಪ್ತ್ವಾಽತಿದುಃಸಾಧ್ಯಂ ಯಾ ದಗ್ಧಾ ತು ರುಷಾಽಧ್ವರೇ ॥೩೧॥

ಹರೇ ಕಿಂ ಸುಖಮಾಪನ್ನಂ ತ್ವಯಾ ಸಂತ್ಯಜ್ಯ ಕಾಮಿನೀಂ ।
ಏಕಾಕೀ ತಿಷ್ಠತಾ ಕಾಲಂ ಸಹಸ್ರವತ್ಸರಾತ್ಮಕಂ ॥೩೨॥

---

ನಗುಮುಖವುಳ್ಳ ಪ್ರೀತಿಪಾತ್ರಳಾದ ಆ ದೇವಿಯನ್ನು ಪಡೆದು ಅವಳನ್ನು ನಿನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಸುಖವನ್ನನುಭವಿಸು. ॥೨೭॥

ನಾನೂ ಈಗ ದುಃಖವಿಲ್ಲದವನಾದರೂ ಪತ್ನಿಯನ್ನಗಲಿದ್ದುದರಿಂದ ಉಂಟಾಗಿದ್ದ ದುಃಖವನ್ನು ಜ್ಞಾಪಿಸಿಕೊಳ್ಳುತ್ತಿರುವೆನು! ಅಲ್ಲದೆ ಕಮಲಾಕ್ಷನಾದ ಓ ವಿಷ್ಣುವೇ, ನನ್ನ ಪತ್ನಿಯಾಗಿದ್ದ ಸತೀದೇವಿಯು ದಕ್ಷನ ಯಜ್ಞದಲ್ಲಿ ಸತ್ತಾಗ ನಾನು ಸಹಿಸಲಾರದ ದುಃಖವನ್ನು ಅನುಭವಿಸಿದೆನು. ॥೨೮-೨೯॥

ಈ ಸಂಸಾರದಲ್ಲಿ ಯಾವ ಒಬ್ಬ ಮನುಷ್ಯನೂ ನನ್ನ ಆಗಿನ ದುಃಖಕ್ಕೆ ಸಮಾನವಾದ ದುಃಖದಲ್ಲಿ ಭಾಗಿಯಾಗದಿರಲಿ! ನಾನು ಆ ಸತೀದೇವಿಯ ವಿರಹ ಬಾಧೆಯಿಂದ ಮನಸ್ಸಿನಲ್ಲಿಯೇ ದುಃಖಪಟ್ಟೆನು. ॥೩೦॥

ಆ ದಕ್ಷನು ಮಾಡಿದ ಯಜ್ಞದಲ್ಲಿ ಕೋಪದಿಂದ ಸುಟ್ಟುಹೋದ ಸತೀದೇವಿಯನ್ನು, ಕಷ್ಟಸಾಧ್ಯವಾದ ತಪಸ್ಸನ್ನು ಮಾಡಿ ಬಹಳ ಕಾಲದಮೇಲೆ ಪುನಃ ಹಿಮವಂತನ ಮಗಳಾಗಿ ಹುಟ್ಟಿದ ಅವಳನ್ನು, ಪಡೆದೆನು! ॥೩೧॥

ಓ ಹರಿಯೇ, ಒಂದು ಸಾವಿರ ವರ್ಷದಿಂದಲೂ ಲಕ್ಷ್ಮೀದೇವಿಯನ್ನು ಬಿಟ್ಟು ನೀನೊಬ್ಬನೇ ಇರುತ್ತಾ ಯಾವ ಸುಖವನ್ನನುಭವಿಸಿದ? ॥೩೨॥

**ಗತ್ವಾಽಶ್ವಾಸ್ಯ ಮಹಾಭಾಗಾಂ ಸಮಾನಯ ನಿಜಾಲಯಂ ।**
**ಮಾಭೂತ್ಕೋಽಪೀಹ ಸಂಸಾರೇ ವಿಮುಕ್ತೋ ರಮಯಾ ತಯಾ ॥೩೩॥**

**ಕೃತ್ವಾ ತುರಗರೂಪಂ ತ್ವಂ ಭಜತಾತ್ಕಮಲಾಲಯಾಂ ।**
**ಉತ್ಪಾದ್ಯ ಪುತ್ರಮಾಯುಷ್ಮಂ ಸ್ತ್ವಮಾನಯ ಶುಚಿಸ್ಮಿತಾಂ ॥೩೪॥**

॥ ವ್ಯಾಸ ಉವಾಚ ॥

**ಹರಿರಾಕರ್ಣ್ಯ ತದ್ವಾಕ್ಯಂ ಚಿತ್ರರೂಪಸ್ಯ ಭಾರತ ।**
**ತಥೇತ್ಯುಕ್ತ್ವಾ ತು ತಂ ದೂತಂ ಪ್ರೇಷಯಾಮಾಸ ಶಂಕರಂ ॥೩೫॥**

**ಗತೇ ದೂತೇಽಥ ಭಗವಾನ್ವೈಕುಂಠಾತ್ಕಾಮಸಂಯುತಃ ।**
**ಜಗಾಮ ಧೃತ್ವಾ ತತ್ರಾಽಽಶು ವಾಜಿರೂಪಂ ಮನೋಹರಂ ॥೩೬॥**

---

ಆ ಲಕ್ಷ್ಮೀದೇವಿಯನ್ನು ಬಿಟ್ಟು ನಿನ್ನ ಈ ಸಂಸಾರದಲ್ಲಿ ನೀನು ಕೋಪವುಳ್ಳವನಾಗಬೇಡ. ನೀನೇ ಹೋಗಿ ಆ ಮಹಾಮಹಿಮಳಾದ ಲಕ್ಷ್ಮೀದೇವಿಯನ್ನು ಸಮಾಧಾನಪಡಿಸಿ ನಿನ್ನ ಮನೆಗೆ ಕರೆದುಕೊಂಡು ಬಾ. ಅಲ್ಲದೆ ಇಹಲೋಕದ ಸಂಸಾರದಲ್ಲಿ ಯಾರೂ ಲಕ್ಷ್ಮೀದೇವಿಯ ಅನುಗ್ರಹವಿಲ್ಲದೆ ದುಃಖಿಗಳಾಗದೆ ಇರಲಿ! ॥೩೩॥

ನೀನೂ ಕುದುರೆಯ ರೂಪವನ್ನು ಪಡೆದು ಕುದುರೆಯ ರೂಪದಲ್ಲಿರುವ ಆ ಲಕ್ಷ್ಮೀದೇವಿಯನ್ನು ಸೇರು. ಮತ್ತು ಆಯುಷ್ಮಂತನೇ, ನೀನು ಆ ಲಕ್ಷ್ಮೀದೇವಿಯಲ್ಲಿ ಪುತ್ರನನ್ನೂ ಪಡೆದಮೇಲೆ, ನಗುಮುಖದಿಂದ ಕೂಡಿದ ಆ ದೇವಿಯನ್ನು ಕರೆದುಕೊಂಡು ಬಾ. ॥೩೪॥

ವ್ಯಾಸಮುನಿಯು ಹೇಳಿದನು---ಎಲೈ ಜನಮೇಜಯನೇ, ಕೇಳು. ಹರಿಯು ಆ ಚಿತ್ರರೂಪನು ಹೇಳಿದ ಆ ಮಾತನ್ನು ಕೇಳಿ, ಹಾಗೆಯೇ ಆಗಲೆಂದು ಹೇಳಿ, ಆ ದೂತನನ್ನು ಶಿವನ ಸಮೀಪಕ್ಕೆ ಕಳುಹಿಸಿಕೊಟ್ಟನು. ॥೩೫॥

ಶಿವನ ದೂತನು ಹೊರಟು ಹೋಗುತ್ತಲು ಮಹಾತ್ಮನಾದ ಹರಿಯು ಅಶ್ವರೂಪದಲ್ಲಿದ್ದ ಆ ಲಕ್ಷ್ಮೀದೇವಿಯಲ್ಲಿ ಪ್ರೀತಿಯುಳ್ಳವನಾಗಿ, ಮನೋಹರವಾದ ಕುದುರೆಯ ರೂಪವನ್ನು ಧರಿಸಿ ಬೇಗನೆ ಲಕ್ಷ್ಮಿಯು ತಪಸ್ಸನ್ನು ಮಾಡುತ್ತಿದ್ದ ಸ್ಥಳಕ್ಕೆ ಹೋದನು. ॥೩೬॥

ಯತ್ರ ಸಾ ವಡವಾರೂಪಂ ಕೃತ್ವಾ ತಪಸಿ ಸಿಂಧುಜಾ ।
ವಿಷ್ಣುಸ್ತಂ ದೇಶಮಾಸಾದ್ಯ ತಾಮಪಶ್ಯದ್ಧಯಿಾಂ ಸ್ಥಿತಾಂ ॥೩೭॥

ಸಾಽಪಿತಂ ವೀಕ್ಷ್ಯ ಗೋವಿಂದಂ ಹಯರೂಪಧರಂ ಪತಿಂ ।
ಜ್ಞಾತ್ವಾ ವೀಕ್ಷ್ಯ ಸ್ಥಿತಾ ಸಾಧ್ವೀ ವಿಸ್ಮಿತಾ ಸಾಶ್ರುಲೋಚನಾ ॥೩೮॥

ತಯೋಸ್ತು ಸಂಗಮಸ್ತತ್ರ ಪ್ರವೃತ್ತೋ ಮನ್ಮಥಾರ್ತಯೋಃ ।
ಕಾಲಿಂದೀತಮಸಾಸಂಗೇ ಪಾವನೇ ಲೋಕವಿಶ್ರುತೇ ॥೩೯॥

ಸಗರ್ಭಾ ಸಾ ತದಾ ಜಾತಾ ವಡವಾ ಹರಿವಲ್ಲಭಾ ।
ಸುಷುವೇ ಸುಂದರಂ ಬಾಲಂ ತತ್ರೈವ ಸುಗುಣೋತ್ತರಂ ॥೪೦॥

ತಾಮಾಹ ಭಗವಾನ್ವಾಕ್ಯಂ ಪ್ರಹಸ್ಯ ಸಮುಯಾಶ್ರಿತಂ ।
ತ್ಯಜಾದ್ಯ ವಾಡವಂ ದೇಹಂ ಪೂರ್ವದೇಹಾ ಭವಾಧುನಾ ॥೪೧॥

ಗಮಿಷ್ಯಾವಃ ಸ್ವವೈಕುಂಠಮಾವಾಂ ಕೃತ್ವಾ ನಿಜಂ ವಪುಃ ।
ತಿಷ್ಠತ್ವತ್ರ ಕುಮಾರೋಽಯಂ ತ್ವಯಾ ಜಾತಃ ಸುಲೋಚನೇ ॥೪೨॥

---

ವಿಷ್ಣುವೂ ಕುದುರೆಯ ರೂಪವನ್ನು ಧರಿಸಿ ಲಕ್ಷ್ಮಿಯು ಇದ್ದ ಸ್ಥಳಕ್ಕೆ ಹೋಗಿ ಆಕೆಯನ್ನು ನೋಡಿದನು. ||೩೭||

ಆ ಲಕ್ಷ್ಮಿಯೂ ಕೂಡ ಕುದುರೆಯ ರೂಪವನ್ನು ಧರಿಸಿ ಬಂದ ಪತಿಯನ್ನು ನೋಡಿ ಗುರುತಿಸಿ ತಿಳಿದು ಆಶ್ಚರ್ಯದಿಂದ ಕಣ್ಣಿನಲ್ಲಿ ಪಶ್ಚಾತ್ತಾಪ ಮತ್ತು ಆನಂದದ ನೀರನ್ನು ಸುರಿಸುತ್ತಾ ನಿಂತಿದ್ದಳು. ||೩೮||

ಕುದುರೆಯ ರೂಪವನ್ನು ಧರಿಸಿದ್ದ ಕಾಮಾಸಕ್ತರಾದ ಆ ಲಕ್ಷ್ಮೀನಾರಾಯಣರಿಗೆ ಆ ಪ್ರಸಿದ್ಧವಾದ ಕಾಲಿಂದೀ ತಮಸಾ ನದಿಗಳ ಸಂಗಮಸ್ಥಳದಲ್ಲಿ ಸಂಗಮವುಂಟಾಯಿತು. ಆಗಲೇ ಲಕ್ಷ್ಮಿಯು ಗರ್ಭವನ್ನು ಧರಿಸಿ ಅಲ್ಲಿಯೇ ಸುಂದರನಾದ ಮತ್ತು ಗುಣವಂತನಾದ ಬಾಲಕನನ್ನು ಹೆತ್ತಳು. ||೩೯-೪೦||

ಭಗವಂತನಾದ ಹರಿಯು ನಗುತ್ತಾ ಆ ಲಕ್ಷ್ಮಿಯನ್ನು ಕುರಿತು ಆ ಸಮಯಕ್ಕೆ ತಕ್ಕ ಮಾತನ್ನಾಡಿದನು. ಎಲೈ ಸುಂದರವಾದ ಕಣ್ಣುಗಳುಳ್ಳ ಲಕ್ಷ್ಮಿಯೇ, ನಿನ್ನ ಕುದುರೆಯ ರೂಪವನ್ನು ತ್ಯಜಿಸು. ಈಗಲೇ ಪೂರ್ವದಂತೆಯೇ ನಿನ್ನ ದೇವ ಶರೀರವನ್ನು ಹೊಂದು. ನಾವಿಬ್ಬರೂ ಆ ದೇವಶರೀರದಿಂದ ಕೂಡಿ ನಮ್ಮ ವೈಕುಂಠ

|| ಲಕ್ಷ್ಮೀರುವಾಚ ||

ಸ್ವದೇಹಸಂಭವಂ ಪುತ್ರಂ ಕಥಂ ಹಿತ್ವಾ ವ್ರಜಾಮ್ಯಹಂ ।
ಸ್ನೇಹಃ ಸುದುಸ್ತ್ಯಜಃ ಕಾಮಂ ಸ್ವಾತ್ಮಜಸ್ಯ ಸುರರ್ಷಭ ||೪೩||

ಕಾ ಗತಿಃ ಸ್ಯಾದನೇಯಾತ್ಮನ್ಬಾಲಸ್ಯಾಸ್ಯ ನದೀತಟೇ ।
ಅನಾಥಸ್ಯಾಸಮರ್ಥಸ್ಯ ವಿಜನೇಽಲ್ಪತನೋರಿಹ ||೪೪||

ಅನಾಶ್ರಯಂ ಸುತಂ ತ್ಯಕ್ತ್ವಾ ಕಥಂ ಗಂತುಂ ಮನೋ ಮಮ ।
ಸಮರ್ಥಂ ಸದಯಂ ಸ್ವಾಮಿನ್ ಭವೇದಂಬುಜಲೋಚನ ||೪೫||

ದಿವ್ಯದೇಹೌ ತತೋ ಜಾತೌ ಲಕ್ಷ್ಮೀನಾರಾಯಣಾವುಭೌ ।
ವಿಮಾನವರಸಂವಿಷ್ಟೌ ಸ್ತೂಯಮಾನೌ ಸುರೈರ್ದಿವಿ ||೪೬||

---

ಲೋಕಕ್ಕೆ ಹಿಂತಿರುಗಿ ಹೋಗೋಣ. ನಿನ್ನ ಈ ಮಗನು ಇಲ್ಲಿಯೇ ಇರಲಿ! ಎಂದನು. ||೪೧-೪೨||

ಲಕ್ಷ್ಮಿಯು ಹೇಳಿದಳು—ಓ ದೇವಶ್ರೇಷ್ಠನೇ, ನನ್ನ ಶರೀರದಲ್ಲಿ ಹುಟ್ಟಿದ ಮಗನನ್ನು ಬಿಟ್ಟು ನಾನು ಹೇಗೆ ಬರಲಿ? ಮಕ್ಕಳ ಮೇಲಿನ ಪ್ರೀತಿಯನ್ನು ಬಿಡಲು ಎಂಥವರಿಗೂ ಸಾಧ್ಯವಾಗಲಾರದು. ಅಳತೆಗೆ ಸಿಕ್ಕದಿರುವ ಆತ್ಮಸ್ವರೂಪನಾದ ಸ್ವಾಮಿಯೇ, ದಿಕ್ಕಿಲ್ಲದವನೂ ಶಕ್ತಿಯಿಲ್ಲದವನೂ ಚಿಕ್ಕ ಶರೀರವುಳ್ಳವನೂ ಆದ ಈ ಬಾಲಕನಿಗೆ ನಿರ್ಜನವಾದ ಈ ನದಿಯ ದಡದಲ್ಲಿ ಏನು ತೊಂದರೆಯು ಸಂಭವಿಸುವುದೋ? ||೪೩-೪೪||

ಓ ಕಮಲಲೋಚನನೇ, ದಯೆಯಿಂದ ಕೂಡಿದ ನನ್ನ ಮನಸ್ಸು ಆಶ್ರಯವಿಲ್ಲದ ಮಗನನ್ನು ಬಿಟ್ಟು ಹೊರಟುಹೋಗುವುದಕ್ಕೆ ಹೇಗೆ ಶಕ್ತವಾದೀತು? ||೪೫||

ಹೀಗೆ ಹೇಳುತ್ತಿದ್ದ ಹಾಗೆಯೇ ಲಕ್ಷ್ಮೀನಾರಾಯಣರು ದಿವ್ಯದೇಹವನ್ನು ಧರಿಸಿದರು. ದೇವತೆಗಳು ಸ್ತೋತ್ರಮಾಡುತ್ತಿರಲು ವಿಮಾನದಲ್ಲಿ ಕುಳಿತರು. ಆಗ ಪ್ರಯಾಣಕ್ಕೆ ಸಿದ್ಧನಾದ ನಾರಾಯಣನನ್ನು ಕುರಿತು ಲಕ್ಷ್ಮಿಯು ಮುಂದಿನ ಮಾತನ್ನು ಹೇಳಿದಳು. ||೪೬||

ಗಂತುಕಾಮಂ ಪತಿಂ ಪ್ರಾಹ ಕಮಲಾ ಕಮಲಾಪತಿಂ ।
ಗೃಹಾಣೇಮಂ ಸುತಂ ನಾಥ ನಾಽಹಂ ಶಕ್ತಾಽಸ್ಮಿ ಹಾಪಿತುಂ ॥೪೭॥

ಪ್ರಾಣಪ್ರಿಯೋಽಸ್ತಿಮೇ ಪುತ್ರಃ ಕಾಂತ್ಯಾ ತ್ವತ್ಸದೃಶಃ ಪ್ರಭೋ ।
ಗೃಹೀತ್ವೈನಂ ಗಮಿಷ್ಯಾವೋ ವೈಕುಂಠಂ ಮಧುಸೂದನ ॥೪೮॥

॥ ಹರಿರುವಾಚ ॥

ಮಾ ವಿಷಾದಂ ಪ್ರಿಯೇ ಕರ್ತುಂ ತ್ವಮರ್ಹಸಿ ವರಾನನೇ ।
ತಿಷ್ಠ ತ್ವಯಂ ಸುಖೇನಾತ್ರ ರಕ್ಷಾ ಮೇ ವಿಹಿತಾ ತ್ವಿಹ ॥೪೯॥

ಕಾರ್ಯಂ ಕಿಮಪಿ ವಾಮೋರು ವರ್ತತೇ ಮಹದದ್ಭುತಂ ।
ನಿಬೋಧ ಕಥಯಾಮ್ಯದ್ಯ ಸುತಸ್ಯಾಽತ್ರ ವಿಮೋಚನೇ ॥೫೦॥

ತುರ್ವಸುರ್ನಾಮ ವಿಖ್ಯಾತೋ ಯಯಾತಿತನುಜೋ ಭುವಿ ।
ಹರಿವರ್ಮೇತಿ ಪಿತ್ರಾಽಸ್ಯ ಕೃತಂ ನಾಮ ಸುವಿಶ್ರುತಂ ॥೫೧॥

ಸ ರಾಜಾ ಪುತ್ರಕಾಮೋಽದ್ಯ ತಪಸ್ತಪತಿ ಪಾವನೇ ।
ತೀರ್ಥೇ ವರ್ಷಶತಂ ಜಾತಂ ತಸ್ಯ ವೈ ಕುರ್ವತಸ್ತಪಃ ॥೫೨॥

---

ಓ ಪ್ರಿಯನಾದ ಮಧುಸೂದನನೇ, ಕಾಂತಿಯಿಂದ ನಿನ್ನ ಸಮಾನನಾದ ಈ ನನ್ನ ಮಗನು ನನಗೆ ಪ್ರಾಣಕ್ಕಿಂತಲೂ ಪ್ರೀತಿಪಾತ್ರನಾಗಿರುವನು. ಇವನನ್ನು ಬಿಟ್ಟುಬಿಡಲು ನನಗೆ ಶಕ್ತಿ ಸಾಲದು. ಈ ಬಾಲಕನನ್ನೂ ಕರೆದುಕೊಂಡು ವೈಕುಂಠ ಲೋಕಕ್ಕೆ ಹೋಗೋಣ ಎಂದಳು. ॥೪೭-೪೮॥

ಹರಿಯು ಹೇಳಿದನು—ಸುಂದರವಾದ ಮುಖವುಳ್ಳ ಪ್ರೀತಿಪಾತ್ರಳಾದ ಲಕ್ಷ್ಮಿಯೇ, ಈ ಬಾಲಕನು ಸುಖವಾಗಿ ಇಲ್ಲಿಯೇ ಇರಲಿ. ನಾನು ಇದರ ರಕ್ಷಣೆಯನ್ನು ಮಾಡಿರುವೆನು. ನೀನು ವಿಷಾದಪಡಬೇಡ. ಮಹಾ ಆಶ್ಚರ್ಯಕರವಾದ ಕಾರ್ಯವು ಮುಂದೆ ನಡೆಯಬೇಕಾಗಿರುತ್ತದೆ. ಈ ಬಾಲಕನನ್ನು ಇಲ್ಲಿಯೇ ಬಿಡುವುದಕ್ಕೆ ಕಾರಣವನ್ನು ಹೇಳುತ್ತೇನೆ ಕೇಳು. ॥೪೯-೫೦॥

ಯಯಾತಿರಾಜನ ಮಗನಾದ ತುರ್ವಸು ಎಂಬವನಿಗೆ ತಂದೆಯು ಹರಿವರ್ಮನೆಂದು ಪ್ರಸಿದ್ಧವಾದ ಹೆಸರನ್ನಿಟ್ಟನು. ಆ ರಾಜನು ಪುತ್ರಾರ್ಥಿಯಾಗಿ ಪರಿಶುದ್ಧವಾದ ಕ್ಷೇತ್ರದಲ್ಲಿ ನೂರು ವರ್ಷದಿಂದ ತಪಸ್ಸನ್ನು ಮಾಡುತ್ತಿರುವನು. ಅವನಿಗೋ

ತಸ್ಮಾದರ್ಥೇ ನಿರ್ಮಿತಃ ಪುತ್ರೋ ಮಯಾಽಯಂ ಕಮಲಾಲಯೇ ।
ತತ್ರ ಗತ್ವಾ ನೃಪಂ ಸುಭ್ರು ಪ್ರೇಷಯಿಷ್ಯಾಮಿ ಸಾಂಪ್ರತಂ ॥೫೩॥

ತಸ್ಮೈ ದಾಸ್ಯಾಮ್ಯಹಂ ಪುತ್ರಂ ಪುತ್ರಕಾಮಸ್ಯ ಕಾಮಿನಿ ।
ಗೃಹೀತ್ವಾ ಸ್ವಗೃಹಂ ರಾಜಾ ಪ್ರಾಪಯಿಷ್ಯತಿ ಬಾಲಕಂ ॥೫೪॥

॥ ವ್ಯಾಸ ಉವಾಚ ॥

ಇತ್ಯಾಶ್ವಾಸ್ಯ ಪ್ರಿಯಾಂ ಪದ್ಮಾಂ ಕೃತ್ವಾ ರಕ್ಷಾಂ ಚ ಬಾಲಕೇ ।
ವಿಮಾನವರಮಾರುಹ್ಯ ಪ್ರಯಯೌ ಪ್ರಿಯಯಾ ಸಹ ॥೫೫॥

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ ಏಕೋನವಿಂಶೋಽಧ್ಯಾಯಃ**

---

ಸ್ಥರವಾಗಿಯೇ ನಾನು ಈ ಪುತ್ರನನ್ನು ನಿರ್ಮಿಸಿರುವೆನು. ಎಲೈ.ಲಕ್ಷ್ಮಿಯೇ, ಈಗಲೇ ಅಲ್ಲಿಗೆ ಹೋಗಿ ಆ ರಾಜನನ್ನು ಇಲ್ಲಿಗೆ ಕಳುಹಿಸುವೆನು. ಪುತ್ರನಲ್ಲಿ ಅಪೇಕ್ಷೆಯುಳ್ಳ ಅವನಿಗೆ ಈ ಪುತ್ರನನ್ನು ನಾನು ಕೊಡುವೆನು. ಈ ಮಗುವನ್ನು ಕರೆದುಕೊಂಡು ಆ ರಾಜನು ತನ್ನ ಮನೆಗೆ ಹೋಗುವನು. ॥೫೧-೫೨-೫೩-೫೪॥

ವ್ಯಾಸಮುನಿಯು ಹೇಳಿದನು—ಹೀಗೆಂದು ಲಕ್ಷ್ಮೀದೇವಿಯನ್ನು ಸಮಾಧಾನಪಡಿಸಿ ಬಾಲಕನಿಗೆ ರಕ್ಷೆಯನ್ನು ಕಲ್ಪಿಸಿ ಶ್ರೇಷ್ಠವಾದ ವಿಮಾನವನ್ನೇರಿ ಹರಿಯು ಪ್ರೀತಿಪಾತ್ರಳಾದ ಲಕ್ಷ್ಮಿಯೊಡನೆ ಪ್ರಯಾಣ ಮಾಡಿದನು. ॥೫೫॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಷಷ್ಠಸ್ಕಂಧೇ

### || ವಿಂಶೋಽಧ್ಯಾಯಃ ||

### ಇಪ್ಪತ್ತನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಸಂಶಯೋಽಯಂ ಮಹಾನತ್ರ ಜಾತಮಾತ್ರಃ ಶಿಶುಸ್ತಥಾ ।**
**ಮುಕ್ತಃ ಕೇನ ಗೃಹೀತೋಽಸಾವೇಕಾಕೀ ವಿಜನೇ ವನೇ ||೧||**

**ಕಾ ಗತಿಸ್ತಸ್ಯ ಬಾಲಸ್ಯ ಜಾತಾ ಸತ್ಯವತೀಸುತ ।**
**ವ್ಯಾಘ್ರಸಿಂಹಾದಿಭಿರ್ಹಿಂಸ್ರೈರ್ಗೃಹೀತೋ ನಾಽತಿಬಾಲಕಃ ||೨||**

|| ವ್ಯಾಸ ಉವಾಚ ||

**ಲಕ್ಷ್ಮೀನಾರಾಯಣೌ ತಸ್ಮಾತ್ಸ್ಥಾನಾಚ್ಚ ಚಲಿತೌ ಯದಾ ।**
**ತದೈವ ತತ್ರ ಚಂಪಾಖ್ಯಃ ಪ್ರಾಪ್ತೋ ವಿದ್ಯಾಧರಃ ಕಿಲ ||೩||**

---

ಜನಮೇಜಯನು ಹೇಳಿದನು—ಸತ್ಯವತೀಪುತ್ರನಾದ ವ್ಯಾಸನೇ, ಹುಟ್ಟಿದೊಡನೆಯೇ ಜನರಹಿತವಾದ ಕಾಡಿನಲ್ಲಿ ಬಾಲಕನೊಬ್ಬನನ್ನೇ ಬಿಟ್ಟು ಹೋದ ಮೇಲೆ ಯಾರು ಆ ಬಾಲಕನನ್ನು ಕರೆದುಕೊಂಡು ಹೋದರು? ಆ ಬಾಲಕನ ಗತಿ ಏನಾಯಿತು? ಹುಲಿ ಮೊದಲಾದ ಕ್ರೂರವಾದ ಪ್ರಾಣಿಗಳು ಎತ್ತಿಕೊಂಡು ಹೋಗಲಿಲ್ಲವೆ? ನನ್ನ ಸಂದೇಹವು ದೊಡ್ಡದಾಗಿರುವುದು ಎಂದನು. ||೧-೨||

ವ್ಯಾಸಮುನಿಯು ಹೇಳಿದನು—ಎಲೈ ರಾಜನೇ ಕೇಳು, ಲಕ್ಷ್ಮೀನಾರಾಯಣರಿಬ್ಬರೂ ಆ ಸ್ಥಳದಿಂದ ಯಾವಾಗ ಹೊರಟುಹೋದರೋ ಆ ಕ್ಷಣದಲ್ಲಿಯೇ ಚಂಪ

ವಿಮಾನವರಮಾರೂಢಃ ಕಾಮಿನ್ಯಾ ಸಹಿತೋ ನೃಪ ।
ಮದನಾಲಸಯಾ ಕಾಮಂ ಕ್ರೀಡಮಾನೋ ಯದೃಚ್ಛಯಾ ॥೪॥

ವಿಲೋಕ್ಯ ತಂ ಶಿಶುಂ ಭೂಮಾವೇಕಾಕಿನಮನುತ್ತಮಂ ।
ದೇವಪುತ್ರಪ್ರತೀಕಾಶಂ ರಮಮಾಣಂ ಯಥಾಸುಖಂ ॥೫॥

ವಿಮಾನಾತ್ತರಸೋತ್ತೀರ್ಯ ಚಂಪಕಸ್ತಂ ಶಿಶುಂ ಜವಾತ್ ।
ಜಗ್ರಾಹ ಚ ಮುದಂ ಪ್ರಾಪ ನಿಧಿಂ ಪ್ರಾಪ್ಯ ಯಥಾಽಧನಃ ॥೬॥

ಗೃಹೀತ್ವಾ ಚಂಪಕಃ ಪ್ರಾದಾದ್ದೇವ್ಯೈ ತಂ ಮದನೋಪಮಂ ।
ಮದನಾಲಸಾಯೈ ತಂ ಬಾಲಂ ಜಾತಮಾತ್ರಂ ಮನೋಹರಂ ॥೭॥

ಸಾ ಗೃಹೀತ್ವಾ ಶಿಶುಂ ಪ್ರೇಮ್ಣಾ ಸರೋಮಾಂಚಾ ಸವಿಸ್ಮಯಾ ।
ಮುಖಂ ಚುಚುಂಬ ಬಾಲಸ್ಯ ಕೃತ್ವಾ ತು ಹೃದಯೇ ಭೃಶಂ ॥೮॥

ಆಲಿಂಗಿತಶ್ಚುಂಬಿತಶ್ಚ ತಯಾಽಸೌ ಪ್ರೀತಿಪೂರ್ವಕಂ।
ಉತ್ಸಂಗೇ ಚ ಕೃತಸ್ತನ್ವ್ಯಾ ಪುತ್ರಭಾವೇನ ಭಾರತ ॥೯॥

---

ನೆಂಬ ವಿದ್ಯಾಧರನು ತನ್ನ ಹೆಂಡಿತಿಯಾದ ಮದನಾಲಸೆ ಎಂಬವಳೊಡನೆ ವಿಮಾನವನ್ನೇರಿ ಕ್ರೀಡಿಸುತ್ತಾ ಆಕಸ್ಮಾತ್ತಾಗಿ ಅಲ್ಲಿಗೆ ಬಂದನು. ॥೩-೪॥

ಆ ವಿದ್ಯಾಧರನು ದೇವತೆಗಳ ಪುತ್ರನಂತೆ ಪ್ರಕಾಶಮಾನನಾಗಿ ಹೊಳೆಯುತ್ತಾ ಸುಖವಾಗಿ ಆಡುತ್ತಾ ಒಬ್ಬನೇ ಭೂಮಿಯಲ್ಲಿ ಮಲಗಿರುವ ಆ ಶ್ರೇಷ್ಠವಾದ ಶಿಶುವನ್ನು ನೋಡಿ ಬೇಗ ವಿಮಾನದಿಂದಿಳಿದು ಆ ಮಗುವನ್ನೆತ್ತಿಕೊಂಡು ದರಿದ್ರನು ನಿಧಿಯನ್ನು ಪಡೆದಂತೆ ಸಂತೋಷಪಟ್ಟನು. ॥೫-೬॥

ಆ ಚಂಪಕನು ಮನ್ಮಥನ ಸಮಾನನಾದ ಆಗತಾನೇ ಹುಟ್ಟಿದ ಸುಂದರನಾದ ಬಾಲಕನನ್ನು ಎತ್ತಿಕೊಂಡು ತನ್ನ ಹೆಂಡಿತಿಯಾದ ಮದನಾಲಸೆಗೆ ಕೊಟ್ಟನು. ॥೭॥

ಜನಮೇಜಯನೇ ಕೇಳು—ಆಕೆಯು ಪ್ರೀತಿಯಿಂದ ಮಗುವನ್ನೆತ್ತಿಕೊಂಡು ಆಶ್ಚರ್ಯದಿಂದಲೂ ರೋಮಾಂಚದಿಂದಲೂ ಕೂಡಿ ತನ್ನೆದೆಗೆ ಬಾಲಕನನ್ನು ತಬ್ಬಿಕೊಂಡು ಆ ಮಗುವಿನ ಮುಖವನ್ನು ತುಂಬ ಮುದ್ದಿಸಿದಳು. ಹೀಗೆ ಆ ಶಿಶುವನ್ನು ತನ್ನ ಮಗನೆಂಬ ಭಾವದಿಂದ ತಬ್ಬಿಕೊಂಡು ಮುತ್ತಿಟ್ಟು ತೊಡೆಯ ಮೇಲೆ ಮಲಗಿಸಿಕೊಂಡಳು. ॥೮-೯॥

ಕೃತ್ವಾಽಂಕೇ ತೌ ಸಮಾರೂಢೌ ವಿಮಾನಂ ದಂಪತೀ ಮುದಾ ।
ಪತಿಂ ಪಪ್ರಚ್ಛ ಚಾರ್ವಂಗೀ ಪ್ರಹಸ್ಯ ಮದನಾಲಸಾ ॥೧೦॥

ಕಸ್ಯಾಽಯಂ ಬಾಲಕಃ ಕಾಂತ ತ್ಯಕ್ತಃ ಕೇನ ಚ ಕಾನನೇ ।
ಪುತ್ರೋಽಯಂ ಮಮ ದೇವೇನ ದತ್ತಸ್ತ್ರ್ಯಂಬಕಪಾಣಿನಾ ॥೧೧॥

॥ ಚಂಪಕ ಉವಾಚ ॥

ಪ್ರಿಯೇ ಗತ್ವಾಽದ್ಯ ಪೃಚ್ಛೇಽಯಂ ಶಕ್ರಂ ಸರ್ವಜ್ಞಮಾಶು ವೈ ।
ದೇವೋ ವಾ ದಾನವೋ ವಾಽಪಿ ಗಂಧರ್ವೋ ವಾ ಶಿಶುಃ ಕಿಲ ॥೧೨॥

ತೇನಾಽಜ್ಞಪ್ತಃ ಕರಿಷ್ಯಾಮಿ ಪುತ್ರಂ ಪ್ರಾಪ್ತಂ ವನಾದಮುಂ ।
ಅಪೃಷ್ಟ್ವಾ ನೈವ ಕರ್ತವ್ಯಂ ಕಾರ್ಯಂ ಕಿಂಚಿನ್ಮಯಾ ಧ್ರುವಂ ॥೧೩॥

ಇತ್ಯುಕ್ತ್ವಾ ತಾಂ ಗೃಹೀತ್ವಾ ತಂ ವಿಮಾನೇನಾಥ ಚಂಪಕಃ ।
ಯಯೌ ಶಕ್ರಪುರಂ ತೂರ್ಣಂ ಹರ್ಷೇಣೋತ್ಫುಲ್ಲಲೋಚನಃ ॥೧೪॥

---

ಆ ದಂಪತಿಗಳು ಆ ಬಾಲಕನನ್ನೆತ್ತಿಕೊಂಡು ಸಂತೋಷದಿಂದ ವಿಮಾನವನ್ನೇರಿದರು. ಮದನಾಲಸೆಯು ನಗುತ್ತಾ ತನ್ನ ಪತಿಯನ್ನು ಕುರಿತು, " ಎಲೈ ಪ್ರಿಯನೇ ಈ ಪುತ್ರನು ಯಾರ ಮಗನು ? ಯಾರು ಈ ಕಾಡಿನಲ್ಲಿ ಇವನನ್ನು ಬಿಟ್ಟರು ? ದೇವನಾದ ಶಿವನು ನನಗೆ ಈ ಮಗನನ್ನು ಕೊಟ್ಟಿರುವನು " ಎಂದಳು. ॥೧೦-೧೧॥

ಚಂಪಕನು ಹೇಳಿದನು— ಎಲೌ ಪ್ರಿಯೇ, ನಾನು ಬೇಗನೆ ಹೋಗಿ ಸರ್ವಜ್ಞನಾದ ದೇವೇಂದ್ರನನ್ನು ಕೇಳುವೆನು. ಈ ಶಿಶುವು ದೇವನೋ ದಾನವನೋ ಗಂಧರ್ವನೋ ಎಂಬುದನ್ನು ತಿಳಿದು ಅವನ ಅಪ್ಪಣೆಯಂತೆ ಕಾಡಿನಲ್ಲಿ ಸಿಕ್ಕಿದ ಇವನನ್ನು ಮಗನನ್ನಾಗಿ ಮಾಡಿಕೊಳ್ಳುವೆನು. ಎಲ್ಲವನ್ನೂ ಚೆನ್ನಾಗಿ ವಿಚಾರಮಾಡದೆ ನಾನು ಯಾವ ಕಾರ್ಯವನ್ನೂ ಮಾಡುವುದಿಲ್ಲ. ॥೧೨-೧೩॥

ಹೀಗೆಂದು ತನ್ನ ಹೆಂಡತಿಗೆ ಹೇಳಿ ಆ ಮಗುವನ್ನು ಕರೆದುಕೊಂಡು ಚಂಪಕನು ವಿಮಾನದಲ್ಲಿ ದೇವೇಂದ್ರನ ಪಟ್ಟಣಕ್ಕೆ ಬೇಗನೆ ಸಂತೋಷದಿಂದ ಹೋದನು.॥೧೪॥

**ಪ್ರಣಮ್ಯ ಪಾದಯೋಃ ಪ್ರೀತ್ಯಾ ಚಂಪಕಸ್ತು ಶಚೀಪತಿಂ ।**
**ನಿವೇದ್ಯ ಬಾಲಕಂ ಪ್ರಾಹ ಕೃತಾಂಜಲಿಪುಟಃ ಸ್ಥಿತಃ ॥೧೫॥**

**ದೇವ ದೇವ ಮಯಾ ಲಬ್ಧಸ್ತೀರ್ಥೇ ಪರಮಪಾವನೇ ।**
**ಕಾಲಿಂದೀತಮಸಾಸಂಗೇ ಬಾಲಕೋಽಯಂ ಸ್ಮರಪ್ರಭಃ ॥೧೬॥**

**ಕಸ್ಯಾಽಯಂ ಬಾಲಕಃ ಕಾಂತಃ ಕಥಂ ತ್ಯಕ್ತಃ ಶಚೀಪತೇ ।**
**ಆಜ್ಞಾ ಚೇತ್ತವ ದೇವೇಶ ಕುರ್ವೇಽಹಂ ಬಾಲಕಂ ಸುತಂ ॥೧೭॥**

**ಅತೀವ ಸುಂದರೋ ಬಾಲಃ ಪ್ರಿಯಾಯಾ ವಲ್ಲಭಃ ಸುತಃ ।**
**ಕೃತ್ರಿಮಸ್ತು ಸುತಃ ಪ್ರೋಕ್ತೋ ಧರ್ಮಶಾಸ್ತ್ರೇಷು ಸರ್ವಥಾ ॥೧೮॥**

॥ ಇಂದ್ರ ಉವಾಚ ॥

**ಪುತ್ರೋಽಯಂ ವಾಸುದೇವಸ್ಯ ವಾಜಿರೂಪಧರಸ್ಯ ಹ ।**
**ಹೈಹಯೋಽಯಂ ಮಹಾಭಾಗ ಲಕ್ಷ್ಮ್ಯಾಂ ಜಾತಃ ಪರಂತಪಃ ॥೧೯॥**

---

ಚಂಪಕನು ಶಚೀದೇವಿಯ ಪತಿಯಾದ ದೇವೇಂದ್ರನ ಪಾದಕ್ಕೆ ಪ್ರೀತಿಯಿಂದನಮಸ್ಕರಿಸಿ ಬಾಲಕನನ್ನು ಅವನಿಗೊಪ್ಪಿಸಿ ಕೈಜೋಡಿಸಿ ನಿಂತುಕೊಂಡು ಹೇಳಿದನು. ॥೧೫॥

ದೇವತೆಗಳಿಗೆ ಸ್ವಾಮಿಯಾದ ದೇವೇಂದ್ರನೇ, ಯಮುನಾ ಮತ್ತು ತಮಸಾ ನದಿಯ ಸಂಗಮಸ್ಥಳವಾದ ಅತ್ಯಂತ ಪರಿಶುದ್ಧವಾದ ತೀರ್ಥಕ್ಷೇತ್ರದಲ್ಲಿ ನನಗೆ ಈ ಬಾಲಕನು ಸಿಕ್ಕಿದನು. ಮನ್ಮಥನಂತೆ ಕಾಂತಿಯುಕ್ತನಾದ ಈ ಬಾಲಕನು ಯಾರ ಮಗನು? ಯಾವ ಕಾರಣದಿಂದ ಇವನನ್ನು ತಾಯಿತಂದೆಗಳು ಬಿಟ್ಟರು? ದೇವತೆಗಳಿಗೊಡೆಯನಾದ ದೇವೇಂದ್ರನೇ, ನಿನ್ನ ಅಪ್ಪಣೆಯಾದರೆ ನಾನು ಈ ಬಾಲಕನನ್ನು ಮಗನನ್ನಾಗಿ ಮಾಡಿಕೊಳ್ಳುವೆನು. ॥೧೬-೧೭॥

ವಿಶೇಷ ಸುಂದರನಾದ ಈ ಬಾಲಕನು ನನ್ನ ಹೆಂಡಿತಿಗೆ ಪ್ರೀತಿಪಾತ್ರನಾದ ಮಗನಾಗಿರುವನು. ಇಂಥವನನ್ನು ಧರ್ಮಶಾಸ್ತ್ರಗಳಲ್ಲಿ ಕೃತ್ರಿಮಪುತ್ರನೆಂದು ಹೇಳುವರು. ॥೧೮॥

ದೇವೇಂದ್ರನು ಹೇಳಿದನು—ಎಲೈ ಮಹಾಭಾಗ್ಯಶಾಲಿಯಾದ ಚಂಪಕನೇ, ಕುದುರೆಯ ರೂಪವನ್ನು ಧರಿಸಿದ ವಾಸುದೇವನಿಗೆ ಈ ಬಾಲಕನು ಮಗನು. ಲಕ್ಷ್ಮೀ

ಉತ್ಪಾದಿತೋ ಭಗವತಾ ಕಾರ್ಯಾರ್ಥಂ ಕಿಲ ಬಾಲಕಃ ।
ದಾತುಂ ನೃಪತಯೇ ನೂನಂ ಯಯಾತಿತನಯಾಯ ಚ ॥೨೦॥

ಹರಿಣಾ ಪ್ರೇರಿತಃ ಸೋಽದ್ಯ ರಾಜಾ ಪರಮಧಾರ್ಮಿಕಃ ।
ಆಗಮಿಷ್ಯತಿ ಪುತ್ರಾರ್ಥಂ ತೀರ್ಥೇ ತಸ್ಮಿನ್ಮನೋರಮೇ ॥೨೧॥

ತಾವತ್ತ್ವಂ ಗಚ್ಛ ತತ್ರೈವ ಗೃಹೀತ್ವಾ ಬಾಲಕಂ ಶುಭಂ ।
ಯಾವನ್ನ ಯಾತಿ ನೃಪತಿರ್ಗ್ರಹೀತುಂ ಹರಿಣೇರಿತಃ ॥೨೨॥

ಗತ್ವಾ ತತ್ರ ವಿಮುಂಚೈನಂ ವಿಲಂಬಂ ಮಾ ಕೃಥಾ ವರ ।
ಅದೃಷ್ಟ್ವಾ ಬಾಲಕಂ ರಾಜಾ ದುಃಖಿತಶ್ಚ ಭವಿಷ್ಯತಿ ॥೨೩॥

ತಸ್ಮಾಚ್ಚಂಪಕ ಮುಂಚೈನಂ ರಾಜಾ ಪ್ರಾಪ್ನೋತು ಪುತ್ರಕಂ ।
ಏಕವೀರೇತಿ ನಾಮ್ನಾಽಯಂ ಖ್ಯಾತಃ ಸ್ಯಾತ್ಪೃಥಿವೀತಲೇ ॥೨೪॥

---

ದೇವಿಯಲ್ಲಿ ಹುಟ್ಟಿದವನು. ಶತ್ರುಸಂಹಾರಕನು. ಇವನಿಗೆ ಹೈಹಯನೆಂದು ಹೆಸರಿರುವುದು. ॥೧೯॥

ಮಹಾಮಹಿಮನಾದ ನಾರಾಯಣನು ಇವನನ್ನು ಹುಟ್ಟಿಸಿದನು. ಯಯಾತಿ ರಾಜನ ಮಗನಾದ ಹರಿವರ್ಮನಿಗೆ ಈ ಬಾಲಕನನ್ನು ಕೊಡುವುದೇ ಆ ದೇವನ ಉದ್ದೇಶವು. ॥೨೦॥

ಧರ್ಮಾತ್ಮನಾದ ಆ ಹರಿವರ್ಮರಾಜನು ಹರಿಯ ಪ್ರೇರಣೆಯಿಂದ ಈ ದಿನವೇ ಪುತ್ರಾರ್ಥಿಯಾಗಿ ಮನೋಹರವಾದ ಆ ಕ್ಷೇತ್ರಕ್ಕೆ ಬರುವನು. ಅಷ್ಟರೊಳಗೇ ನೀನು ಮಂಗಳಕರನಾದ ಈ ಬಾಲಕನನ್ನು ಕರೆದುಕೊಂಡು ಅಲ್ಲಿಗೇ ಹೋಗು. ॥೨೧-೨೨॥

ಎಲೈ ಶ್ರೇಷ್ಠನಾದ ಚಂಪಕನೇ, ನೀನು ಅಲ್ಲಿಗೆ ಹೋಗಿ ಈ ಬಾಲಕನನ್ನು ಬಿಟ್ಟುಬಿಡು. ಸಾವಕಾಶವನ್ನು ಮಾಡಬೇಡ. ಹರಿವರ್ಮರಾಜನು ಬಾಲಕನನ್ನು ಕಾಣದೆ ದುಃಖವುಳ್ಳವನಾಗುವನು. ಆ ಕಾರಣದಿಂದ ಈ ಬಾಲಕನನ್ನು ಬಿಡು. ರಾಜನು ಪುತ್ರನನ್ನು ಪಡೆಯಲಿ. ಇವನು ಭೂಮಂಡಲದಲ್ಲಿ ಏಕವೀರನೆಂಬ ಹೆಸರಿನಿಂದ ಪ್ರಸಿದ್ಧನಾಗುವನು. ॥೨೩-೨೪॥

|| ವ್ಯಾಸ ಉವಾಚ ||

ಇತಿ ತಸ್ಯ ವಚಃ ಶ್ರುತ್ವಾ ಚಂಪಕಸ್ತ್ವರಯಾಽನ್ವಿತಃ ।
ಜಗಾಮ ಪುತ್ರಮಾದಾಯ ಸ್ಥಲೇ ತಸ್ಮಿನ್ಮಹೀಪತೇ ॥೨೫॥

ಮುಮೋಚ ಬಾಲಕಂ ತತ್ರ ಯತ್ರ ಪೂರ್ವಂ ಸ್ಥಿತೋ ಹ್ಯಭೂತ್ ।
ಆರುಹ್ಯ ಸ್ವವಿಮಾನಂ ತು ಯಯೌ ಸ್ವಾಶ್ರಮಮಂಡಲಂ ॥೨೬॥

ತದೈವ ಕಮಲಾಕಾಂತೋ ಲಕ್ಷ್ಮ್ಯಾ ಸಹ ಜಗದ್ಗುರುಃ ।
ವಿಮಾನವರಮಾರೂಢೋ ಜಗಾಮ ನೃಪತಿಂ ಪ್ರತಿ ॥೨೭॥

ದೃಷ್ಟಸ್ತದಾ ತೇನ ನೃಪೇಣ ವಿಷ್ಣುಃ
ಸಮುತ್ತರಂಸ್ತತ್ರ ವಿಮಾನ ಮುಖ್ಯಾತ್ ।
ಜಹರ್ಷ ರಾಜಾ ಹರಿದರ್ಶನೇನ
ಪಪಾತ ಭೂಮೌ ಖಲು ದಂಡವಚ್ಚ ॥೨೮॥

ಉತ್ತಿಷ್ಠ ವತ್ಸೇತಿ ಹರಿಃ ಪತಂತ
ಮಾಶ್ವಾಸಯದ್ಭೂಮಿಗತಂ ಸ್ವಭಕ್ತಂ ।

---

ವ್ಯಾಸಋಷಿಯು ಹೇಳಿದನು—ಎಲೈ ರಾಜನೇ, ದೇವೇಂದ್ರನ ಮಾತನ್ನು ಕೇಳಿ ಚಂಪಕನು ಆ ಪುತ್ರನನ್ನು ಎತ್ತಿಕೊಂಡು ಆ ಯಮುನಾಸಂಗಮಕ್ಷೇತ್ರಕ್ಕೆ ಬೇಗನೆ ಹೋದನು. ||೨೫||

ಆ ಬಾಲಕನು ಮೊದಲು ಎಲ್ಲಿದ್ದನೋ ಅಲ್ಲಿಯೇ ಬಿಟ್ಟು, ತನ್ನ ವಿಮಾನ ವನ್ನೇರಿ ತನ್ನಾಶ್ರಮಕ್ಕೆ ಪ್ರಯಾಣ ಮಾಡಿದನು. ||೨೬||

ಆ ಕ್ಷಣವೇ ಲೋಕಕ್ಕೆ ಗುರುವಾದ ಕಮಲಾಪತಿಯಾದ ವಿಷ್ಣುವು ಲಕ್ಷ್ಮೀ ದೇವಿಯೊಡನೆ ವಿಮಾನವನ್ನೇರಿ ಹರಿವರ್ಮರಾಜನ ಸಮೀಪಕ್ಕೆ ಹೋದನು. ||೨೭||

ಆಗ ವಿಮಾನದಿಂದ ಇಳಿಯುತ್ತಿರುವ ವಿಷ್ಣುವನ್ನು ನೋಡಿ ಹರಿವರ್ಮ ರಾಜನು ಆ ದೇವನ ದರ್ಶನದಿಂದ ಸಂತೋಷವನ್ನು ಹೊಂದಿ ಭೂಮಿಯ ಮೇಲೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ||೨೮||

ಹರಿಯು ಭೂಮಿಯಲ್ಲಿ ನಮಸ್ಕಾರಮಾಡಿರುವ ತನ್ನ ಭಕ್ತನನ್ನು, ಮಗನೇ ಏಳು. ಎಂದು ಹೇಳಿ ಸಮಾಧಾನಪಡಿಸಿದನು. ಬಳಿಕ ಆ ರಾಜನೂ ಕೂಡ ಉತ್ಸಾಹದಿಂದ

ಸೋಽಪ್ಯುತ್ಸುಕೋ ವಾಸುದೇವಂ
ಪುರಃಸ್ಥಂ ತುಷ್ಟಾವ ಭಕ್ತ್ಯಾಮುಖರೀಕೃತೋಽಥ ॥೨೯॥

ದೇವಾಧಿದೇವಾಽಖಿಲಲೋಕನಾಥ
ಕೃಪಾನಿಧೇ ಲೋಕಗುರೋ ರಮೇಶ ।
ಮಂದಸ್ಯ ಮೇ ತೇ ಕಿಲ ದರ್ಶನಂ ಯ
ತ್ಸುದುರ್ಲಭಂ ಯೋಗಿಜನೈರಲಭ್ಯಂ ॥೩೦॥

ಯೇ ನಿಃಸ್ಪೃಹಾಸ್ತೇ ವಿಷಯೈರಪೇತಾ
ಸ್ತೇಷಾಂ ತ್ವದೀಯಂ ಖಲು ದರ್ಶನಂ ಸ್ಯಾತ್ ।
ಆಶಾಪರೋಽಹಂ ಭಗವನ್ನನಂತ
ಯೋಗ್ಯೋ ನ ತೇ ದರ್ಶನೇ ದೇವ ದೇವ ॥೩೧॥

ಇತಿ ಸ್ತುತಸ್ತೇನ ನೃಪೇಣ ವಿಷ್ಣು
ಸ್ತಮಾಹ ವಾಕ್ಯೇನ ಸುಧಾಮಯೇನ ।
ವೃಣೀಷ್ವ ರಾಜನ್ಮನಸೇಪ್ಸಿತಂ ತೇ
ದದಾಮಿ ತುಷ್ಟಸ್ತಪಸಾ ತವೇತಿ ॥೩೨॥

---

ತನ್ನ ಮುಂದಿರುವ ಹರಿಯನ್ನು ಭಕ್ತಿಯಿಂದ ಗಟ್ಟಿಯಾಗಿ ಸ್ತೋತ್ರಮಾಡಿದನು.॥೨೯॥

ದೇವತೆಗಳಿಗೆ ಮುಖ್ಯನಾದ ದೇವನೇ, ಸಮಸ್ತ ಲೋಕಕ್ಕೂ ಒಡೆಯನೇ ದಯೆಯ ಗಣಿಯಾದವನೇ ಲೋಕಕ್ಕೆಲ್ಲ ಗುರುವಾದವನೇ ಲಕ್ಷ್ಮೀಪತಿಯೇ, ಯೋಗಿಗಳಿಗೂ ದೊರೆಯದಿರುವ ನಿನ್ನ ದರ್ಶನವು ಅಲ್ಪನಾದ ನನಗೆ ಉಂಟಾಗಿರುವುದು ದುರ್ಲಭವಾದುದಲ್ಲವೇ ? ॥೩೦॥

ಯಾರು ಇಂದ್ರಿಯಾರ್ಥಗಳನ್ನು ಬಿಟ್ಟು ವೈರಾಗ್ಯದಿಂದಿರುವರೋ ಅವರಿಗೇ ನಿನ್ನ ದರ್ಶನವಾಗುವುದಲ್ಲವೇ ? ಓ ಮಹಾಮಹಿಮನೂ ದೇವದೇವನೂ ಆದ ಅನಂತನೇ, ಆಸೆಯಿಂದ ಕೂಡಿದ ನಾನು ನಿನ್ನ ದರ್ಶನಮಾಡಲು ಯೋಗ್ಯನಲ್ಲ.॥೩೧॥

ಈ ರೀತಿಯಾಗಿ ಆ ರಾಜನು ಸ್ತೋತ್ರಮಾಡುತ್ತಲು ವಿಷ್ಣುವು ಆ ರಾಜನನ್ನು ಕುರಿತು ಅಮೃತದಂತೆ ಹಿತವಾದ ಮಾತಿನಿಂದ "ಎಲೈ ರಾಜನೇ, ನಿನ್ನ ಮನಸ್ಸಿನಲ್ಲಿ ಅಪೇಕ್ಷಿಸಿದ ವರವನ್ನು ಕೇಳು. ನಿನ್ನ ತಪಸ್ಸಿಗೆ ಸಂತೋಷಪಟ್ಟ ನಾನು ಆ ವರವನ್ನು ಕೊಡುವೆನು." ಎಂದು ಹೇಳಿದನು. ॥೩೨॥

ತತೋ ನೃಪಸ್ತಂ ಪ್ರಣಿಪತ್ಯ ಪಾದಯೋಃ
ಪ್ರೋವಾಚ ವಿಷ್ಣುಂ ಪುರತಃ ಸ್ಥಿತಂ ಚ ।
ತಪಸ್ತು ತಪ್ತಂ ಹಿ ಮಯಾ ಸುತಾರ್ಥೇ
ಪುತ್ರಂ ದದಸ್ವಾತ್ಮಸಮಂ ಮುರಾರೇ ॥೩೩॥

ಶ್ರುತ್ವಾ ನೃಪಪ್ರಾರ್ಥಿತಮಾದಿದೇವ
ಸ್ತಮಾಹ ರಾಜಾನಮಮೋಘವಾಕ್ಯಂ ।
ಯಯಾತಿಸೂನೋ ವ್ರಜ ತತ್ರ ತೀರ್ಥೇ
ಕಲಿಂದಕನ್ಯಾತಮಸಾಪ್ರಸಂಗೇ ॥೩೪॥

ಮಯಾಽದ್ಯ ಪುತ್ರಸ್ತು ಯಥೇಪ್ಸಿತಸ್ತೇ
ತತ್ರೈವ ಮುಕ್ತೋಽಸ್ತ್ಯಮಿತಪ್ರಭಾವಃ ।
ಲಕ್ಷ್ಮ್ಯಾಃ ಪ್ರಸೂತೋ ಮಮವೀರ್ಯಜಶ್ಚ
ಕೃತಸ್ತವಾಽರ್ಥೇಽಥ ಗೃಹಾಣ ರಾಜನ್ ॥೩೫॥

---

ಆ ಮೇಲೆ ರಾಜನು ಆ ವಿಷ್ಣುವಿನ ಪಾದಕ್ಕೆ ನಮಸ್ಕಾರಮಾಡಿ ಎದುರಿಗೆ ನಿಂತಿರುವ ಆ ದೇವನನ್ನು ಕುರಿತು “ ಓ ಮುರಾರಿಯೇ, ನಾನು ಪುತ್ರಾರ್ಥಿಯಾಗಿ ತಪಸ್ಸುಮಾಡಿದೆನು. ನಿನ್ನ ಸಮಾನನಾದ ಪುತ್ರನನ್ನು ಕೊಡು. ॥೩೩॥

ಆದಿದೇವನಾದ ನಾರಾಯಣನು ರಾಜನ ಪ್ರಾರ್ಥನೆಯನ್ನು ಕೇಳಿ ಆ ರಾಜನನ್ನು ಕುರಿತು ವ್ಯರ್ಥವಾಗದ ಮಾತನ್ನು ಹೇಳಿದನು. ಎಲೈ ಯಯಾತಿ ರಾಜನ ಪುತ್ರನೇ, ಯಮುನಾ ಮತ್ತು ತಮಸಾ ನದಿಗಳ ಸಂಗಮಸ್ಥಲವಾದ ಆ ಕ್ಷೇತ್ರಕ್ಕೆ ಹೋಗು. ॥೩೪॥

ನಿನಗಿಷ್ಟನಾದ ಪುತ್ರನನ್ನು ನಾನು ಈ ದಿವಸ ಆ ಕ್ಷೇತ್ರದಲ್ಲಿಯೇ ಬಿಟ್ಟಿರುವೆನು. ಆ ಪುತ್ರನು ಮಹಾಮಹಿಮೆಯುಳ್ಳವನು. ನನ್ನ ವೀರ್ಯದಿಂದ ಲಕ್ಷ್ಮೀದೇವಿಯಲ್ಲಿ ಹುಟ್ಟಿದವನು. ನಿನಗೋಸ್ಕರವಾಗಿಯೇ ನಾನು ಅವನನ್ನು ಹುಟ್ಟಿಸಿದೆನು. ರಾಜನೇ, ಆ ಪುತ್ರನನ್ನು ನೀನು ತೆಗೆದುಕೋ. ॥೩೫॥

ಶ್ರುತ್ವಾ ಹರೇರ್ವಾಕ್ಯಮತೀವ ಹೃಷ್ಟಂ
ಸಂತುಷ್ಟಚಿತ್ತಃ ಪ್ರಬಭೂವ ರಾಜಾ ।
ಹರಿಸ್ತು ದತ್ವೇತಿ ವರಂ ಜಗಾಮ
ವೈಕುಂಠಲೋಕಂ ರಮಯಾ ಯುತಶ್ಚ ॥೩೬॥

ಗತೇ ಹರೌ ಸೋಽಥ ಯಯಾತಿಸೂನು
ರ್ಯಯಾವನುದ್ಧಾತರಥೇನ ರಾಜಾ ।
ಪ್ರೇಮಾನ್ವಿತಸ್ತತ್ರ ಸುತೋಽಸ್ತಿ ಯತ್ರ
ವಚೋ ನಿಶಮ್ಯೇತಿ ಜನಾರ್ದನಸ್ಯ ॥೩೭॥

ಸ ತತ್ರ ಗತ್ವಾಽತಿಮನೋಹರಂ ತಂ
ದದರ್ಶ ಬಾಲಂ ಭುವಿ ಖೇಲಮಾನಂ ।
ಮುಖೇ ನಿವೇಶ್ಯೈಕಕರೇಣ ಕೃತ್ವಾ
ಶ್ಲಕ್ಷ್ಣಂ ಪದಾಂಗುಷ್ಠಮನನ್ಯಸತ್ತ್ವಂ(?) ॥೩೮॥

---

ರಾಜನು ಅತ್ಯಂತ ಹಿತವಾದ ಹರಿಯ ಮಾತನ್ನು ಕೇಳಿ ಮನಸ್ಸಿನಲ್ಲಿ ತೃಪ್ತಿಯನ್ನು ಹೊಂದಿದನು. ಹರಿಯು ಹೀಗೆ ವರವನ್ನು ಕೊಟ್ಟು ಲಕ್ಷ್ಮೀದೇವಿಯೊಡನೆ ವೈಕುಂಠಲೋಕಕ್ಕೆ ಹೋದನು. ॥೩೬॥

ಹರಿಯು ಹೊರಟುಹೋದ ಮೇಲೆ ಯಯಾತಿ ಪುತ್ರನಾದ ರಾಜನು ತಡೆಯಿಲ್ಲದ ರಥದ ವೇಗದಿಂದ ಜನಾರ್ದನನ ಪೂರ್ವೋಕ್ತವಾದ ಮಾತನ್ನು ಅನುಸರಿಸಿ ಪ್ರೀತಿಗೆ ಪಾತ್ರನಾದ ಪುತ್ರನು ಎಲ್ಲಿದ್ದನೋ ಅಲ್ಲಿಗೆ ಪ್ರಯಾಣ ಮಾಡಿದನು. ॥೩೭॥

ಆ ರಾಜನು ಅಲ್ಲಿಗೆ ಹೋಗಿ ಅಸಾಧಾರಣವಾದ ಬಲದಿಂದ ಕೂಡಿ ಮೃದುವಾದ ಕಾಲಿನ ಹೆಬ್ಬೆರಳನ್ನು ಕೈಯಲ್ಲಿ ಹಿಡಿದುಕೊಂಡು ಬಾಯಿಯಲ್ಲಿಟ್ಟು ಭೂಮಿಯಮೇಲೆ ಆಟವಾಡುತ್ತಿರುವ ಅತ್ಯಂತ ಮನೋಹರನಾದ ಆ ಬಾಲಕನನ್ನು ನೋಡಿದನು. ॥೩೮॥

ತಂ ವೀಕ್ಷ್ಯ ಪುತ್ರಂ ಮದನಸ್ವರೂಪಂ
ನಾರಾಯಣಾಂಶಂ ಕಮಲಾಪ್ರಸೂತಂ ।
ಹರಿಪ್ರಭಾವಂ ಹರಿವರ್ಮನಾಮಾ
ಹರ್ಷಪ್ರಫುಲ್ಲಾನನಪಂಕಜೋಽಭೂತ್ ॥೩೯॥

ಗೃಹ್ಣನ್ಸುವೇಗಾತ್ಕರಪಂಕಜಾಭ್ಯಾಂ
ಬಭೂವ ಪ್ರೇಮಾರ್ಣವಮಗ್ನದೇಹಃ ।
ಮೂರ್ಧನ್ಯುಪಾಘ್ರಾಯ ಮುದಾನ್ವಿತೋಽಸೌ
ನನಂದ ರಾಜಾ ಸುತಮಾಲಿಲಿಂಗ ॥೪೦॥

ಮುಖಂ ಸಮೀಕ್ಷ್ಯಾತಿಮನೋಹರಂ ತ
ಮುವಾಚ ನೇತ್ರಾಂಬು ನಿರುದ್ಧಕಂಠಃ ।
ದತ್ತೋಽಸಿ ದೇವೇನ ಜನಾರ್ದನೇನ
ಮಾಂ ತ್ರಾಹಿ ಪುತ್ರಾಽವಮದುಃಖಭೀತೇಃ ॥೪೧॥

---

ಹರಿವರ್ಮನೆಂಬ ರಾಜನು ನಾರಾಯಣನ ಅಂಶದಿಂದ ಲಕ್ಷ್ಮೀದೇವಿಯಲ್ಲಿ ಹುಟ್ಟಿದ ಮನ್ಮಥನಂತಿರುವ ಹರಿಯ ಮಹಿಮೆಯಿಂದ ಕೂಡಿದ ಆ ಬಾಲಕನನ್ನು ನೋಡಿ ಸಂತೋಷದಿಂದ ಅರಳಿದ ಮುಖಕಮಲ ಉಳ್ಳವನಾದನು. ॥೩೯॥

ಆ ರಾಜನು ಆ ಬಾಲಕನನ್ನು ಕಮಲದಂತಿರುವ ತನ್ನ ಕೈಗಳಿಂದ ಬೇಗನೆ ಎತ್ತಿಕೊಳ್ಳುತ್ತಾ ಪ್ರೀತಿಯೆಂಬ ಸಮುದ್ರದಲ್ಲಿ ಮುಳುಗಿದ ಶರೀರವುಳ್ಳವನಾದನು. ಬಳಿಕ ಆ ರಾಜನು ಮಗುವಿನ ತಲೆಯನ್ನು ಮೂಸಿನೋಡಿ ಸಂತೋಷದಿಂದ ಕೂಡಿ ಬಾಲಕನನ್ನು ತಬ್ಬಿಕೊಂಡು ಆನಂದವನ್ನನುಭವಿಸಿದನು. ॥೪೦॥

ಅತ್ಯಂತ ಮನೋಹರವಾದ ಆ ಬಾಲಕನ ಮುಖವನ್ನು ನೋಡಿ ಕಣ್ಣೀರಿನಿಂದ ತಡೆದ ಕುತ್ತಿಗೆಯುಳ್ಳವನಾಗಿ ಆ ಬಾಲಕನನ್ನು ಕುರಿತು ಎಲೈ ಪುತ್ರನೇ, ನೀಚ ದುಃಖವಾದ ನರಕಪ್ರಾಪ್ತಿಯ ಭಯಕ್ಕೋಸ್ಕರವಾಗಿ ನೀನು ದೇವನಾದ ನಾರಾಯಣನಿಂದಲೂ ತಾಯಿಯಾದ ಲಕ್ಷ್ಮೀದೇವಿಯಿಂದಲೂ ನನಗೆ ಕೊಡಲ್ಪಟ್ಟಿರುವೆ. ಪುತ್ ಎಂಬ ನರಕದ ಭಯದಿಂದ ನನ್ನನ್ನು ನೀನು ಕಾಪಾಡು. ॥೪೧॥

ತಪ್ತಂ ಮಯಾ ಪುತ್ರ ತಪಸ್ತ್ವದರ್ಥೇ
ಸುದುಷ್ಕರಂ ವರ್ಷಶತಂ ಚ ಪೂರ್ಣಂ ।
ತೇನೈವ ತುಷ್ಟೇನ ರಮಾಪ್ರಿಯೇಣ
ದತ್ತೋಽಸಿ ಸಂಸಾರ ಸುಖೋದಯಾಯ ॥೪೨॥

ಮಾತಾ ರಮಾ ತ್ವಾಂ ತನುಜಂ ಮದರ್ಥೇ
ತ್ಯಕ್ತ್ವಾ ಗತಾ ಸಾ ಹರಿಣಾ ಸಮೇತಾ ।
ಧನ್ಯಾ ತು ಸಾ ಯಾ ಪ್ರಹಸಂತಮಂಕೇ
ಕೃತ್ವಾ ಸುತಂ ತ್ವಾಂ ಮುದಿತಾನನಾ ಸ್ಯಾತ್ ॥೪೩॥

ತ್ವಮೇವ ಸಂಸಾರಸಮುದ್ರನೌಕಾ
ರೂಪಃ ಕೃತಃ ಪುತ್ರ ಲಕ್ಷ್ಮೀಧರೇಣ ।
ಇತ್ಯೇವಮುಕ್ತ್ವಾ ನೃಪತಿಃ ಸುತಂ ತಂ
ಮುದಾ ಸಮಾದಾಯ ಯಯೌ ಗೃಹಾಯ ॥೪೪॥

---

ಎಲೈ ಮಗನೇ, ನಿನಗೋಸ್ಕರವಾಗಿ ನಾನು ಒಂದುನೂರು ವರ್ಷ ಸಂಪೂರ್ಣವಾಗಿ ಕಷ್ಟವಾದ ತಪಸ್ಸನ್ನು ಮಾಡಿದೆನು. ಆ ತಪಸ್ಸಿನಿಂದ ಸಂತೋಷಗೊಂಡ ಲಕ್ಷ್ಮೀಪತಿಯಾದ ನಾರಾಯಣನು ಈ ಸಂಸಾರದಲ್ಲಿ ಸುಖಾನುಭವಕ್ಕೋಸ್ಕರ ನಿನ್ನನ್ನು ನನಗೆ ಕೊಟ್ಟಿರುವನು. ॥೪೨॥

ತಾಯಿಯಾದ ರಮಾದೇವಿಯು ತನ್ನ ಮಗನನ್ನು ನನಗೋಸ್ಕರವಾಗಿ ಬಿಟ್ಟು ಹರಿಯೊಡನೆ ಪ್ರಯಾಣ ಮಾಡಿದಳು. ನಗುತ್ತಿರುವ ಮಗನಾದ ನಿನ್ನನ್ನು ತೊಡೆಯ ಮೇಲೆ ಎತ್ತಿಕೊಂಡು ಸಂತೋಷವಾದ ಮುಖಭಾವದಿಂದ ಕೂಡಿದವಳೇ ಕೃತಾರ್ಥಳು ! ॥೪೩॥

ಎಲೈ ಮಗನೇ, ಲಕ್ಷ್ಮೀನಾರಾಯಣನು ನನ್ನ ಸಂಸಾರವೆಂಬ ಸಮುದ್ರವನ್ನು ದಾಟಲು ನಿನ್ನನ್ನೇ ಹಡಗನ್ನಾಗಿ ಮಾಡಿರುವನು. ಹೀಗೆಂದು ಹೇಳಿ ರಾಜನು ಪ್ರೀತಿಯಿಂದ ಆ ಮಗನನ್ನು ಎತ್ತಿಕೊಂಡು ಮನೆಗೆ ಹೋದನು. ॥೪೪॥

ಪುರೀಸಮೀಪೇ ನೃಪಮಾಗತಂ ತ
ಮಾಕರ್ಣ್ಯ ಸರ್ವೇ ಸಚಿವಾಸ್ತು ರಾಜ್ಞಃ ।
ಯಯುಃ ಸಮೀಪಂ ನೃಪತೇಶ್ಚ ಲೋಕಾಃ
ಸೋಪಾಯನಾಸ್ತೇ ಸಪುರೋಹಿತಾಶ್ಚ ॥೪೫॥

ಬಂದೀಜನಾ ಗಾಯನಕಾಶ್ಚ ಸೂತಾಃ
ಸಮಾಯಯುಃ ಸಂಮುಖಮಾಶು ರಾಜ್ಞಃ ।
ನೃಪಃ ಪುರಂ ಪ್ರಾಪ್ಯ ಪುರಃ ಸಮಾಗತಂ
ಜನಂ ಸಮಾಶ್ವಾಸ್ಯ ವಾಕ್ಯೈಶ್ಚ ದೃಷ್ಟ್ಯಾ ॥೪೬॥

ಸ ಪೂಜಿತಃ ಪೌರಜನೇನ ರಾಜಾ
ವಿವೇಶ ಪುತ್ರೇಣ ಯುತೋ ನಗರ್ಯಾಂ ।
ಮಾರ್ಗೇಷು ಲಾಜೈಃ ಕುಸುಮೈಃ ಸಮಂತಾ
ದ್ವಿಕೀರ್ಯಮಾಣೋ ನೃಪತಿರ್ಜಗಾಮ ॥೪೭॥

---

ಪಟ್ಟಣದ ಸಮೀಪಕ್ಕೆ ರಾಜನು ಬಂದನೆಂಬುದನ್ನು ಕೇಳಿ ಅವನ ಸಮಸ್ತ ಮಂತ್ರಿಗಳೂ ಬೇಗನೆ ಸಮೀಪಕ್ಕೆ ಬಂದರು. ಪುರೋಹಿತರೊಡನೆ ಕೂಡಿದ ಸಮಸ್ತ ಜನರೂ ಫಲಪುಷ್ಪಾದಿ ಮಂಗಲಕರವಾದ ವಸ್ತುಗಳೊಡನೆ ರಾಜನ ಸಮೀಪಕ್ಕೆ ಸ್ವಾಗತಿಸಲು ಬಂದರು. ॥೪೫॥

ಹೊಗಳಭಟರೂ ಗಾಯಕರೂ ರಥ ನಡೆಸುವವರೂ ಬೇಗನೆ ರಾಜನ ಇದುರಿಗೆ ಬಂದು ನಿಂತರು. ರಾಜನು ಪಟ್ಟಣಕ್ಕೆ ಬಂದು ಮೊದಲು ಬಂದ ಜನರನ್ನು ಯೋಗಕ್ಷೇಮ ವಿಚಾರದ ಮಾತಿನಿಂದಲೂ, ಕಣ್ಣಿನಿಂದ ಮುಗುಳುನಗೆಯೊಡನೆ ನೋಡುವುದರಿಂದಲೂ ಸಮಾಧಾನಪಡಿಸಿದನು. ॥೪೬॥

ರಾಜನು ಪಟ್ಟಣದ ಜನರಿಂದ ಪೂಜಿಸಲ್ಪಟ್ಟವನಾಗಿ ಮಗನೊಡನೆ ಕೂಡಿ ಪಟ್ಟಣದೊಳಗೆ ಪ್ರವೇಶಮಾಡಿದನು. ದಾರಿಯಲ್ಲಿ ಪುರಜನರು ಮಂಗಳಾರ್ಥವಾಗಿ ಹೂಗಳನ್ನೂ ಅರಳನ್ನೂ ರಾಜನ ಮೇಲೆ ಎರಚುತ್ತಿದ್ದರು. ॥೪೭॥

ಗೃಹಂ ಸಮೃದ್ಧಂ ಸಚಿವೈಃ ಸಮೇತಃ
ಸುತಂ ಸಮಾದಾಯ ಮುದಾ ಕರಾಭ್ಯಾಂ ।
ರಾಜ್ಞೈ ದದೌ ಚಾಽಥ ಸುತಂ ಮನೋಜ್ಞಂ
ಸದ್ಯಃ ಪ್ರಸೂತಂ ಚ ಮನೋಭವಾಭಂ ॥೪೮॥

ರಾಜ್ಞೀ ಗೃಹೀತ್ವಾಽಭಿನವಂ ತನೂಜಂ
ಪಪ್ರಚ್ಛ ರಾಜಾನಮನಿಂದಿತಾ ಸಾ ।
ರಾಜನ್ಕುತಶ್ಚೈಷ ಸುತಃ ಸುಜನ್ಮಾ
ಪ್ರಾಪ್ತಸ್ತ್ವಯಾ ಮನ್ಮಥತುಲ್ಯರೂಪಃ ॥೪೯॥

ಕೇನೈಷ ದತ್ತಃ ಕಥಯಾಶು ಕಾಂತ
ಚೇತೋ ಮದೀಯಂ ಪ್ರಹೃತಂ ಸುತೇನ ।
ನೃಪಸ್ತದೋವಾಚ ಮುದಾನ್ವಿತೋಽಸೌ
ಪ್ರಿಯೇ ರಮೇಶೇನ ಸುತೋ ಹಿ ಮಹ್ಯಂ ॥೫೦॥

---

ರಾಜನು ಸಂತೋಷದಿಂದ ತನ್ನೆರಡು ಕೈಗಳಿಂದಲೂ ಪುತ್ರನನ್ನೆತ್ತಿಕೊಂಡು ಮಂತ್ರಿಗಳೊಡನೆ ಸಕಲ ವಸ್ತುಗಳಿಂದ ತುಂಬಿದ ತನ್ನ ಮನೆಯನ್ನು ಪ್ರವೇಶಿಸಿದನು. ಬಳಿಕ ಆಗ ತಾನೇ ಹುಟ್ಟಿ ಮನೋಹರನಾಗಿ ಮನ್ಮಥನಿಗೆ ಸಮಾನನಾಗಿರುವ ಆ ಮಗನನ್ನು ತನ್ನ ಪತ್ನಿಯಾದ ರಾಣಿಗೆ ಕೊಟ್ಟನು. ॥೪೮॥

ಗುಣವತಿಯಾದ ರಾಣಿಯು ಆಗತಾನೇ ಹುಟ್ಟಿದ ಆ ಮಗುವನ್ನು ಎತ್ತಿಕೊಂಡು ರಾಜನನ್ನು ಕುರಿತು " ಓ ರಾಜನೇ, ಮನ್ಮಥನಿಗೆ ಸಮಾನವಾದ ರೂಪವುಳ್ಳ ಈ ಸುಂದರವಾದ ಮಗುವು ನಿನಗೆ ಎಲ್ಲಿ ದೊರೆಯಿತು " ಎಂದು ಕೇಳಿದಳು. ॥೪೯॥

ಓ ಪ್ರಿಯನೇ, ಈ ಮಗುವನ್ನು ನಿನಗೆ ಯಾರು ಕೊಟ್ಟರು ? ಬೇಗನೆ ಹೇಳು. ಈ ಮಗುವು ನನ್ನ ಮನಸ್ಸನ್ನು ವಿಶೇಷವಾಗಿ ಅಪಹರಿಸಿರುವುದು ಎಂದು ಕೇಳುತ್ತಲು, ರಾಜನು ಸಂತೋಷದಿಂದ ಕೂಡಿ ಎಲೌ ಪ್ರಿಯೇ, ಲಕ್ಷ್ಮೀಪತಿಯಾದ ನಾರಾಯ

ಲೋಲಾಕ್ಷಿ ದತ್ತಃ ಕಮಲಾಸಮುತ್ಥೋ
ಜನಾರ್ದನಾಂಶೋಽಯಮಹೀನಸತ್ತ್ವಃ ।
ಸಾ ತಂ ಗೃಹೀತ್ವಾ ಮುದಮಾಪ ರಾಜ್ಞೀ
ರಾಜಾ ಚಕಾರೋತ್ಸವಮದ್ಭುತಂ ಚ ॥೩೦॥

ದದೌ ಚ ದಾನಂ ಕಿಲ ಯಾಚಕೇಭ್ಯೋ
ಗೀತಾನಿ ವಾದ್ಯಾನಿ ಬಹೂನಿ ನೇದುಃ ।
ಕೃತ್ವೋತ್ಸವಂ ಭೂಪತಿರಾತ್ಮಜಸ್ಯ
ನಾಮ್ನೈಕವೀರೇತಿ ಚಕಾರ ವಿಶ್ರುತಂ ॥೩೨॥

ಸುಖಂ ಚ ಸಂಪ್ರಾಪ್ಯ ಮುದಾಽನ್ವಿತೋಽಸೌ
ನನಂದ ದೇವಾಧಿಪತುಲ್ಯವೀರ್ಯಃ ।
ಪುತ್ರಂ ಹರೇರೂಪಗುಣಾನುರೂಪಂ
ಸಂಪ್ರಾಪ್ಯ ವಂಶಸ್ಯ ಋಣಾಚ್ಚ ಮುಕ್ತಃ ॥೩೩॥

---

ಣನು ಲಕ್ಷ್ಮೀದೇವಿಯಲ್ಲಿ ಹುಟ್ಟಿದ ನಾರಾಯಣನ ಅಂಶದಿಂದ ಕೂಡಿ ವಿಶೇಷ ವಾದ ಬಲ ಪರಾಕ್ರಮಗಳಿಂದ ಕೂಡಿದ ಈ ಪುತ್ರನನ್ನು ನನಗೆ ಕೊಟ್ಟನು. ಎಂದನು. ॥೩೦॥

ಆ ರಾಣಿಯು ಆ ಬಾಲಕನನ್ನು ಎತ್ತಿಕೊಂಡು ಸಂತೋಷ ಹೊಂದಿದಳು. ರಾಜನೂ ವಿಶೇಷವಾದ ಉತ್ಸವವನ್ನು ಮಾಡಿಸಿದನು. ಯಾಚಕರಿಗೆ ದಾನಗಳನ್ನು ಕೊಟ್ಟನು. ಮಂಗಲಕರವಾದ ಗೀತವಾದ್ಯಗಳು ಬಹಳವಾಗಿ ಧ್ವನಿಮಾಡಿದುವು. ರಾಜನು ತನ್ನ ಪುತ್ರನಿಗೆ ಈ ರೀತಿಯಲ್ಲಿ ಉತ್ಸವವನ್ನು ಮಾಡಿ ಏಕವೀರನೆಂದು ನಾಮಕರಣಮಾಡಿದನು. ॥೩೧-೩೨॥

ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ರಾಜನು ಸುಖವನ್ನು ಪಡೆದು ಸಂತೋಷದಿಂದ ಕೂಡಿ ರೂಪ ಮತ್ತು ಗುಣಗಳಿಂದ ಹರಿಗೆ ಸಮಾನನಾದ ಪುತ್ರನನ್ನು ಪಡೆದು ತನ್ನ ವಂಶದ ಪಿತೃಋಣದಿಂದ ಮುಕ್ತನಾದನು. ॥೩೩॥

**ಇತಿ ಸಕಲಸುರಾಣಾಮೀಶ್ವರೇಣಾಽರ್ಪಿತಂ ತಂ**
**ಸಕಲಗುಣಗಣಾಢ್ಯಂ ಪುತ್ರಮಾಸಾದ್ಯ ರಾಜಾ ।**
**ವಿವಿಧಸುಖವಿನೋದೈರ್ಭಾರ್ಯಯಾ ಸೇವ್ಯಮಾನೋ**
**ವ್ಯಹರತ ನಿಜಗೇಹೇ ಶಕ್ರತುಲ್ಯಪ್ರತಾಪಃ ॥೫೪॥**

**ಇತಿ ಶ್ರೀದೇವೀಭಾಗವತೇಮಹಾಪುರಾಣೇ ಷಷ್ಠಸ್ಕಂಧೇ**
**ವಿಂಶೋಽಧ್ಯಾಯಃ.**

---

ಹೀಗೆ ಸಮಸ್ತ ದೇವತೆಗಳಿಗೂ ಒಡೆಯನಾದ ನಾರಾಯಣನು ಕೊಟ್ಟ ಸಮಸ್ತ ಸದ್ಗುಣಗಣಗಳಿಂದ ಕೂಡಿದ ಪುತ್ರನನ್ನು ಪಡೆದು ಹರಿವರ್ಮರಾಜನು ಬಗೆಬಗೆಯ ಸುಖಗಳಿಂದಲೂ ವಿನೋದಗಳಿಂದಲೂ ಕೂಡಿ ಹೆಂಡತಿಯು ಸೇವೆ ಮಾಡುತ್ತಿರಲು ದೇವೇಂದ್ರನಿಗೆ ಸಮಾನವಾದ ಪರಾಕ್ರಮ ಉಳ್ಳವನಾಗಿ ತನ್ನ ಅರಮನೆಯಲ್ಲಿ ವಿಹರಿಸುತ್ತಿದ್ದನು. ||೫೪||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಇಪ್ಪತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

### || ಏಕವಿಂಶೋಽಧ್ಯಾಯಃ ||

### ಇಪ್ಪತ್ತೊಂದನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಜಾತಕರ್ಮಾದಿಸಂಸ್ಕಾರಾಂಶ್ಚಕಾರ ನೃಪತಿಸ್ತದಾ ।**
**ದಿನೇದಿನೇ ಜಗಾಮಾಶು ವೃದ್ಧಿಂ ಬಾಲಃ ಸುಲಾಲಿತಃ ॥೧॥**

**ನೃಪಃ ಸಂಸಾರಜಂ ಪ್ರಾಪ್ಯ ಸುಖಂ ಪುತ್ರಸಮುದ್ಭವಂ ।**
**ಋಣತ್ರಯವಿಮೋಕ್ಷಂ ಚ ಮೇನೇ ತೇನ ಮಹಾತ್ಮನಾ ॥೨॥**

**ಷಷ್ಠೇಽನ್ನಪ್ರಾಶನಂ ತಸ್ಯ ಕೃತ್ವಾ ಮಾಸಿ ಯಥಾವಿಧಿ ।**
**ತೃತೀಯೇಽಥ ತಥಾವರ್ಷೇ ಚೂಡಾಕರಣಮುತ್ತಮಂ ॥೩॥**

---

ವ್ಯಾಸಮುನಿಯು ಹೇಳಿದನು—ಹರಿವರ್ಮ ರಾಜನು ಬಾಲಕನಿಗೆ ಜಾತಕರ್ಮವೇ ಮೊದಲಾದ ಸಂಸ್ಕಾರಗಳನ್ನು ಮಾಡಿದನು. ಪ್ರೀತಿಯಿಂದ ಸಾಕುತ್ತಿದ್ದುದರಿಂದ ಬಾಲಕನು ದಿನ ದಿನಕ್ಕೂ ಬೆಳೆಯುತ್ತಿದ್ದನು. ||೧||

ರಾಜನು ಸಂಸಾರದಲ್ಲಿ ಮುಖ್ಯವಾದ ಪುತ್ರಪ್ರಾಪ್ತಿ ಸಂಬಂಧವಾದ ಸುಖವನ್ನು ಪಡೆದು ಆ ಮಹಾತ್ಮನಾದ ಪುತ್ರನಿಂದ ದೇವಋಷಿ ಪಿತೃಗಳ ಋಣವು ತೀರುವುದೆಂದು ಭಾವಿಸಿದನು. ||೨||

ಅರನೆಯ ತಿಂಗಳಲ್ಲಿ ಆ ಬಾಲಕನಿಗೆ ಅನ್ನಪ್ರಾಶನ ಕರ್ಮವನ್ನೂ ಮೂರನೆಯ ವರ್ಷದಲ್ಲಿ ಚೂಡಾಕರ್ಮವನ್ನೂ ಮಾಡಿಸಿ ಬ್ರಾಹ್ಮಣರಿಗೂ ಇತರ ಯಾಚಕ

ಚಕಾರ ಬ್ರಾಹ್ಮಣಾನ್ ದ್ರವ್ಯೈಃ ಸಂಪೂಜ್ಯ ವಿವಿಧೈರ್ಧನೈಃ ।
ಗೋಭಿಶ್ಚ ವಿವಿಧೈರ್ದಾನೈರ್ಯಾಚಕಾನಿತರಾನಪಿ ॥೪॥

ವರ್ಷೇ ಚೈಕಾದಶೇ ತಸ್ಯ ಮೌಂಜೀಬಂಧನಕರ್ಮ ವೈ ।
ಕಾರಯಿತ್ವಾ ಧನುರ್ವೇದಮಧ್ಯಾಪಯತ ಪಾರ್ಥಿವಃ ॥೫॥

ಅಧೀತವೇದಂ ಪುತ್ರಂ ತಂ ರಾಜಧರ್ಮವಿಶಾರದಂ ।
ದೃಷ್ಟ್ವಾ ತಸ್ಯಾಭಿಷೇಕಾಯ ಮತಿಂ ಚಕ್ರೇ ಜನಾಧಿಪಃ ॥೬॥

ಪುಷ್ಯಾರ್ಕಯೋಗಸಂಯುಕ್ತೇ ದಿವಸೇ ನೃಪಸತ್ತಮಃ ।
ಕಾರಯಾಮಾಸ ಸಂಭಾರಾನಭಿಷೇಕಾರ್ಥಮಾದರಾತ್ ॥೭॥

ದ್ವಿಜಾನಾಹೂಯ ವೇದಜ್ಞಾನ್ ಸರ್ವಶಾಸ್ತ್ರವಿಚಕ್ಷಣಾನ್ ।
ಅಭಿಷೇಕಂ ಚಕಾರಾಽಸೌ ವಿಧಿವತ್ಸ್ವಾತ್ಮಜಸ್ಯ ಹ ॥೮॥

ಜಲಮಾನೀಯ ತೀರ್ಥೇಭ್ಯಃ ಸಾಗರೇಭ್ಯಶ್ಚ ಪಾರ್ಥಿವಃ ।
ಸ್ವಯಂ ಚಕಾರ ವಿಧವದಭಿಷೇಕಂ ಶುಭೇ ದಿನೇ ॥೯॥

---

ರಿಗೂ ಧನವನ್ನೂ ಬಗೆ ಬಗೆಯ ವಸ್ತುಗಳನ್ನೂ ಗೋದಾನವೇ ಮೊದಲಾದ ಸಮಸ್ತ ದಾನಗಳನ್ನೂ ಮಾಡಿ ಅವರನ್ನು ಪೂಜಾದಿಗಳಿಂದ ತೃಪ್ತಿಪಡಿಸಿದನು. ॥೩-೪॥

ಆ ರಾಜನು ಹನ್ನೊಂದನೆಯ ವರ್ಷದಲ್ಲಿ ಆ ಬಾಲಕನಿಗೆ ಉಪನಯನ ಕರ್ಮವನ್ನು ಮಾಡಿಸಿ ಧನುರ್ವೇದ ವಿದ್ಯಾಭ್ಯಾಸವನ್ನು ಮಾಡಿಸಿದನು. ವೇದಾಭ್ಯಾಸವನ್ನು ಮಾಡಿ ರಾಜಧರ್ಮವನ್ನು ಚೆನ್ನಾಗಿ ತಿಳಿದಿದ್ದ ಆ ಬಾಲಕನನ್ನು ನೋಡಿ ಹರಿವರ್ಮ ರಾಜನು ಅವನಿಗೆ ಪಟ್ಟಾಭಿಷೇಕವನ್ನು ಮಾಡಬೇಕೆಂದು ಆಲೋಚಿಸಿದನು. ॥೫-೬॥

ಆ ರಾಜಶ್ರೇಷ್ಠನು ಭಾನುವಾರ ಪುಷ್ಯ ನಕ್ಷತ್ರದ ಯೋಗವಿದ್ದಾಗ ಪಟ್ಟಾಭಿಷೇಕವನ್ನು ಮಾಡಬೇಕೆಂದು ಆ ಮಹೋತ್ಸವಕ್ಕಾಗಿ ಸಕಲ ಪದಾರ್ಥಗಳನ್ನೂ ಸಿದ್ಧಗೊಳಿಸಿ ವೇದಶಾಸ್ತ್ರಗಳನ್ನು ಬಲ್ಲ ಬ್ರಾಹ್ಮಣರನ್ನು ಕರೆಸಿ ವಿಧಿಗನುಸಾರವಾಗಿ ತನ್ನ ಮಗನಿಗೆ ರಾಜ್ಯಪಟ್ಟಾಭಿಷೇಕವನ್ನು ಮಾಡಿಸಿದನು. ॥೭-೮॥

ಆ ರಾಜನು ತೀರ್ಥಗಳಿಂದಲೂ ಸಾಗರಗಳಿಂದಲೂ ನೀರನ್ನು ತರಿಸಿ ಶುಭ ದಿನದಲ್ಲಿ ತಾನೂ ವಿಧಿಗನುಸಾರವಾಗಿ ಮಗನಿಗೆ ಪಟ್ಟಾಭಿಷೇಕವನ್ನು ಮಾಡಿ

ಧನಂ ದತ್ತ್ವಾಽಥ ವಿಪ್ರೇಭ್ಯೋ ರಾಜ್ಯಂ ಪುತ್ರೇ ನಿವೇಶ್ಯ ಸಃ ।
ಜಗಾಮ ವನಮೇವಾಽಽಶು ಸ್ವರ್ಗಕಾಮಃ ಸ ಭೂಪತಿಃ ॥೧೦॥

ಏಕವೀರಂ ನೃಪಂ ಕೃತ್ವಾ ಸಂಮಾನ್ಯ ಸಚಿವಾನಥ ।
ಭಾರ್ಯಯಾ ಸಹ ಭೂಪಾಲಃ ಪ್ರವಿವೇಶ ವನಂ ವಶೀ ॥೧೧॥

ಮೈನಾಕಶಿಖರೇ ರಾಜಾ ಕೃತ್ವಾ ತಾರ್ತೀಯಮಾಶ್ರಮಂ ।
ನಿತ್ಯಂ ಪತ್ರಫಲಾಹಾರಶ್ಚಿಂತಯಾಮಾಸ ಪಾರ್ವತೀಂ ॥೧೨॥

ಏವಂ ಸ ನೃಪತಿಃ ಕೃತ್ವಾ ದಿಷ್ಟಾಂತೇ ಸಹ ಭಾರ್ಯಯಾ ।
ಮೃತೋಽಸೌ ವಾಸವಂ ಲೋಕಂ ಗತಃ ಪುಣ್ಯೇನ ಕರ್ಮಣಾ ॥೧೩॥

ಇಂದ್ರಲೋಕಂ ಪಿತಾ ಪ್ರಾಪ್ತ ಇತಿ ಶ್ರುತ್ವಾಽಥ ಹೈಹಯಃ ।
ಚಕಾರ ವೇದನಿರ್ದಿಷ್ಟಂ ಕರ್ಮ ಚೈವೌರ್ಧ್ವದೈಹಿಕಂ ॥೧೪॥

---

ಬ್ರಾಹ್ಮಣರಿಗೆ ಧನವನ್ನು ದಾನ ಮಾಡಿ ಪುತ್ರನಿಗೆ ರಾಜ್ಯವನ್ನು ವಹಿಸಿ ತಾನು ಸ್ವರ್ಗಾಪೇಕ್ಷೆಯುಳ್ಳವನಾಗಿ ವಾನಪ್ರಸ್ಥ ಧರ್ಮಾಚರಣೆಗಾಗಿ ಬೇಗನೆ ವನಕ್ಕೆ ಪ್ರಯಾಣ ಮಾಡಿದನು. ॥೯-೧೦॥

ಹರಿವರ್ಮ ರಾಜನು ಆ ಏಕವೀರನನ್ನು ದೊರೆಯಾಗಿ ಮಾಡಿ ಮಂತ್ರಿಗಳಿಗೆಲ್ಲ ಮರ್ಯಾದೆಯನ್ನು ಮಾಡಿ ಬಹುಮಾನಗಳನ್ನು ಕೊಟ್ಟು ತಾನು ಇಂದ್ರಿಯ ನಿಗ್ರಹವನ್ನು ಮಾಡಿ ತನ್ನ ಪತ್ನಿಯೊಡನೆ ವನವನ್ನು ಪ್ರವೇಶಿಸಿ ಮೈನಾಕವೆಂಬ ಪರ್ವತ ಶಿಖರದಲ್ಲಿ ಮೂರನೆಯದಾದ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಪ್ರತಿ ದಿನವೂ ಎಲೆಗಳನ್ನೂ ಹಣ್ಣುಗಳನ್ನೂ ಆಹಾರ ಮಾಡುತ್ತಾ ಪಾರ್ವತೀದೇವಿಯನ್ನು ಧ್ಯಾನಿಸುತ್ತಿದ್ದನು. ॥೧೧-೧೨॥

ಹೀಗೆ ಆ ರಾಜನು ವಾನಪ್ರಸ್ಥ ಧರ್ಮವನ್ನಾಚರಿಸಿ ತನ್ನ ಪ್ರಾರಬ್ಧಕರ್ಮವು ಮುಗಿಯುತ್ತಲು ಶರೀರವನ್ನು ಬಿಟ್ಟು ತನ್ನ ಪತ್ನಿಯೊಡನೆ ಪುಣ್ಯಕರ್ಮಫಲಾನುಭವಕ್ಕಾಗಿ ಸ್ವರ್ಗಕ್ಕೆ ಹೋದನು. ॥೧೩॥

ಹೈಹಯನು ತನ್ನ ತಂದೆಯು ತನ್ನ ಸತ್ಕರ್ಮಗಳ ಫಲವಾಗಿಯೂ ಸ್ವರ್ಗಕ್ಕೆ ಹೋದನೆಂದು ಕೇಳಿ ತಂದೆಗೆ ವೇದೋಕ್ತವಾಗಿ ಸಮಸ್ತವಾದ ಉತ್ತರಕ್ರಿಯೆಗಳನ್ನು

ಕೃತ್ವೋತ್ತರಾಃ ಕ್ರಿಯಾಃ ಸರ್ವಾಃ ಪಿತುಃ ಪಾರ್ಥಿವನಂದನಃ ।
ರಾಜ್ಯಂ ಚಕಾರ ಮೇಧಾವೀ ಪಿತ್ರಾ ದತ್ತಂ ಸುಸಂಮತಂ ॥೧೫॥

ಏಕವೀರೋಽಥ ಧರ್ಮಜ್ಞಃ ಪ್ರಾಪ್ಯ ರಾಜ್ಯಮನುತ್ತಮಂ ।
ಬಭುಜೇ ವಿವಿಧಾನ್ಭೋಗಾನ್ಸಚಿವೈಶ್ಚ ಸಮಾನಿತಃ ॥೧೬॥

ಏಕಸ್ಮಿನ್ದಿವಸೇ ರಾಜಾ ಮಂತ್ರಿಪುತ್ರೈಃ ಸಮನ್ವಿತಃ ।
ಜಗಾಮ ಜಾಹ್ನವೀತೀರೇ ಹಯಾರೂಢಃ ಪ್ರತಾಪವಾನ್ ॥೧೭॥

ಸಂಪಶ್ಯನ್ಪಾದಪಾನ್ರಮ್ಯಾನ್ಕೋಕಿಲಾಲಾಪಸಂಯುತಾನ್ ।
ಪುಷ್ಪಿತಾನ್ಫಲಸಂಯುಕ್ತಾನ್ ಷಟ್ಪದಾಲಿವಿರಾಜಿತಾನ್ ॥೧೮॥

ಮುನೀನಾಮಾಶ್ರಮಾನ್ದಿವ್ಯಾನ್ ವೇದಧ್ವನಿನಿನಾದಿತಾನ್ ।
ಹೋಮಧೂಮಾವೃತಾಕಾಶಾನ್ ಮೃಗಶಾಬಸಮಾವೃತಾನ್ ॥೧೯॥

ಕೇದಾರಾನ್ ಶಾಲಿಸಂಪಕ್ವಾನ್ ಗೋಪಿಕಾಭಿಃ ಸುರಕ್ಷಿತಾನ್ ।
ಪ್ರಫುಲ್ಲಪಂಕಜಾರಾಮಾನ್ ನಿಕುಂಜಾಂಶ್ಚ ಮನೋರಮಾನ್ ॥೨೦॥

---

ಮಾಡಿ ಬುದ್ಧಿವಂತನಾದುದರಿಂದ ತಂದೆಯು ಕೊಟ್ಟ ರಾಜ್ಯವನ್ನು ಶಾಸ್ತ್ರವೂ ಜನರೂ ಎಲ್ಲರೂ ಒಪ್ಪುವಂತೆ ಪಾಲಿಸುತ್ತಿದ್ದನು. ॥೧೪-೧೫॥

ಧರ್ಮವನ್ನು ಬಲ್ಲ ಏಕವೀರನು ಶ್ರೇಷ್ಠವಾದ ರಾಜ್ಯಪದವಿಯನ್ನು ಹೊಂದಿ ಮಂತ್ರಿಗಳ ಗೌರವಕ್ಕೆ ಪಾತ್ರನಾಗಿ ಬಗೆಬಗೆಯ ಸುಖಗಳನನ್ನನುಭವಿಸುತ್ತಿದ್ದನು. ॥೧೬॥

ಒಂದಾನೊಂದುದಿನ ಶೂರನಾದ ಏಕವೀರರಾಜನು ಮಂತ್ರಿ ಪುತ್ರರ ಜತೆಯಲ್ಲಿ ಕುದುರೆಯನ್ನೇರಿ ಗಂಗಾನದಿಯ ತೀರಕ್ಕೆ ಹೋದನು. ॥೧೭॥

ಆ ಗಂಗಾತೀರದಲ್ಲಿ ಕೋಗಿಲೆ ಧ್ವನಿಯಿಂದ ಕೂಡಿ ಹೂಕಾಯಿಗಳನ್ನು ಬಿಟ್ಟು ದುಂಬಿಗಳಿಂದ ಕಂಗೊಳಿಸುತ್ತಿರುವ ಮನೋಹರವಾದ ಮರಗಳನ್ನೂ ವೇದಧ್ವನಿಯಿಂದ ಕೂಡಿ ಹೋಮಮಾಡಿದ ಹೊಗೆಯು ಆಕಾಶದಲ್ಲಿ ತುಂಬಿಕೊಂಡು ಜಿಂಕೆಯ ಮರಿಗಳು ಓಡಾಡುತ್ತಿರುವ ಮುನಿಗಳ ಆಶ್ರಮಗಳನ್ನೂ ನೋಡುತ್ತಾ, ॥೧೮-೧೯॥

ಬತ್ತವು ಹಣ್ಣಾಗಿ ಬೆಳೆದ ಗದ್ದೆಗಳನ್ನೂ ಅವುಗಳನ್ನು ಕಾಯುತ್ತಿರುವ ಸ್ತ್ರೀಯರನ್ನೂ ಅರಳಿದ ಕಮಲದ ಹೂಗಳುಳ್ಳ ತೋಟಗಳನ್ನೂ, ಮನೋಹರವಾದ ಲತಾ

ಪ್ರೇಕ್ಷಮಾಣಃ ಪ್ರಿಯಾಲಾಂಸ್ತು ಚಂಪಕಾನ್ಪನಸದ್ರುಮಾನ್ ।
ವಕುಲಾಂಸ್ತಿಲಕಾನ್ನೀಪಾನ್ಮಂದಾರಾಂಶ್ಚ ಪ್ರಫುಲ್ಲಿತಾನ್ ॥೨೦॥

ಶಾಲಾಂಸ್ತಾಲತಮಾಲಾಂಶ್ಚ ಜಂಬುಚೂತಕದಂಬಕಾನ್ ।
ಸ ಗಚ್ಛನ್ ಜಾಹ್ನವೀತೋಯೇ ಪ್ರಫುಲ್ಲಂ ಶತಪತ್ರಕಂ ॥೨೨॥

ಪಂಕಜಂ ಚಾತಿಗಂಧಾಢ್ಯಮಪಶ್ಯದವನೀಪತಿಃ ।
ದಕ್ಷಿಣೇ ಜಲಜಸ್ಯಾಥ ಪಾರ್ಶ್ವೇ ಕಮಲಲೋಚನಾಂ ॥೨೩॥

ಕನಕಾಭಾಂ ಸುಕೇಶೀಂ ಚ ಕಂಬುಗ್ರೀವಾಂ ಕೃಶೋದರೀಂ ।
ಬಿಂಬೋಷ್ಠೀಂ ಸುಂದರೀಂ ಕಿಂಚಿತ್ಸಮುದ್ಯತ್ಸುಪಯೋಧರಾಂ ॥೨೪॥

ಸುನಾಸಾಂ ಚಾರುಸರ್ವಾಂಗೀಮಪಶ್ಯತ್ಕನ್ಯಕಾಂ ನೃಪಃ ।
ರುದತೀಂ ತಾಂ ಸಖೀಂ ತ್ಯಕ್ತ್ವಾ ವಿಹ್ವಲಾಂ ದುಃಖಪೀಡಿತಾಂ ॥೨೫॥

---

ಗೃಹಗಳನ್ನೂ, ಪ್ರಿಯಾಲು, ಸಂಪಗೆ, ಹಲಸು, ಪಗಡೆಯ ಮರ, ತಿಲಕ, ಮತ್ತಿ, ಮಂದಾರ, ಆರಗಿನ ಮರ, ತಾಳೆಗಿಡ, ಹೊಂಗೆ, ನೇರಿಲೆ, ಮಾವು, ಕದಂಬ ಮುಂತಾದ ಮರಗಳನ್ನೂ ನೋಡುತ್ತಾ, ॥೨೦-೨೧॥

ಆ ರಾಜನು ಮುಂದಕ್ಕೆ ಹೋಗುತ್ತಾ ಗಂಗೆಯ ನೀರಿನಲ್ಲಿ ಚೆನ್ನಾಗಿ ಅರಳಿದ ನೂರು ದಳಗಳುಳ್ಳ, ವಿಶೇಷವಾದ ಸುವಾಸನೆಯಿಂದ ಕೂಡಿದ ಕಮಲದ ಹೂವನ್ನು ನೋಡಿದನು. ಆ ಹೂವಿನ ದಕ್ಷಿಣ ದಿಕ್ಕಿನ ಪಕ್ಕದಲ್ಲಿಯೇ ಕಮಲದಂತೆ ಕಣ್ಣುಳ್ಳ, ಚಿನ್ನದ ಬಣ್ಣದಂತೆ ಕಾಂತಿಯುಳ್ಳ, ಉದ್ದವಾದ ಮೃದುವಾದ ಕೂದಲುಗಳುಳ್ಳ, ಶಂಖದಂತೆ ಕುತ್ತಿಗೆಯೂ ಕೃಶವಾದ ಶರೀರವೂ ತೊಂಡೆಯಹಣ್ಣಿನಂತೆ ತುಟಿಯೂ ನೀಟಾದ ಮೂಗೂ ಸುಂದರವಾದ ಎಲ್ಲ ಅವಯವಸನ್ನಿವೇಶಗಳೂ ಉಳ್ಳ, ಆಗತಾನೇ ಯೌವನ ಪ್ರಾದುರ್ಭಾವವಾಗುತ್ತಿರುವ ಕನ್ಯೆಯನ್ನು ಕಂಡನು. ॥೨೨-೨೩-೨೪॥

ಆ ಕನ್ಯೆಯು ತನ್ನ ಸಖಿಯನ್ನಗಲಿ ಮುಂದುಗಾಣದೆ ದುಃಖದಿಂದ ಕಣ್ಣಿನಲ್ಲಿ ನೀರನ್ನು ಸುರಿಸುತ್ತಾ ಕುರರೀ ಎಂಬ ಹಕ್ಕಿಯಂತೆ ಆ ನಿರ್ಜನಪ್ರದೇಶದಲ್ಲಿ

ಸಾಶ್ರುನೇತ್ರಾಂ ಕ್ರಂದಮಾನಾಂ ವಿಜನೇ ಕುರರೀಮಿವ ।
ಸಂವೀಕ್ಷ್ಯ ರಾಜಾ ಪಪ್ರಚ್ಛ ಕನ್ಯಕಾಂ ಶೋಕಕಾರಣಂ ॥೨೬॥

ಸುನಸೇ ಬ್ರೂಹಿ ಕಾಽಸಿ ತ್ವಂ ಕಸ್ಯ ಪುತ್ರೀ ಶುಭಾನನೇ ।
ಗಂಧರ್ವೀ ದೇವಕನ್ಯಾಽಥ ಕಥಂ ರೋದಿಷಿ ಸುಂದರಿ ॥೨೭॥

ಕಥಮೇಕಾಕಿನೀ ಬಾಲೇ ತ್ಯಕ್ತಾ ಕೇನ ಪಿಕಸ್ವರೇ ।
ಪತಿಸ್ತೇ ಕ್ವ ಗತಃ ಕಾಂತೇ ಪಿತಾ ವಾ ಬ್ರೂಹಿ ಸಾಂಪ್ರತಂ ॥೨೮॥

ಕಿಂ ತೇ ದುಃಖಮುರಾಲಭ್ರು ಕಥಯಾಽದ್ಯ ಮಮಾಂತಿಕೇ ।
ಕರೋಮಿ ದುಃಖನಾಶಂ ತೇ ಸರ್ವಥೈವ ಕೃಶೋದರಿ ॥೨೯॥

ನ ರಾಜ್ಯೇ ಮಮ ತನ್ವಂಗಿ ಪೀಡಾಂ ಕೋಽಪಿ ಕರೋತ್ಯಲಂ ।
ನ ಭಯಂ ಚೌರಜಂ ಕಾಂತೇ ನ ರಾಕ್ಷಸಭಯಂ ತಥಾ ॥೩೦॥

ಮಯಿ ಶಾಸತಿ ಭೂಪಾಲೇ ನೊತ್ಪಾತಾ ದಾರುಣಾ ಭುವಿ ।
ಭಯಂ ನ ವ್ಯಾಘ್ರಸಿಂಹೇಭ್ಯೋ ನ ಭಯಂ ಕಸ್ಯಚಿದ್ಭವೇತ್ ॥೩೧॥

---

ಗಟ್ಟಿಯಾಗಿ ಅಳುತ್ತಾ ಇದ್ದುದನ್ನು ನೋಡಿ ಆ ರಾಜನು ಆ ಕನ್ಯೆಯನ್ನು ಕುರಿತು ದುಃಖದ ಕಾರಣವನ್ನು ಕೇಳಿದನು. ॥೨೫-೨೬॥

ಸುಂದರವಾದ ಮೂಗುಳ್ಳ ಎಲೈ ಕನ್ಯೆಯೇ, ನೀನು ಯಾರು? ಯಾರ ಮಗಳು? ಗಂಧರ್ವಸ್ತ್ರೀಯೋ? ದೇವಕನ್ಯೆಯೋ? ನೀನೇಕೆ ಅಳುತ್ತಿರುವೆ? ನೀನೊಬ್ಬಳೇ ಇಲ್ಲಿರಲು ಕಾರಣವೇನು? ನಿನ್ನನ್ನಾರು ತಂದು ಇಲ್ಲಿ ಬಿಟ್ಟರು? ನಿನ್ನ ಪತಿಯಾಗಲಿ ತಂದೆಯಾಗಲಿ ಎಲ್ಲಿ ಹೋದರು? ॥೨೭-೨೮॥

ಕುಟಿಲವಾದ ಹುಬ್ಬುಗಳುಳ್ಳ ಎಲೈ ಕನ್ಯೆಯೇ, ನಿನಗೆ ಉಂಟಾಗಿರುವ ದುಃಖವೇನು? ನನ್ನೆದುರಿಗೆ ಹೇಳು. ನಾನು ಸಂಪೂರ್ಣವಾಗಿ ನಿನ್ನ ದುಃಖವನ್ನು ನಿವಾರಿಸುವೆನು. ॥೨೯॥

ನನ್ನ ರಾಜ್ಯದಲ್ಲಿ ಯಾರೂ ಯಾರಿಗೂ ಹಿಂಸೆಯನ್ನು ಮಾಡುವುದಿಲ್ಲ. ಕಳ್ಳರ ಭಯವಾಗಲಿ ರಾಕ್ಷಸರ ಭಯವಾಗಲಿ ಇಲ್ಲ. ನಾನು ರಾಜನಾಗಿರುವಾಗ ಭಯಂಕರವಾದ ಉತ್ಪಾತಗಳೂ ಭೂಮಿಯಲ್ಲಾಗುವುದಿಲ್ಲ. ಹುಲಿ ಸಿಂಹ ದುರ್ಜನರು ಇವರ ಭಯವೂ ಯಾರಿಗೂ ಯಾವಾಗಲೂ ಉಂಟಾಗುವುದಿಲ್ಲ. ॥೩೦-೩೧॥

ವದ ವಾಮೋರು ಕಸ್ಮಾತ್ತ್ವಂ ವಿಲಾಪಂ ಜಾಹ್ನವೀತಟೇ ।
ಕರೋಷಿ ಪ್ರಾಣಹೀನಾऽತ್ರ ಕಿಂ ತೇ ದುಃಖಂ ವದಸ್ವ ಮೇ ॥೩೨॥

ಹನ್ಮ್ಯಹಂ ದುಃಖಮುತ್ಯುಗ್ರಂ ಪ್ರಾಣಿನಾಂ ಪೃಥಿವೀತಲೇ ।
ದೈವಂ ಚ ಮಾನುಷಂ ಕಾಂತೇ ವ್ರತಮೇತನ್ಮಮಾದ್ಭುತಂ ॥೩೩॥

ವಿಶಾಲಲೋಚನೇ ಬ್ರೂಹಿ ಕರೋಮಿ ತವ ಚಿಂತಿತಂ ।
ಇತ್ಯುಕ್ತೇ ವಚನೇ ರಾಜ್ಞಾ ಶ್ರುತ್ವೋವಾಚ ಮೃದುಸ್ವನಾ ॥೩೪॥

ಶೃಣು ರಾಜೇಂದ್ರ ವಕ್ಷ್ಯಾಮಿ ಮಮ ಶೋಕಸ್ಯ ಕಾರಣಂ ।
ವಿಪತ್ತಿರಹಿತಃ ಪ್ರಾಣೀ ಕಥಂ ರುದತಿ ಭೂಪತೇ ॥೩೫॥

ಪ್ರಬ್ರವೀಮಿ ಮಹಾಬಾಹೋ ಯದರ್ಥಂ ರುದತೀ ತ್ವಹಂ ।
ತವ ರಾಜ್ಯಾದನ್ಯದೇಶೇ ರಾಜಾ ಪರಮಧಾರ್ಮಿಕಃ ॥೩೬॥

---

ಸುಂದರವಾದ ತೊಡೆಗಳುಳ್ಳ ಕನ್ಯೆಯೇ ಈ ಗಂಗಾನದಿಯ ದಡದಲ್ಲಿ ನೀನೇಕೆ ಬಲಹೀನಳಾಗಿ ಅಳುತ್ತಿರುವೆ? ನಿನ್ನ ದುಃಖದ ಸ್ವರೂಪವನ್ನು ನನಗೆ ಹೇಳು. ॥೩೨॥

ವಿಸ್ತಾರವಾದ ಕಣ್ಣುಗಳುಳ್ಳ ಸ್ತ್ರೀಯೇ, ಭೂಲೋಕದಲ್ಲಿ ಪ್ರಾಣಿಗಳಿಗೆ ದೈವ ಸಂಬಂಧವಾದ ಮತ್ತು ಮನುಷ್ಯಸಂಬಂಧವಾದ ಕ್ರೂರವಾದ ಯಾವ ದುಃಖಗಳಿದ್ದರೂ ಅವುಗಳನ್ನು ನಾಶಮಾಡುವುದೇ ನನ್ನ ಆಶ್ಚರ್ಯಕರವಾದ ವ್ರತವಾಗಿರುವುದು. ನಿನ್ನ ದುಃಖವನ್ನೂ ಹೇಳು. ಅದನ್ನು ನಾಶಮಾಡಿ ನಿನ್ನ ಇಷ್ಟಾರ್ಥವನ್ನು ನೆರವೇರಿಸುವೆನು. ॥೩೩॥

ಹೀಗೆಂದು ರಾಜನು ಹೇಳುತ್ತಲೂ ಆ ಮಾತನ್ನು ಕೇಳಿ ಆ ಕನ್ಯೆಯು ಮೃದುವಾಗಿ ಮಾತನಾಡುತ್ತಾ, ಎಲೈ ರಾಜನೇ, ನನ್ನ ದುಃಖದ ಕಾರಣವನ್ನು ಕೇಳು. ಹೇಳುವೆನು. ವಿಪತ್ತುಗಳಿಲ್ಲದ ಪ್ರಾಣಿಗಳು ಏತಕ್ಕೆ ಅಳುವುವು? ಯಾವ ಕಾರಣದಿಂದ ನಾನು ಅಳುತ್ತಿರುವೆನೋ ಅದನ್ನು ವಿವರಿಸುವೆನು. ॥೩೪-೩೫॥

ನಿನ್ನ ರಾಜ್ಯವನ್ನು ಬಿಟ್ಟು ಬೇರೆ ದೇಶದಲ್ಲಿ ಅತ್ಯಂತ ಧರ್ಮಿಷ್ಠನಾದ ರೈಭ್ಯನೆಂಬ ರಾಜನು ಪುತ್ರರಿಲ್ಲದವನಾಗಿರುವನು. ಅವನ ಹೆಂಡಿತಿಯಾದ ರುಕ್ಮರೇಖೆ

ರೈಭ್ಯೋ ನಾಮ ಮಹಾರಾಜಃ ಸಂತಾನರಹಿತೋಽಭೃಶಂ ।
ತಸ್ಯ ಭಾರ್ಯಾ ಸುವಿಖ್ಯಾತಾ ರುಕ್ಮರೇಖೇತಿ ನಾಮತಃ ॥೩೭॥

ಸುರೂಪಾ ಚತುರಾ ಸಾಧ್ವೀ ಸರ್ವಲಕ್ಷಣಸಂಯುತಾ ।
ಅಪುತ್ರಾ ದುಃಖಿತಾ ಕಾಂತಮಿತ್ಯುವಾಚ ಪುನಃಪುನಃ ॥೩೮॥

ಕಿಂ ಜೀವಿತೇನ ಮೇ ನಾಥ ಧಿಗ್ವೃಥಾ ಜೀವಿತಂ ಮಮ ।
ವಂಧ್ಯಾಯಾಃ ಸುಖಹೀನಾಯಾ ಹ್ಯಪುತ್ರಾಯಾ ಧರಾತಲೇ ॥೩೯॥

ಇತ್ಯೇವಂ ಭಾರ್ಯಯಾ ಭೂಪಃ ಪ್ರೇರಿತೋ ಮುಖಮುತ್ತಮಂ ।
ಚಕಾರ ಬ್ರಾಹ್ಮಣಾಂಸ್ತಜ್ಜ್ಞಾನಾಹೂಯ ವಿಧಿವತ್ತದಾ ॥೪೦॥

ಪುತ್ರಕಾಮೋ ಧನಂ ಭೂರಿ ದದಾವಥ ಯಥೋದಿತಂ ।
ಹೂಯಮಾನೇ ಘೃತೇಽತ್ಯರ್ಥಂ ಪಾವಕಾದತಿಸುಪ್ರಭಾತ್ ॥೪೧॥

---

ಯೆಂಬವಳು ರೂಪವತಿಯಾಗಿಯೂ ಚತುರಳಾಗಿಯೂ ಪತಿವ್ರತೆಯಾಗಿಯೂ ಸಮಸ್ತ ಲಕ್ಷಣಗಳಿಂದ ಕೂಡಿದವಳಾಗಿರುವಳು. ಅವಳು ಪುತ್ರರಿಲ್ಲದ ದುಃಖದಿಂದ ತನ್ನ ಪತಿಯನ್ನು ಕುರಿತು ಆಗಾಗ್ಗೆ ಮುಂದೆ ಹೇಳುವ ಮಾತುಗಳನ್ನು ಹೇಳುತ್ತಿದ್ದಳು. ೩೬-೩೭-೩೮॥

ಓ ಪತಿಯೇ, ನಾನು ಬದುಕಿದ್ದುದರಿಂದ ಏನು ಪ್ರಯೋಜನ? ನನ್ನ ಜೀವನವನ್ನು ನಿಂದಿಸಬೇಕು. ಬಂಜೆಯೂ ಸುಖಹೀನಳೂ ಪುತ್ರರಿಲ್ಲದವಳೂ ಆದ ನಾನು ಭೂಮಿಯಲ್ಲಿ ಬದುಕಿರುವುದು ವ್ಯರ್ಥವಾದುದು. ॥೩೯॥

ಹೀಗೆಂದು ಹೆಂಡತಿಯು ಪ್ರೇರಣೆಮಾಡಲು ರಾಜನು ಶ್ರೇಷ್ಠವಾದ ಯಜ್ಞವಿಧಿಯನ್ನು ತಿಳಿದ ಬ್ರಾಹ್ಮಣರನ್ನು ಕರೆಸಿ ವಿಧಿಗನುಸಾರವಾಗಿ ಉತ್ತಮವಾದ ಪುತ್ರಕಾಮೇಷ್ಟಿ ಎಂಬ ಯಜ್ಞವನ್ನು ಮಾಡಿದನು. ॥೪೦॥

ಪುತ್ರಾರ್ಥಿಯಾದ ರಾಜನು ಯಥೋಕ್ತವಾದ ಧನವನ್ನು ವಿಶೇಷವಾಗಿ ದಾನಮಾಡಿದನು. ತುಪ್ಪವನ್ನು ವಿಶೇಷವಾಗಿ ಹೋಮಮಾಡುತ್ತಿದ್ದಾಗ ಪ್ರಕಾಶವಾಗಿ ಉರಿಯುತ್ತಿದ್ದ ಅಗ್ನಿಯಿಂದ ಮಂಗಲಕರವಾದ ಲಕ್ಷಣಗಳಿಂದ ಕೂಡಿದ ಸುಂದರವಾದ ಅವಯುವಗಳುಳ್ಳ ಕನ್ಯೆಯು ಆವಿರ್ಭವಿಸಿದಳು. ॥೪೧॥

ಆವಿರ್ಬಭೂವ ಚಾರ್ವಂಗೀ ಕನ್ಯಕಾ ಶುಭಲಕ್ಷಣಾ ।
ಬಿಂಬೋಷ್ಠೀ ಸುದತೀ ಸುಭ್ರೂಃ ಪೂರ್ಣಚಂದ್ರನಿಭಾನನಾ ॥೪೨॥

ಕನಕಾಭಾ ಸುಕೇಶಾಂತಾ ರಕ್ತಪಾಣಿತಲಾ ಮೃದುಃ ।
ಸುರಕ್ತನಯನಾ ತನ್ವೀ ರಕ್ತಪಾದತಲಾ ಭೃಶಂ ॥೪೩॥

ಹುತಾಶನಾತ್ಸಮುದ್ಭೂತಾ ಹೊತ್ರಾ ಸಾ ಸ್ವೀಕೃತಾ ತದಾ ।
ಹೋತಾ ಪ್ರೋವಾಚ ರಾಜಾನಂ ಗೃಹೀತ್ವಾ ತಾಂ ಸುಮಧ್ಯಮಾಂ ॥೪೪॥

ರಾಜನ್ಪುತ್ರೀಂ ಗೃಹಾಣೇಮಾಂ ಸರ್ವಲಕ್ಷಣಸಂಯುತಾಂ ।
ಏಕಾವಲೀವ ಸಂಭೂತಾ ಹೂಯಮಾನಾದ್ಧುತಾಶನಾತ್ ॥೪೫॥

ನಾಮ್ನಾ ಚೈಕಾವಲೀ ಲೋಕೇ ಖ್ಯಾತಾ ಪುತ್ರೀ ಭವಿಷ್ಯತಿ ।
ಸುಖಿತೋ ಭವ ಭೂಪಾಲ ಪುತ್ರ್ಯಾ ಪುತ್ರಸಮಾನಯಾ ॥೪೬॥

---

ಆ ಕನ್ಯೆಯು ತೊಂಡೆಯ ಹಣ್ಣಿನಂತೆ ತುಟಿಯೂ, ಪೂರ್ಣಚಂದ್ರನಂತೆ ಮುಖವೂ, ಚಿನ್ನದಂತೆ ಶರೀರಕಾಂತಿಯೂ, ಮೃದುವಾಗಿಯೂ ಕೆಂಪಾಗಿಯೂ ಇರುವ ಕೈಗಳೂ ಕೆಂಪಾದ ಕಣ್ಣುಗಳೂ ಅಂಗಾಲುಗಳೂ ಮೃದುವಾಗಿಯೂ ಉದ್ದವಾಗಿಯೂ ಇರುವ ತಲೆಯ ಕೂದಲುಗಳೂ ಉಳ್ಳವಳಾಗಿದ್ದಳು. ॥೪೨-೪೩॥

ಅಗ್ನಿಯಲ್ಲಿ ಹುಟ್ಟಿದ ಆ ಕನ್ಯೆಯನ್ನು ಹೋತೃವು ತೆಗೆದುಕೊಂಡು ಬಂದು ರಾಜನನ್ನು ಕುರಿತು ಮುಂದೆ ಹೇಳುವಂತೆ ಹೇಳಿದನು. ॥೪೪॥

ಎಲೈ ರಾಜನೇ, ಸಮಸ್ತ ಲಕ್ಷಣಗಳಿಂದಲೂ ಕೂಡಿದ ಈ ಪುತ್ರಿಯನ್ನು ಸ್ವೀಕರಿಸು. ಹೋಮಮಾಡುತ್ತಿರುವಲ್ಲಿ ಅಗ್ನಿಯಿಂದ ಏಕಾವಲಿ ಎಂಬ ಮುತ್ತಿನ ಹಾರದಂತೆ ಹುಟ್ಟಿದುದರಿಂದ ಈ ಕನ್ಯೆಗೆ ಏಕಾವಲೀ ಎಂದು ಹೆಸರಾಗುವುದು. ಪುತ್ರನಿಗೆ ಸಮಾನಳಾದ ಈ ಪುತ್ರಿಯಿಂದ ನೀನು ಸುಖವನ್ನೂ ಸಂತೋಷವನ್ನೂ ಹೊಂದು. ದೇವನಾದ ನಾರಾಯಣನು ನಿನಗೆ ಈ ಪುತ್ರಿಯನ್ನು ಕರುಣಿಸಿರುವನು. ॥೪೫-೪೬॥

**ಸಂತೋಷಂ ಕುರು ರಾಜೇಂದ್ರ ದತ್ತಾ ದೇವೇನ ವಿಷ್ಣುನಾ ।**
**ಹೋತುರ್ವಾಕ್ಯಂ ನೃಪಃ ಶ್ರುತ್ವಾ ದೃಷ್ಟ್ವಾ ತಾಂ ಕನ್ಯಕಾಂ ಶುಭಾಂ ॥೪೭॥**

**ಜಗ್ರಾಹ ಪರಮಪ್ರೀತೋ ಹೋತ್ರಾ ದತ್ತಾಂ ಸುಸಂಮತಾಂ ।**
**ಗೃಹೀತ್ವಾ ನೃಪತಿಸ್ತಾಂ ತು ದದೌ ಪತ್ನ್ಯೈ ವರಾನನಾಂ ॥೪೮॥**

**ಅಭಾಷ್ಯ ರುಕ್ಮರೇಖಾಯೈ ಗೃಹಾಣ ಸುಭಗೇ ಸುತಾಂ ।**
**ಸಾ ತಾಂ ಕಮಲಪತ್ರಾಕ್ಷೀಂ ಪ್ರಾಪ್ಯ ಕನ್ಯಾಂ ಮನೋರಮಾಂ ॥೪೯॥**

**ಜಹರ್ಷ ಮುದಿತಾ ರಾಜ್ಞೀ ಪುತ್ರಂ ಪ್ರಾಪ್ಯ ಯಥಾಸು(ತ)ಖಂ ।**
**ಚಕಾರ ಮಂಗಲಂ ಕರ್ಮ ಜಾತಕರ್ಮಾದಿಕಂ ಶುಭಂ ॥೫೦॥**

**ಪುತ್ರಜನ್ಮಸಮುತ್ಥಂ ಯತ್ತತ್ಸರ್ವಂ ವಿಧಿವತ್ತತಃ ।**
**ಸಮಾಪ್ಯ ಚ ಮಖಂ ರಾಜಾ ದ್ವಿಜೇಭ್ಯೋ ದಕ್ಷಿಣಾಂ ಶುಭಾಂ ॥೫೧॥**

**ದತ್ವಾ ವಿಸೃಜ್ಯ ವಿಪ್ರೇಂದ್ರಾನ್ಮುದಂ ಪ್ರಾಪಮಹೀಪತಿಃ ।**
**ದಿನೇದಿನೇಽಸಿತಾಪಾಂಗೀ ಪುತ್ರವೃದ್ಧ್ಯಾಭೃಶಂ ಬಭೌ ॥೫೨॥**

---

ರಾಜನು ಹೋತೃವಿನ ಮಾತನ್ನು ಕೇಳಿ ಮಂಗಲಕರಳಾದ ಆ ಕನ್ಯೆಯನ್ನು ನೋಡಿ ಬಹಳ ಸಂತೋಷದಿಂದ ಆ ಕನ್ಯೆಯನ್ನೆತ್ತಿಕೊಂಡು ತನ್ನ ಹೆಂಡಿತಿಯಾದ ರುಕ್ಮರೇಖೆಯನ್ನು ಕರೆದು, ಎಲೈ ಸೌಭಾಗ್ಯವತಿಯೇ, ಈ ಕನ್ಯೆಯು ನಿನ್ನ ಮಗಳು. ಎತ್ತಿಕೋ. ಎಂದು ಹೇಳಿ, ಆ ಸುಂದರಿಯಾದ ಕನ್ಯೆಯನ್ನು ಕೊಟ್ಟನು. ||೪೭-೪೮||

ಆ ರುಕ್ಮರೇಖೆಯು ಮನೋಹರಳಾದ ಆ ಕನ್ಯೆಯನ್ನು ಪಡೆದು ಪುತ್ರನನ್ನು ಪಡೆದಷ್ಟು ಸಂತೋಷವನ್ನು ಹೊಂದಿ ಜಾತಕರ್ಮಾದಿ ಮಂಗಲಕರ್ಮಗಳನ್ನೂ ಪುತ್ರ ಜನ್ಮಸಂಬಂಧವಾದ ಸಮಸ್ತ ವಿಧ್ಯುಕ್ತವಾದ ಆಚಾರಗಳನ್ನೂ ಮಾಡಿಸಿದಳು. ||೪೯-೫೦||

ರಾಜನು ಯಜ್ಞವನ್ನು ಪೂರ್ತಿಮಾಡಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ಅವರನ್ನು ಕಳುಹಿಸಿಕೊಟ್ಟು ಸಂತೋಷವನ್ನು ಹೊಂದಿದನು. ಕಪ್ಪಾದ ಕಡೆಗಣ್ಣಿನ ನೋಟವುಳ್ಳ ಆ ಏಕಾವಳಿಯು ಪುತ್ರನು ಅಭಿವೃದ್ಧಿಯಾಗುವಂತೆ ದಿನದಿನಕ್ಕೆ ವಿಶೇಷವಾಗಿ ಬೆಳೆಯುತ್ತಾ ಪ್ರಕಾಶಿಸುತ್ತಿದ್ದಳು. ||೫೧-೫೨||

**ಮುದಂ ಚ ಪರಮಾಂ ಪ್ರಾಪ ನೃಪಭಾರ್ಯಾ ಸುತಾನ್ವಿತಾ ।**
**ಉತ್ಸವಸ್ತದ್ದಿನೇ ತಸ್ಯ ಪ್ರವೃತ್ತಃ ಸುತಜನ್ಮಜಃ ॥೫೩॥**

**ಪುತ್ರೀ ಪುತ್ರಸಮಾತ್ಯರ್ಥಂ ಬಭೂವ ವಲ್ಲಭಾಕಿಲ ।**
**ರಾಜ್ಞೋಽಮಂತ್ರಿಸುತಾ ಚಾಽಹಂ ಸುಬುದ್ಧೇ ಮನ್ಮಥಾಕೃತೇ ॥೫೪॥**

**ಯಶೋವತೀ ಚ ಮೇ ನಾಮ ಸಮಾನಂ ವಯ ಆವಯೋಃ ।**
**ವಯಸ್ಯಾಽಹಂ ಕೃತಾ ರಾಜ್ಞಾಕ್ರೀಡನಾಯ ತಯಾ ಸಹ ॥೫೫॥**

**ಸದಾ ಸಹಚರೀ ಜಾತಾ ಪ್ರೇಮಯುಕ್ತಾ ದಿವಾನಿಶಂ ।**
**ಏಕಾವಲೀ ಗಂಧವಂತಿ ಯತ್ರಪದ್ಮಾನಿ ಪಶ್ಯತಿ ॥೫೬॥**

**ತತ್ರ ಸಾ ರಮತೇ ಬಾಲಾ ನಾನ್ಯತ್ರ ಸುಖಮಾಪ್ನುಯಾತ್ ।**
**ಸುದೂರೇ ಜಾಹ್ನವೀತೀರೇ ಭವಂತಿ ಕಮಲಾನ್ಯಪಿ ॥೫೭॥**
**ರಮಮಾಣಾ ತತ್ರ ಯಾತಾ ಮತ್ಸಮೇತಾ ಸಖೀಯುತಾ ।**

---

ರಾಜಪತ್ನಿಯು ಮಗಳೊಡನೆ ಕೂಡಿ ಸಂತೋಷವನ್ನು ಹೊಂದಿದಳು. ಪುತ್ರನು ಹುಟ್ಟಿದರೆ ಯಾವ ಉತ್ಸವಗಳನ್ನು ಮಾಡಬೇಕೋ ಅದೇ ಉತ್ಸವಗಳನ್ನು ಈ ಪುತ್ರಿಗೂ ಮಾಡಿ ಈ ಪುತ್ರಿಯನ್ನು ರಾಜನೂ ರಾಣಿಯೂ ಪುತ್ರನೆಂದೇ ಭಾವಿಸಿ ಪ್ರೀತಿಸುತ್ತಿದ್ದರು. ॥೫೩॥

ಎಲೈ ದೊರೆಯೇ, ಬುದ್ಧಿವಂತನಾದ ಮನ್ಮಥನಂತಿರುವ ರಾಜನೇ, ನಾನು ಆ ರಾಜನಾದ ರೈಭ್ಯನ ಮಂತ್ರಿಯ ಮಗಳು. ಯಶೋವತಿಯೆಂದು ನನ್ನ ಹೆಸರು. ಏಕಾವಳಿಗೂ ನನಗೂ ಸಮಾನವಾದ ವಯಸ್ಸು. ರಾಜನು ಏಕಾವಳಿಯೊಡನೆ ಆಟವಾಡುವುದಕ್ಕಾಗಿ ನನ್ನನ್ನು ಅವಳ ಸಖಿಯಾಗಿ ಮಾಡಿದನು. ॥೫೪-೫೫॥

ಆ ಏಕಾವಳಿಗೆ ನಾನು ಸಖಿಯಾಗಿ ಹಗಲೂ ರಾತ್ರಿಯೂ ಕೂಡ ಪ್ರೀತಿಯಿಂದ ಅವಳ ಜತೆಯಲ್ಲಿಯೇ ಇರುತ್ತಿದ್ದೆನು. ಆ ಏಕಾವಳಿಯು ಸುವಾಸನೆಯಾದ ಕಮಲಗಳನ್ನು ಎಲ್ಲಿ ನೋಡಿದರೂ ಅಲ್ಲಿ ಸಂತೋಷದಿಂದ ಆಟವಾಡುವಳು. ಬೇರೆ ಕಡೆಯಲ್ಲಿ ಅವಳಿಗೆ ಸುಖವಿಲ್ಲ. ॥೫೬॥

ಗಂಗೆಯ ತೀರದಲ್ಲಿ ಬಹಳ ದೂರದಲ್ಲಿ ಕಮಲಗಳಿರುತ್ತವೆ. ಅವಳು ಆಟವಾಡುತ್ತಾ ನನ್ನೊಡನೆಯೂ ಇತರ ಸಖಿಯರೊಡನೆಯೂ ಅಲ್ಲಿಗೆ ಹೋಗುತ್ತಿರುತ್ತಾಳೆ. ॥೫೭॥

ಮಯಾ ನಿವೇದಿತಂ ರಾಜನ್ಸುತ್ರೀ ತೇ ಕಮಲಾಕರಾನ್ ॥೫೮॥

ಪ್ರೇಕ್ಷಮಾಣಾಽತಿದೂರೇ ಸಾ ಪ್ರಯಾತಿ ನಿರ್ಜನೇ ವನೇ ।
ನಿಷೇಧಿತಾಽಥ ಪಿತ್ರಾಽಸೌ ಗೃಹೇ ಕೃತ್ವಾ ಜಲಾಶಯಾನ್ ॥೫೯॥

ಕಮಲಾನ್ವಾಪಯಿತ್ವಾಽಥ ಪುಷ್ಪಿತಾನ್ಭ್ರಮರಾವೃತಾನ್ ।
ತಥಾಪಿ ನಿರ್ಯಯೌಬಾಲಾ ಕಮಲಾಸಕ್ತಚೇತನಾ ॥೬೦॥

ತದಾ ರಾಜ್ಞಾ ರಕ್ಷ ಪಾಲಾಃ ಪ್ರೇರಿತಾಃ ಶಸ್ತ್ರಪಾಣಯಃ ।
ಏವಂ ರಕ್ಷಾಯುತಾ ತನ್ವೀ ಮತ್ಸಮೇತಾ ಸಖೀಯುತಾ ॥೬೧॥
ಕ್ರೀಡಾರ್ಥಂ ಜಾಹ್ನವೀತೋಯೇ ನಿತ್ಯಮಾಯಾತಿ ಯಾತಿ ಚ ॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ
ಏಕವಿಂಶೋಽಧ್ಯಾಯಃ.

---

ನಾನು ರಾಜನಿಗೆ ಹೇಳಿದೆನು. ' ಓ ರಾಜನೇ, ನಿನ್ನ ಮಗಳು ಕಮಲವಿರುವ ಸರೋವರಗಳನ್ನು ನೋಡುತ್ತಾ ನಿರ್ಜನವಾದ ಕಾಡಿನಲ್ಲಿ ಬಹಳ ದೂರಕ್ಕೆ ಹೊರಟು ಹೋಗುತ್ತಾಳೆ.' ಹೀಗೆಂದು ಹೇಳುತ್ತಲು ಆ ಏಕಾವಳಿಯ ತಂದೆಯಾದ ರಾಜನು ಅರಮನೆಯಲ್ಲಿಯೇ ಸರೋವರಗಳನ್ನು ಮಾಡಿಸಿ ಕಮಲಗಳನ್ನು ಬೆಳೆಸಿ ಹೂಗಳು ಅರಳಿ ಭ್ರಮರಗಳಿಂದ ಕೂಡಿರುವಂತೆ ಮಾಡಿಸಿ ಅವಳು ಹೊರಗೆ ಹೋಗದಂತೆ ತಡೆಮಾಡಿದನು. ಹಾಗಾದರೂ ಅವಳು ಕಮಲಗಳ ಸೌಂದರ್ಯದಲ್ಲಿ ಆಸಕ್ತವಾದ ಮನಸ್ಸಿನಿಂದ ಒಂದುದಿನ ಹೊರಕ್ಕೆ ಹೊರಟಳು. ॥೫೯-೬೦॥

ಆಗ ರಾಜನು ಆಕೆಯ ಜತೆಯಲ್ಲಿ ಶಸ್ತ್ರಗಳನ್ನು ಧರಿಸಿದ ಮೈಗಾವಲ ಭಟರನ್ನು ಕಳುಹಿಸಿದನು. ಹೀಗೆ ಮೈಗಾವಲ ಭಟರಿಂದಲೂ ನನ್ನಿಂದಲೂ ಇತರ ಸಖಿಯರಿಂದಲೂ ಕೂಡಿದ ಆ ಏಕಾವಳಿಯು ಗಂಗಾತೀರದಲ್ಲಿ ಆಟಕ್ಕಾಗಿ ಪ್ರತಿದಿನವೂ ಬಂದು ಹೋಗುತ್ತಿರುವಳು. ॥೬೧॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠ ಸ್ಕಂಧೇ

### || ದ್ವಾವಿಂಶೋಽಧ್ಯಾಯಃ ||

### ಇಪ್ಪತ್ತೆರಡನೆಯ ಅಧ್ಯಾಯವು

|| ಯಶೋವತ್ಯುವಾಚ ||

**ಪ್ರಾತರುತ್ಥಾಯ ತನ್ವಂಗೀ ಚಲಿತಾ ಚ ಸಖೀಯುತಾ ।**
**ಚಾಮರೈರ್ವೀಜ್ಯಮಾನಾ ಸಾ ರಕ್ಷಿತಾ ಬಹುರಕ್ಷಿಭಿಃ ||೧||**

**ಸಾಯುಧೈಶ್ಚಾತಿಸನ್ನದ್ಧೈಃ ಸಹಿತಾ ವರವರ್ಣಿನೀ ।**
**ಕ್ರೀಡಾರ್ಥಮತ್ರ ರಾಜೇಂದ್ರ ಸಂಪ್ರಾಪ್ತಾ ನಲಿನೀಂ ಶುಭಾಂ ||೨||**

**ಅಹಮಪ್ಯನಯಾ ಸಾರ್ಧಂ ಗಂಗಾತೀರೇ ಸಮಾಗತಾ ।**
**ಅಪ್ಸರೋಭಿಃ ಸಮೇತಾ ಚ ಕಮಲೈಃ ಕ್ರೀಡಮಾನಯಾ ||೩||**

**ಏಕಾವಲೀ ತಥಾ ಚಾಽಹಂ ಜಾತೇ ಕ್ರೀಡಾಪರೇ ಯದಾ ।**
**ಸಹಸೈವ ತದಾಽಽಯಾತೋ ದಾನವೋ ಬಲಸಂಯುತಃ ||೪||**

---

ಎಲೈ ರಾಜನೇ, ಆ ಕೃಶವಾದ ಶರೀರವುಳ್ಳ ಏಕಾವಳಿಯು ಪ್ರಾತಃಕಾಲದಲ್ಲಿ ಎದ್ದು ಸಖಿಯರೊಡನೆ ಹೊರಟಳು. ಅವಳಿಗೆ ಚಾಮರವನ್ನು ಬೀಸುತ್ತ ವೈಗಾವಲ ಭಟರು ಆಯುಧಗಳನ್ನು ಧರಿಸಿ ಅನೇಕರು ಅವಳೊಡನೆ ಹೊರಟರು. ಅವಳು ಆಟಕ್ಕಾಗಿ ಈ ಪ್ರದೇಶದಲ್ಲಿರುವ ಮಂಗಲಕರವಾದ ಕಮಲದ ಸಮೀಪಕ್ಕೆ ಬಂದಳು. ||೧-೨||

ನಾನೂ ಅವಳ ಜತೆಯಲ್ಲಿ ಗಂಗಾತೀರಕ್ಕೆ ಬಂದೆನು. ಅಪ್ಸರಸ್ತ್ರೀಯರೊಡನೆ ಸೇರಿ ನಾನೂ ಆ ಏಕಾವಳಿಯೂ ಕಮಲಗಳನ್ನು ಹಿಡಿದು ಆಟವಾಡುತ್ತಾ ಇರುವಲ್ಲಿ

ಕಾಲಕೇತುರಿತಿ ಖ್ಯಾತೋ ರಾಕ್ಷಸೈರ್ಬಹುಭಿರ್ಯುತಃ ।
ಪರಿಘಾಸಿಗದಾಚಾಪ ಬಾಣತೋಮರಪಾಣಿಭಿಃ ॥೫॥

ದೃಷ್ಟ್ವಾ ಚೈಕಾವಳೀ ತೇನ ರೂಪಯೌವನಶಾಲಿನೀ ।
ದ್ವಿತೀಯಾ ಕಾಮಪತ್ನೀವ ಕ್ರೀಡಮಾನಾ ಸುಪಂಕಜೈಃ ॥೬॥

ಮಯೋಕ್ತೈಕಾವಳೀ ರಾಜನ್ ಕೋಽಯಂ ದೈತ್ಯಃ ಸಮಾಗತಃ ।
ಗಚ್ಛಾವೋ ರಕ್ಷಪಾಲಾನಾಂ ಮಧ್ಯೇ ಪಂಕಜಲೋಚನೇ ॥೭॥

ವಿಮೃಶ್ಯೈವಂ ಸಖೀ ಚಾಽಹಂ ತ್ವರಯೈವ ಗತೇ ಭಯಾತ್ ।
ಮಧ್ಯೇ ವೈ ಸೈನಿಕಾನಾಂ ತು ಸಾಯುಧಾನಾಂ ನೃಪಾತ್ಮಜ ॥೮॥

ಕಾಲಕೇತುಸ್ತು ತಾಂ ದೃಷ್ಟ್ವಾ ಮೋಹಿನೀಂ ಮದನಾತುರಃ ।
ಗದಾಂ ಗುರ್ವೀಂ ಗೃಹೀತ್ವಾ ತು ಧಾವಮಾನಃ ಸಮಾಗತಃ ॥೯॥

---

ಅಕಸ್ಮಾತ್ತಾಗಿ ಕಾಲಕೇತುವೆಂಬ ರಾಕ್ಷಸನು ಅನೇಕ ರಾಕ್ಷಸರೊಡನೆ ಬಂದನು. ||೩-೪||

ಆ ರಾಕ್ಷಸರು ಪರಿಘ, ಕತ್ತಿ, ಗದೆ, ಬಿಲ್ಲು, ಬಾಣ, ತೋಮರ ಮುಂತಾದ ಆಯುಧಗಳನ್ನು ಧರಿಸಿದ್ದರು. ರೂಪ ಯೌವನಗಳಿಂದ ಕೂಡಿದ ಎರಡನೆಯ ರತಿಯೋ ಎಂಬಂತೆ ಕಮಲವನ್ನು ಹಿಡಿದು ಆಟವಾಡುತ್ತಿದ್ದ ಏಕಾವಳಿಯನ್ನು ಆ ಕಾಲಕೇತುವು ನೋಡಿದನು. ||೫-೬||

ಎಲೈ ರಾಜನೇ, ಆಗ ನಾನು ಏಕಾವಳಿಯನ್ನು ಕುರಿತು "ಕಮಲದಂತೆ ಕಣ್ಣುಗಳುಳ್ಳ ಸಖಿಯೇ, ಈ ರಾಕ್ಷಸನು ಯಾರೋ ಬಂದನು. ನಾವು ಮೈಗಾವಲ ಭಟರ ನಡುವೆ ಹೋಗೋಣ" ಎಂದು ಹೇಳಿದೆನು. ।೭||

ಎಲೈ ರಾಜಪುತ್ರನೇ, ನಾನೂ ನನ್ನ ಸಖಿಯೂ ಇದನ್ನು ನೋಡಿ ಭಯದಿಂದ ಆಯುಧ ಸಹಿತರಾದ ಭಟರ ನಡುವೆ ಬೇಗನೆ ಹೋಗುತ್ತಲು ಕಾಲಕೇತುವು ಸುಂದರಿಯಾದ ಏಕಾವಳಿಯನ್ನು ನೋಡಿ ಕಾಮಾತುರನಾಗಿ ಭಾರವಾದ ಗದೆಯನ್ನು ಹಿಡಿದು ಓಡುತ್ತಾ ಸಮೀಪಕ್ಕೆ ಬಂದನು. ||೮-೯||

**ರಕ್ಷಕಾನ್ದೂರತಃ ಕೃತ್ವಾ ಜಗ್ರಾಹಾಂಬುಜಲೋಚನಾಂ ।**
**ತ್ರಸ್ತಾಂ ವೇಪಥುಸಂಯುಕ್ತಾಂ ಕ್ರಂದಮಾನಾಂ ಕೃಶೋದರೀಂ ॥೧೦॥**

**ತ್ಯಜೈನಾಂ ಮಾಂ ಗೃಹಾಣೇತಿ ಮಯಾ ಚೋಕ್ತೋಽಪಿ ದಾನವಃ ।**
**ನ ಮಾಂ ಜಗ್ರಾಹ ಕಾಮಾರ್ತ ಸ್ತಾಂ ಗೃಹೀತ್ವಾ ವಿನಿಸ್ಸೃತಃ ॥೧೧॥**

**ತಿಷ್ಠ ತಿಷ್ಠೇತಿ ಭಾಷಂತೋ ರಕ್ಷಕಾ ಸ್ತಂ ಮಹಾಬಲಂ ।**
**ಪ್ರತಿಷಿಧ್ಯ ತು ಸಂಗ್ರಾಮಂ ಚಕ್ರುರ್ವಿಸ್ಮಯಕಾರಕಂ ॥೧೨॥**

**ತಸ್ಯಾಽಪಿ ರಾಕ್ಷಸಾಃ ಕ್ರೂರಾಃ ಸರ್ವತಃ ಶಸ್ತ್ರಪಾಣಯಃ ।**
**ಯುಯುಧೂ ರಕ್ಷಕೈಃ ಸಾರ್ಧಂ ಸ್ವಾಮಿಕಾರ್ಯೇ ಕೃತೋದ್ಯಮಾಃ ॥೧೩॥**

**ಸಂಗ್ರಾಮಸ್ತು ತದಾ ಜಾತಃ ಕಾಲಕೇತೋ (ತು)ಸ್ತ್ರಥಾರಣೇ ।**
**ನಿಹತ್ಯರಕ್ಷಕಾನ್ ಸರ್ವಾನ್ ಗೃಹೀತ್ವೈನಾಂ ಮಹಾಬಲಃ ॥೧೪॥**
**ಯುಕ್ತೋ ರಾಕ್ಷಸಸೈನ್ಯೇನ ನಿರ್ಜಗಾಮ ಪುರಂ ಪ್ರತಿ ।**

---

ಅಂಗರಕ್ಷಕರನ್ನು ದೂರಕ್ಕೆ ಓಡಿಸಿ ಹೆದರಿ ನಡುಗುತ್ತಾ ಅಳುತ್ತಿರುವ ಕೃಶಾಂಗಿಯಾದ ಕಮಲದಂತೆ ಕಣ್ಣುಗಳುಳ್ಳ ಆ ಏಕಾವಳಿಯನ್ನು ಆ ರಾಕ್ಷಸನು ಹಿಡಿದುಕೊಂಡನು. ||೧೦||

ಇವಳನ್ನು ಬಿಡು, ನನ್ನನ್ನು ಹಿಡಿದುಕೋ, ಎಂದು ನಾನು ಹೇಳಿದರೂ ಆ ರಾಕ್ಷಸನು ನನ್ನನ್ನು ಹಿಡಿದುಕೊಳ್ಳದೆ ಕಾಮಪೀಡಿತನಾಗಿ ಆ ಏಕಾವಳಿಯನ್ನೇ ಹಿಡಿದುಕೊಂಡು ಹೋದನು. ||೧೧||

ಅಂಗರಕ್ಷಕರು ನಿಲ್ಲು ನಿಲ್ಲು ಎಂದು ಆ ರಾಕ್ಷಸನನ್ನು ತಡೆದು ಬಲಶಾಲಿಯಾದ ಅವನೊಡನೆ ಆಶ್ಚರ್ಯಕರವಾದ ಯುದ್ಧವನ್ನು ಮಾಡಿದರು. ||೧೨||

ಕಾಲಕೇತುವಿನ ಸೇವಕರಾದ ರಾಕ್ಷಸರೂ ಆಯುಧಗಳನ್ನು ಧರಿಸಿ ತಮ್ಮ ಸ್ವಾಮಿಕಾರ್ಯಕ್ಕಾಗಿ ಅಂಗರಕ್ಷಕರೊಡನೆ ಯುದ್ಧಮಾಡಿದರು. ಆಗ ಅಂಗರಕ್ಷಕರಿಗೂ ಕಾಲಕೇತುವಿಗೂ ಯುದ್ಧವಾಯಿತು. ಮಹಾಬಲಶಾಲಿಯಾದ ಕಾಲಕೇತುವು ಅಂಗರಕ್ಷಕರನ್ನೆಲ್ಲ ಕೊಂದು ಏಕಾವಳಿಯನ್ನು ಕರೆದುಕೊಂಡು ರಾಕ್ಷಸಸೇನೆಯೊಡನೆ ತನ್ನ ಪಟ್ಟಣಕ್ಕೆ ಹೊರಟನು. ||೧೩-೧೪||

ವೀಕ್ಷ್ಯ ತಾಂ ರುದತೀಂ ಬಾಲಾಂ ಗೃಹೀತಾಂ ದಾನವೇನ ತು ॥೧೫॥

ಪೃಷ್ಠತೋಽಹಂ ಗತಾ ತತ್ರ ಯತ್ರ ನೀತಾ ಸಖೀ ಮಮ ।
ವಿಕ್ರೋಶಂತೀ ಯಥಾ ಸಾ ಮಾಂ ಪಶ್ಯೇದಿತಿ ಪದಾನುಗಾ ॥೧೬॥

ಸಾಽಪಿ ಮಾಮಾಗತಾಂ ವೀಕ್ಷ್ಯ ಕಿಂಚಿತ್ಸ್ವಸ್ಥಾಽಭವತ್ತದಾ ।
ಗತಾಽಹಂ ತತ್ಸಮೀಪೇ ತು ತಾಮಾಭಾಷ್ಯ ಪುನಃಪುನಃ ॥೧೭॥

ಸಾ ಮಾಂ ಪ್ರಾಪ್ಯಾಽತಿದುಃಖಾರ್ತಾ ಸ್ತಂಭಸ್ವೇದಸಮಾಕುಲಾ ।
ಕಂಠೇ ಗೃಹೀತ್ವಾ ಮಾಂ ಭೂಪ ರುರೋದ ಭೃಶದುಃಖಿತಾ ॥೧೮॥

ಸ ಮಾಮಾಹ ಕಾಲಕೇತುಃ ಪ್ರೀತಿಪೂರ್ವ ಮಿದಂ ವಚಃ ।
ಸಮಾಶ್ವಾಸಯ ಭೀತಾಂ ತ್ವಂ ಸಖೀಂ ಚಂಚಲಲೋಚನಾಂ ॥೧೯॥

ಪ್ರಾಪ್ತಂ ಮಮಾಽದ್ಯ ನಗರಂ ದೇವಲೋಕಸಮಂ ಪ್ರಿಯೇ ।
ದಾಸೋಽಸ್ಮಿ ತವ ರಕ್ಷಾ ಹಿ ಕಸ್ಮಾತ್ಕ್ರಂದಸಿ ಕಾತರಾ ॥೨೦॥

---

ಆ ದಾನವನು ಕರೆದುಕೊಂಡು ಹೋಗುತ್ತಿದ್ದುದರಿಂದ ಅಳುತ್ತಿರುವ ಆ ಏಕಾವಳಿಯನ್ನು ನೋಡಿ ಆ ನನ್ನ ಸಖಿಯು ನನ್ನನ್ನು ನೋಡುವಳೆಂದು ತಿಳಿದು ನಾನೂ ಅಳುತ್ತಾ ಆ ದಾರಿಯಲ್ಲಿಯೇ ಅವರ ಹಿಂದೆಯೇ ಹೋದೆನು. ೧೫-೧೬

ರಾಜನೇ ಕೇಳು. ಆ ಏಕಾವಳಿಯು ನಾನು ಸಮೀಪಕ್ಕೆ ಹೋಗುತ್ತಲು ವಿಶೇಷ ದುಃಖದಿಂದ ಅವಯವಗಳು ಚಲಿಸದಂತಾಗಿ ಬೆವರಿನಿಂದ ಕೂಡಿ ನನ್ನ ಕುತ್ತಿಗೆಯನ್ನು ತಬ್ಬಿಕೊಂಡು ಅತ್ತಳು. ||೧೮||

ಆ ಕಾಲಕೇತುವು ನನ್ನನ್ನು ಕುರಿತು "ಚಂಚಲವಾದ ನೋಟವುಳ್ಳ ಭಯ ಪಟ್ಟಿರುವ ನಿನ್ನ ಸಖಿಯನ್ನು ಸಮಾಧಾನಮಾಡು. ಎಲೈ ಪ್ರೀತಿಪಾತ್ರಳಾದ ಸ್ತ್ರೀಯೇ, ದೇವಲೋಕಕ್ಕೆ ಸಮಾನವಾದ ನನ್ನ ಪಟ್ಟಣವೂ ಈಗ ಸಿಕ್ಕಿತು. ನಿನ್ನಲ್ಲಿ ನನಗಿರುವ ಪ್ರೀತಿಯಿಂದ ನಿನಗೆ ನಾನು ದಾಸನಾಗಿರುತ್ತೇನೆ. ಭಯದಿಂದ ಏಕೆ ಅಳುತ್ತಿರುವೆ?" ಎಂದು ಪ್ರೀತಿಯಿಂದ ಹೇಳಿದನು. ಮತ್ತು ||೧೯-೨೦||

**ಕಥಯೈನಾಂ ಸಖೀಂತೇಽದ್ಯ ಸ್ವಸ್ಥಾ ಭವ ಸುಲೋಚನೇ ।**
**ಇತ್ಯುಕ್ತ್ವಾ ಮಾಂ ಸಖೀಪಾರ್ಶ್ವೇ ಸಮಾರೋಪ್ಯ ರಥೋತ್ತಮೇ ॥೨೧॥**

**ಜಗಾಮ ತರಸಾ ದುಷ್ಟಃ ಪುರೇ ಸ್ವಸ್ಯ ಮನೋಹರೇ ।**
**ಸೈನ್ಯೇನ ಮಹತಾ ಯುಕ್ತಃ ಪ್ರಫುಲ್ಲ ವದನಾಂಬುಜಃ ॥೨೨॥**

**ಏಕಾವಲೀಂ ತಥಾ ಮಾಂ ಚ ಸಂಸ್ಥಾಪ್ಯ ಧವಲೇ ಗೃಹೇ ।**
**ರಾಕ್ಷಸಾನ್ ಗೃಹರಕ್ಷಾರ್ಥಂ ಕಲ್ಪಯಾಮಾಸ ಕೋಟಿಶಃ ॥೨೩॥**

**ದ್ವಿತೀಯೇ ದಿವಸೇ ಸೋಽಥ ಮಾಮುವಾಚ ರಹೋ ನೃಪಃ ।**
**ಪ್ರಬೋಧಯ ಸಖೀಂ ಬಾಲಾಂ ಶೋಚಂತೀಂ ವಿರಹಾತುರಾಂ ॥೨೪॥**

**ಪತ್ನೀ ಮೇ ಭವ ಸುಶ್ರೋಣಿ ಸುಖಂ ಭುಂಕ್ಷ್ವ ಯಥೇಪ್ಸಿತಂ ।**
**ರಾಜ್ಯಂ ತ್ವದೀಯಂ ಚಂದ್ರಾಸ್ಯೇ ಸೇವಕೋಽಹಂ ಸದಾ ತವ ॥೨೫॥**

**ಪುನರುಕ್ತಂ ಮಯಾ ವಾಕ್ಯಂ ಶ್ರುತ್ವಾ ತದ್ಭಾಷಿತಂ ಖರಂ ।**
**ನಾಽಹಂ ಕ್ಷಮಾಽಪ್ರಿಯಂ ವಕ್ತುಂ ತ್ವಮೇನಾಂ ಕಥಯ ಪ್ರಭೋ॥೨೬॥**

---

ನಿನ್ನ ಸಖಿಗೆ ಸಮಾಧಾನಚಿತ್ತಳಾಗೆಂದು ಹೇಳು. ಎಂದು ನನ್ನನ್ನೂ ನನ್ನ ಸಖಿಯ ಪಕ್ಕದಲ್ಲಿ ರಥದಲ್ಲಿ ಕೂಡಿಸಿ ತನ್ನ ಸುಂದರವಾದ ಪಟ್ಟಣಕ್ಕೆ ವೇಗವಾಗಿ ಹೋದನು. ಆ ದುಷ್ಟನು ದೊಡ್ಡ ಸೇನೆಯೊಡನೆ ಕೂಡಿ ಅರಳಿದ ಮುಖಕಮಲ ಉಳ್ಳವನಾಗಿ ಏಕಾವಳಿಯನ್ನೂ ನನ್ನನ್ನೂ ಒಂದು ಉಪ್ಪರಿಗೆಯ ಮನೆಯಲ್ಲಿಟ್ಟು ಅನೇಕ ರಾಕ್ಷಸರನ್ನು ಆ ಮನೆಗೆ ಕಾವಲಾಗಿರಿಸಿದನು. ||೨೧-೨೨-೨೩||

ಎಲೈ ರಾಜನೇ, ಎರಡನೆಯ ದಿವಸ ಆ ಕಾಲಕೇತುವು ನನ್ನನ್ನು ಕುರಿತು ಗುಟ್ಟಾಗಿ "ದುಃಖಪಡುತ್ತಿರುವ ಯೌವನವತಿಯಾದ ನಿನ್ನ ಸಖಿಗೆ ಈ ತಿಳಿವಳಿಕೆಯನ್ನು ಕೊಡು. ಅವಳು ನನ್ನ ಪತ್ನಿಯಾಗಲಿ. ತನಗಿಷ್ಟವಾದ ಸುಖವನ್ನನುಭವಿಸಲಿ. ಎಲೈ ಚಂದ್ರಮುಖಿಯೇ, ಈ ರಾಜ್ಯವು ನಿನ್ನದು. ನಾನು ಯಾವಾಗಲೂ ನಿನ್ನ ಸೇವಕನು. ಎಂದು ಹೇಳು." ಎಂದನು. ||೨೪-೨೫||

ಅವನ ಕಠಿನವಾದ ಮಾತನ್ನು ಕೇಳಿ ನಾನು ಉತ್ತರವಾಗಿ 'ಎಲೈ ಪ್ರಭುವೇ, ನಾನು ನನ್ನ ಸಖಿಗೆ ಅಪ್ರಿಯವಾದ ಮಾತನ್ನು ಹೇಳಲಾರೆನು. ನೀನೇ ಅವಳಿಗೆ ಹೇಳು.' ಎಂದೆನು. ನಾನು ಹೀಗೆ ಹೇಳುತ್ತಲು ಆ ದುಷ್ಟನು ಕಾಮಪೀಡಿತವಾದ

ಇತ್ಯುಕ್ತೇ ವಚನೇ ದುಷ್ಟೋ ಮದನಕ್ಷತಮಾನಸಃ ।
ಉವಾಚ ವಿನಯಾದೇನಾಂ ಸಖೀಂ ಕ್ಷಾಮೋದರೀಂ ಪ್ರಿಯಾಂ ॥೨೭॥

ಕೃಶೋದರಿ ತ್ವಯಾ ಮಂತ್ರೋ ನಿಕ್ಷಿಪ್ತೋಽಸ್ತಿ ಮನೋಪರಿ ।
ತೇನ ಮೇ ಹೃದಯಂ ಕಾಂತೇ ಹೃತಂ ತೇ ವಶತಾಂ ಗತಂ ॥೨೮॥

ತೇನಾಽಹಂ ತವ ದಾಸೋಽದ್ಯ ಕೃತೋಽಸ್ಮೀತಿ ವಿನಿಶ್ಚಯಃ ।
ಭಜ ಮಾಂ ಕಾಮಬಾಣೇನ ಪೀಡಿತಂ ವಿವಶಂ ಭೃಶಂ ॥೨೯॥

ಯೌವನಂ ಯಾತಿ ರಂಭೋರು ಚಂಚಲಂ ದುರ್ಲಭಂ ತಥಾ ।
ಸಫಲಂ ಕುರು ಕಲ್ಯಾಣಿ ಪತಿಂ ಮಾಂ ಪರಿರಭ್ಯ ಚ ॥೩೦॥

॥ ಏಕಾವಲ್ಯುವಾಚ ॥

ಪಿತ್ರಾಽಹಂ ಕಲ್ಪಿತಾ ಪೂರ್ವಂ ದಾತುಂ ರಾಜಸುತಾಯ ವೈ ।
ಹೈಹಯಸ್ತು ಮಹಾಭಾಗ ಸ ಮಯಾ ಮನಸಾ ವೃತಃ ॥೩೧॥

---

ಮನಸ್ಸಿನಿಂದ ಕೃಶಾಂಗಿಯಾದ ಪ್ರೀತಿಪಾತ್ರಳಾದ ನನ್ನ ಸಖಿಯನ್ನು ಕುರಿತು ವಿನಯದಿಂದ ಹೀಗೆ ಹೇಳಿದನು. ॥೨೬-೨೭॥

ಎಲೈ ಕೃಶಾಂಗಿಯೇ, ನೀನು ನನ್ನ ಮೇಲೆ ವಶೀಕರಣಮಂತ್ರವನ್ನು ಪ್ರಯೋಗಿಸಿರುವಂತಿದೆ! ಆದುದರಿಂದ ನನ್ನ ಮನಸ್ಸು ನಿನ್ನ ಅಧೀನವಾಗಿರುವುದು. ಆ ಕಾರಣದಿಂದ ನಾನು ನಿನ್ನ ದಾಸನಾಗಿರುತ್ತೇನೆಂಬುದು ನಿಶ್ಚಯವಾಗಿರುವುದು. ॥೨೮॥

ವಿಶೇಷವಾಗಿ ಕಾಮಬಾಣದಿಂದ ಪೀಡಿತನಾದ ನನ್ನನ್ನು ಸೇರು. ಎಲೈ ಬಾಳೆಯ ಗಿಡದಂತೆ ನಯವಾದ ತೊಡೆಗಳುಳ್ಳ ಮಂಗಳಕರಳೇ, ಪ್ರಾಯವು ದಿನ ದಿನಕ್ಕೆ ಕಳೆದುಹೋಗುವುದು. ಮತ್ತು ಅದು ಚಂಚಲವಾದುದು. ನನ್ನನ್ನು ಪತಿಯಾಗಿ ಸ್ವೀಕರಿಸಿ ಆ ಪ್ರಾಯವನ್ನು ಸಫಲವಾಗಿ ಮಾಡು. ॥೨೯-೩೦॥

ಏಕಾವಳಿಯು ಹೇಳಿದಳು—ನನ್ನ ತಂದೆಯು ರಾಜಪುತ್ರನಿಗೆ ನನ್ನನ್ನು ಕೊಡಬೇಕೆಂದು ನಿಶ್ಚಯಿಸಿರುವನು. ನಾನು ಹೈಹಯ ರಾಜಪುತ್ರನನ್ನು ಮನಸ್ಸಿ

ಕಥಮನ್ಯಂ ಭಜೇ ಕಾಂತಂ ತ್ಯಕ್ತ್ವಾ ಧರ್ಮಂ ಸನಾತನಂ ।
ಕನ್ಯಾಧರ್ಮಂ ವಿಹಾಯಾದ್ಯ ವೇತ್ಸಿ ಶಾಸ್ತ್ರವಿನಿಶ್ಚಯಂ ॥೩೨॥

ಯಸ್ಮೈ ದದ್ಯಾತ್ಪಿತಾ ಕಾಮಂ ಕನ್ಯಾ ತಂ ಪತಿಮಾಪ್ನುಯಾತ್ ।
ಪರತಂತ್ರಾ ಸದಾ ಕನ್ಯಾ ನ ಸ್ವಾತಂತ್ರ್ಯಂ ಕದಾಚನ ॥೩೩॥

ಇತ್ಯುಕ್ತೋಽಪಿ ತಯಾ ಪಾಪೀ ವಿರರಾಮ ನ ಮೋಹಿತಃ ।
ನ ಮುಮೋಚ ವಿಶಾಲಾಕ್ಷೀಂ ಮಾಂ ಚ ಪಾರ್ಶ್ವಸ್ಥಿತಾಂ ತಥಾ॥೩೪॥

ಪಾತಾಲವಿವರೇ ತಸ್ಯ ಪುರಂ ಪರಮಸಂಕಟೇ ।
ರಾಕ್ಷಸೈ ರಕ್ಷಿತಂ ದುರ್ಗಂ ಮಂಡಿತಂ ಪರಿಖಾವೃತಂ ॥೩೫॥

ತತ್ರ ತಿಷ್ಠತಿ ದುಃಖಾರ್ತಾ ಸಖೀ ಮೇ ಪ್ರಾಣವಲ್ಲಭಾ ।
ತೇನಾಽಹಂ ವಿರಹೇಣಾತ್ರ ರಾರಟೀಮಿ ಸುದುಃಖಿತಾ ॥೩೬॥

---

ನಿಂದಲೇ ವರಿಸಿರುವೆನು. ಸನಾತನಧರ್ಮವನ್ನೂ ಕನ್ಯಾಧರ್ಮವನ್ನೂ ಬಿಟ್ಟು ಬೇರೊಬ್ಬನನ್ನು ಪತಿಯನ್ನಾಗಿ ನಾನು ಹೇಗೆ ವರಿಸಲಿ? ನೀನು ಶಾಸ್ತ್ರಸಿದ್ಧಾಂತ ವನ್ನು ತಿಳಿದಿರುವೆ. ||೩೧-೩೨||

ತಂದೆಯು ಯಾರಿಗೆ ದಾನಮಾಡುವನೋ ಕನ್ಯೆಯು ಅವನನ್ನೇ ಪತಿಯ ನ್ನಾಗಿ ವರಿಸಬೇಕು. ಕನ್ಯೆಗೆ ಯಾವಾಗಲೂ ಸ್ವಾತಂತ್ರ್ಯವಿಲ್ಲ. ಅವಳು ಪರಾಧೀನಳು. ಹೀಗೆಂದು ಆ ನನ್ನ ಸಖಿಯು ಹೇಳಿದರೂ ಮೋಹಗೊಂಡ ಆ ಪಾಪಿಯಾದ ರಾಕ್ಷಸನು ಸುಮ್ಮನಿರಲಿಲ್ಲ. ನನ್ನ ಸಖಿಯನ್ನೂ ಅವಳ ಸಮೀಪದಲ್ಲಿರುವ ನನ್ನನ್ನೂ ಬಿಡಲಿಲ್ಲ. ||೩೩-೩೪||

ಆ ರಾಕ್ಷಸನಪಟ್ಟಣವು ಇಕ್ಕಟ್ಟಾದ ಪಾತಾಳಲೋಕದ ಬಿಲದಲ್ಲಿರುವುದು. ರಾಕ್ಷಸರು ಆ ದುರ್ಗವನ್ನು ಕಾಪಾಡುತ್ತಿರುವರು. ಆ ಪಟ್ಟಣದ ಸುತ್ತಲೂ ಕೋಟೆ ಮತ್ತು ಕಂದಕಗಳಿರುವುವು. ನನ್ನ ಪ್ರಾಣಸಖಿಯು ಅಲ್ಲಿ ದುಃಖಪಡುತ್ತಿರುವಳು. ಆ ಕಾರಣದಿಂದ ನಾನು ಇಲ್ಲಿ ಅತ್ಯಂತ ದುಃಖದಿಂದ ಕಂಪಿಸುತ್ತಿರುವೆನು. ||೩೫-೩೬||

|| ಏಕವೀರ ಉವಾಚ ||

ಕಥಂ ತ್ವಮತ್ರ ಸಂಪ್ರಾಪ್ತಾ ಪುರಾತ್ತಸ್ಯ ದುರಾತ್ಮನಃ ।
ವಿಸ್ಮಯೋ ಮೇ ಮಹಾನತ್ರ ತತ್ತ್ವಂ ಬ್ರೂಹಿ ವರಾನನೇ ||೩೭||

ತ್ವಯಾ ಚ ಕಥಿತಂ ವಾಕ್ಯಂ ಸಂದಿಗ್ಧಂ ಭಾತಿ ಭಾಮಿನಿ ।
ಹೈಹಯಾರ್ಥೇ ಕಲ್ಪಿತಾ ಸಾ ಪಿತ್ರೇತಿ ಮಮ ಸಾಂಪ್ರತಂ ||೩೮||

ಹೈಹಯೋ ನಾಮ ರಾಜಾಽಹಂ ನಾನ್ಯೋಽಸ್ತಿ ಪೃಥಿವೀಪತಿಃ ।
ಮದರ್ಥೇ ಕಥಿತಾ ಸಾ ಕಿಂ ಸಖೀ ತವ ಸುಲೋಚನಾ ||೩೯||

ಏತನ್ಮೇ ಸಂಶಯಂ ಸುಭ್ರು ಚ್ಛೇತ್ತುಮರ್ಹಸಿ ಭಾಮಿನಿ ।
ಅಹಂ ತಾ ಮಾನಯಿಷ್ಯಾಮಿ ತಂ ಹತ್ವಾ ರಾಕ್ಷಸಾಧಮಂ ||೪೦||

ಸ್ಥಾನಂ ದರ್ಶಯ ಮೇ ತಸ್ಯ ಯದಿ ಜಾನಾಸಿ ಸುವ್ರತೇ ।
ರಾಜ್ಞೇ ನಿವೇದಿತಂ ಕಿಂ ವಾ ತತ್ಪಿತ್ರೇ ಚಾಽತಿದುಃಖಿತಾ ||೪೧||

ಯಸ್ಯೈಷಾ ವಲ್ಲಭಾ ಪುತ್ರೀ ನ ಕಿಂ ಜಾನಾತಿ ತಾಂ ಹೃತಾಂ ।
ನೋದ್ಯಮಃ ಕಿಂ ಕೃತಸ್ತೇನ ತತೋ ಮೋಚನಹೇತವೇ ||೪೨||

---

ಏಕವೀರನು ಹೇಳಿದನು——ಎಲೈ ಯಶೋವತಿಯೇ, ಆ ದುಷ್ಟನಾದ ರಾಕ್ಷಸನ ಪಟ್ಟಣದಿಂದ ನೀನು ಇಲ್ಲಿಗೆ ಹೇಗೆ ಬಂದೆ? ನನಗೆ ಈ ವಿಷಯದಲ್ಲಿ ಅತ್ಯಂತ ಆಶ್ಚರ್ಯವಾಗಿರುವುದು. ನಿಜವನ್ನು ಹೇಳು. ನೀನು ಹೇಳಿದ ಮಾತು ಸಂದೇಹವಾಗಿ ತೋರುತ್ತದೆ. ಹೈಹಯನೆಂಬ ರಾಜಪುತ್ರನಿಗೋಸ್ಕರವಾಗಿ ಆ ಕನ್ಯೆಯನ್ನು ಕೊಡುತ್ತೇನೆಂದು ಅವಳ ತಂದೆಯು ಹೇಳಿದನೆಂದು ಈಗ ಹೇಳಿರುವೆ. ||೩೭-೩೮||

ಆ ಹೈಹಯರಾಜನೇ ನಾನು. ಭೂಮಂಡಲದಲ್ಲಿ ಬೇರೊಬ್ಬ ಹೈಹಯನಿಲ್ಲ. ಆ ನಿನ್ನ ಸಖಿಯು ನನಗೋಸ್ಕರವಾಗಿ ನಿಶ್ಚಯಿಸಿದವಳೇ? ಈ ನನ್ನ ಸಂದೇಹವನ್ನು ಪರಿಹರಿಸು. ನಾನು ಆ ನೀಚರಾಕ್ಷಸನನ್ನು ಕೊಂದು ಆ ನಿನ್ನ ಸಖಿಯನ್ನು ಬಿಡಿಸಿ ಕರೆದು ತರುವೆನು. ||೩೯-೪೦||

ಒಳ್ಳೆಯ ವ್ರತನಿಯಮವುಳ್ಳವಳೇ——ನಿನಗೆ ತಿಳಿದಿದ್ದರೆ ಆ ರಾಕ್ಷಸನು ಇರುವ ಸ್ಥಳವನ್ನು ನನಗೆ ತೋರಿಸು. ಅವಳ ತಂದೆಯಾದ ರಾಜನಿಗೆ ಇದನ್ನು ಹೇಳಿದೆಯೋ? ಇಲ್ಲವೋ? ಅವನ ಪ್ರೀತಿಪಾತ್ರಳಾದ ಮಗಳನ್ನು ಕದ್ದುಕೊಂಡು ಹೋದುದನ್ನು

ಬಂದೀಕೃತಾಂ ಸುತಾಂ ಜ್ಞಾತ್ವಾ ಕಥಂ ತಿಷ್ಠತಿ ಸುಸ್ಥಿರಃ ।
ಅಸಮರ್ಥೋಽ ನೃಪಃ ಕಿಂ ವಾ ಕಾರಣಂ ಬ್ರೂಹಿ ಸತ್ವರಂ ॥೪೩॥

ತ್ವಯಾ ಮೇಽಪಹೃತಂ ಚೇತೋ ಗುಣಾನುಕ್ತ್ವಾತ್ಯಮಾನುಷಾನ್ ।
ಸಖ್ಯಾಃ ಪಂಕಜಪತ್ರಾಕ್ಷಿ ಕೃತಃ ಕಾಮವಶೋ ಭೃಶಂ ॥೪೪॥

ಕದಾ ಪಶ್ಯಾಮಿ ತಾಂ ಕಾಂತಾಂ ಮೋಚಯಿತ್ವಾಽತಿಸಂಕಟಾತ್ ।
ಇತಿ ಮೇ ಹೃದಯಂ ಚಾಽದ್ಯ ಕರೋತ್ಯತಿಮನೋರಥಂ ॥೪೫॥

ಬ್ರೂಹಿ ಮೇ ಗಮನೋಪಾಯಂ ಪುರೇ ತಸ್ಯಾತಿದುರ್ಗಮೇ ।
ಕಥಂ ತ್ವಮಾಗತಾ ತಸ್ಮಾತ್ಸಂಕಟಾದತ್ರ ತದ್ವದ ॥೪೬॥

ಬಾಲಭಾವಾನ್ಮಯಾ ಮಂತ್ರೋ ಭಗವತ್ಯಾ ವಿಶಾಂಪತೇ ।
ಪ್ರಾಪ್ತೋಽಸ್ತಿ ಬ್ರಾಹ್ಮಣಾತ್ಸಿದ್ಧಾತ್ಸಬೀಜಧ್ಯಾನಪೂರ್ವಕಃ ॥೪೭॥

---

ಆ ರಾಜನು ತಿಳಿಯನೇ? ಅವಳನ್ನು ಆ ರಾಕ್ಷಸನಿಂದ ಬಿಡಿಸುವ ಯತ್ನವನ್ನು ಆ ರಾಜನು ಏಕೆ ಮಾಡಲಿಲ್ಲ? ॥೪೧-೪೨॥

ತನ್ನ ಮಗಳು ಸೆರೆಸಿಕ್ಕಿದಳೆಂದು ತಿಳಿದು ಆ ರಾಜನು ಹೇಗೆ ಸುಮ್ಮನಿರುವನು? ಆ ರಾಜನೇನಾದರೂ ಬಲಹೀನನೇ? ಕಾರಣವನ್ನು ಬೇಗನೆ ಹೇಳು. ॥೪೩॥

ನಿನ್ನ ಸಖಿಯ ಅಮಾನುಷವಾದ ಗುಣಗಳನ್ನು ಹೇಳಿ ನನ್ನ ಮನಸ್ಸನ್ನು ಅಪಹರಿಸಿರುವೆ. ನಾನು ಆ ಕಾಂತೆಯನ್ನು ಸಂಕಟದಿಂದ ಬಿಡಿಸಿ ಯಾವಾಗ ನೋಡುವೆನೋ ಎಂದು ನನ್ನ ಮನಸ್ಸು ಅನೇಕ ಬಗೆಯ ನಿರೀಕ್ಷಣೆಗಳ ಆಲೋಚನೆಯನ್ನು ಮಾಡುತ್ತಿರುವುದು. ಪ್ರವೇಶಮಾಡಲಸಾಧ್ಯವಾದ ಆ ರಾಕ್ಷಸನ ಪಟ್ಟಣಕ್ಕೆ ಹೋಗುವ ಉಪಾಯವನ್ನು ಹೇಳು. ಆ ಕಷ್ಟವನ್ನು ತಪ್ಪಿಸಿಕೊಂಡು ನೀನು ಹೇಗೆ ಇಲ್ಲಿಗೆ ಬಂದೆ? ತಿಳಿಯಿಸು. ॥೪೪-೪೫-೪೬॥

ಯಶೋವತಿಯು ಹೇಳಿದಳು--ಎಲೈ ರಾಜನೇ, ಬಾಲ್ಯದಲ್ಲಿಯೇ ನನಗೆ ದೇವಿಯ ಮಂತ್ರವನ್ನು ಬೀಜಾಕ್ಷರಧ್ಯಾನಪೂರ್ವಕವಾಗಿ ಮಂತ್ರಸಿದ್ಧನಾದ ಒಬ್ಬ ಬ್ರಾಹ್ಮಣನು ಉಪದೇಶಮಾಡಿದನು. ಆ ಕಷ್ಟದಲ್ಲಿ ನಾನು ಇದ್ದಾಗ ನನ್ನ ಮನಸ್ಸಿ

ತತ್ರಾವಸ್ಥಿತಯಾ ರಾಜನ್ಮಯಾ ಚಿತ್ತೇ ವಿಚಾರಿತಂ ।
ಆರಾಧಯಾಮಿ ಸತತಂ ಚಂಡಿಕಾಂ ಚಂಡವಿಕ್ರಮಾಂ ॥೪೮॥

ಸಾ ದೇವೀ ಸೇವಿತಾ ಕಾಮಂ ಬಂಧಮೋಕ್ಷಂ ಕರಿಷ್ಯತಿ।
ಭಕ್ತಾನುಕಂಪಿನೀ ಶಕ್ತಿಃ ಸಮರ್ಥಾ ಸರ್ವಸಾಧನೇ ॥೪೯॥

ಯಯಾ ವಿಶ್ವಂ ಸೃಜತೇ ಶಕ್ತ್ಯಾ ಪಾಲಯತ್ಯೇವ ಸಾ ಪುನಃ ।
ಕಲ್ಪಾಂತೇ ಸಂಹರತ್ಯೇವ ನಿರಾಕಾರಾ ನಿರಾಶ್ರಯಾ ॥೫೦॥

ಇತಿ ಸಂಚಿಂತ್ಯ ಮನಸಾ ದೇವೀಂ ವಿಶ್ವೇಶ್ವರೀಂ ಶಿವಾಂ ।
ಧ್ಯಾತ್ವಾ ರಕ್ತಾಂಬರಾಂ ಸೌಮ್ಯಾಂ ಸುರಕ್ತನಯನಾಂ ಹೃದಿ ॥೫೧॥

ಸಂಸ್ಕೃತ್ಯ ಮನಸಾ ರೂಪಂ ಮಂತ್ರಜಾಪ್ಯಪರಾಽಭವಂ ।
ಉಪಾಸಿತಾ ಮಯಾ ದೇವೀ ಮಾಸಮೇಕಂ ಸಮಾಧಿನಾ ॥೫೨॥

---

ನಲ್ಲಿ ಮಹಾ ಪರಾಕ್ರಮಶಾಲಿನಿಯಾದ ಚಂಡಿಕಾದೇವಿಯನ್ನು ಯಾವಾಗಲೂ ಪೂಜೆಮಾಡೋಣವೆಂದು ಆಲೋಚಿಸಿದೆನು. ॥೪೭-೪೮॥

ಆ ದೇವಿಯನ್ನು ಪೂಜಿಸಿದರೆ ನಮ್ಮ ಈ ಸೆರೆಯನ್ನು ಬಿಡಿಸುವಳು. ಭಕ್ತರಲ್ಲಿ ದಯೆಯನ್ನು ತೋರಿಸುವ ಶಕ್ತಿದೇವಿಯು ಸಕಲ ಇಷ್ಟಾರ್ಥಗಳನ್ನೂ ಕೊಡಲು ಸಮರ್ಥಳಾಗಿರುವಳು. ಆ ದೇವಿಯೇ ತನ್ನ ಶಕ್ತಿಯಿಂದ ಪ್ರಪಂಚವನ್ನು ಸೃಷ್ಟಿಸಿ ಕಾಪಾಡಿ ಕಲ್ಪಾಂತಕಾಲದಲ್ಲಿ ಅದನ್ನು ನಾಶಮಾಡುವಳು. ಅವಳು ವಾಸ್ತವವಾಗಿ ಯಾವ ಆಕಾರವೂ ಇಲ್ಲದವಳು, ಯಾವ ಆಶ್ರಯವೂ ಇಲ್ಲದವಳು. ॥೪೯-೫೦॥

ಹೀಗೆಂದು ಮನಸ್ಸಿನಲ್ಲಿ ಯೋಚಿಸಿ ಪ್ರಪಂಚಕ್ಕೆ ಒಡೆಯಳಾದ ಮಂಗಳ ಕರಳಾದ ದೇವಿಯನ್ನು ಕೆಂಪಾದ ವಸ್ತ್ರವನ್ನುಟ್ಟು ಕೆಂಪಾದ ಕಣ್ಣುಗಳಿಂದ ಕೂಡಿ ಶಾಂತವಾದ ಆಕಾರದಿಂದ ಕೂಡಿದವಳನ್ನಾಗಿ ಮನಸ್ಸಿನಲ್ಲಿ ಧ್ಯಾನಿಸುತ್ತಾ ಮಂತ್ರಜಪ ವನ್ನು ಮಾಡುತ್ತಿದ್ದೆನು. ಹೀಗೆ ಒಂದು ತಿಂಗಳವರೆಗೆ ಏಕಾಗ್ರಚಿತ್ತದಿಂದ ಧ್ಯಾನ ಮಾಡಿದೆನು. ॥೫೧-೫೨॥

ಸ್ವಪ್ನೇ ಮಮ ಸಮಾಯಾತಾ ಭಕ್ತಿಭಾವೇನ ತೋಷಿತಾ ।
ಮಾಮಾಹಾಽಮೃತಯಾ ವಾಚಾ ಕಿಂ ಸುಪ್ತಾಽಸೀತಿ ಚಂಡಿಕಾ ॥೫೩॥

ಉತ್ತಿಷ್ಠ ಯಾಹಿ ತರಸಾ ಗಂಗಾತೀರಂ ಮನೋಹರಂ ।
ಆಗಮಿಷ್ಯತಿ ತತ್ರಾಽಸೌ ಹೈಹಯೋ ನೃಪಪುಂಗವಃ ॥೫೪॥

ಏಕವೀರೋ ಮಹಾಬಾಹುಃ ಸರ್ವಶತ್ರುವಿಮರ್ದನಃ ।
ದತ್ತಾತ್ರೇಯೇಣ ಮನ್ಮಂತ್ರೋ ಮಹಾವಿದ್ಯಾಭಿಧಃ ಪರಃ ॥೫೫॥

ದತ್ತೋಽಸ್ಮೈ ಸೋಽಪಿ ಸತತಂ ಮಾಮುಪಾಸ್ತೇಽತಿಭಕ್ತಿತಃ ।
ಮಯ್ಯಾಸಕ್ತಮತಿರ್ನಿತ್ಯಂ ಮಮ ಪೂಜಾಪರಾಯಣಃ ॥೫೬॥

ಮಾಮೇವ ಸರ್ವಭೂತೇಷು ಧ್ಯಾಯನ್ನಾಸ್ತೇ ಚ ಮತ್ಪರಃ ।
ಸ ತೇ ದುಃಖವಿನಾಶಂ ವೈ ಕರಿಷ್ಯತಿ ಮಹಾಮತಿಃ ॥೫೭॥

ಮಾಸುತೋ ವಿಹರಂಸ್ತತ್ರ ತವ ತ್ರಾತಾ ಭವಿಷ್ಯತಿ ।
ಹತ್ವಾ ತಂ ರಾಕ್ಷಸಂ ಘೋರಂ ಮೋಚಯಿಷ್ಯತಿ ಮಾನಿನೀಂ ॥೫೮॥

---

ನನ್ನ ಭಕ್ತಿಯಿಂದ ಸಂತೋಷವನ್ನು ಹೊಂದಿದ ಆ ಚಂಡಿಕಾದೇವಿಯು ನನ್ನ ಕನಸಿನಲ್ಲಿ ಬಂದು ಅಮೃತದಂತೆ ಹಿತವಾದ ಮಾತಿನಿಂದ ನನ್ನನ್ನು ಕುರಿತು ಯಶೋವತಿಯೇ ಏತಕ್ಕೆ ಮಲಗಿರುವೆ? ಬೇಗನೆ ಎದ್ದು ಮನೋಹರವಾದ ಗಂಗಾತೀರಕ್ಕೆ ಹೋಗು, ಅಲ್ಲಿಗೆ ಹೈಹಯ ವಂಶದ ರಾಜಶ್ರೇಷ್ಠನು ಬರುವನು. ॥೫೩-೫೪॥

ಏಕವೀರನೆಂದು ಅವನ ಹೆಸರು. ಅವನು ವಿಶೇಷವಾದ ತೋಳಿನ ಬಲವುಳ್ಳವನು. ಸಮಸ್ತ ಶತ್ರುಗಳನ್ನೂ ನಾಶಮಾಡುವನು. ಮಹಾವಿದ್ಯೆಯೆಂಬ ಶ್ರೇಷ್ಠವಾದ ನನ್ನ ಮಂತ್ರವನ್ನು ದತ್ತಾತ್ರೇಯ ಮುನಿಯಿಂದ ಉಪದೇಶಮಾಡಿಸಿಕೊಂಡಿರುವನು. ಅವನು ಯಾವಾಗಲೂ ಭಕ್ತಿಯಿಂದ ನನ್ನನ್ನು ಉಪಾಸನೆಮಾಡುತ್ತಿರುವನು. ॥೫೫॥

ಲಕ್ಷ್ಮೀದೇವಿಯ ಪುತ್ರನಾದ ಆ ಏಕವೀರನು ಯಾವಾಗಲೂ ನನ್ನಲ್ಲೇ ಆಸಕ್ತವಾದ ಬುದ್ಧಿಯುಳ್ಳವನಾಗಿ ನನ್ನ ಪೂಜೆಯನ್ನು ಮಾಡುತ್ತಾ ಸಮಸ್ತ ಭೂತಗಳಲ್ಲಿಯೂ ನನ್ನನ್ನೇ ಧ್ಯಾನಮಾಡುತ್ತಾ ನನ್ನ ಭಕ್ತನಾಗಿರುವನು. ಮಹಾ ಬುದ್ಧಿಶಾಲಿಯಾದ ಅವನು ನಿನ್ನ ದುಃಖವನ್ನು ನಾಶಮಾಡುವನು. ಆ ಕ್ರೂರನಾದ ರಾಕ್ಷಸನನ್ನು ಕೊಂದು ಏಕಾವಳಿಯನ್ನು ಸೆರೆಯಿಂದ ಬಿಡಿಸುವನು. ॥೫೬-೫೭-೫೮॥

ಏಕಾವಲೀಮೇಕವೀರಃ ಸರ್ವಶಾಸ್ತ್ರವಿಶಾರದಃ ।
ಪಶ್ಚಾತ್ತ್ವೈವ ಪತಿಃ ಕಾರ್ಯಸ್ತ್ವಯಾ ರಾಜಸುತಃ ಶುಭಃ ॥೫೯॥

ಇತ್ಯುಕ್ತ್ವಾಽಂತರ್ದಧೇ ದೇವೀ ಪ್ರಬುದ್ಧಾಽಹಂ ತದೈವ ಹಿ ।
ಕಥಿತಂ ಸ್ವಪ್ನವೃತ್ತಾಂತಂ ದೇವ್ಯಾಶ್ಚಾಽಽರಾಧನಂ ತಥಾ ॥೬೦॥

ಪ್ರಸನ್ನವದನಾ ಜಾತಾ ಶ್ರುತ್ವಾ ಸಾ ಕಮಲೇಕ್ಷಣಾ ।
ವಿಶೇಷೇಣ ಚ ಸಂತುಷ್ಟಾ ಮಾಮುವಾಚ ಶುಚಿಸ್ಮಿತಾ ॥೬೧॥

ಗಚ್ಛ ತತ್ರ ತ್ವರಾಯುಕ್ತಾ ಕುರು ಕಾರ್ಯಂ ಮಮ ಪ್ರಿಯೇ ।
ಸತ್ಯವಾಕ್ಯಾ ಭಗವತೀಸಾಽಽವಾಂ ಮೋಕ್ಷಂ ವಿಧಾಸ್ಯತಿ ॥೬೨॥

ಇತ್ಯಾಜ್ಞಪ್ತಾ ತಯಾ ಚಾಽಹಂ ಸಖ್ಯಾ ವೈ ಪ್ರೇಮಯುಕ್ತಯಾ ।
ಮತ್ತ್ವೋಽಪಸರಣಂ ಯುಕ್ತಂ ತಸ್ಮಾತ್ಸ್ಥಾನಾತ್ತದಾ ನೃಪ ॥೬೩॥

---

ಸರ್ವಶಾಸ್ತ್ರವಿಶಾರದನೂ, ರಾಜಪುತ್ರನೂ, ಮಂಗಲಸ್ವರೂಪನೂ ಆದ ಏಕವೀರನನ್ನು ಏಕಾವಲಿಯು ಪತಿಯಾಗಿ ವರಿಸುವಂತೆ ನೀನು ಮಾಡು. ಎಂದು ದೇವಿಯು ಹೇಳಿ ಅಂತರ್ಧಾನಳಾದಳು. ಆಗಲೇ ನಾನು ಎಚ್ಚರಿಕೆಯನ್ನು ಹೊಂದಿದೆನು. ॥೫೯॥

ನಾನು ಏಕಾವಳಿಗೆ ಸ್ವಪ್ನವೃತ್ತಾಂತವನ್ನೂ ದೇವಿಯ ಆರಾಧನೆಯ ವಿಷಯವನ್ನೂ ಹೇಳಿದೆನು. ಇದನ್ನು ಕೇಳಿ ಆ ಕಮಲಾಕ್ಷಿಯು ಸಂತೋಷವನ್ನು ಸೂಚಿಸುವ ಮುಖದಿಂದ ಕೂಡಿ ತೃಪ್ತಳಾಗಿ ನಗುತ್ತಾ ನನ್ನನ್ನು ಕುರಿತು ಹೇಳಿದಳು. ॥೬೦-೬೧॥

ಪ್ರೀತಿಪಾತ್ರಳಾದ ಸಖಿಯೇ, ಬೇಗನೆ ಅಲ್ಲಿಗೆ ಹೋಗು, ನನ್ನ ಕೆಲಸವನ್ನು ಮಾಡು. ನಿಜವಾದ ಮಾತನ್ನು ಹೇಳಿದ ದೇವಿಯು ನಮ್ಮಿಬ್ಬರನ್ನೂ ಈ ಸೆರೆಯಿಂದ ಬಿಡಿಸುವಳು. ॥೬೨॥

ಎಲೈ ರಾಜಪುತ್ರನೇ, ಈ ರೀತಿಯಾಗಿ ನಾನು ಪ್ರಿಯಸಖಿಯಾದ ಆ ಏಕಾವಳಿಯ ಅಪ್ಪಣೆಯನ್ನು ಪಡೆದು, ಆ ಸ್ಥಳದಿಂದ ಹೊರಡುವುದು ಯುಕ್ತವಾದು

**ಚಲಿತಾಽಹಂ ತತಃ ಶೀಘ್ರಂ ಮಹಾದೇವೀಪ್ರಸಾದತಃ ।**
**ಮಾರ್ಗಜ್ಞಾನಂ ಶೀಘ್ರಗತಿರ್ಮಯಾ ಪ್ರಾಪ್ತಾ ನೃಪಾತ್ಮಜ ॥೬೪॥**

**ಇತ್ಯೇತತ್ಕಥಿತಂ ಸರ್ವಂ ಕಾರಣಂ ಮಮ ದುಃಖಜ(ದ)ಂ ।**
**ಕಸ್ತ್ವಂ ಕಸ್ಯ ಸುತಶ್ಚೇತಿ ವದ ವೀರ ಯಥಾ ತಥಾ ॥೬೫॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ**
**ದ್ವಾವಿಂಶೋಽಧ್ಯಾಯಃ**

---

ದೆಂದು ತಿಳಿದು ಆಗಲೇ ಹೊರಟೆನು. ಮಹಾದೇವಿಯಾದ ಭುವನೇಶ್ವರಿಯ ಅನುಗ್ರಹದಿಂದ ದಾರಿಯೂ ತಿಳಿಯಿತು, ಬೇಗನೆ ಬರುವ ಶಕ್ತಿಯೂ ಉಂಟಾಯಿತು. ॥೬೩-೬೪॥

ಓ ಶೂರನೇ, ನನ್ನ ದುಃಖಕ್ಕೆ ಕಾರಣವಾದ ಸಮಸ್ತ ವೃತ್ತಾಂತವನ್ನೂ ಹೇಳಿದೆನು. ನೀನು ಯಾರು? ಯಾರ ಮಗನು? ಎಂಬುದನ್ನು ನಿಜವಾಗಿ ಹೇಳು. ॥೬೫॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠ ಸ್ಕಂಧೇ

### || ತ್ರಯೋವಿಂಶೋಽಧ್ಯಾಯಃ ||

### ಇಪ್ಪತ್ತುಮೂರನೆಯ ಅಧ್ಯಾಯವು

|| ವ್ಯಾಸ ಉವಾಚ ||

**ತಸ್ಯಾಸ್ತು ವಚನಂ ಶ್ರುತ್ವಾ ರಮಾಪುತ್ರಃ ಪ್ರತಾಪವಾನ್ ।**
**ಪ್ರಫುಲ್ಲವದನಾಂಭೋಜಸ್ತಾಮುವಾಚ ವಿಶಾಂಪತೇ ॥೧॥**

**ರಂಭೋರು ಯಸ್ತ್ವಯಾ ಪೃಷ್ಟೋ ವೃತಾಂತೋ ವಿಶದಾಕ್ಷರಃ ।**
**ಹೈಹಯೋಽಹಂ ಚೈಕವೀರನಾಮ್ನಾ ಸಿಂಧುಸುತಾಸುತಃ ॥೨॥**

---

ವ್ಯಾಸಋಷಿಯು ಹೇಳಿದನು—ಎಲೈ ಜನಮೇಜಯರಾಯನೇ ಕೇಳು, ಆ ಯಶೋವತಿಯ ಮಾತನ್ನು ಕೇಳಿ ಲಕ್ಷ್ಮೀದೇವಿಯ ಪುತ್ರನಾದ ಪರಾಕ್ರಮಶಾಲಿಯಾದ ಏಕವೀರನು ವಿಕಸಿತವಾದ ಮುಖಕಮಲವುಳ್ಳವನಾಗಿ ಆಕೆಯನ್ನು ಕುರಿತು ಹೀಗೆ ಹೇಳಿದನು. ||೧||

ರಾಜನು ಹೇಳಿದನು—ಬಾಳೆಯ ಕಂಬದಂತೆ ನಯವಾದ ತೊಡೆಯುಳ್ಳ ಎಲೌ ಸ್ತ್ರೀಯೇ, ನೀನು ಪ್ರಶ್ನೆಮಾಡಿದ ನನ್ನ ವಿಷಯವಾದ ವೃತ್ತಾಂತವನ್ನು ಕೇಳು. ನಾನೇ ಹೈಹಯನು. ಏಕವೀರನೆಂದು ನನ್ನ ಹೆಸರು. ನಾನು ಸಮುದ್ರಪುತ್ರಿಯಾದ ಲಕ್ಷ್ಮೀದೇವಿಯ ಮಗನು. ||೨||

ಮನೋ ಮೇ ಯತ್ತ್ವಯಾ ನೂನಂ ಪರತಂತ್ರಂ ಕೃತಂ ಕಿಲ ।
ಕಿಂ ಕರೋಮಿ ಕ್ವ ಗಚ್ಛಾಮಿ ವಿರಹೇಣಾತಿಪೀಡಿತಃ ॥೩॥

ಪ್ರಥಮಂ ರೂಪಮಾಖ್ಯಾತಂ ಸರ್ವಲೋಕಾತಿಗಂ ತ್ವಯಾ ।
ತೇನ ಮೇ ವಿಹ್ವಲಂ ಜಾತಂ ಕಾಮಬಾಣಹತಂ ಮನಃ ॥೪॥

ತತಸ್ತಸ್ಯಾ ಗುಣಾಃ ಪ್ರೋಕ್ತಾಸ್ತೈಸ್ತು ಚಿತ್ತಂ ಹೃತಂ ಪುನಃ ।
ಯತ್ತ್ವಯೋಕ್ತಂ ಪುನರ್ವಾಕ್ಯಂ ತೇನ ಮೇ ವಿಸ್ಮಯೋಽಭವತ್ ॥೫॥

ಏಕಾವಲ್ಯಾ ವಚಃ ಪ್ರೋಕ್ತಂ ದಾನವಾಗ್ರೇ ಮಯಾ ವೃತಃ ।
ಹೈಹಯಸ್ತಂ ವಿನಾ ನಾಽನ್ಯಂ ವೃಣೋಮೀತಿ ವಿನಿಶ್ಚಯಃ ॥೬॥

ತೇನ ವಾಕ್ಯೇನ ತನ್ವಂಗಿ ಭೃತ್ಯೋಽಹಮಧುನಾ ಕೃತಃ ।
ತ್ವಯಾ ತಸ್ಯಾಃ ಸುಕೇಶಾಂತೇ ಬ್ರೂಹಿ ಕಿಂ ಕರವಾಣಿ ವಾಂ ॥೭॥

---

ನೀನು ನನ್ನ ಮನಸ್ಸನ್ನು ವಶಪಡಿಸಿಕೊಂಡು ನಿನ್ನ ಸಖಿಗೆ ಪರಾಧೀನ ಮಾಡಿದೆ. ವಿರಹದುಃಖದಿಂದ ತುಂಬ ಹೆಚ್ಚಾಗಿ ಪೀಡಿತನಾದ ನಾನು ಏನನ್ನು ಮಾಡಲಿ? ಎಲ್ಲಿಗೆ ಹೋಗಲಿ? ॥೩॥

ಮೊದಲು ನೀನು ಸಮಸ್ತಲೋಕಗಳಲ್ಲಿಯೂ ಅತಿಶಯವಾದ ಆ ಏಕಾವಳಿಯ ರೂಪವನ್ನು ನನಗೆ ತಿಳಿಯಹೇಳಿದೆ. ಅದರಿಂದಲೇ ನನ್ನ ಮನಸ್ಸು ಭ್ರಾಂತವಾಗಿ ಕಾಮಬಾಣಕ್ಕೆ ಗುರಿಯಾಯಿತು! ಆಮೇಲೆ ಆಕೆಯ ಗುಣಗಳನ್ನು ವಿವರಿಸಿಹೇಳಿದೆ. ಅದರಿಂದ ಮತ್ತೆ ನನ್ನ ಮನಸ್ಸು ನನ್ನಧೀನ ತಪ್ಪಿತು! ಪುನಃ ನೀನು ಹೇಳಿದ ಅವಳ ಈ ಮಾತುಗಳಿಂದ ನನಗೆ ಆಶ್ಚರ್ಯವೇ ಆಯಿತು! ॥೪-೫॥

ಏಕಾವಳಿಯು ಆ ದಾನವನ ಎದುರಿಗೆ "ನಾನು ಹೈಹಯನನ್ನು ವರಿಸಿರುವೆನು. ಅವನನ್ನು ಹೊರತಾಗಿ ಮತ್ತೊಬ್ಬನನ್ನು ವರಿಸುವುದಿಲ್ಲವೆಂದು ನಿಶ್ಚಯಿಸಿರುವೆನು." ಎಂದು ಹೇಳಿದ ಮಾತಿನಿಂದ, ನೀನು ನನ್ನನ್ನು ಆ ಏಕಾವಳಿಗೆ ಭೃತ್ಯನನ್ನಾಗಿ ಮಾಡಿದೆ! ಇಂತಹ ನಾನು ನಿಮ್ಮಿಬ್ಬರಿಗೂ ಏನು ಉಪಕಾರವನ್ನು ಮಾಡಲಿ? ಹೇಳು. ॥೬-೭॥

ಸ್ಥಾನಂ ತಸ್ಯ ನ ಜಾನಾಮಿ ರಾಕ್ಷಸಸ್ಯ ದುರಾತ್ಮನಃ ।
ಗತಿರ್ಮೇ ನಾಸ್ತಿ ಗಮನೇ ಪುರೇ ತಸ್ಮಿನ್ಸುಲೋಚನೇ ॥೮॥

ವದ ಮಾಂ ತ್ವಂ ವಿಶಾಲಾಕ್ಷಿ ತತ್ರ ಪ್ರಾಪಯಿತುಂ ಕ್ಷಮಾ ।
ಪ್ರಾಪಯಾಶು ಸಖೀ ತೇ ಸಾ ಯತ್ರ ತಿಷ್ಠತಿ ಸುಂದರಿ ॥೯॥

ಹತ್ವಾ ತಂ ರಾಕ್ಷಸಂ ಕ್ರೂರಂ ಮೋಚಯಿಷ್ಯಾಮಿ ಸಾಂಪ್ರತಂ ।
ವಿವಶಾಂ ಶೋಕಸಂತಪ್ತಾಂ ರಾಜಪುತ್ರೀಂ ತವ ಪ್ರಿಯಾಂ ॥೧೦॥

ವಿಮುಕ್ತದುಃಖಾಂ ಕೃತ್ವಾಽಽಶು ಪ್ರಾಪಯಿಷ್ಯಾಮಿ ತೇ ಪುರಂ ।
ಪಿತ್ರೇ ಚಾಸ್ಯಾಃ ಪ್ರದಾಸ್ಯಾಮಿ ಕನ್ಯಾಮೇಕಾವಲೀಮಹಂ ॥೧೧॥

ಪಶ್ಚಾದ್ವಿವಾಹಂ ಕರ್ತಾಽಸೌ ರಾಜಪುತ್ರ್ಯಾಃ ಪರಂತಪಃ ।
ಏವಂ ತೇ ಮನಸಃ ಕಾಮೋ ಮಮ ಚಾಪಿ ಪ್ರಿಯಂವದೇ ॥೧೨॥

---

ನಾನು ಆ ದುಷ್ಟನಾದ ರಾಕ್ಷಸನಿರುವ ಸ್ಥಳವನ್ನು ತಿಳಿಯೆನು. ಆದುದರಿಂದ ಅವನ ಪಟ್ಟಣಕ್ಕೆ ಹೋಗುವುದಕ್ಕೂ ನನಗೆ ಸಾಧ್ಯವಿಲ್ಲದೇ ಇದೆ. ನೀನೇ ನನ್ನನ್ನು ಅಲ್ಲಿಗೆ ಕರೆದುಕೊಂಡುಹೋಗಲು ಶಕ್ತಳಾಗಿರುವೆ. ಎಲೈ ಸುಂದರಿಯೇ, ನಿನ್ನ ಸಖಿಯಾದ ಏಕಾವಳಿಯು ಇರುವ ಪ್ರದೇಶಕ್ಕೆ ಬೇಗನೆ ನನ್ನನ್ನು ಕರೆದುಕೊಂಡು ಹೋಗು. ॥೮-೯॥

ಈಗ ಆ ಕ್ರೂರನಾದ ರಾಕ್ಷಸನನ್ನು ಕೊಂದು ನಿನ್ನ ಸಖಿಯೂ ಪರಾಧೀನಳೂ ದುಃಖಿತಳೂ ಆದ ಆ ರಾಜಪುತ್ರಿಯನ್ನು ಸೆರೆಯಿಂದ ಬಿಡಿಸುವೆನು. ಆ ಏಕಾವಳಿಯ ದುಃಖವನ್ನು ಬೇಗನೆ ನಾಶಮಾಡಿ ನಿಮ್ಮ ಪಟ್ಟಣಕ್ಕೆ ಕರೆದುಕೊಂಡುಹೋಗಿ ಆಕೆಯ ತಂದೆಗೆ ಆ ಕನ್ಯೆಯನ್ನು ಕೊಡುವೆನು. ॥೧೦-೧೧॥

ಆಮೇಲೆ ಆ ರಾಜನು ರಾಜಪುತ್ರಿಗೆ ವಿವಾಹವನ್ನು ಮಾಡುವನು. ಹೀಗೆ ಕಾರ್ಯಸಾಧನೆಯಿಂದ ನಿನ್ನ ಮನಸ್ಸಿನ ಅಪೇಕ್ಷೆಯೂ ನನ್ನ ಇಷ್ಟವೂ ಕೂಡ ಸಂಪೂರ್ಣವಾಗುವುದು. ॥೧೨॥

ಭವಿಷ್ಯತಿ ಸ ಸಂಪೂರ್ಣಃ ಸಾಧನೇನ ತವಾಽಧುನಾ ।
ದರ್ಶಯಾಽಽಶು ಪುರಂ ತಸ್ಯ ಪಶ್ಯ ಮೇ ತ್ವಂ ಪರಾಕ್ರಮಂ ॥೧೩॥

ಯಥಾ ಹನ್ಮಿ ದುರಾಚಾರಂ ಪರದಾರಾಪಹಾರಕಂ ।
ತಥಾ ಕುರು ಪ್ರಿಯಂ ಕರ್ತುಂ ಶಕ್ತಾಽಸಿ ವರವರ್ಣಿನಿ ॥೧೪॥

ಮಾರ್ಗಂ ದರ್ಶಯ ತಸ್ಯಾದ್ಯ ಪುರಸ್ಯ ದುರ್ಗಮಸ್ಯ ಚ ।

॥ ವ್ಯಾಸ ಉವಾಚ ॥

ತನ್ನಿಶಮ್ಯ ಪ್ರಿಯಂ ವಾಕ್ಯಂ ಮುದಿತಾ ಚ ಯಶೋವತೀ ॥೧೫॥

ತಮುವಾಚ ರಮಾಪುತ್ರಂ ಗಮನೋಪಾಯಮಾದರಾತ್ ।
ಮಂತ್ರಂ ಗೃಹಾಣ ರಾಜೇಂದ್ರಭಗವತ್ಯಾಸ್ತು ಸಿದ್ಧಿದಂ ॥೧೬॥

ದರ್ಶಯಿಷ್ಯಾಮಿ ತಸ್ಯಾದ್ಯ ಪುರಂ ರಾಕ್ಷಸಪಾಲಿತಂ ।
ಸಜ್ಜೋ ಭವ ಮಹಾಭಾಗೆ ಗಮನಾಯ ಮಯಾ ಸಹ ॥೧೭॥

---

ಬೇಗನೆ ಆ ರಾಕ್ಷಸನ ಪಟ್ಟಣವನ್ನು ತೋರಿಸು. ಮತ್ತು ಆ ಮೇಲೆ ನನ್ನ ಪರಾಕ್ರಮವನ್ನು ನೀನು ನೋಡು. ॥೧೩॥

ಎಲೌ ಉತ್ತಮಸ್ತ್ರೀಯೇ, ಪರಸ್ತ್ರೀಯನ್ನು ಅಪಹರಿಸಿದ ಕೆಟ್ಟ ನಡತೆಯುಳ್ಳ ಆ ರಾಕ್ಷಸನನ್ನು ನಾನು ಕೊಲ್ಲುವಂತೆ ಮಾಡು. ನೀನು ದೇವಿಯ ಭಕ್ತಳಾದುದ ರಿಂದ ಈ ಹಿತವಾದ ಕಾರ್ಯವನ್ನು ಮಾಡಲು ನಿನಗೆ ಶಕ್ತಿಯು ಇರುವುದು. ಪ್ರವೇಶಿಸುವುದಕ್ಕಾಗದ ಆ ಪಟ್ಟಣಕ್ಕೆ ಹೋಗುವ ದಾರಿಯನ್ನು ಈಗಲೇ ತೋರಿಸು. ॥೧೪॥

ವ್ಯಾಸಋಷಿಯು ಹೇಳಿದನು—ಏಕವೀರನು ಹೇಳಿದ ಹಿತವಾದ ಮಾತನ್ನು ಕೇಳಿ ಯಶೋವತಿಯು ಸಂತೋಷದಿಂದ ಲಕ್ಷ್ಮೀಪುತ್ರನಾದ ಅವನಿಗೆ ರಾಕ್ಷಸನ ಪಟ್ಟಣಕ್ಕೆ ಹೋಗುವ ಉಪಾಯವನ್ನು ಪ್ರೀತಿಯಿಂದ ಹೇಳಿದಳು. ॥೧೫॥

ಎಲೈ ರಾಜಶ್ರೇಷ್ಠನೇ, ಸಕಲಕಾರ್ಯಸಿದ್ಧಿಯನ್ನೂ ಉಂಟುಮಾಡುವ ಮಹಾಮಹಿಮಳಾದ ಭುವನೇಶ್ವರೀದೇವಿಯ ಮಂತ್ರವನ್ನು ನಿನಗೆ ಉಪದೇಶಿಸು ವೆನು. ಅದನ್ನು ಪರಿಗ್ರಹಿಸು. ರಾಕ್ಷಸರು ರಕ್ಷಿಸುತ್ತಿರುವ ಆ ಕಾಲಕೇತುವಿನ ಪಟ್ಟಣ ವನ್ನು ತೋರಿಸುವೆನು. ನನ್ನ ಜತೆಯಲ್ಲಿಯೇ ದೊಡ್ಡ ಸೈನ್ಯದೊಡನೆ ಹೊರಡು

ಸೈನ್ಯೇನ ಮಹತಾ ಯುಕ್ತಸ್ತತ್ರ ಯುದ್ಧಂ ಭವಿಷ್ಯತಿ ।
ಕಾಲಕೇತುರ್ಮಹಾವೀರೋ ರಾಕ್ಷಸೈರ್ಬಹುಭಿರ್ವೃತಃ ॥೧೮॥

ತಸ್ಮಾನ್ಮಂತ್ರಂ ಗೃಹೀತ್ವಾ ತ್ವಂ ವ್ರಜ ತತ್ರ ಮಯಾ ಸಹ ।
ದರ್ಶಯಿಷ್ಯಾಮಿ ತೇ ಮಾರ್ಗಂ ಪುರಸ್ಯಾಽಸ್ಯ ದುರಾತ್ಮನಃ ॥೧೯॥

ಹತ್ವಾ ತಂ ಪಾಪಕರ್ಮಾಣಂ ಮೋಚಯಾಶು ಸಖೀಂ ಮಮ ।
ಶ್ರುತ್ವಾ ತದ್ವಚನಂ ವೀರೋ ಮಂತ್ರಂ ಜಗ್ರಾಹ ಸತ್ವರಃ ॥೨೦॥

ದತ್ತಾತ್ರೇಯಾದ್ದೈವಯೋಗಾತ್ ಪ್ರಾಪ್ತಾಜ್ಞಾನಿವರಾಚ್ಛುಭಾತ್।
ಯೋಗೇಶ್ವರೀಮಹಾಮಂತ್ರಂ ತ್ರಿಲೋಕೀತಿಲಕಾಭಿಧಂ ॥೨೧॥

ತೇನ ಸರ್ವಜ್ಞತಾ ಜಾತಾ ಸರ್ವಾಂತಶ್ಚಾರಿತಾ ತಥಾ ।
ತಯಾ ಸಹ ಜಗಾಮಾಶು ಪುರಂ ತಸ್ಯ ಸುದುರ್ಗಮಂ ॥೨೨॥

---

ವುದಕ್ಕೆ ಸಿದ್ಧನಾಗು. ಏಕೆಂದರೆ ಅಲ್ಲಿ ಆ ರಾಕ್ಷಸನಿಗೂ ನಿನಗೂ ಯುದ್ಧವು ಸಂಭವಿಸುವುದು. ॥೧೬-೧೭॥

ಆ ಕಾಲಕೇತುವು ಮಹಾಶೂರನು. ಅನೇಕ ರಾಕ್ಷಸರೊಡನೆ ಕೂಡಿರುವನು. ಆ ಕಾರಣದಿಂದ ನೀನು ಮಂತ್ರವನ್ನು ಪರಿಗ್ರಹಿಸಿ ನನ್ನೊಡನೆ ಅಲ್ಲಿಗೆ ಬಾ. ಆ ದುಷ್ಟನ ಪಟ್ಟಣಕ್ಕೆ ಹೋಗುವ ದಾರಿಯನ್ನು ತೋರಿಸಿಕೊಡುವೆನು. ಆಮೇಲೆ ನೀನು ಆ ದುಷ್ಟನನ್ನು ಕೊಂದು ನನ್ನ ಸಖಿಯನ್ನು ಬೇಗನೆ ಬಿಡಿಸು. ॥೧೮-೧೯॥

ಆ ಯಶೋವತಿಯ ಮಾತನ್ನು ಕೇಳಿ ಏಕವೀರನು ಕಾಕತಾಳೀಯನ್ಯಾಯದಂತೆ ಆಗಲೇ ಅಲ್ಲಿಗೆ ಪ್ರಾಪ್ತನಾದ ಜ್ಞಾನಿಗಳಲ್ಲಿ ಶ್ರೇಷ್ಠನಾದ ದತ್ತಾತ್ರೇಯಮುನಿಯಿಂದ ಮೂರುಲೋಕಕ್ಕೂ ಅಲಂಕಾರಪ್ರಾಯವಾದ ಯೋಗೇಶ್ವರೀ ಮಹಾಮಂತ್ರವನ್ನು ಬೇಗನೆ ಉಪದೇಶಕ್ರಮದಿಂದ ಪರಿಗ್ರಹಿಸಿದನು. " ಹ್ರೀಂ ಗೌರಿ ರುದ್ರದಯಿತೇ ಯೋಗೇಶ್ವರಿ ಹುಂಫಟ್ ಸ್ವಾಹಾ " ಎಂಬುದೇ ಯೋಗೇಶ್ವರೀ ಮಹಾಮಂತ್ರವು. ಈ ಮಂತ್ರವು ಗೌರೀತಂತ್ರವೆಂಬ ತಂತ್ರಶಾಸ್ತ್ರದಲ್ಲಿ ಪ್ರಸಿದ್ಧವಾಗಿರುವುದು. ಈ ಮಂತ್ರದ ನ್ಯಾಸಾದಿಗಳನ್ನು ಶಾರದಾತಿಲಕವೆಂಬ ಗ್ರಂಥದ ಟೀಕೆಯಲ್ಲಿ ನವಮಪಟಲದಲ್ಲಿ ಘಟಾರ್ಗಲಯಂತ್ರವಿಧಾನದಲ್ಲಿ ಹೇಳಿರುವುದು. ॥೨೦-೨೧॥

ಆ ಮಂತ್ರಗ್ರಹಣ ಮತ್ತು ಪುರಶ್ಚರಣಪ್ರಭಾವದಿಂದ ಸಮಸ್ತವನ್ನೂ ತಿಳಿಯುವ ಶಕ್ತಿಯೂ ಎಲ್ಲೆಡೆಯಲ್ಲಿಯೂ ಸಂಚರಿಸುವ ಶಕ್ತಿಯೂ ಆ ಏಕವೀರನಿಗೂ

ರಕ್ಷಿತಂ ರಾಕ್ಷಸೈರ್ಘೋರೈಃ ಪಾತಾಲಮಿವ ಪನ್ನಗೈಃ ।
ಯಶೋವತ್ಯಾ ಚ ಸೈನ್ಯೇನ ಮಹತಾ ಸಂಯುತೋ ನೃಪಃ ॥೨೩॥

ತಮಾಯಾಂತಂ ಸಮಾಲೋಕ್ಯ ದೂತಾಸ್ತಸ್ಯ ಭಯಾತುರಾಃ ।
ಕ್ರೋಶಂತೋಽಭಿಯಯುಃ ಪಾರ್ಶ್ವಂ ಕಾಲಕೇತೋಸ್ತರಸ್ವಿನಃ॥೨೪॥

ತಮೂಚುಃ ಸಹಸಾ ಗತ್ವಾ ರಾಕ್ಷಸಂ ಕಾಮಮೋಹಿತಂ ।
ಏಕಾವಲೀಸಮೀಪಸ್ಥಂ ಕುರ್ವಂತಂ ವಿನಯಾನ್ ಬಹೂನ್ ॥೨೫॥

|| ದೂತಾ ಊಚುಃ ||

ರಾಜನ್ಯಶೋವತೀ ನಾರೀ ಕಾಮಿನ್ಯಾಃ ಸಹಚಾರಿಣೀ ।
ಆಯಾತಿ ಸಹ ಸೈನ್ಯೇನ ರಾಜಪುತ್ರೇಣ ಸಂಯುತಾ ||೨೬||

ಜಯಂತೋ ವಾ ಮಹಾರಾಜ ಕಾರ್ತಿಕೇಯೋಽಥವಾ ನು ಕಿಂ ।
ಆಗಚ್ಛತಿ ಬಲೋನ್ಮತ್ತೋ ವಾಹಿನೀಸಹಿತಃ ಕಿಲ ॥೨೭॥

---

ಉಂಟಾಯಿತು ! ಆ ರಾಜನು ದೊಡ್ಡ ಸೇನೆಯಿಂದಲೂ ಯಶೋವತಿಯಿಂದಲೂ ಕೂಡಿ ಕ್ರೂರರಾದ ರಾಕ್ಷಸರು ರಕ್ಷಿಸುತ್ತಿದ್ದ, ಸರ್ಪಗಳು ಕಾವಲುಕಾಯುತ್ತಿರುವ ಪಾತಾಳಲೋಕದಂತೆ ಇರುವ, ಆ ಕಾಲಕೇತುವಿನ ಪಟ್ಟಣವನ್ನು ಪ್ರವೇಶಿಸಿದನು. ||೨೨-೨೩||

ಹೀಗೆ ಬರುತ್ತಿರುವ ಆ ರಾಜನನ್ನು ನೋಡಿ ಆ ಕಾಲಕೇತುವಿನ ದೂತರು ಬೇಗನೆ ಭಯದಿಂದ ಕೂಗಿಕೊಳ್ಳುತ್ತಾ ಏಕಾವಲಿಯ ಸಮೀಪದಲ್ಲಿ ವಿನಯವಾಗಿ ಪ್ರಾರ್ಥನೆಯ ಮಾತನಾಡುತ್ತಾ ಕಾಮಮೋಹಿತನಾಗಿದ್ದ ರಾಕ್ಷಸನ ಸಮೀಪಕ್ಕೆ ಓಡಿ ಬಂದು ಅವನನ್ನು ಕುರಿತು ಹೀಗೆ ಅರಿಕೆಮಾಡಿದರು. ||೨೪-೨೫||

ಓ ರಾಜನೇ, ಏಕಾವಳಿಯ ಸಖಿಯಾದ ಯಶೋವತಿಯು ರಾಜಪುತ್ರನೊಡನೆ ಸೈನ್ಯಸಮೇತಳಾಗಿ ಬರುತ್ತಿರುವಳು ! ಅವನು ಇಂದ್ರಪುತ್ರನಾದ ಜಯಂತನೋ ಅಥವಾ ಶಿವಪುತ್ರನಾದ ಕುಮಾರಸ್ವಾಮಿಯೋ ಆಗಿ ಇರಬಹುದು ಎನ್ನುವಂತೆ ಬಲದಿಂದ ಮದಿಸಿ ಸೇನಾಸಮೇತನಾಗಿ ಬರುತ್ತಿರುವನಲ್ಲವೇ ? ||೨೬-೨೭||

**ಸಂಯುತ್ತೋ ಭವ ರಾಜೇಂದ್ರ ಸಂಗ್ರಾಮಃ ಸಮುಪಸ್ಥಿತಃ ।**
**ದೇವಪುತ್ರೇಣ ಯುಧ್ಯಸ್ವ ತ್ಯಜ ವಾ ಕಮಲೇಕ್ಷಣಾಂ ॥೨೮॥**

**ಇತೋ ದೂರೇಽಸ್ತಿ ಸೈನ್ಯಂ ತದ್ಯೋಜನತ್ರಯಮಾತ್ರತಃ ।**
**ಸಜ್ಜೋ ಭವ ಮಹೀಪಾಲ ದುಂದುಭಿಂ ಘೋಷಯಾಽಽಶು ವೈ॥೨೯॥**

॥ ವ್ಯಾಸ ಉವಾಚ ॥

**ತೇಷಾಂ ತದ್ವಚನಂ ಶ್ರುತ್ವಾ ರಾಕ್ಷಸಃ ಕ್ರೋಧಮೂರ್ಛಿತಃ ।**
**ರಾಕ್ಷಸಾನ್ಪ್ರೇರಯಾಮಾಸ ಸಾಯುಧಾನ್ಸಬಲಾನ್ಬಹೂನ್ ॥೩೦॥**

**ಗಚ್ಛಧ್ವಂ ರಾಕ್ಷಸಾಃ ಸರ್ವೇ ಸಂಮುಖಾಃ ಶಸ್ತ್ರಪಾಣಯಃ ।**
**ತಾನಾಜ್ಞಾಪ್ಯ ಕಾಲಕೇತುಃ ಪಪ್ರಚ್ಛ ಪ್ರಣಯಾನ್ವಿತಃ ॥೩೧॥**

**ಏಕಾವಲೀಂ ಸಮೀಪಸ್ಥಾಂ ವಿವಶಾಂ ಭೃಶದುಃಖಿತಾಂ ।**
**ಕೋಽಯಮಾಯಾತಿ ತನ್ವಂಗಿ ಪಿತಾ ತೇ ವಾ ಪರಃ ಪುಮಾನ್॥೩೨॥**

---

ಓ ರಾಜಶ್ರೇಷ್ಠನೇ, ಯುದ್ಧವು ಪ್ರಾಪ್ತವಾಗುತ್ತಿದೆ. ನೀನೂ ಸಿದ್ಧನಾಗು. ದೇವಪುತ್ರನೊಡನೆ ಯುದ್ಧಮಾಡು. ಇಲ್ಲದಿದ್ದರೆ ಏಕಾವಲಿಯನ್ನು ಬಿಟ್ಟುಬಿಡು. ಇಲ್ಲಿಗೆ ಮೂರು ಗಾವುದ ದೂರದಲ್ಲಿ ಆ ಸೈನ್ಯವಿರುತ್ತದೆ. ಓ ಭೂಪತಿಯೇ, ನಿನ್ನವರೆಲ್ಲರೂ ಯುದ್ಧಕ್ಕೆ ಸಿದ್ಧರಾಗುವಂತೆ ಮಾಡಲು ಬೇಗನೆ ನಗಾರಿಯ ಶಬ್ದವನ್ನು ಮಾಡಿಸು. ॥೨೮-೨೯॥

ಹೀಗೆಂದು ಹೇಳಿದ ಆ ದೂತರ ಮಾತನ್ನು ಕೇಳಿ, ಕಾಲಕೇತುವು ಕೋಪಾವೇಶದಿಂದ ಬಲಶಾಲಿಗಳಾದ ಆಯುಧಗಳನ್ನು ಧರಿಸಿದ ತನ್ನ ಕಡೆಯವರಾದ ಅನೇಕ ರಾಕ್ಷಸರನ್ನು ಕಳುಹಿಸಿದನು. ॥೩೦॥

ಕಾಲಕೇತುವು ಅವರನ್ನು ಕುರಿತು, ಆಯುಧಗಳನ್ನು ಹಿಡಿದು ಶತ್ರುಗಳ ಎದುರಾಗಿ ಹೋಗಿರೆಂದು ಆ ರಾಕ್ಷಸರಿಗೆಲ್ಲರಿಗೂ ಅಪ್ಪಣೆಯನ್ನು ಮಾಡಿ, ತನ್ನ ಸಮೀಪದಲ್ಲಿ ಪರಾಧೀನವಾಗಿ ದುಃಖಿಸುತ್ತಿರುವ ಏಕಾವಳಿಯನ್ನು ಕುರಿತು, ಪ್ರೀತಿಯಿಂದ ಹೀಗೆ ಪ್ರಶ್ನೆಮಾಡಿದನು. ॥೩೧॥

ಎಲೌ ಕೃಶಾಂಗಿಯೇ, ನಿನ್ನ ಬಿಡುಗಡೆಗೋಸ್ಕರವಾಗಿ ಸೈನ್ಯ ಸಮೇತನಾಗಿ ಬರುತ್ತಿರುವವನು ಯಾರು? ನಿನ್ನ ತಂದೆಯೇ? ಅಥವಾ ಬೇರೊಬ್ಬ ಮನುಜನೇ? ನಿಜವನ್ನು ಹೇಳು. ॥೩೨॥

ತ್ವದರ್ಥೇ ಸೈನ್ಯಸಂಯುಕ್ತೋ ಬ್ರೂಹಿ ಸತ್ಯಂ ಕೃಶೋದರಿ ।
ಪಿತಾ ತೇ ಯದಿ ಸಂಪ್ರಾಪ್ತೋ ನೇತುಂ ತ್ವಾಂ ವಿರಹಾತುರಃ ॥೩೩॥

ಜ್ಞಾತ್ವಾ ತೇ ಪಿತರಂ ಸಮ್ಯಕ್ಸಂಗ್ರಾಮಂ ನ ಕರೋಮ್ಯಹಂ ।
ಆನಯಿತ್ವಾ ಗೃಹೇ ಪೂಜಾಂ ರತ್ನೈರ್ವಸ್ತ್ರೈರ್ಹಯೈಃ ಶುಭೈಃ॥೩೪॥

ಕರೋಮಿ ತಸ್ಯ ಚಾತಿಥ್ಯಂ ಗೃಹೇ ಪ್ರಾಪ್ತಸ್ಯ ಸರ್ವಥಾ ।
ಅನ್ಯಶ್ಚೇದ್ಯದಿ ಸಂಪ್ರಾಪ್ತಸ್ತಂ ಹನ್ಮಿ ನಿಶಿತೈಃ ಶರೈಃ ॥೩೫॥

ಆನೀತಃ ಕಿಲ ಕಾಲೇನ ಮರಣಾಯ ಮಹಾತ್ಮನಾ ।
ತಸ್ಮಾದ್ವದ ವಿಶಾಲಾಕ್ಷಿ ಕೋಽಯಮಾಯಾತಿ ಮಂದಧೀಃ ॥೩೬॥

ಅಜ್ಞಾತ್ವಾ ಮಾಂ ದುರಾಧರ್ಷಂ ಕಾಲರೂಪಂ ಮಹಾಬಲಂ ।

॥ ಏಕಾವಳ್ಯುವಾಚ ॥

ನ ಜಾನೇಽಹಂ ಮಹಾಭಾಗ ಕೋಽಯಮಾಯಾತಿ ಸತ್ವರಃ ॥೩೭॥

---

ನಿನ್ನ ಅಗಲಿಕೆಯಿಂದುಂಟಾದ ದುಃಖದಿಂದ ಕೂಡಿ ನಿನ್ನನ್ನು ಕರೆದುಕೊಂಡು ಹೋಗಲು ನಿನ್ನ ತಂದೆಯು ಬಂಧಿದ್ದರೆ, ನಿನ್ನ ತಂದೆಯ ಪರಿಚಯವನ್ನು ಚೆನ್ನಾಗಿ ಮಾಡಿಕೊಂಡು, ಅವನೊಡನೆ ನಾನು ಯುದ್ಧಮಾಡುವುದಿಲ್ಲ. ಅವನನ್ನು ಮನೆಗೆ ಕರೆದುಕೊಂಡು ಬಂದು ರತ್ನಗಳು, ವಸ್ತ್ರಗಳು, ಕುದುರೆಗಳು, ಮುಂತಾದ ಮಂಗಳಕರ ವಾದ ವಸ್ತುಗಳಿಂದ ಆತನಿಗೆ ಅತಿಥಿಸತ್ಕಾರರೂಪವಾದ ಪೂಜೆಯನ್ನು ಮಾಡುವೆನು. ||೩೪-೩೪||

ಹಾಗಲ್ಲದೆ ಈಗ ಬಂದಿರುವವನು ಬೇರೊಬ್ಬನಾಗಿದ್ದರೆ, ಅವನನ್ನು ಹರಿತ ವಾದ ಬಾಣಗಳಿಂದ ಹೊಡೆದು ಕೊಲ್ಲುವೆನು. ಮಹಾತ್ಮನಾದ ಯಮನು ಮರಣ ವನ್ನು ಪಡೆಯುವುದಕ್ಕೋಸ್ಕರವಾಗಿಯೇ ಅವನನ್ನು ಇಲ್ಲಿಗೆ ಕರೆದುಕೊಂಡು ಬಂದಿರು ವನು! ವಿಸ್ತಾರವಾದ ಕಣ್ಣುಗಳುಳ್ಳ ಸ್ತ್ರೀಯೇ, ಮಹಾಬಲಶಾಲಿಯೂ ಯಮ ಸ್ವರೂಪನೂ ಆದ ನಾನು ಜಯಿಸಲಸಾಧ್ಯನೆಂಬುದನ್ನು ತಿಳಿಯದ ಮೂಢತನದ ಬುದ್ಧಿಯಿಂದ ಕೂಡಿ ಬರುತ್ತಿರುವ ಇವನು ಯಾರೆಂಬುದನ್ನು ಹೇಳು. ||೩೫-೩೬||

ಏಕಾವಳಿಯು ಹೇಳಿದಳು—ಎಲೈ ಪುಣ್ಯಾತ್ಮನೇ, ಈಗ ಬರುತ್ತಿರುವವನು ಯಾರೋ ನಾನು ಕಾಣೆನು. ನಿನ್ನ ಸೆರೆಯಲ್ಲಿರುವ ನನಗೆ ಈಗ ಬೇಗನೆ ಬರುತ್ತಿರುವ

ನಮೇಽಸ್ತಿ ವಿದಿತಃ ಕೋಽಪಿ ಸ್ಥಿತಾಯಾಸ್ತವ ಬಂಧನೇ ।
ನಾಯಂ ಪಿತಾ ಮೇ ನ ಭ್ರಾತಾ ಕೋಽಪ್ಯನ್ಯೋಽಸ್ತಿ ಮಹಾಬಲಃ ॥೩೮॥
ಕಿಮರ್ಥಮಿಹ ಚಾಯಾತಿ ನಾಹಂ ವೇದ ವಿನಿಶ್ಚಯಂ ।

॥ ದೈತ್ಯ ಉವಾಚ ॥

ಏವಂ ವದಂತ್ಯಮೀ ದೂತಾ ವಯಸ್ಯಾ ತೇ ಯಶೋವತೀ ॥೩೯॥
ಸಮಾನೀಯ ಚ ತಂ ವೀರಮಾಗತೇತಿ ಕೃತೋದ್ಯಮಾ ।
ಕ್ವ ಗತಾ ಸಾ ಸಖೀ ಕಾಂತೇ ವಿದಗ್ಧಾ ಕಾರ್ಯನಿಶ್ಚಯೇ ॥೪೦॥
ನಾಽನ್ಯಃ ಕೋಽಪಿ ಮಮಾರಾತಿರ್ಯೋ ಮೇ ಪ್ರತಿಬಲೋ ಭವೇತ್ ।

॥ ವ್ಯಾಸ ಉವಾಚ ॥

ಏತಸ್ಮಿನ್ನಂತರೇ ದೂತಾಸ್ತತ್ರಾಽನ್ಯೇ ವೈ ಸಮಾಗತಾಃ ॥೪೧॥
ತೇ ಹೋಚುಸ್ತ್ವರಿತಾ ಭೀತಾಃ ಕಾಲಕೇತುಂ ಗೃಹೇ ಸ್ಥಿತಂ ।
ಕಿಂ ಸ್ವಸ್ಥೋಽಸಿ ಮಹಾರಾಜ ಸಮೀಪೇ ಸೈನ್ಯಮಾಗತಂ ॥೪೨॥
ನಿರ್ಗಚ್ಛ ನಗರಾತ್ತೂರ್ಣಂ ಸೈನ್ಯೇನ ಮಹತಾ ವೃತಃ ।

---

ಮನುಷ್ಯನು ಯಾರು ಎಂಬುದು ಹೇಗೆ ತಿಳಿಯುವುದು ? ಅವನು ನನ್ನ ತಂದೆಯೂ ಅಲ್ಲವು. ಸಹೋದರನೂ ಅಲ್ಲವು. ಮತ್ತಾವ ಮನುಜನೋ ಬರುತ್ತಿರುವನು. ಅವನು ಏತಕ್ಕೆ ಇಲ್ಲಿಗೆ ಬರುತ್ತಾನೆಯೋ ಅದನ್ನೂ ನಾನು ನಿಜವಾಗಿ ಕಾಣೆನು. ॥೩೭-೩೮॥

ಎಲೌ ಸುಂದರಿಯೇ, ನಿನ್ನ ಸಖಿಯಾದ ಯಶೋವತಿಯು ಯುದ್ಧಪ್ರಯತ್ನ ವನ್ನು ಮಾಡಿ ಆ ಶೂರನನ್ನು ಕರೆದುಕೊಂಡು ಬರುತ್ತಿದಾಳೆಂಬುದಾಗಿ ಈ ನನ್ನ ದೂತರು ಹೇಳುತ್ತಿರುವರು! ಕೆಲಸಮಾಡುವುದರಲ್ಲಿ ಬುದ್ಧಿವಂತಳಾದ ಆ ನಿನ್ನ ಸಖಿಯು ಎಲ್ಲಿಗೆ ಹೋದಳು ? ನನಗೆ ಎದುರಾಗಿ ಯುದ್ಧಮಾಡುವಷ್ಟು ಗಟ್ಟಿಗ ನಾದ ಶತ್ರುವು ಯಾವನೊಬ್ಬನೂ ಇರುವುದಿಲ್ಲವು. ॥೩೯-೪೦॥

ವ್ಯಾಸಋಷಿಯು ಹೇಳಿದನು— ಈ ಸಮಯಕ್ಕೆ ಸರಿಯಾಗಿ ಬೇರೆ ದೂತರು ಭಯದಿಂದ ಬೇಗನೆ ಓಡಿಬಂದು ಮನೆಯಲ್ಲಿದ್ದ ಕಾಲಕೇತುವನ್ನು ಕುರಿತು, ಓ ಮಹಾ ರಾಜನೇ, ಏಕೆ ಸುಮ್ಮನಿರುವೆ ? ಶತ್ರುಸೈನ್ಯವು ಸಮೀಪಕ್ಕೆ ಬಂದಿತು. ದೊಡ್ಡ ಸೇನೆಯೊಡನೆ ಪಟ್ಟಣವನ್ನು ಬಿಟ್ಟು ಬೇಗನೆ ಹೊರಡು. ಎಂದರು. ॥೪೧-೪೨॥

ಇತಿ ತೇಷಾಂ ವಚಃ ಶ್ರುತ್ವಾ ಕಾಲಕೇತುರ್ಮಹಾಬಲಃ ॥೪೩॥

ರಥಮಾರುಹ್ಯ ತ್ವರಿತೋ ನಿರ್ಯಯೌ ಸ್ವಪುರಾದ್ಬಹಿಃ ।
ಏಕವೀರೋಽಪಿ ಸಹಸಾ ಹಯಾರೂಢಃ ಪ್ರತಾಪವಾನ್ ॥೪೪॥

ಆಗತಸ್ತತ್ರ ಕಾಮಿನ್ಯಾ ವಿರಹೇಣ ಸಮಾಕುಲಃ ।
ಯುದ್ಧಂ ತಯೋರಭೂತ್ತತ್ರ ವೃತ್ರವಾಸವಯೋರಿವ ॥೪೫॥

ಶಸ್ತ್ರಾಸ್ತ್ರೈರ್ಬಹುಧಾ ಮುಕ್ತೈರಾದೀಪಿತದಿಗಂತರಂ ।
ವರ್ತಮಾನೇ ತದಾ ಯುದ್ಧೇ ಕಾತರಾಣಾಂ ಭಯಾವಹೇ ॥೪೬॥

ಗದಯಾ ತಾಡಯಾಮಾಸ ದೈತ್ಯಂ ಸಿಂಧುಸುತಾಸುತಃ ।
ಸ ಗತಾಸುಃ ಪಪಾತೋರ್ವ್ಯಾಂ ವಜ್ರಾಹತ ಇವಾಚಲಃ ॥೪೭॥

ಪಲಾಯಿತ್ವಾ ಗತಾಃ ಸರ್ವೇ ರಾಕ್ಷಸಾ ಭಯಪೀಡಿತಾಃ ।
ಯಶೋವತೀ ತತೋ ಗತ್ವಾ ವೇಗಾದೇಕಾವಲೀಂ ತದಾ ॥೪೮॥

---

ಹೀಗೆ ಹೇಳಿದ ಆ ದೂತರ ಮಾತನ್ನು ಕೇಳಿ, ಮಹಾಬಲಶಾಲಿಯಾದ ಆ ಕಾಲಕೇತುವು ಬೇಗನೆ ರಥವನ್ನೇರಿ ತನ್ನ ಪಟ್ಟಣದಿಂದ ಹೊರಗಡೆಗೆ ಬಂದನು. ಏಕವೀರನೂ ಕೂಡಬೇಗನೆ ಕುದುರೆಯನ್ನೇರಿ ಏಕಾವಳಿಯ ಸಂಬಂಧವಾದ ವಿರಹ ವ್ಯಥೆಯಿಂದ ಪೀಡಿತನಾಗಿ ಪರಾಕ್ರಮವನ್ನು ತೋರಿಸುತ್ತಾ ಅಲ್ಲಿಗೆ ಬಂದನು! ॥೪೩-೪೪॥

ವೃತ್ರಾಸುರನಿಗೂ ದೇವೇಂದ್ರನಿಗೂ ಯುದ್ಧವಾದಂತೆ ಅವರಿಬ್ಬರಿಗೂ ಆಗ ಯುದ್ಧವಾಯಿತು. ಆ ಯುದ್ಧದಲ್ಲಿ ಪ್ರಯೋಗಿಸಿದ ಅನೇಕ ಶಸ್ತ್ರಾಸ್ತ್ರಗಳಿಂದ ದಿಕ್ಕು ಗಳೆಲ್ಲವೂ ಪ್ರಕಾಶಿಸುತ್ತಿದ್ದಿತು. ಹೇಡಿಗಳಿಗೆ ಭಯವನ್ನುಂಟು ಮಾಡುವ ಆ ಯುದ್ಧವು ನಡೆಯುತ್ತಿರುವಾಗ ಸಮುದ್ರಪುತ್ರಿಯಾದ ಲಕ್ಷ್ಮೀದೇವಿಯ ಮಗನಾದ ಏಕವೀರನು ಕಾಲಕೇತು ರಾಕ್ಷಸನನ್ನು ಗದೆಯಿಂದ ಹೊಡೆದನು. ॥೪೫-೪೬॥

ಆ ಕಾಲಕೇತುವು ಆ ಗದೆಯ ಪೆಟ್ಟಿನಿಂದ ಪ್ರಾಣವನ್ನು ಬಿಟ್ಟು, ಇಂದ್ರನ ವಜ್ರಾಯುಧದ ಹೊಡೆತದಿಂದ ಬಿದ್ದ ಪರ್ವತದಂತೆ, ಭೂಮಿಯಲ್ಲಿ ಬಿದ್ದನು. ಸಮಸ್ತ ರಾಕ್ಷಸರೂ ಭಯದಿಂದ ಓಡಿಹೋದರು. ॥೪೭॥

ಉವಾಚ ಮಧುರಾಂ ವಾಣೀಂ ವಿಸ್ಮಿತಾಂ ಮುದಿತಾ ಭೃಶಂ ।
ಏಹ್ಯಾಲಿ ನೃಪಪುತ್ರೇಣ ದಾನವೋಽಸೌ ನಿಪಾತಿತಃ ॥೪೯॥

ಏಕವೀರೇಣ ಧೀರೇಣ ಯುದ್ಧಂ ಕೃತ್ವಾ ಸುದಾರುಣಂ ।
ಸ್ಕಂಧಾವಾರೇಽಪ್ಯಸೌ ರಾಜಾ ತಿಷ್ಠತ್ಯದ್ಯ ಶ್ರಮಾತುರಃ ॥೫೦॥

ದರ್ಶನಂ ಕಾಂಕ್ಷಮಾಣಸ್ತೇ ಶ್ರುತರೂಪಗುಣಸ್ತವ ।
ಪಶ್ಯ ತಂ ಕುಟಿಲಾಪಾಂಗಿ ಮನೋಭವಸಮಂ ನೃಪಂ ॥೫೧॥

ಕಥಿತಾ ತ್ವಂ ಮಯಾ ಪೂರ್ವಂ ತಸ್ಯಾಽಗ್ರೇ ಜಾಹ್ನವೀತಟೇ ।
ಪೂರ್ಣಾನುರಾಗಃ ಸಂಜಾತಸ್ತೇನಾಽಸೌ ವಿರಹಾತುರಃ ॥೫೨॥

ವಾಂಛತಿ ತ್ವಾಂ ಚಾರುರೂಪಾಂ ದ್ರಷ್ಟುಂ ನೃಪತಿನಂದನಃ ।
ಸಾ ತಸ್ಯಾ ವಚನಂ ಶ್ರುತ್ವಾ ಗಮನಾಯ ಮನೋ ದಧೇ ॥೫೩॥

---

ಆಮೇಲೆ ಯಶೋವತಿಯು ಬೇಗನೆ ಏಕಾವಲಿಯ ಸಮಿಾಪಕ್ಕೆ ಹೋಗಿ ಬಹಳ ಸಂತೋಷದಿಂದ ಆಶ್ಚರ್ಯಕರವಾದ ಇಂಪಾದ ಮಾತನ್ನು ಹೀಗೆ ಹೇಳಿದಳು. ಎಲೌ ಸಖಿಯೇ, ಬಾ. ಶೂರನಾದ ರಾಜಪುತ್ರನಾದ ಏಕವೀರನು ಭಯಂಕರವಾದ ಯುದ್ಧವನ್ನು ಮಾಡಿ ಕಾಲಕೇತುವನ್ನು ಕೊಂದನು! ಈಗ ಆ ರಾಜಪುತ್ರನು ಯುದ್ಧದ ಆಯಾಸದಿಂದ ಬಿಡಾರದಲ್ಲಿ ವಿಶ್ರಮಿಸಿಕೊಳ್ಳುತ್ತಿರುವನು. ॥೪೯-೫೦॥

ನಿನ್ನ ರೂಪವನ್ನೂ ಗುಣಗಳನ್ನೂ ಕೇಳಿ ನಿನ್ನನ್ನು ನೋಡಬೇಕೆಂದು ಅಪೇಕ್ಷಿಸುತ್ತಿರುವನು. ಮನ್ಮಥನಿಗೆ ಸಮಾನವಾದ ಸೌಂದರ್ಯದಿಂದ ಕೂಡಿದ ಆ ರಾಜನನ್ನು ನೀನು ನೋಡು. ನಾನು ಮೊದಲೇ ಗಂಗಾನದಿಯ ತೀರದಲ್ಲಿ ನಿನ್ನ ಗುಣಗಳ ವಿಷಯವನ್ನು ಅವನಿಗೆ ಹೇಳಿರುವೆನು. ಆ ಮಾತಿನಿಂದ ಅವನು ನಿನ್ನಲ್ಲಿ ಸಂಪೂರ್ಣವಾದ ಪ್ರೀತಿಯಿಂದ ಕೂಡಿ ವಿರಹವ್ಯಥೆಯನ್ನನುಭವಿಸುತ್ತಿರುವನು. ॥೫೧-೫೨॥

ಆ ರಾಜಪುತ್ರನು ಸುಂದರಿಯಾದ ನಿನ್ನನ್ನು ನೋಡಬೇಕೆಂದು ಅಪೇಕ್ಷಿಸುವನು ಎಂದು ಹೇಳಿದ ಯಶೋವತಿಯ ಮಾತನ್ನು ಕೇಳಿ, ಏಕಾವಲಿಯು ಅವನ ಸಮೀಪಕ್ಕೆ ಹೊರಡುವ ಮನಸ್ಸನ್ನು ಮಾಡಿದಳು. ॥೫೩॥

ಲಜ್ಜಮಾನಾ ಭೃಶಂ ಭೀತ್ಯಾ ಕೌಮಾರಪ್ರಾಪ್ತಯಾ ತಯಾ ।
ಕಥಂ ತಸ್ಯ ಮುಖಂ ದ್ರಕ್ಷ್ಯೇ ಕುಮಾರೀ ಹ್ಯವಶಾ ಭೃಶಂ ॥೫೪॥

ಸ ಮಾಂ ಗೃಹ್ಣಾತಿ ಕಾಮಾರ್ತ ಇತಿ ಚಿಂತಾಕುಲಾ ಸತೀ ।
ಯಶೋವತ್ಯಾ ಯುತಾ ತತ್ರ ನರಯಾನಸ್ಥಿತಾ ಯಯೌ ॥೫೫॥

ಸ್ಕಂಧಾವಾರೇಽತಿಮಲಿನಾ ಮಲಿನಾಂಬರಧಾರಿಣೀ ।
ತಾಮಾಗತಾಂ ವಿಶಾಲಾಕ್ಷೀಂ ದೃಷ್ಟ್ವಾ ರಾಜಸುತೋಽಬ್ರವೀತ್॥೫೬॥

ದರ್ಶನಂ ದೇಹಿ ತನ್ವಂಗಿ ತೃಷಿತೇ ನಯನೇ ಮಮ ।
ಕಾಮಾತುರಂ ಚ ತಂ ವೀಕ್ಷ್ಯ ತಾಂ ಚ ಲಜ್ಜಾಭರಾನ್ವಿತಾಂ ॥೫೭॥

ನೀತಿಜ್ಞಾ ಶಿಷ್ಟಮಾರ್ಗಜ್ಞಾ ತಮುವಾಚ ಯಶೋವತೀ ।
ರಾಜಪುತ್ರ ಪಿತಾಽಪ್ಯಸ್ಯಾಸ್ತ್ವಮೇನಾಂ ದಾತುಮಿಚ್ಛತಿ ॥೫೮॥

---

ಏಕಾವಳಿಯು ಕೌಮಾರಾವಸ್ಥೆಯಲ್ಲಿದ್ದುದರಿಂದ ವಿಶೇಷವಾದ ನಾಚಿಕೆಯಿಂದ ಭಯವನ್ನು ಹೊಂದಿ, ನಾನು ಹೇಗೆ ಅವನನ್ನು ನೋಡಲಿ? ಇನ್ನೂ ಕನ್ಯಾವಸ್ಥೆಯಲ್ಲಿರುವೆನು, ಮತ್ತು ತಂದೆಯ ಅಧೀನದಲ್ಲಿರುವೆನು. ಕಾಮಬಾಧೆಯಿಂದ ಕೂಡಿದ ಅವನು ನನ್ನನ್ನು ಶಾಸ್ತ್ರಪದ್ಧತಿಗಳನ್ನೂ ಅನುಸರಿಸುವಷ್ಟು ತಾಳ್ಮೆ ಇಲ್ಲದೆ ಮುಂದುವರಿದು ಹಿಡಿದುಕೊಳ್ಳುವನೋ ಏನೋ ಎಂದು ಆತಂಕದಿಂದ ಚಿಂತಿಸುತ್ತಾ, ಆ ಪತಿವ್ರತೆಯು ಯಶೋವತಿಯೊಡನೆ ಪಲ್ಲಕ್ಕಿಯಲ್ಲಿ ಕುಳಿತುಹೊರಟಳು. ॥೫೪-೫೫॥

ರಾಕ್ಷಸನ ಸೆರೆಯಲ್ಲಿದ್ದುದರಿಂದ ಶರೀರವೆಲ್ಲ ಕೊಳೆಯಾಗಿ ಕೊಳೆಯಬಟ್ಟೆಯನ್ನುಟ್ಟುಕೊಂಡು ಆ ಸೇನಾನಿವಾಸಸ್ಥಾನಕ್ಕೆ ಬಂದ ವಿಸ್ತಾರವಾದ ಕಣ್ಣುಗಳುಳ್ಳ ಆ ಏಕಾವಳಿಯನ್ನು ರಾಜಪುತ್ರನು ನೋಡಿ, ಎಲೌ ಕೃಶೋದರಿಯೇ, ನನ್ನ ಕಣ್ಣುಗಳು ನಿನ್ನನ್ನು ನೋಡಬೇಕೆಂದಾಶಿಸುತ್ತಿರುವುವು. ಆದುದರಿಂದ ನಿನ್ನ ದರ್ಶನವನ್ನು ನನಗೆ ಕೊಡು ಎಂದು ಹೇಳಿದನು. ॥೫೬॥

ಏಕವೀರನು ಕಾಮಾತುರನಾಗಿರುವುದನ್ನೂ ಏಕಾವಳಿಯು ನಾಚಿಕೆಯಿಂದ ಕೂಡಿರುವುದನ್ನೂ ನೋಡಿದ, ನೀತಿಯನ್ನೂ ಶಿಷ್ಟಾಚಾರವನ್ನೂ ತಿಳಿದಿದ್ದ ಆ ಯಶೋವತಿಯು ರಾಜಪುತ್ರನನ್ನು ಕುರಿತು ಹೀಗೆ ಹೇಳಿದಳು. ॥೫೭॥

ಓ ರಾಜಪುತ್ರನೇ, ಈಕೆಯ ತಂದೆಯೂ ಇವಳನ್ನು ನಿನಗೇ ತಕ್ಕ ರೀತಿಯಲ್ಲಿ ಕೊಡಬೇಕೆಂದಿರುವನು. ಈಕೆಯೂ ನಿನ್ನ ಅಧೀನಳಾಗಿಯೇ ಇರುವಳು. ನಿಮ್ಮಿಬ್ಬ

**ಏಷಾಽಪಿ ತ್ವದ್ವಶಾ ನೂನಂ ಭವಿತಾ ಸಂಗಮಸ್ತವ ।**
**ಕಾಲಂ ಪ್ರತೀಕ್ಷ್ಯ ರಾಜೇಂದ್ರ ನಯ್ಯೈನಾಂ ಪಿತುರಂತಿಕೇ ॥೫೯॥**

**ಸ ವಿವಾಹವಿಧಿಂ ಕೃತ್ವಾ ದಾಸ್ಯತೀತಿ ವಿನಿಶ್ಚಯಃ ।**
**ಸ ತಸ್ಯಾ ವಚನಂ ತಥ್ಯಂ ಮತ್ವಾ ಸೈನ್ಯಸಮನ್ವಿತಃ ॥೬೦॥**

**ಸಮೇತಃ ಕಾಮಿನೀಭ್ಯಾಂ ತು ಯಯೌ ತತ್ಪಿತುರಾಶ್ರಮಂ ।**
**ರಾಜಪುತ್ರೀಂ ತಥಾ ಯಾತಾಂ ಶ್ರುತ್ವಾ ಪ್ರೇಮಸಮನ್ವಿತಃ ॥೬೧॥**

**ಪ್ರಯಯೌ ಸಮ್ಮುಖಸ್ತೂರ್ಣಂ ಸಚಿವೈಃ ಪರಿವೇಷ್ಟಿತಃ ।**
**ಬಹುಭಿರ್ದಿವಸೈರ್ದೃಷ್ಟ್ವಾ ಪುತ್ರೀ ಸಾ ಮಲಿನಾಂಬರಾ ॥೬೨॥**

**ಯಶೋವತ್ಯಾ ತು ವೃತ್ತಾಂತಃ ಕಥಿತೋ ವಿಸ್ತರಾತ್ಪುನಃ ।**
**ಏಕವೀರಂ ಮಿಲಿತ್ವಾಽಸೌ ಗೃಹಮಾನೀಯ ಚಾದರಾತ್ ॥೬೩॥**

---

ರಿಗೂ ವಿವಾಹ ಸಂಬಂಧವು ಖಂಡಿತವಾಗಿ ಆಗುವುದು. ಕಾಲವನ್ನು ನಿರೀಕ್ಷಿಸಿ ಈಗ ಇವಳನ್ನು ತಂದೆಯ ಸಮೀಪಕ್ಕೆ ಕರೆದುಕೊಂಡು ಹೋಗಿ ಬಿಡು. ಅವನು ವಿವಾಹೋತ್ಸವವನ್ನು ಶಾಸ್ತ್ರಪದ್ಧತಿಯಂತೆ ಮಾಡಿ ನಿನಗೆ ಇವಳನ್ನು ಕೊಡುವನು! ॥೫೮-೫೯॥

ಆಗ ಆ ಏಕವೀರನೂ ಯಶೋವತಿಯ ಮಾತನ್ನು ಉಚಿತವಾದುದೆಂದೂ ನಿಜವೆಂದೂ ತಿಳಿದು, ಸೈನ್ಯಸಹಿತನಾಗಿ ಆ ಇಬ್ಬರು ಸ್ತ್ರೀಯರನ್ನೂ ಕರೆದುಕೊಂಡು, ಏಕಾವಳಿಯ ತಂದೆಯ ಆಶ್ರಮಕ್ಕೆ ಹೋದನು. ॥೬೦॥

ರಾಜನು ತನ್ನ ಮಗಳು ಬಂದುದನ್ನು ಕೇಳಿ ಪ್ರೀತಿಯಿಂದ ತನ್ನ ಮಂತ್ರಿಗಳೊಡನೆ ಕೂಡಿ ಬೇಗನೆ ಇದುರಾಗಿ ಬಂದನು. ಅನೇಕ ದಿವಸಗಳ ಮೇಲೆ ಕೊಳೆಯ ಬಟ್ಟೆಯನ್ನುಟ್ಟಿದ್ದ ಅವಳನ್ನು ನೋಡಿದನು. ಯಶೋವತಿಯು ಪುನಃ ಸಮಸ್ತ ವೃತ್ತಾಂತವನ್ನೂ ಅವನಿಗೂ ವಿಸ್ತಾರವಾಗಿ ಹೇಳಿದಳು. ॥೬೧-೬೨॥

ಆ ರೈಭ್ಯರಾಜನು ಏಕವೀರನನ್ನೂ ಪ್ರೀತಿಗೌರವಗಳೊಡನೆ ಕಂಡು, ಮನೆಗೆ ಕರೆದುಕೊಂಡು ಬಂದು, ಶುಭದಿನದಲ್ಲಿ ಶಾಸ್ತ್ರದಲ್ಲಿ ಹೇಳಿರುವ ವಿಧಿಗನುಸಾರವಾಗಿ ಏಕವೀರನಿಗೂ ಏಕಾವಳಿಗೂ ವಿವಾಹಮಹೋತ್ಸವವನ್ನು ನೆರವೇರಿಸಿದನು. ಆಮೇಲೆ

ಪುಣ್ಯೇಽಹ್ನಿ ಕಾರಯಾಮಾಸ ವಿವಾಹಂ ವಿಧಿಪೂರ್ವಕಂ ।
ಪಾರಿಬರ್ಹಂ ತತೋ ದತ್ವಾ ಸಂಪೂಜ್ಯ ವಿಧಿವತ್ತದಾ ॥೬೪॥

ಪುತ್ರೀಂ ವಿಸರ್ಜಯಾಮಾಸ ಯಶೋವತ್ಯಾ ಸಮನ್ವಿತಾಂ ।
ಏವಂ ವಿವಾಹೇ ಸಂವೃತ್ತೇ ರಮಾಪುತ್ರೋ ಮುದಾನ್ವಿತಃ ॥೬೫॥

ಗೃಹಂ ಪ್ರಾಪ್ಯ ಬಹೂನ್ಭೋಗಾನ್ಬುಭುಜೇ ಪ್ರಿಯಯಾ ಸಮಂ ।
ಬಭೂವ ತಸ್ಯಾಂ ಪುತ್ರಸ್ತು ಕೃತವೀರ್ಯಾಭಿಧಃ ಕಿಲ ॥೬೬॥
ತತ್ಸುತಃ ಕಾರ್ತವೀರ್ಯಸ್ತು ವಂಶೋಽಯಂ ಕಥಿತೋ ಮಯಾ ।

ಇತಿ ಶ್ರೀದೇವೀಭಾಗವತೇಮಹಾಪುರಾಣೇ ಷಷ್ಠಸ್ಕಂಧೇ
ತ್ರಯೋವಿಂಶೋಽಧ್ಯಾಯಃ.

---

ಅಳಿಯನಿಗೂ ಮಗಳಿಗೂ ಉಡುಗೊರೆಗಳನ್ನೂ ಬಲುವಳಿಯನ್ನೂ ಕೊಟ್ಟು ಶಿಷ್ಟಾಚಾರದ ವಿಧಿಗನುಸಾರವಾಗಿ ಅವರನ್ನು ಪೂಜಿಸಿ, ಯಶೋವತಿಯ ಸಹಿತವಾಗಿ ತನ್ನ ಮಗಳನ್ನು ಏಕವೀರನೊಡನೆ ಕಳುಹಿಸಿಕೊಟ್ಟನು. ॥೬೩-೬೪॥

ಹೀಗೆ ವಿವಾಹಕಾರ್ಯವು ನಡೆಯುತ್ತಲು ಲಕ್ಷ್ಮೀಪುತ್ರನಾದ ಆ ಏಕವೀರ ರಾಜನು ಸಂತೋಷದಿಂದ ತನ್ನ ಅರಮನೆಗೆ ಬಂದು, ತನ್ನ ಪತ್ನಿಯಾದ ಏಕಾವಳಿಯೊಡನೆ ಅನೇಕ ಸುಖಗಳನ್ನನುಭವಿಸುತ್ತಿದ್ದನು. ಆ ಏಕಾವಳಿಯಲ್ಲಿ ಕೃತವೀರ್ಯನೆಂಬ ಮಗನೂ ಹುಟ್ಟಿದನು. ಅವನ ಮಗನೇ ಕಾರ್ತವೀರ್ಯಾರ್ಜುನನೆಂದು ಪ್ರಸಿದ್ಧನಾದನು. ಈ ರೀತಿಯಲ್ಲಿ ಓ ಜನಮೇಜಯನೇ, ನಾನು ಹೈಹಯರಾಜನ ವಂಶವನ್ನು ನಿನಗೆ ವಿವರಿಸಿ ಹೇಳಿದೆನು. ॥೬೫-೬೬॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಷಷ್ಠಸ್ಕಂಧೇ

### || ಚತುರ್ವಿಂಶೋಽಧ್ಯಾಯಃ ||

### ಇಪ್ಪತ್ತನಾಲ್ಕನೆಯ ಅಧ್ಯಾಯವು

|| ರಾಜೋವಾಚ ||

**ಭಗವಂಸ್ತ್ವನ್ಮುಖಾಂಭೋಜಾತ್ ಚ್ಯುತಂ ದಿವ್ಯಕಥಾರಸಂ ।**
**ನ ತೃಪ್ತಿಮಧಿಗಚ್ಛಾಮಿ ಪಿಬಂಸ್ತು ಸುಧಯಾ ಸಮಂ ॥೧॥**

**ವಿಚಿತ್ರಮಿದಮಾಖ್ಯಾನಂ ಕಥಿತಂ ಭವತಾ ಮಮ ।**
**ಹೈಹಯಾನಾಂ ಸಮುತ್ಪತ್ತಿ ರ್ವಿಸ್ತರಾದ್ವಿಸ್ಮಯಪ್ರದಾ ॥೨॥**

**ಪರಂ ಕೌತೂಹಲಂ ಮೇಽತ್ರ ಯದ್ವಿಷ್ಣುಃ ಕಮಲಾಪತಿಃ ।**
**ದೇವದೇವೋ ಜಗನ್ನಾಥಃ ಸೃಷ್ಟಿಸ್ಥಿತ್ಯಂತಕಾರಕಃ ॥೩॥**

---

ಜನಮೇಜಯ ರಾಜನು ಹೇಳಿದನು—ಮಹಾಮಹಿಮರಾದ ವ್ಯಾಸರೇ, ನಿಮ್ಮ ಮುಖಕಮಲದಿಂದ ಬರುತ್ತಿರುವ ಅಮೃತಕ್ಕೆ ಸಮಾನವಾದ ಶ್ರೇಷ್ಠವಾದ ಈ ಪುರಾಣಕಥೆಯೆಂಬ ಮಕರಂದ ರಸವನ್ನು ಕುಡಿಯುತ್ತಿದ್ದರೂ, ನನಗೆ ತೃಪ್ತಿಯಾಗುತ್ತಿಲ್ಲವು. ಎಂದರೆ ಸಾಕೆನ್ನಿಸುತ್ತಿಲ್ಲವು. ಇನ್ನೂ ಕೇಳಬೇಕೆನ್ನಿಸುತ್ತಿದೆ. ||೧||

ನೀವು ನನಗೆ ಆಶ್ಚರ್ಯಕರವಾದ ಹೈಹಯರ ಉತ್ಪತ್ತಿರೂಪವಾದ ವಿಚಿತ್ರವಾದ ಕಥೆಯನ್ನು ವಿಸ್ತಾರವಾಗಿ ಹೇಳಿದಿರಿ. ||೨||

ಈ ವಿಷಯದಲ್ಲಿ ನನಗೊಂದು ವಿಶೇಷವಾದ ಸಂದೇಹದಿಂದ ಕುತೂಹಲವುಂಟಾಗಿರುವುದು. ಲಕ್ಷ್ಮೀಪತಿಯಾದ ವಿಷ್ಣುವು ದೇವತೆಗಳೆಲ್ಲರಿಗೂ ಒಡೆಯನಾಗಿ ಲೋಕಗಳಿಗೆಲ್ಲಕ್ಕೂ ಅಧಿಪತಿಯಾಗಿ ಸೃಷ್ಟಿ ಸ್ಥಿತಿ ಪ್ರಳಯಗಳನ್ನು ಮಾಡಲು ಶಕ್ತ

**ಸೋಽಪ್ಯಶ್ವಭಾವಮಾಪನ್ನೋ ಭಗವಾನ್ಹರಿರಚ್ಯುತಃ ।**
**ಪರತಂತ್ರಃ ಕಥಂ ಜಾತಃ ಸ್ವತಂತ್ರಃ ಪುರುಷೋತ್ತಮಃ ॥೪॥**

**ಏತನ್ಮೇ ಸಂಶಯಂ ಬ್ರಹ್ಮನ್ ಛೇತ್ತುಮರ್ಹಸಿ ಸಾಂಪ್ರತಂ ।**
**ಸರ್ವಜ್ಞಸ್ತ್ವಂ ಮುನಿಶ್ರೇಷ್ಠ ಬ್ರೂಹಿ ವೃತ್ತಾಂತಮದ್ಭುತಂ ॥೫॥**

॥ ವ್ಯಾಸ ಉವಾಚ ॥

**ಶೃಣು ರಾಜನ್ಪ್ರವಕ್ಷ್ಯಾಮಿ ಸಂದೇಹಸ್ಯಾಸ್ಯ ನಿರ್ಣಯಂ ।**
**ಯಥಾ ಶ್ರುತಂ ಮಯಾ ಪೂರ್ವಂ ನಾರದಾನ್ಮುನಿಸತ್ತಮಾತ್ ॥೬॥**

---

ನಾಗಿ ನಾಶರಹಿತನಾಗಿ ಮಹಾಮಹಿಮನಾಗಿ ಸ್ವತಂತ್ರನೂ ಪುರುಷಶ್ರೇಷ್ಠನೂ ಆಗಿದ್ದರೂ ಅವನೂ ಕೂಡ ಪರಾಧೀನನಾಗಿ ಕುದುರೆಯಾಗಿ ಏಕೆ ಆದನು ? ॥೩-೪॥

ಓ ಮುನಿಶ್ರೇಷ್ಠನೇ, ನೀನು ಸರ್ವಜ್ಞನಾಗಿರುವೆ. ಈಗ ನನಗೆ ಉಂಟಾಗಿರುವ ಈ ಸಂದೇಹವನ್ನೂ ಪರಿಹರಿಸಲು ಪರಬ್ರಹ್ಮಸ್ವರೂಪನಾದ ನೀನೇ ಶಕ್ತನಾದುದರಿಂದ ಆಶ್ಚರ್ಯಕರವಾದ ಆ ಸಮಸ್ತ ವೃತ್ತಾಂತವನ್ನೂ ನನಗೆ ವಿವರಿಸಿ ತಿಳಿಯ ಹೇಳು ಎಂದನು. ॥೫॥

ವ್ಯಾಸರು ಹೇಳಿದರು—ಎಲೈ ರಾಜನೇ, ಕೇಳು. ನಿನಗೆ ಉಂಟಾಗಿರುವ ಈ ಸಂದೇಹದ ಪರಿಹಾರಕ್ಕಾಗಿ ಶಾಸ್ತ್ರಸಿದ್ಧಾಂತರೂಪವಾದ, ನಾನು ಹಿಂದೆ ನಾರದ ಮಹರ್ಷಿಯಿಂದ ಕೇಳಿದ, ಅಂಶವನ್ನೇ ವಿಸ್ತಾರವಾಗಿ ನಿನಗೂ ಹೇಳುವೆನು. ॥೬॥

ಇಲ್ಲಿ ಸಂದೇಹ ಕಾರಣದ ಸ್ವರೂಪವೇನೆಂದರೆ—ವಿಷ್ಣುವೇ ಮೊದಲಾದ ದೇವತೆಗಳು ಜ್ಞಾನಿಗಳೇ ? ಅಥವಾ ಅಜ್ಞಾನಿಗಳೇ ? ಜ್ಞಾನಿಗಳಾದಪಕ್ಷದಲ್ಲಿ, ಅವರಿಗೆ ಆ ಜ್ಞಾನದಿಂದ ಅವಿದ್ಯಾನಾಶದ ಮೂಲಕವಾಗಿ ಅವಿವೇಕಾದಿಗಳೂ ನಾಶವಾಗಿರುವಲ್ಲಿ ಅವಿವೇಕದಿಂದುಂಟಾಗುವ ಕುದುರೆಯ ರೂಪವನ್ನು ಧರಿಸುವುದೇ ಮುಂತಾದ ಆಚರಣೆಯು ಹೇಗುಂಟಾಯಿತು ? ಹಾಗಲ್ಲದೆ ಅವರೂ ಅಜ್ಞಾನಿಗಳೆಂದರೆ, ಈ ಲೋಕದಲ್ಲಿನ ಸಂಸಾರದಲ್ಲಿ ಯಾರೂ ಜ್ಞಾನಿಗಳಿಲ್ಲದೇ ಹೋಗುವುದರಿಂದ, ಎಂದರೆ ಯಾರಿಗೂ ಜ್ಞಾನವೇ ಉಂಟಾಗುವುದಿಲ್ಲವೆಂದು ಹೇಳಿದ ಹಾಗಾಗಿ ವಿವೇಕೋಪದೇಶ ರೂಪವಾದ ಶಾಸ್ತ್ರವೂ, ಕರ್ಮ ಮತ್ತು ಉಪಾಸನಾಪ್ರತಿಪಾದಕವಾದ ಅಂತಹ

ಜ್ಞಾನಕ್ಕೆ ಸಾಧನವಾಗುವ ಶಾಸ್ತ್ರವೂ ವ್ಯರ್ಥವಾಗುವುದು! ಏಕೆಂದರೆ ಈ ಶಾಸ್ತ್ರಗಳು ಚಿತ್ತಶುದ್ಧಿ ಸಾಧನವನ್ನು ಉಪದೇಶಿಸಿ ಜ್ಞಾನಕ್ಕೆ ಉಪಯುಕ್ತವಾಗುವುವೆಂದು ಹೇಳಬೇಕಾಗಿದೆ. ಅಂತಹ ಜ್ಞಾನವು ವಿಷ್ಣುವೇ ಮೊದಲಾದ ದೊಡ್ಡವರಿಗೂ ಉಂಟಾಗದೇ ಹೋಗಲು ಲೋಕದಲ್ಲಿ ಎಲ್ಲಿಯೂ ಜ್ಞಾನವೇ ಇಲ್ಲದಿರುವಾಗ ಕರ್ಮೋಪಾಸನೆಗಳ ಆಚರಣೆಯೂ ವ್ಯರ್ಥವಾಗುವುದು. ಎಂದು ಆಕ್ಷೇಪಣೆ ಮಾಡುವವರ ಆಶಯವು. ಇನ್ನು ಈ ಸಂದೇಹಕ್ಕೆ ಸಮಾಧಾನವನ್ನು ಹೇಳುವವರ ಅಭಿಪ್ರಾಯವೇನೆಂದರೆ—

ವಿಷ್ಣುವೇ ಮೊದಲಾದ ದೊಡ್ಡ ದೇವತೆಗಳು ಜ್ಞಾನಿಗಳೇ ಸರಿ. ಆದರೆ ಮಾಯೆಗೆ ಎರಡು ಶಕ್ತಿಗಳಿರುತ್ತವೆ. ಒಂದು ಆವರಣಶಕ್ತಿಯು, ಮತ್ತೊಂದು ವಿಕ್ಷೇಪಶಕ್ತಿಯು. ಅವರನ್ನೂ ಆಶ್ರಯಿಸಿರುವ ಸರ್ವಸಾಮಾನ್ಯವಾದ ಮಾಯೆಯ ಆವರಣಶಕ್ತಿಯು ಜ್ಞಾನದಿಂದ ನಷ್ಟವಾದರೂ, ಆ ಮಾಯೆಯ ವಿಕ್ಷೇಪಶಕ್ತಿಯು ಮಾತ್ರ, ಎಲ್ಲಿಯ ವರೆಗೂ ಪ್ರಾರಬ್ಧಕರ್ಮದಿಂದ ದೇಹವು ಇರುವುದೋ ಅಲ್ಲಿಯ ವರೆಗೂ, ಇದ್ದೇ ಇರುವುದು! ಹೀಗಾಗಿರುವುದರಿಂದಲೇ ವಿಷ್ಣುವು ಜ್ಞಾನಿಯಾದರೂ ಪ್ರಾರಬ್ಧಕರ್ಮದಿಂದ ಪ್ರೇರಿತವಾದ ಮಾಯೆಯ ವಿಕ್ಷೇಪಶಕ್ತಿಯಿಂದ ಕುದುರೆಯ ರೂಪವನ್ನು ಧರಿಸುವುದೇ ಮುಂತಾದ ಪರಾಧೀನತೆಯು, ಎಂದರೆ ಇತರರಂತೆ ಈ ಲೌಕಿಕ ವ್ಯವಹಾರವು, ಅವನಲ್ಲೂ ಇದ್ದೇ ಇರುವುದು. ಹೀಗಿರುವುದರಿಂದ, ಎಂದರೆ ಚಕ್ರಭ್ರಮಿನ್ಯಾಯದಂತೆ ತೋರುವ ಲೌಕಿಕ ವ್ಯವಹಾರದ ಅನುವೃತ್ತಿಮಾತ್ರದಿಂದ, ಜ್ಞಾನಿಗಳೇ ಇಲ್ಲವೆಂಬ ಮಾತೂ, ಕರ್ಮ ಉಪಾಸನಾ ಜ್ಞಾನಕಾಂಡಗಳು ವ್ಯರ್ಥವಾಗುವುವೆಂಬ ಆಕ್ಷೇಪಣೆಯ ಮಾತೂ ಉಳಿಯುವುದಿಲ್ಲವು. ಇದಕ್ಕೆ ಪ್ರಮಾಣವಾಗಿ 'ತಸ್ಯತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ.' ಎಂದು ಶ್ರುತಿಯಲ್ಲಿಯೂ ಹೇಳಿದೆ. ಜ್ಞಾನದಿಂದಾಗುವ ಮಾಯೆಯ ಆವರಣಶಕ್ತಿಮಾತ್ರದ ನಾಶದಿಂದ ಜೀವನ್ಮುಕ್ತಿಯೂ, ಪ್ರಾರಬ್ಧಕರ್ಮವು ಫಲಾನುಭವದಿಂದ ನಷ್ಟವಾದ ಮೇಲೆ ವಿಕ್ಷೇಪಶಕ್ತಿ ನಾಶದಿಂದ ವಿದೇಹ ಮುಕ್ತಿಯೂ, ಉಂಟಾಗುವುವೆಂದು ಹೇಳಿರುವ ಸಿದ್ಧಾಂತವು ನಿಲ್ಲುವಂತಾಗುವುದು. ಈ ಅರ್ಥವನ್ನು ಸ್ಪಷ್ಟಪಡಿಸುವುದಕ್ಕಾಗಿಯೇ ಇಲ್ಲಿಂದ ಮುಂದೆ ಈ ಸ್ಕಂಧವು ಮುಗಿಯುವ ವರೆಗೆ ಇರುವ ಗ್ರಂಥಭಾಗವು ಉಪಯುಕ್ತವಾಗಿರುವುದೆಂದು ತಿಳಿಯಬೇಕು. ಇದೇ ಅರ್ಥವನ್ನು ವರಾಹಪುರಾಣದಲ್ಲಿ 'ಜ್ಞಾನೇನಾವರಣೇ ನಷ್ಟೇ ವಿಕ್ಷೇಪಸ್ತ್ವವಶಿಷ್ಯತೇ' ಎಂದು ಹೇಳಿರುವುದು. ಆದುದರಿಂದ ಶಿವ, ವಿಷ್ಣು, ಕೃಷ್ಣ, ನಾರದ, ಶಂಕರ ಮುಂತಾದವರು ಜ್ಞಾನಿಗಳೆಂದೂ, ಅವರಲ್ಲೂ ಕಾಣಬರುವ ಲೌಕಿಕವ್ಯವಹಾರಗಳು ಅಜ್ಞಾನ ಮೂಲಕವಲ್ಲವೆಂದೂ ತಿಳಿಯಬೇಕು.

ಬ್ರಹ್ಮಣೋ ಮಾನಸಃ ಪುತ್ರೋ ನಾರದೋ ನಾಮ ತಾಪಸಃ ।
ಸರ್ವಜ್ಞಃ ಸರ್ವಗಃ ಶಾಂತಃ ಸರ್ವಲೋಕಪ್ರಿಯಃ ಕವಿಃ ॥೭॥

ಸ ಚೈಕದಾ ಮುನಿಶ್ರೇಷ್ಠೋ ವಿಚರನ್ಪೃಥಿವೀಮಿಮಾಂ ।
ವಾದಯನ್ಮಹತೀಂ ವೀಣಾಂ ಸ್ವರತಾನಸಮನ್ವಿತಾಂ ॥೮॥

ಬೃಹದ್ರಥಂತರಾದೀನಾಂ ಸಾಮ್ನಾಂ ಭೇದಾನನೇಕಶಃ ।
ಗಾಯನ್ಗಾಯತ್ರಮಮೃತಂ ಸಂಪ್ರಾಪ್ತೋಽಥ ಮಮಾಶ್ರಮಂ ॥೯॥

ಶಮ್ಯಾಪ್ರಾಸಂ ಮಹಾತೀರ್ಥಂ ಸರಸ್ವತ್ಯಾಃ ಸುಪಾವನಂ ।
ನಿವಾಸಂ ಮುನಿಮುಖ್ಯಾನಾಂ ಶರ್ಮದಂ ಜ್ಞಾನದಂ ತಥಾ ॥೧೦॥

ತಮಾಗತಮಹಂ ಪ್ರೇಕ್ಷ್ಯ ಬ್ರಹ್ಮಪುತ್ರಂ ಮಹಾದ್ಯುತಿಂ ।
ಅಭ್ಯುತ್ಥಾನಾದಿಕಂ ಸರ್ವಂ ಕೃತವಾನರ್ಚನಾದಿಕಂ ॥೧೧॥

---

ಬ್ರಹ್ಮನ ಮಾನಸಪುತ್ರನಾದ ನಾರದನೆಂಬ ಮುನಿಯು ಜ್ಞಾನಿಯಾಗಿಯೂ ಎಲ್ಲೆಡೆಯಲ್ಲಿಯೂ ಸಂಚರಿಸುವವನಾಗಿಯೂ ಶಾಂತನಾಗಿಯೂ ಸಮಸ್ತರಿಗೂ ಪ್ರೀತಿ ಪಾತ್ರನಾಗಿಯೂ ಪ್ರತಿಭಾಶಾಲಿಯಾಗಿಯೂ ಇದ್ದನು. ॥೭॥

ಆ ಮುನಿಶ್ರೇಷ್ಠನು ಒಂದಾನೊಂದು ಸಮಯದಲ್ಲಿ ಈ ಭೂಮಿಯಲ್ಲಿ ಸಂಚರಿಸುತ್ತಾ, ಮಹತೀ ಎಂಬ ವೀಣೆಯಿಂದ ಸ್ವರ ಮತ್ತು ತಾನಗಳೊಂದಿಗೆ ನುಡಿಯಿಸುತ್ತಾ, ಬೃಹದ್ರಥಂತರವೇ ಮುಂತಾದ ಅನೇಕ ಸಾಮಗಳನ್ನು ಗಾನಮಾಡುತ್ತಾ, ಅಮೃತಸ್ವರೂಪವಾದ ಗಾಯತ್ರೀಸಾಮವನ್ನೂ ಗಾನಮಾಡುತ್ತಾ, ನನ್ನ ಆಶ್ರಮಕ್ಕೆ ಬಂದನು. ॥೮-೯॥

ಆ ನನ್ನ ಆಶ್ರಮವು ಸರಸ್ವತೀನದಿಯ ಪರಿಶುದ್ಧವಾದ ಶಮ್ಯಾಪ್ರಾಸವೆಂಬ ಮಹಾತೀರ್ಥದಿಂದ ಕೂಡಿ ಋಷಿಗಳಿಗೆ ಮುಖ್ಯವಾದ ವಾಸಸ್ಥಾನವಾಗಿ ಸುಖವನ್ನೂ ಜ್ಞಾನವನ್ನೂ ಕೊಡತಕ್ಕುದಾಗಿರುವುದು. ॥೧೦॥

ಆ ನನ್ನ ಆಶ್ರಮಕ್ಕೆ ಬಂದ ಬ್ರಹ್ಮಪುತ್ರನೂ ಮಹಾತೇಜಶ್ಶಾಲಿಯೂ ಆದ ನಾರದನನ್ನು ನೋಡಿ, ಇದಿರಾಗಿ ಹೋಗಿ ಕರೆದುಕೊಂಡುಬಂದು, ಅರ್ಘ್ಯಪಾದ್ಯಾದಿ ಪೂಜೆಗಳನ್ನು ಮಾಡಿದೆನು. ಬಳಿಕ ಪೀಠದಮೇಲೆ ಕುಳಿತಿದ್ದ ಮಹಾತೇಜಸ್ವಿಯಾದ ನಾರದಮುನಿಯ ಸಮೀಪದಲ್ಲಿಯೇ ನಾನೂ ಕುಳಿತುಕೊಂಡು, ವಿಶ್ರಾಂತಿಯಿಂದ

ಅರ್ಘ್ಯಪಾದ್ಯವಿಧಿಂ ಕೃತ್ವಾ ತಸ್ಯಾಸನಸ್ಥಿತಸ್ಯ ಚ ।
ಉಪವಿಷ್ಟಃ ಸಮೀಪೇಽಹಂ ಮುನೇರಮಿತತೇಜಸಃ ॥೧೨॥

ದೃಷ್ಟ್ವಾ ವಿಶ್ರಮಿಣಂ ಶಾಂತಂ ನಾರದಂ ಜ್ಞಾನಪಾರದಂ ।
ತಮಪೃಚ್ಛಮಹಂ ರಾಜನ್ಯತ್ಪೃಷ್ಟೋಽಹಂ ತ್ವಯಾಧುನಾ ॥೧೩॥

ಅಸಾರೇಽಸ್ಮಿಂಸ್ತು ಸಂಸಾರೇ ಪ್ರಾಣಿನಾಂ ಕಿಂ ಸುಖಂ ಮುನೇ ।
ನ ಪಶ್ಯಾಮಿ ವಿನಿಶ್ಚಿತ್ಯ ಕದಾಚಿತ್ಕುತ್ರಚಿತ್ಕ್ವಚಿತ್ ॥೧೪॥

ದ್ವೀಪೇ ಜಾತೋ ಜನನ್ಯಾಽಹಂ ಸಂತ್ಯಕ್ತಸ್ತತ್ಕ್ಷಣಾದಪಿ ।
ಅನಾಶ್ರಯೋ ವನೇ ವೃದ್ಧಿಂ ಪ್ರಾಪ್ತಃ ಕರ್ಮಾನುಸಾರತಃ ॥೧೫॥

ತಪಸ್ತಪ್ತಂ ಮಯಾ ಚೋಗ್ರಂ ಪರ್ವತೇ ಬಹುವಾರ್ಷಿಕಂ ।
ಪುತ್ರಕಾಮೇನ ದೇವರ್ಷೇ ಶಂಕರಃ ಸಮುಪಾಸಿತಃ ॥೧೬॥

ತತೋ ಮಯಾ ಶುಕಃ ಪ್ರಾಪ್ತಃ ಪುತ್ರೋ ಜ್ಞಾನವತಾಂ ವರಃ ।
ಪಾಠಿತಸ್ತು ಮಯಾ ಸಮ್ಯಗ್ವೇದಾನಾಂ ಸಾರ ಆದಿತಃ ॥೧೭॥

---

ಶಾಂತನಾದ ಆ ಮುನಿಯನ್ನು ಕಂಡು, ಸಂಪೂರ್ಣಜ್ಞಾನವನ್ನು ಉಪದೇಶಿಸುವ ಆತನನ್ನು ಕುರಿತು, ಎಲೈ ರಾಜನೇ, ಈಗ ನೀನು ನನ್ನನ್ನು ಕೇಳಿದ ಪ್ರಶ್ನೆಯನ್ನೇ ನಾನೂ ವಿಸ್ತಾರವಾಗಿ ಕೇಳಿದೆನು. ॥೧೧-೧೨-೧೩॥

ಓ ನಾರದಮುನಿಯೇ, ಹುಟ್ಟುಸಾವು ಮುಂತಾದುವುಗಳಿಂದ ಕಷ್ಟರೂಪವಾದ ಮತ್ತು ನಿಜವಾದ ಸುಖವಿಲ್ಲದೆ ನಿಸ್ಸಾರವಾದ ಈ ಸಂಸಾರದಲ್ಲಿ ಪ್ರಾಣಿಗಳಿಗೆ ನಿಶ್ಚಯವಾಗಿ ಸುಖವೇನೆಂಬುದನ್ನು ಯಾವಾಗಲೂ ಎಲ್ಲಿಯೂ ಸ್ವಲ್ಪವಾದರೂ ನಾನು ನೋಡಲಿಲ್ಲ. ॥೧೪॥

ನಾನು ದ್ವೀಪದಲ್ಲಿ ಹುಟ್ಟಿದೆನು. ಹುಟ್ಟಿದ ಕ್ಷಣದಲ್ಲಿಯೇ ನನ್ನನ್ನು ತಾಯಿಯು ತ್ಯಜಿಸಿದಳು. ಯಾವ ಆಶ್ರಯವೂ ಇಲ್ಲದೆ ಕರ್ಮಾನುಸಾರವಾಗಿ ಕಾಡಿನಲ್ಲಿಯೇ ಬೆಳೆದೆನು. ॥೧೫॥

ಓ ದೇವರ್ಷಿಯೇ, ಬಹಳ ವರ್ಷಗಳವರೆಗೆ ನಾನು ಪರ್ವತದಲ್ಲಿ ಕ್ರೂರವಾದ ತಪಸ್ಸನ್ನು ಮಾಡಿದೆನು. ಪುತ್ರಾಪೇಕ್ಷೆಯಿಂದ ಶಿವನನ್ನು ಪೂಜಿಸಿದೆನು. ಬಳಿಕ ಜ್ಞಾನಿಗಳಲ್ಲಿ ಶ್ರೇಷ್ಠನಾದ ಶುಕನೆಂಬ ಪುತ್ರನನ್ನು ಪಡೆದೆನು. ಅವನಿಗೆ ಮೊದಲಿ

ಸ ತ್ಯಕ್ತ್ವಾ ಮಾಂ ಗತಃ ಕ್ವಾಽಪಿ ರುದಂತಂ ವಿರಹಾತುರಂ ।
ಲೋಕಾಲ್ಲೋಕಾಂತರಂ ಸಾಧೋ ವಚನಾತ್ತವ ಬೋಧಿತಃ ॥೧೮॥

ತತೋಽಹಂ ಪುತ್ರಸಂತಪ್ತಃ ತ್ಯಕ್ತ್ವಾ ಮೇರುಂ ಮಹಾಗಿರಿಂ ।
ಮಾತರಂ ಮನಸಾ ಕೃತ್ವಾ ಸಂಪ್ರಾಪ್ತಃ ಕುರುಜಾಂಗಲಂ ॥೧೯॥

ಪುತ್ರಸ್ನೇಹಾದತಿತರಾಂ ಕೃಶಾಂಗಃ ಶೋಕಸಂಯುತಃ ।
ಜಾನನ್ಮಿಥ್ಯೇತಿ ಸಂಸಾರಂ ಮಾಯಾಪಾಶನಿಯಂತ್ರಿತಃ ॥೨೦॥

ತತೋ ರಾಜ್ಞಾ ವೃತಾಂ ಜ್ಞಾತ್ವಾ ಮಾತರಂ ವಾಸವೀಂ ಶುಭಾಂ ।
ಸ್ಥಿತೋಽತ್ರೈವಾಶ್ರಮಂ ಕೃತ್ವಾ ಸರಸ್ವತ್ಯಾಸ್ತಟೇ ಶುಭೇ ॥೨೧॥

ಶಂತನುಃ ಸ್ವರ್ಗತಿಂ ಪ್ರಾಪ್ತೋ ವಿಧುರಾ ಜನನೀ ಸ್ಥಿತಾ ।
ಪುತ್ರದ್ವಯಯುತಾ ಸಾಧ್ವೀ ಭೀಷ್ಮೇಣ ಪ್ರತಿಪಾಲಿತಾ ॥೨೨॥

---

ನಿಂದಲೂ ವೇದಗಳನ್ನೂ ಅವುಗಳ ಸಾರವಾದ ದೇವೀಭಾಗವತವನ್ನೂ ಪಾಠಮಾಡಿಸಿದೆನು. ॥೧೬-೧೭॥

ಓ ಸಾಧುವೃತ್ತಿಯ ನಾರದನೇ, ಆ ಮಗನು ನಿನ್ನ ಬೋಧನೆಯಿಂದ ನನ್ನನ್ನು ಅಗಲಿಕೆಯ ದುಃಖಕ್ಕೆ ಗುರಿಮಾಡಿ ಅಳುತ್ತಿರುವ ನನ್ನನ್ನು ಬಿಟ್ಟು ಎಲ್ಲಿಗೋ ಹೊರಟು ಹೋದನು. ಆಮೇಲೆ ನಾನು ಮಗನ ಅಗಲಿಕೆಯ ದುಃಖದಿಂದ ಮೇರುಪರ್ವತವನ್ನು ಬಿಟ್ಟು ತಾಯಿಯನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಕುರುಜಾಂಗಲವೆಂಬ ದೇಶಕ್ಕೆ ಬಂದೆನು. ಮಗನಮೇಲಿನ ಪ್ರೀತಿಯಿಂದ ಕೃಶವಾದ ಶರೀರದಿಂದಲೂ ದುಃಖದಿಂದಲೂ ಕೂಡಿದವನಾಗಿ ಮಾಯೆಯೆಂಬ ಹಗ್ಗಕ್ಕೆ ಕಟ್ಟುಬಿದ್ದು, ಸಂಸಾರವು ಮಿಥ್ಯಾಭೂತವಾದುದೆಂದು ತಿಳಿದಿದ್ದರೂ, ಈ ಕಷ್ಟಗಳಿಗೆ ಗುರಿಯಾದೆನು. ॥೧೮-೧೯-೨೦॥

ಬಳಿಕ ಮಂಗಲಕರಳಾದ ನನ್ನ ತಾಯಿಯಾದ ವಾಸವಿಯನ್ನು ಶಂತನು ರಾಜನು ಮದುವೆಯಾದನೆಂದು ತಿಳಿದು, ಈಗ ಈ ಸರಸ್ವತೀ ನದಿಯ ದಡದಲ್ಲಿ ಆಶ್ರಮವನ್ನು ಮಾಡಿಕೊಂಡಿರುವೆನು. ಶಂತನು ರಾಜನು ಸ್ವರ್ಗಕ್ಕೆ ಹೋದನು. ನನ್ನ ತಾಯಿಯು ಪತಿಹೀನಳಾದಳು. ಇಬ್ಬರು ಮಕ್ಕಳೊಡನೆ ಕೂಡಿದ ಆ ಪತಿವ್ರತೆಯನ್ನು ಭೀಷ್ಮನು ಕಾಪಾಡುತ್ತಿರುವನು. ॥೨೧-೨೨॥

ಚಿತ್ರಾಂಗದಃ ಕೃತೋ ರಾಜಾ ಗಂಗಾಪುತ್ರೇಣ ಧೀಮತಾ ।
ಕಾಲೇನ ಸೋಽಪಿ ಮೇ ಭ್ರಾತಾ ಮೃತಃ ಕಾಮಸಮದ್ಯುತಿಃ ॥೨೩॥

ತತಃ ಸತ್ಯವತೀ ಮಾತಾ ನಿಮಗ್ನಾ ಶೋಕಸಾಗರೇ ।
ಚಿತ್ರಾಂಗದಂ ಮೃತಂ ಪುತ್ರಂ ರುರೋದ ಭೃಶಮಾತುರಾ ॥೨೪॥

ಸಂಪ್ರಾಪ್ತೋಽಹಂ ಮಹಾಭಾಗ ಜ್ಞಾತ್ವಾ ತಾಂ ದುಃಖಿತಾಂ ಸತೀಂ ।
ಆಶ್ವಾಸಿತಾ ಮಯಾಽತ್ಯರ್ಥಂ ಭೀಷ್ಮೇಣ ಚ ಮಹಾತ್ಮನಾ ॥೨೫॥

ವಿಚಿತ್ರವೀರ್ಯಸ್ತ್ವಪರೋ ವೀರ್ಯವಾನ್ಪೃಥಿವೀಪತಿಃ ।
ಕೃತೋ ಭೀಷ್ಮೇಣ ಭ್ರಾತಾ ವೈ ಸ್ತ್ರೀರಾಜ್ಯವಿಮುಖೇನ ಹ ॥೨೬॥

ಕಾಶಿರಾಜಸುತೇ ರಮ್ಯೇ ವಿಜಿತ್ಯ ಪೃಥಿವೀಪತೀನ್ ।
ಭೀಷ್ಮೇಣಾನೀಯ ಸ್ವಬಲಾತ್ಕನ್ಯಕೇ ದ್ವೇ ಸಮರ್ಪಿತೇ ॥೨೭॥

ಸತ್ಯವತ್ಯೈ ಶುಭೇ ಕಾಲೇ ವಿವಾಹಃ ಪರಿಕಲ್ಪಿತಃ ।
ಭ್ರಾತುರ್ವಿಚಿತ್ರವೀರ್ಯಸ್ಯ ತದಾಽಹಂ ಸುಖಿತೋಽಭವಂ ॥೨೮॥

---

ಬುದ್ಧಿವಂತನಾದ ಗಂಗಾದೇವಿಯ ಮಗನಾದ ಭೀಷ್ಮನು ಚಿತ್ರಾಂಗದನನ್ನು ರಾಜನನ್ನಾಗಿ ಮಾಡಿದನು. ಮನ್ಮಥನಂತೆ ಕಾಂತಿಯುಳ್ಳ ಆ ನನ್ನ ತಮ್ಮನಾದ ಚಿತ್ರಾಂಗದನೂ ಕೆಲವು ಕಾಲದಮೇಲೆ ಸತ್ತುಹೋದನು. ಬಳಿಕ ಸತ್ಯವತಿಯು ದುಃಖಸಮುದ್ರದಲ್ಲಿ ಮುಳುಗಿದವಳಾಗಿ ಸತ್ತುಹೋದ ಚಿತ್ರಾಂಗದನಿಗೋಸ್ಕರ ಬಹಳವಾಗಿ ಅತ್ತಳು. ||೨೩-೨೪||

ಮಹಾಮಹಿಮನಾದ ನಾರದನೇ, ಆ ಸತ್ಯವತಿಯು ದುಃಖಪಡುತ್ತಿರುವುದನ್ನು ತಿಳಿದು ನಾನು ಅಲ್ಲಿಗೆ ಹೋದೆನು. ನಾನೂ ಭೀಷ್ಮನೂ ಆಕೆಯನ್ನು ಸಮಾಧಾನಪಡಿಸಿದೆವು. ||೨೫||

ಸ್ತ್ರೀಯೊಡನೆ ವಿವಾಹವನ್ನೂ ರಾಜ್ಯವನ್ನೂ ತ್ಯಜಿಸಿದ ಆ ಭೀಷ್ಮನು ಮತ್ತೊಬ್ಬ ತಮ್ಮನಾದ ಶೂರನಾದ ವಿಚಿತ್ರವೀರ್ಯನನ್ನು ರಾಜನನ್ನಾಗಿ ಮಾಡಿದನು. ||೨೬||

ಭೀಷ್ಮನು ತನ್ನ ಸಾಮರ್ಥ್ಯದಿಂದ ರಾಜರನ್ನು ಗೆದ್ದು, ಕಾಶಿರಾಜನ ಇಬ್ಬರು ಹೆಣ್ಣುಮಕ್ಕಳನ್ನು ತಂದು, ಸತ್ಯವತಿಗೆ ಒಪ್ಪಿಸಿದನು. ಶುಭಲಗ್ನದಲ್ಲಿ ನನ್ನ ತಮ್ಮ

ಪುನಃ ಸೋಽಪಿ ಮೃತೋ ಭ್ರಾತಾ ಯಕ್ಷ್ಮಣಾ ಪೀಡಿತೋ ಭೃಶಂ ।
ಅನಪತ್ಯೋ ಯುವಾ ಧನ್ವೀ ಮಾತಾ ಮೇ ದುಃಖಿತಾಽಭವತ್ ॥೨೯॥

ಕಾಶಿರಾಜಸುತೇ ದ್ವೇ ತು ಮೃತಂ ದೃಷ್ಟ್ವಾ ಪತಿಂ ತದಾ ।
ಪತಿವ್ರತಾಧರ್ಮಪರೇ ಭಗಿನ್ಯೌ ಸಂಬಭೂವತುಃ ॥೩೦॥

ತೇ ಊಚತುಃ ಸತೀಂ ಶ್ವಶ್ರೂಂ ರುದತೀಂ ಭೃಶದುಃಖಿತಾಂ ।
ಪತಿನಾ ಸಹಗಾಮಿನ್ಯೌ ಭವಿಷ್ಯಾವೋ ಹುತಾಶನೇ ॥೩೧॥

ಪುತ್ರೇಣ ಸಹ ತೇ ಶ್ವಶ್ರು ಸ್ವರ್ಗೇ ಗತ್ವಾಽಥ ನಂದನೇ ।
ಸುಖೇನ ವಿಹರಿಷ್ಯಾವಃ ಪತಿನಾ ಸಹ ಸಂಯುತೇ ॥೩೨॥

ನಿವಾರಿತೇ ತದಾ ಮಾತ್ರಾ ವಧ್ವೌ ತಸ್ಮಾನ್ಮಹೋದ್ಯಮಾತ್ ।
ಸ್ನೇಹಭಾವಂ ಸಮಾಶ್ರಿತ್ಯ ಭೀಷ್ಮಸ್ಯ ವಚನಾತ್ತದಾ ॥೩೩॥

---

ನಾದ ವಿಚಿತ್ರವೀರ್ಯನಿಗೆ ಆ ಕನ್ಯೆಯರನ್ನು ಕೊಟ್ಟು ವಿವಾಹವನ್ನು ಮಾಡಿದಮೇಲೆ ನಾನು ಸುಖಿಯಾದೆನು. ||೨೬-೨೮||

ಧನುರ್ಧಾರಿಯಾದ ಆ ನನ್ನ ತಮ್ಮನೂ ಮಕ್ಕಳಿಲ್ಲದೆ ಕ್ಷಯರೋಗದಿಂದ ಪೀಡಿತನಾಗಿ ಸತ್ತುಹೋದನು! ಪುನಃ ನನ್ನ ತಾಯಿಯು ದುಃಖವನ್ನು ಹೊಂದಿದಳು. ||೨೯||

ತಮ್ಮ ಪತಿಯು ಮರಣ ಹೊಂದಿದುದನ್ನು ನೋಡಿ ಕಾಶೀರಾಜನ ಮಕ್ಕಳಾದ ಆ ಇಬ್ಬರು ಅಕ್ಕತಂಗಿಯರೂ ಪತಿವ್ರತಾಧರ್ಮದಲ್ಲಿ ಆಸಕ್ತರಾದರು. ||೩೦||

ಆ ಕಾಶೀರಾಜಪುತ್ರಿಯರಿಬ್ಬರೂ ವಿಶೇಷವಾದ ದುಃಖದಿಂದ ಅಳುತ್ತಿರುವ ಅತ್ತೆಯಾದ ಸತ್ಯವತೀದೇವಿಯನ್ನು ಕುರಿತು, 'ಓ ಅತ್ತೆಯವರೇ, ನಿಮ್ಮ ಮಗನಾದ ನಮ್ಮ ಪತಿಯೊಡನೆ ಅಗ್ನಿಯಲ್ಲಿ ಸಹಗಮನವನ್ನು ಮಾಡುತ್ತೇವೆ. ಬಳಿಕ ಸ್ವರ್ಗಕ್ಕೆ ಹೋಗಿ ನಂದನವನದಲ್ಲಿ ಪತಿಯೊಡನೆ ಸುಖವಾಗಿ ವಿಹಾರಮಾಡಿಕೊಂಡಿರುತ್ತೇವೆ' ಎಂದು ಹೇಳಿದರು. ||೩೧-೩೨||

ಆಗ ಭೀಷ್ಮನ ಮಾತಿನಿಂದ ಸ್ನೇಹಭಾವವನ್ನು ಆಶ್ರಯಿಸಿ ಅವರಿಬ್ಬರೂ ಆ ಮಹಾಕಾರ್ಯವನ್ನು ಮಾಡದಂತೆ ನನ್ನ ತಾಯಿಯು ತಡೆದಳು. ||೩೩||

ಗಾಂಗೇಯೇನ ಚ ಮಾತ್ರಾ ಮೇ ಸಂಮಂತ್ರ್ಯ ಚ ಪರಸ್ಪರಂ ।
ಕೃತ್ವೌರ್ಧ್ವದೈಹಿಕಂ ಸರ್ವಂ ಸಂಸ್ಮೃತೋಽಹಂ ಗಜಾಹ್ವಯೇ ॥೩೪॥

ಸ್ಮೃತಮಾತ್ರಸ್ತು ಮಾತ್ರಾ ವೈ ಜ್ಞಾತ್ವಾ ಭಾವಂ ಮನೋಗತಂ ।
ತರಸೈವಾಽಗತಶ್ಚಾಽಹಂ ನಗರಂ ನಾಗಸಾಹ್ವಯಂ ॥೩೫॥

ಪ್ರಣಮ್ಯ ಮಾತರಂ ಮೂರ್ಧ್ನಾ ಸಂಸ್ಥಿತೋಽಥ ಕೃತಾಂಜಲಿಃ ।
ತಾಮಬ್ರುವಂ ಸುತಸ್ನಾಂಗೀಂ ಪುತ್ರಶೋಕೇನ ಕರ್ಶಿತಾಂ ॥೩೬॥

ಮಾತಸ್ತ್ವಯಾ ಕಿಮಾಹೂತೋ ಮನಸಾಽಹಂ ತಪಸ್ವಿನಿ ।
ಆಜ್ಞಾಪಯ ಮಹತ್ಕಾರ್ಯೇ ದಾಸೋಽಸ್ಮಿ ಕರವಾಣಿ ಕಿಂ ॥೩೭॥

ತ್ವಂ ಮೇ ತೀರ್ಥಂ ಪರಂ ಮಾತರ್ದೇವಶ್ಚ ಪ್ರಥಿತಃ ಪರಃ ।
ಆಗತಶ್ಚಿಂತಿತಶ್ಚಾಽತ್ರ ಬ್ರೂಹಿ ಕೃತ್ಯಂ ತವ ಪ್ರಿಯಂ ॥೩೮॥

---

ಭೀಷ್ಮನೂ ನನ್ನ ತಾಯಿಯೂ ಪರಸ್ಪರ ಮಂತ್ರಾಲೋಚನೆಯನ್ನು ಮಾಡಿ ವಿಚಿತ್ರವೀರ್ಯನಿಗೆ ಪರಲೋಕ ಕ್ರಿಯೆ ಎಲ್ಲವನ್ನೂ ಮಾಡಿ ಹಸ್ತಿನಪಟ್ಟಣದಲ್ಲಿದ್ದಾಗ ನನ್ನ ತಾಯಿಯು ನನ್ನನ್ನು ಸ್ಮರಿಸಿದಳು. ಆ ಕ್ಷಣವೇ ಆಕೆಯ ಮನಸ್ಸಿನ ಭಾವವನ್ನು ತಿಳಿದು ಬೇಗನೆ ನಾನು ಆ ಹಸ್ತಿನ ಪಟ್ಟಣಕ್ಕೆ ಹೋದೆನು. ||೩೪-೩೫||

ತಾಯಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿ ಕೈಜೋಡಿಸಿ ನಿಂತುಕೊಂಡು ಪುತ್ರಶೋಕದಿಂದ ಕೃಶಳಾಗಿ ದುಃಖಪಡುತ್ತಿರುವ ಆಕೆಯನ್ನು ಕುರಿತು, ಹೀಗೆ ಹೇಳಿದೆನು. ||೩೬||

ಓ ದುಃಖಿತಳಾದ ತಾಯಿಯೇ, ನಿನ್ನ ಮನಸ್ಸಿನಿಂದ ನನ್ನನ್ನೇಕೆ ಬರಮಾಡಿದೆ? ಯಾವ ದೊಡ್ಡ ಕೆಲಸವಿದ್ದರೂ ಅಪ್ಪಣೆ ಮಾಡು. ನಿನ್ನ ಸೇವಕನಾಗಿ ಆ ಕಾರ್ಯವನ್ನು ಮಾಡುವೆನು. ನೀನೇ ನನಗೆ ಪರಿಶುದ್ಧವಾದ ತೀರ್ಥಸ್ವರೂಪವಾಗಿಯೂ ಪರದೇವತಾಸ್ವರೂಪವಾಗಿಯೂ ಇರುವೆ. ಆದುದರಿಂದಲೇ ನೀನು ಸ್ಮರಿಸಿದೊಡನೆಯೇ ಇಲ್ಲಿಗೆ ಬಂದೆನು. ನಿನಗಿಷ್ಟವಾದ ಕೆಲಸವನ್ನು ಹೇಳು. ||೩೭-೩೮||

|| ವ್ಯಾಸ ಉವಾಚ ||

ಇತ್ಯುಕ್ತ್ವಾಽಹಂ ಸ್ಥಿತಸ್ತತ್ರ ಮಾತುರಗ್ರೇ ಯದಾ ಮುನೇ ।
ತದಾ ಸಾ ಮಾಮುವಾಚೇದಂ ಪಶ್ಯಂತೀ ಭೀಷ್ಮಮಂತಿಕೇ ||೩೯||

ಪುತ್ರ ತೇಽದ್ಯ ಮೃತೋ ಭ್ರಾತಾ ಪೀಡಿತೋ ರಾಜಯಕ್ಷ್ಮಣಾ ।
ತೇನಾಽಹಂ ದುಃಖಿತಾ ಜಾತಾ ವಂಶಚ್ಛೇದಭಯಾದಿಹ ||೪೦||

ತಸ್ಮಾತ್ತ್ವಮದ್ಯ ಮೇಧಾವಿನ್ಮಯಾಽಽಹೂತಃ ಸಮಾಧಿನಾ ।
ಗಂಗೇಯಸ್ಯ ಮತೇನಾತ್ರ ಪಾರಾಶರ್ಯಾರ್ಥಸಿದ್ಧಯೇ ||೪೧||

ಕುಲಂ ಸ್ಥಾಪಯ ನಷ್ಟಂ ತ್ವಂ ಶಂತನೋರ್ನಾಮಕಾರಣಾತ್ ।
ರಕ್ಷ ಮಾಂ ದುಃಖತಃ ಕೃಷ್ಣ ವಂಶಚ್ಛೇದೋದ್ಭವಾದ್ದ್ರುತಂ ||೪೨||

ಕಾಶಿರಾಜಸುತೇ ಭಾರ್ಯೇ ಭ್ರಾತುಸ್ತವ ಯವೀಯಸಃ ।
ಸಾಧೋರ್ವಿಚಿತ್ರವೀರ್ಯಸ್ಯ ರೂಪಯೌವನಭೂಷಿತೇ ||೪೩||

ತಾಭ್ಯಾಂ ಸಂಗಮ್ಯ ಮೇಧಾವಿನ್ಪುತ್ರೋತ್ಪಾದನಕಂ ಕುರು ।
ರಕ್ಷಸ್ವ ಭಾರತಂ ವಂಶಂ ನಾತ್ರ ದೋಷೋಽಸ್ತಿ ಕರ್ಹಿಚಿತ್ ||೪೪||

---

ವ್ಯಾಸಮುನಿಯು ಹೇಳಿದನು—ಎಲೈ ನಾರದಮುನಿಯೇ, ಹೀಗೆಂದು ಹೇಳಿ ನಾನು ಆ ತಾಯಿಯ ಎದುರಿಗೆ ನಿಂತಿದ್ದಾಗ ಆಕೆಯು ಸಮೀಪದಲ್ಲಿದ್ದ ಭೀಷ್ಮನನ್ನು ನೋಡುತ್ತಾ ನನ್ನನ್ನು ಕುರಿತು ಹೇಳಿದಳು. ||೩೯||

ಎಲೈ ಪುತ್ರನೇ, ನಿನ್ನ ತಮ್ಮನಾದ ವಿಚಿತ್ರವೀರ್ಯನು ಕ್ಷಯರೋಗದಿಂದ ಸತ್ತನು. ಅದರಿಂದ ನಾನು ದುಃಖಿತಳಾಗಿ ಈ ರಾಜವಂಶವು ನಾಶವಾಗುವುದೆಂಬ ಭಯದಿಂದ ಬುದ್ಧಿವಂತನಾದ ನಿನ್ನನ್ನು ಏಕಾಗ್ರಚಿತ್ತದಿಂದ ಧ್ಯಾನಿಸಿದೆನು. ಪರಾಶರ ಪುತ್ರನಾದ ಕೃಷ್ಣನೇ, ಭೀಷ್ಮನ ಒಪ್ಪಿಗೆಯಿಂದ ನಷ್ಟವಾದ ಶಂತನು ರಾಜನ ವಂಶ ವನ್ನು ರಾಜ್ಯರಕ್ಷಣರೂಪವಾದ ಕಾರ್ಯಸಿದ್ಧಿಗೋಸ್ಕರವಾಗಿ ಪುನಃ ಸ್ಥಾಪಿಸು. ವಂಶನಾಶರೂಪವಾದ ಈ ದುಃಖದಿಂದ ಬೇಗನೆ ನನ್ನನ್ನು ಕಾಪಾಡು. ||೪೦-೪೧-೪೨||

ನಿನ್ನ ಚಿಕ್ಕ ತಮ್ಮನಾದ ಸಜ್ಜನನಾದ ವಿಚಿತ್ರವೀರ್ಯನ ಪತ್ನಿಯರೂ ಕಾಶಿ ರಾಜ ಪುತ್ರಿಯರೂ ರೂಪ ಯೌವನಗಳಿಂದ ಅಲಂಕೃತರಾದವರೂ ಆದ ಸ್ತ್ರೀಯರಿರು ವರು. ಬುದ್ಧಿವಂತನಾದ ನೀನು ಧರ್ಮವನ್ನು ಬಲ್ಲವನಾದುದರಿಂದ ಆ ಸ್ತ್ರೀಯರಲ್ಲಿ

|| ವ್ಯಾಸ ಉವಾಚ ||

ಇತಿ ಮಾತುರ್ವಚಃ ಶ್ರುತ್ವಾ ಜಾತಶ್ಚಿಂತಾತುರೋ ಹ್ಯಹಂ ।
ಲಜ್ಜಯಾಽಕುಲಚಿತ್ತಸ್ತಾಮಬ್ರುವಂ ವಿನಯಾನತಃ ||೪೫||

ಮಾತಃ ಪಾಪಾಧಿಕಂ ಕರ್ಮ ಪರದಾರಾಭಿಮರ್ಶನಂ ।
ಜ್ಞಾತ್ವಾ ಧರ್ಮಪಥಂ ಸಮ್ಯಕ್ಕರೋಮಿ ಕಥಮಾದರಾತ್ ||೪೬||

ತಥಾ ಯವೀಯಸೋ ಭ್ರಾತುರ್ವಧೂಃ ಕನ್ಯಾ ಪ್ರಕೀರ್ತಿತಾ ।
ವ್ಯಭಿಚಾರಂ ಕಥಂ ಕುರ್ಯಾಮಧೀತ್ಯ ನಿಗಮಾನಹಂ ||೪೭||

ಅನ್ಯಾಯೇನ ನ ಕರ್ತವ್ಯಂ ಸರ್ವಥಾ ಕುಲರಕ್ಷಣಂ ।
ನ ತರಂತಿ ಹಿ ಸಂಸಾರಾತ್ಪಿತರಃ ಪಾಪಕಾರಿಣಃ ||೪೮||

ಲೋಕಾನಾಮುಪದೇಷ್ಟಾ ಯಃ ಪುರಾಣಾನಾಂ ಪ್ರವರ್ತಕಃ ।
ಸ ಕಥಂ ಕುತ್ಸಿತಂ ಕರ್ಮ ಜ್ಞಾತ್ವಾ ಕುರ್ಯಾನ್ಮಹಾದ್ಭುತಂ ||೪೯||

---

ಪುತ್ರೋತ್ಪತ್ತಿಯನ್ನು ಮಾಡಿ ಭರತವಂಶವನ್ನು ಕಾಪಾಡು. ಇದರಲ್ಲಿ ಯಾವ ದೋಷವೂ ಇರುವುದಿಲ್ಲ. ||೪೩-೪೪||

ವ್ಯಾಸಮುನಿಯು ಹೇಳಿದನು—ಹೀಗೆಂದು ಹೇಳಿದ ತಾಯಿಯ ಮಾತನ್ನು ಕೇಳಿ ಮನಸ್ಸಿನಲ್ಲಿ ಚಿಂತೆಯನ್ನು ಹೊಂದಿ ನಾಚಿಕೆಯಿಂದ ಪೀಡಿತನಾಗಿ ವಿನಯದಿಂದ ಆಕೆಗೆ ನಮಸ್ಕರಿಸಿ ಹೀಗೆ ಹೇಳಿದೆನು. ||೪೫||

ಅಮ್ಮಾ ! ಪರಸ್ತ್ರೀಯನ್ನು ಮುಟ್ಟುವುದು ಮಹಾಪಾಪಕಾರ್ಯವು. ಧರ್ಮವನ್ನು ಚನ್ನಾಗಿ ಬಲ್ಲ ನಾನೂ ಇಂತಹ ಕೆಲಸವನ್ನು ಹೇಗೆ ಮಾಡಲಿ? ಇದಲ್ಲದೆ ಚಿಕ್ಕ ತಮ್ಮನ ಹೆಂಡಿರನ್ನು ನನ್ನ ಹೆಣ್ಣು ಮಕ್ಕಳೆಂದು ತಿಳಿಯಬೇಕು. ನಾನು ವೇದಗಳನ್ನು ಓದಿ ಇಂತಹ ವ್ಯಭಿಚಾರಕಾರ್ಯವನ್ನು ಹೇಗೆ ಮಾಡಲಿ ? ||೪೬-೪೭||

ನೀತಿಗೆ ವಿರುದ್ಧವಾಗಿ ವಂಶರಕ್ಷಣೆಯನ್ನು ಮಾಡಬಾರದು. ಪಾಪಕಾರ್ಯವನ್ನು ಮಾಡಿದವರ ಪಿತೃಗಳು ಸಂಸಾರದುಃಖದಿಂದ ಬಿಡುಗಡೆಯನ್ನು ಹೊಂದುವುದಿಲ್ಲ. ಲೋಕಕ್ಕೆಲ್ಲಕ್ಕೂ ಉಪದೇಶಮಾಡತಕ್ಕವನೂ ಪುರಾಣಗಳನ್ನೆಲ್ಲವನ್ನೂ ಪ್ರಕಟಪಡಿಸಿದವನೂ ಆದ ಮನುಷ್ಯನು ನೀಚವಾದ ಕೆಲಸವೆಂದು ತಿಳಿದಿದ್ದರೂ ಅದನ್ನು ಹೇಗೆತಾನೆ ಮಾಡಬಲ್ಲನು ? ||೪೮-೪೯||

ಪುನರುಕ್ತೋ ಹ್ಯಹಂ ಮಾತ್ರಾ ರುದತ್ಯಾ ಭೃಶಮಂತಿಕೇ ।
ಪುತ್ರಶೋಕಾತಿತಪ್ತಾಯಾ ವಂಶರಕ್ಷಣಕಾಮ್ಯಯಾ ॥೫೦॥

ಪಾರಾಶರ್ಯ ನ ತೇ ದೋಷೋ ವಚನಾನ್ಮಮ ಪುತ್ರಕ ।
ಗುರೂಣಾಂ ವಚನಂ ತಥ್ಯಂ ಸದೋಷಮಪಿ ಮಾನವೈಃ ॥೫೧॥

ಕರ್ತವ್ಯಮವಿಚಾರ್ಯೈವ ಶಿಷ್ಟಾಚಾರಪ್ರಮಾಣತಃ ।
ವಚನಂ ಕುರು ಮೇ ಪುತ್ರ ನ ತೇ ದೋಷೋಽಸ್ತಿ ಮಾನದ ॥೫೨॥

ಪುತ್ರಸ್ಯ ಜನನಂ ಕೃತ್ವಾ ಸುಖಿನೀಂ ಕುರು ಮಾತರಂ ।
ವಿಶೇಷೇಣ ತು ಸಂತಪ್ತಾಂ ಮಗ್ನಾಂ ಶೋಕಾರ್ಣವೇ ಸುತ ॥೫೩॥

ಇತಿ ತಾಂ ಬ್ರುವತೀಂ ಶ್ರುತ್ವಾ ತದಾ ಸುರನದೀಸುತಃ ।
ಮಾಮುವಾಚ ವಿಶೇಷಜ್ಞಃ ಸೂಕ್ಷ್ಮಧರ್ಮಸ್ಯ ನಿರ್ಣಯೇ ॥೫೪॥

---

ಪುತ್ರಶೋಕದಿಂದ ವಿಶೇಷವಾಗಿ ಸಂತಾಪಪಡುತ್ತಿರುವ ನಮ್ಮ ತಾಯಿಯು ನನ್ನ ಸಮೀಪದಲ್ಲಿಯೇ ಅಳುತ್ತಾ ವಂಶವನ್ನು ಉಳಿಸಬೇಕೆಂಬಾಸೆಯಿಂದ ಮತ್ತೆ ನನ್ನನ್ನು ಕುರಿತು, ॥೫೦॥

ಎಲೈ ಮಗನೇ, ನೀನು ಪರಾಶರಮಹರ್ಷಿಯ ಮಗನು. ನನ್ನ ಮಾತನ್ನು ನಡೆಸಿದರೆ ನಿನಗೆ ದೋಷವಿಲ್ಲ. ಮನುಷ್ಯರು ದೊಡ್ಡವರ ಮಾತು ದೋಷಯುಕ್ತವಾದುದಾಗಿದ್ದರೂ ಶಿಷ್ಟಾಚಾರವೆಂದು ಭಾವಿಸಿ ಅವರ ಮಾತನ್ನು ನಿಜವಾಗಿ ಮಾಡಬೇಕು. ದೊಡ್ಡವರಿಗೆ ಗೌರವವನ್ನು ಕೊಡತಕ್ಕ ಎಲೈ ಪುತ್ರನೇ, ನನ್ನ ಮಾತನ್ನು ನಡೆಸು. ನಿನಗೆ ದೋಷವಿಲ್ಲ. ವಿಶೇಷವಾಗಿ ದುಃಖಸಮುದ್ರದಲ್ಲಿ ಮುಳುಗಿ ಸಂತಾಪಪಡುತ್ತಿರುವ ನಿನ್ನ ತಾಯಿಯನ್ನು ಸೊಸೆಯರಲ್ಲಿ ಪುತ್ರೋತ್ಪತ್ತಿಯನ್ನು ಮಾಡಿ ಸುಖವುಳ್ಳವಳನ್ನಾಗಿ ಮಾಡು. ॥೫೧-೫೨-೫೩॥

ಹೀಗೆ ಹೇಳುತ್ತಿರುವ ಆಕೆಯ ಮಾತನ್ನು ಕೇಳಿ ಹೆಚ್ಚು ತಿಳಿವಳಿಕೆಯುಳ್ಳ ಗಂಗಾಪುತ್ರನಾದ ಭೀಷ್ಮನು ಧರ್ಮಸೂಕ್ಷ್ಮವನ್ನು ನಿರ್ಣಯಮಾಡುವ ವಿಷಯದಲ್ಲಿ ನನ್ನನ್ನು ಕುರಿತು ಹೀಗೆ ಹೇಳಿದನು. ॥೫೪॥

ದ್ವೈಪಾಯನ ವಿಚಾರೋಽತ್ರ ನ ಕರ್ತವ್ಯಸ್ತ್ವಯಾಽನಘ ।
ಮಾತುರ್ವಚನಮಾದಾಯ ವಿಹರಸ್ವ ಯಥಾಸುಖಂ ॥೫೫॥

॥ ವ್ಯಾಸ ಉವಾಚ ॥

ಇತಿ ತಸ್ಯ ವಚಃ ಶ್ರುತ್ವಾ ಮಾತುಶ್ಚ ಪ್ರಾರ್ಥನಂ ತಥಾ ।
ನಿಶ್ಶಂಕೋಽಹಂ ತದಾ ಜಾತಃ ಕಾರ್ಯೇ ತಸ್ಮಿನ್ ಜುಗುಪ್ಸಿತೇ॥೫೬॥

ಅಂಬಿಕಾಯಾಂ ಪ್ರವೃತ್ತೋಽಹಮೃತುಮತ್ಯಾಂ ಮುದಾ ನಿಶಿ ।
ಮಯಿ ವಿಮನಸಾಯಾಂ ತು ತಾಪಸೇ ಕುತ್ಸಿತೇ ಭೃಶಂ ॥೫೭॥

ಶಪ್ತಾ ಮಯಾ ಸಾ ಸುಶ್ರೋಣೀ ಪ್ರಸಂಗೇ ಪ್ರಥಮೇ ತಥಾ ।
ಅಂಧಸ್ತೇ ಭವಿತಾ ಪುತ್ರೋ ಯತೋ ನೇತ್ರೇ ನಿಮೀಲಿತೇ ॥೫೮॥

ದ್ವಿತೀಯೇಽಹ್ನಿ ಮುನಿಶ್ರೇಷ್ಠ ಪೃಷ್ಟೋ ಮಾತ್ರಾ ರಹಃ ಪುನಃ ।
ಭವಿಷ್ಯತಿ ಸುತಃ ಪುತ್ರ ಕಾಶಿರಾಜಸುತೋದರೇ ॥೫೯॥

---

ದ್ವೀಪವಾಸಿಯಾದ ಪಾಪರಹಿತನಾದ ವ್ಯಾಸನೇ, ನೀನು ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲ. ತಾಯಿಯ ಮಾತನ್ನು ನಡೆಸಿ ಸುಖವನ್ನು ಹೊಂದು. ॥೫೫॥

ವ್ಯಾಸಋಷಿಯು ಹೇಳಿದನು—ಹೀಗೆ ಹೇಳಿದ ಭೀಷ್ಮನ ಮಾತನ್ನು ಕೇಳಿ ತಾಯಿಯ ಪ್ರಾರ್ಥನೆಯನ್ನೂ ಮನಸ್ಸಿಗೆ ತಂದು ನಾನು ಆ ಅಸಹ್ಯವಾದ ಕಾರ್ಯವನ್ನು ಮಾಡುವುದರ ವಿಷಯದಲ್ಲಿ ಸಂದೇಹವನ್ನು ಬಿಟ್ಟುಬಿಟ್ಟೆನು. ॥೫೬॥

ನಾನು ಸಂತೋಷದಿಂದ ರಾತ್ರಿಯಲ್ಲಿ ಋತುಮತಿಯಾದ ಅಂಬಿಕೆಯಲ್ಲಿ ಆಸಕ್ತನಾದೆನು. ಗೊಡ್ಡುತಪಸ್ವಿಯಾದ ನನ್ನಲ್ಲಿ ಅವಳಿಗೆ ಮನಸ್ಸಿರಲಿಲ್ಲ. ಪ್ರಥಮ ಸಮಾಗದಲ್ಲಿ ಅವಳು ಕಣ್ಣುಗಳನ್ನು ಮುಚ್ಚಿಕೊಂಡದ್ದರಿಂದ ನಿನಗೆ ಕುರುಡನಾದ ಮಗನು ಹುಟ್ಟುವನೆಂದು ಅವಳನ್ನು ಶಪಿಸಿದೆನು. ॥೫೭-೫೮॥

ಓ ನಾರದಮುನಿಯೇ, ಎರಡನೆಯ ದಿವಸ ನಮ್ಮ ತಾಯಿಯು ರಹಸ್ಯದಲ್ಲಿ ನನ್ನನ್ನು ಕುರಿತು ಎಲೈ ಪುತ್ರನೇ, ಕಾಶೀರಾಜಪುತ್ರಿಯ ಹೊಟ್ಟೆಯಲ್ಲಿ ಪುತ್ರನು ಜನಿಸುವನೇ ? ಎಂದು ಪ್ರಶ್ನೆಮಾಡಿದಳು. ಆಗ ನಾನು ನಾಚಿಕೆಯಿಂದ ಮುಖ

ಮಯೋಕ್ತಾ ಜನನೀ ತತ್ರ ವ್ರೀಡಾ ನಮ್ರಮುಖೇನ ಹ ।
ವಿನೇತ್ರೋ ಭವಿತಾ ಪುತ್ರೋ ಮಾತಃ ಶಾಪಾನ್ಮಮೈವ ಹಿ ॥೬೦॥

ತಯಾ ನಿರ್ಭರ್ತ್ಸಿತಸ್ತತ್ರ ಕಠೋರವಚಸಾ ಮುನೇ ।
ಕಥಂ ಪುತ್ರ ತ್ವಯಾ ಶಪ್ತಾ ಪುತ್ರಸ್ತೇಽಂಧೋ ಭವಿಷ್ಯತಿ ॥೬೧॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ
ಚತುರ್ವಿಂಶೋಽಧ್ಯಾಯಃ.

---

ವನ್ನು ತಗ್ಗಿಸಿಕೊಂಡು, ಓ ತಾಯಿಯೇ, ನನ್ನ ಶಾಪದಿಂದಲೇ ಕುರುಡನಾದ ಮಗನು ಹುಟ್ಟುವನು ಎಂದು ಉತ್ತರವನ್ನು ಕೊಟ್ಟೆನು. ॥೫೯-೬೦॥

ನಾರದ ಮುನಿಯೇ, ಆ ನನ್ನ ಕ್ರೂರವಾದ ಮಾತಿನಿಂದ ನಮ್ಮ ತಾಯಿಯು "ಎಲೈ ಮಗನೇ, 'ನಿನಗೆ ಕುರುಡನಾದ ಮಗನು ಹುಟ್ಟುವನು' ಎಂದು ಏತಕ್ಕೆ ಶಾಪವನ್ನು ಕೊಟ್ಟೆ?" ಎಂದು ಆಕ್ಷೇಪಣೆಯನ್ನು ಮಾಡಿದಳು. ॥೬೧॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಷಷ್ಠ ಸ್ಕಂಧೇ

### || ಪಂಚವಿಂಶೋಽಧ್ಯಾಯಃ ||

### ಇಪ್ಪತ್ತೈದನೆಯ ಅಧ್ಯಾಯವು

|| ವ್ಯಾಸ ಉವಾಚ ||

**ವಾಸವೀ ಚಕಿತಾ ಜಾತಾ ಶ್ರುತ್ವಾ ಮೇ ವಾಕ್ಯಮೀದೃಶಂ ।**
**ದಾಶೇಯೀ ಮಾಮುವಾಚೇದಂ ಪುತ್ರಾರ್ಥೇ ಭೃಶಮಾತುರಾ ॥೧॥**

**ಅಂಬಾಲಿಕಾ ವಧೂರ್ಧನ್ಯಾ ಕಾಶಿರಾಜಸುತಾ ಸುತ ।**
**ಭಾರ್ಯಾ ವಿಚಿತ್ರವೀರ್ಯಸ್ಯ ವಿಧವಾ ಶೋಕಸಂಯುತಾ ॥೨॥**

**ಸರ್ವಲಕ್ಷಣಸಂಪನ್ನಾ ರೂಪಯೌವನಶಾಲಿನೀ ।**
**ತಸ್ಯಾಂ ಜನಯ ಸಂಗಂ ತ್ವಂ ಕೃತ್ವಾ ಪುತ್ರಂ ಸುಸಂಮತಂ ॥೩॥**

---

ವ್ಯಾಸಮುನಿಯು ಹೇಳಿದನು—ನಾನು ಹೇಳಿದ ಇಂತಹ ಮಾತನ್ನು ಕೇಳಿ ವಾಸವೀದೇವಿಯು ಆಶ್ಚರ್ಯಪಟ್ಟಳು. ಮತ್ತು ಆ ದಾಶಪುತ್ರಿಯು (ಬೆಸ್ತರವನ ಮಗಳು) ಪುತ್ರನಾಗಬೇಕೆಂಬ ವಿಷಯದಲ್ಲಿ ವಿಶೇಷವಾದ ಆತುರ ಉಳ್ಳವಳಾಗಿ ನನ್ನನ್ನು ಕುರಿತು ಈ ಮುಂದಿನ ಮಾತನ್ನು ಹೇಳಿದಳು. ||೧||

ಎಲೈ ಮಗನೇ, ಕಾಶಿರಾಜಪುತ್ರಿಯಾದ ಅಂಬಾಲಿಕೆಯು ಪುಣ್ಯವತಿಯು. ವಿಚಿತ್ರವೀರ್ಯನ ಹೆಂಡಿತಿಯು. ವಿಧವೆಯಾಗಿ ದುಃಖಪಡುತ್ತಿರುವಳು. ಅವಳು ಸಮಸ್ತ ಸ್ತ್ರೀಲಕ್ಷಣಗಳಿಂದ ಕೂಡಿದವಳಾಗಿ ಸುಂದರಿಯೂ ಯೌವನವತಿಯೂ ಆಗಿರುವಳು. ಅವಳಲ್ಲಿ ನೀನು ಸಂಗವನ್ನು ಮಾಡಿ ಯೋಗ್ಯನಾದ ಪುತ್ರನನ್ನು ಹುಟ್ಟಿಸು. ||೨-೩||

ನಾಂಧೋ ರಾಜ್ಯಾಧಿಕಾರೀ ಸ್ಯಾತ್ತಸ್ಮಾತ್ಪುತ್ರಂ ಮನೋಹರಂ ।
ಉತ್ಪಾದಯ ರಾಜಪುತ್ರ್ಯಾಂ ವಚನಾನ್ಮಮ ಮಾನದ ॥೪॥

ಇತ್ಯುಕ್ತೋಽಹಂ ತದಾ ಮಾತ್ರಾ ಸ್ಥಿತಸ್ತತ್ರ ಗಜಾಹ್ವಯೇ ।
ಯಾವದೃತುಮತೀ ಜಾತಾ ಕಾಶೀರಾಜಸುತಾ ಮುನೇ ॥೫॥

ಏಕಾಂತೇ ಶಯನಾಗಾರೇ ಪ್ರಾಪ್ತಾ ಸಾ ಮಮ ಸನ್ನಿಧೌ ।
ಲಜ್ಜಮಾನಾ ಸುಕೇಶಾಂತಾ ಸ್ವಶ್ವಶ್ರೂವಚನಾತ್ತದಾ ॥೬॥

ದೃಷ್ಟ್ವಾ ಮಾಂ ಜಟಿಲಂ ದಾಂತಂ ತಾಪಸಂ ರಸವರ್ಜಿತಂ ।
ಸಾ ಸ್ವೇದವದನಾ ಜಾತಾ ಪಾಂಡುರಾ ವಿಮನಾ ಭೃಶಂ ॥೭॥

ಕುಪಿತೋಽಹಂ ತದಾ ದೃಷ್ಟ್ವಾ ಕಾಮಿನೀಂ ನಿಶಿ ಸಂಗತಾಂ ।
ವೇಪಮಾನಾಂ ಸ್ಥಿತಾಂ ಪಾರ್ಶ್ವೇ ಹ್ಯಬ್ರವಂ ತಾಮಹಂ ರುಷಾ ॥೮॥

---

ಎಲೈ ಗೌರವವನ್ನು ಕೊಡತಕ್ಕ ಪುತ್ರನೇ, ಕುರುಡನು ರಾಜನ ಅಧಿಕಾರಕ್ಕೆ ಯೋಗ್ಯನಲ್ಲ. ಆದುದರಿಂದ ನನ್ನ ಮಾತಿನಿಂದ ರಾಜಪುತ್ರಿಯಲ್ಲಿ ಮನೋಹರನಾದ ಮಗನನ್ನು ಹುಟ್ಟಿಸು. ಹೀಗೆಂದು ನಮ್ಮ ತಾಯಿಯು ಹೇಳುತ್ತಲು, ಓ ನಾರದ ಮುನಿಯೇ, ಕಾಶಿರಾಜಪುತ್ರಿಯು ಋತುಮತಿಯಾಗುವವರೆಗೂ ನಾನು ಹಸ್ತಿನಪಟ್ಟಣ ದಲ್ಲಿಯೇ ಇದ್ದೆನು. ॥೪-೫॥

ಗೋಪ್ಯವಾದ ಶಯನಗೃಹದಲ್ಲಿದ್ದ ನನ್ನ ಸಮೀಪಕ್ಕೆ ಅಂಬಾಲಿಕೆಯು ತನ್ನ ಅತ್ತೆಯ ಮಾತಿನಂತೆ ಬಂದು ನಾಚಿಕೆಯಿಂದ ಕೂಡಿ ಜಟೆಯನ್ನು ಧರಿಸಿ ಇಂದ್ರಿಯ ನಿಗ್ರಹ ಉಳ್ಳವನಾಗಿ ತಪಸ್ಸುಮಾಡುತ್ತಿರುವ ಶೃಂಗಾರರಸವಿಹೀನನಾದ ನನ್ನನ್ನು ನೋಡಿ ಆಕೆಯು ನನ್ನಲ್ಲಿ ಮನಸ್ಸಿಲ್ಲದೆ ಮೈಯೆಲ್ಲವೂ ಬೆಳ್ಳಗಾಗಿ ಮುಖದಲ್ಲಿ ಬೆವರುಳ್ಳವಳಾದಳು. ॥೬-೭॥

ಆ ರಾತ್ರಿಯಲ್ಲಿ ಹಾಗೆ ಬಂದ ಆ ಸ್ತ್ರೀಯನ್ನು ನೋಡಿ ನಾನು ಕೋಪವುಳ್ಳವನಾ ದೆನು. ನನ್ನ ಪಕ್ಕದಲ್ಲಿಯೇ ನಿಂತು ನಡುಗುತ್ತಿರುವ ಆಕೆಯನ್ನು ಕುರಿತು ಕೋಪ ದಿಂದ ಹೇಳಿದೆನು. ॥೮॥

ದೃಷ್ಟ್ವಾ ಮಾಂ ಯದಿ ಗರ್ವೇಣ ಪಾಂಡುವರ್ಣಾ ಸಮಾವೃತಾ ।
ಅತಸ್ತೇ ತನಯಃ ಪಾಂಡುರ್ಭವಿಷ್ಯತಿ ಸುಮಧ್ಯಮೇ ॥೯॥

ಇತ್ಯುಕ್ತ್ವಾ ನಿಶಿ ತತ್ರೈವ ಸ್ಥಿತೋಽಂಬಾಲಿಕಯಾ ಯುತಃ ।
ಭುಕ್ತ್ವಾ ತಾಂ ನಿಶಿ ನಿರ್ಯಾತಃ ಸ್ಥಾನಮಾಪೃಚ್ಛ್ಯ ಮಾತರಂ ॥೧೦॥

ತತಸ್ತಾಭ್ಯಾಂ ಸುತೌ ಕಾಲೇ ಪ್ರಸೂತಾವಂಧಪಾಂಡುರೌ ।
ಧೃತರಾಷ್ಟ್ರಶ್ಚ ಪಾಂಡುಶ್ಚ ಪ್ರಥಿತೌ ಸಂಬಭೂವತುಃ ॥೧೧॥

ಮಾತಾ ಮೇ ವಿಮನಾ ಜಾತಾ ತಾದೃಶೌ ವೀಕ್ಷ್ಯ ತೌ ಸುತೌ ।
ತತಃ ಸಂವತ್ಸರಸ್ಯಾಂತೇ ಮಾಮಾಹೂಯ ತದಾಽಬ್ರವೀತ್ ॥೧೨॥

ದ್ವೈಪಾಯನ ಸುತೌ ಜಾತೌ ರಾಜ್ಯಯೋಗ್ಯೌ ನ ತಾದೃಶೌ ।
ಅನ್ಯಂ ಮನೋಹರಂ ಪುತ್ರಂ ಸಮುತ್ಪಾದಯ ಮೇ ಪ್ರಿಯಂ ॥೧೩॥

---

ಎಲೈ ಸುಂದರವಾದ ನಡುವುಳ್ಳ ಅಂಬಾಲಿಕೆಯೇ, ನಿನಗೆ ಅನುರೂಪನಲ್ಲದ ನನ್ನನ್ನು ನೋಡಿ ನೀನು ಸೌಂದರ್ಯ ಗರ್ವದಿಂದ ಪಾಂಡು (ಬಿಳುಪು) ವರ್ಣವುಳ್ಳವಳಾದುದರಿಂದ ನಿನ್ನ ಮಗನೂ ಪಾಂಡುವರ್ಣವುಳ್ಳವನಾಗುವನು. ಎಂದು ಹೇಳಿ ಆಕೆಯೊಡನೆ ಆ ರಾತ್ರಿ ಅಲ್ಲಿಯೇ ಇದ್ದು ಅವಳನ್ನನುಭವಿಸಿ ಬಳಿಕ ತಾಯಿಗೆ ಹೇಳಿ ನನ್ನಾಶ್ರಮಕ್ಕೆ ಹೋರಟುಹೋದೆನು. ||೯-೧೦||

ಆ ಮೇಲೆ ಅವರಿಬ್ಬರೂ ಮಕ್ಕಳನ್ನು ಹೆತ್ತರು. ಕುರುಡನಿಗೆ ಧೃತರಾಷ್ಟ್ರನೆಂದೂ ಬೆಳ್ಳಗಿದ್ದವನಿಗೆ ಪಾಂಡುವೆಂದೂ ಪ್ರಸಿದ್ಧವಾದ ಹೆಸರಾಯಿತು. ||೧೧||

ಆ ರೀತಿಯಾದ ಆ ಇಬ್ಬರು ಮಕ್ಕಳನ್ನೂ ನೋಡಿ ನಮ್ಮ ತಾಯಿಯು ಉತ್ಸಾಹವಿಲ್ಲದ ಮನಸ್ಸುಳ್ಳವಳಾದಳು. ಆ ಮೇಲೆ ಒಂದು ವರ್ಷದ ಕೊನೆಯಲ್ಲಿ ನನ್ನನ್ನು ಕರೆಸಿಕೊಂಡು ಹೇಳಿದಳು. ಏನೆಂದರೆ, ||೧೨||

ಎಲೈ ದ್ವೈಪಾಯನನೇ, ಹುಟ್ಟಿದ ಇಬ್ಬರು ಮಕ್ಕಳೂ ರಾಜರಾಗಲು ಯೋಗ್ಯರಾಗಿಲ್ಲ. ಆದುದರಿಂದ ನನಗೆ ಪ್ರೀತಿಪಾತ್ರನಾದ ಮತ್ತೊಬ್ಬ ಸುಂದರನಾದ ಮಗನನ್ನು ಹುಟ್ಟಿಸು. ||೧೩||

ತಥೇತಿ ಸಾ ಮಯಾ ಪ್ರೋಕ್ತಾ ಮುದಿತಾ ಜನನೀ ತದಾ ।
ಅಂಬಿಕಾಂ ಪ್ರಾರ್ಥಯಾಮಾಸ ಸುತಾರ್ಥೇ ಕಾಲ ಆಗತೇ ॥೧೪॥

ಪುತ್ರಿ ವ್ಯಾಸಂ ಸಮಾಲಿಂಗ್ಯ ಪುತ್ರಮುತ್ಪಾದಯಾಽದ್ಭುತಂ ।
ಕುರು ವಂಶಸ್ಯ ಕರ್ತಾರಂ ರಾಜ್ಯಯೋಗ್ಯಂ ವರಾನನೇ ॥೧೫॥

ವಧೂರ್ಲಜ್ಜಾನ್ವಿತಾ ಕಿಂಚಿನ್ನೋವಾಚ ವಚನಂ ತದಾ।
ಗತೋಽಹಂ ಶಯನಾಗಾರೇ ಮಾತುಸ್ತದ್ವಚನಾನ್ನಿಶಿ ॥೧೬॥

ದಾಸೀ ವಿಚಿತ್ರವೀರ್ಯಸ್ಯ ರೂಪಯೌವನಸಂಯುತಾ ।
ಪ್ರೇಷಿತಾಽಂಬಿಕಯಾ ತ್ವತ್ರ ವಿಚಿತ್ರಾಭರಣಾಂಬರಾ ॥೧೭॥

ಚಂದನಾರಕ್ತದೇಹಾ ಸಾ ಪುಷ್ಪಮಾಲಾದಿಭೂಷಿತಾ ।
ಆಯಾತಾ ಹಾವಸಂಯುಕ್ತಾ ಸುಕೇಶೀ ಹಂಸಗಾಮಿನೀ ॥೧೮॥

---

ಹಾಗೆಯೇ ಆಗಲೆಂದು ನಾನು ಒಪ್ಪಿಕೊಂಡೆನು. ಆ ನನ್ನ ತಾಯಿಯು ಸಂತೋಷಪಟ್ಟು, ಋತುಸಮಯವು ಪ್ರಾಪ್ತವಾಗುತ್ತಲು ಪುತ್ರನನ್ನು ಪಡೆವುದಕ್ಕಾಗಿ ಅಂಬಿಕೆಯನ್ನು ಹೀಗೆ ಪ್ರಾರ್ಥಿಸಿದಳು. ॥೧೪॥

ಎಲೈ ಸುಂದರಮುಖಿಯಾದ ಮಗಳೇ, ವ್ಯಾಸಮಹರ್ಷಿಯನ್ನು ಆಲಿಂಗನೆ ಮಾಡಿಕೊಂಡು ರಾಜ್ಯಕ್ಕೆ ಯೋಗ್ಯನೂ ಕುರುವಂಶವನ್ನು ಅಭಿವೃದ್ಧಿಮಾಡತಕ್ಕವನೂ, ಸುಗುಣಗಳಿಂದ ಆಶ್ಚರ್ಯಕರನೂ ಆಗುವಂತಹ ಪುತ್ರನನ್ನು ಪಡೆ. ಎಂದು ಹೇಳಿದಳು. ॥೧೫॥

ಆಗ ಅಂಬಿಕೆಯು ನಾಚಿಕೆಯಿಂದ ಕೂಡಿ ಯಾವ ಮಾತನ್ನೂ ಆಡಲಿಲ್ಲ. ನಾನು ಆ ತಾಯಿಯ ಮಾತಿನಂತೆ ರಾತ್ರಿ ಮಲಗುವ ಮನೆಗೆ ಹೋದೆನು. ॥೧೬॥

ಅಂಬಿಕೆಯು ರೂಪಯೌವನಗಳಿಂದ ಕೂಡಿದ ವಿಚಿತ್ರವೀರ್ಯನ ದಾಸಿಗೆ ವಿವಿಧವಾದ ವಸ್ತ್ರಾಭರಣಗಳಿಂದಲೂ ಗಂಧಮಾಲ್ಯಾದಿಗಳಿಂದಲೂ ಅಲಂಕರಿಸಿ, ಆವಳನ್ನು ನನ್ನ ಬಳಿಗೆ ಕಳುಹಿಸಿದಳು. ಆ ದಾಸಿಯು ಹಂಸದಂತೆ ನಡೆಯುತ್ತಾ ವಿಲಾಸದಿಂದ ಬಂದು ಪ್ರೀತಿಯಿಂದ ನನ್ನನ್ನು ಮಂಚದ ಮೇಲೆ ಕುಳ್ಳಿರಿಸಿದಳು. ॥೧೭-೧೮॥

ಪರ್ಯಂಕೇ ಮಾಂ ಸಮಾವೇಶ್ಯ ಸಂಸ್ಥಿತಾ ಪ್ರೇಮಸಂಯುತಾ ।
ಪ್ರಸನ್ನೋಽಹಂ ತದಾ ತಸ್ಯಾ ವಿಲಾಸೇನಾಽಭವಂ ಮುನೇ ॥೧೯॥

ರಾತ್ರೌ ಸಂಕ್ರೀಡಿತಂ ಪ್ರೇಮ್ಣಾ ತಯಾ ಸಹ ಮಯಾ ಭೃಶಂ ।
ವರೋ ದತ್ತಃ ಪುನಸ್ತಸ್ಯೈ ಪ್ರಸನ್ನೇನ ತು ನಾರದ ॥೨೦॥

ಸುಭಗೇ ಭವಿತಾ ಪುತ್ರಃ ಸರ್ವಲಕ್ಷಣಸಂಯುತಃ ।
ಸುರೂಪಃ ಸರ್ವಧರ್ಮಜ್ಞಃ ಸತ್ಯವಾದೀ ಶಮೇ ರತಃ ॥೨೧॥

ಸ ತದಾ ವಿದುರೋ ಜಾತಸ್ತ್ರಯಃ ಪುತ್ರಾ ಮಮಾಽಭವನ್ ।
ಮಾಯಾ ವೃದ್ಧಿಂ ಗತಾ ಸಾಧೋ ಪರಕ್ಷೇತ್ರೋದ್ಭವೇ ಮಮ ॥೨೨॥

ವಿಸ್ಮೃತಃ ಶುಕಸಂಬಂಧೀ ವಿರಹಃ ಶೋಕಕಾರಣಂ ।
ದೃಷ್ಟ್ವಾ ತ್ರೀನ್ಸ್ವಸುತಾನ್ಕಾಮಂ ವೀರ್ಯವಾನ್ವೀರ್ಯಸಂಮತಾನ್ ॥೨೩॥

---

ಓ ನಾರದಮುನಿಯೇ, ಅವಳ ವಿಲಾಸದಿಂದ ನಾನು ಸಂತೋಷವನ್ನು ಹೊಂದಿ ಪ್ರೀತಿಯಿಂದ ಅವಳೊಡನೆ ಆ ರಾತ್ರಿಯಲ್ಲಿ ವಿಶೇಷವಾಗಿ ಕ್ರೀಡಿಸಿದೆನು. ಇದರಿಂದ ಸಂತೋಷಗೊಂಡ ನಾನು ಅವಳಿಗೆ ವರವನ್ನೂ ಕೊಟ್ಟೆನು. ||೧೯-೨೦||

ಎಲೈ ಸೌಭಾಗ್ಯವತಿಯೇ, ನಿನಗೆ ಸಮಸ್ತ ಶುಭಲಕ್ಷಣಗಳಿಂದ ಕೂಡಿದ ರೂಪವಂತನೂ ಸಮಸ್ತ ಧರ್ಮಗಳನ್ನೂ ತಿಳಿದವನೂ ಸತ್ಯವಾದ ಮಾತನಾಡುವವನೂ ಶಾಂತನೂ ಆದ ಮಗನು ಹುಟ್ಟುವನು. ಎಂಬುದಾಗಿ ನಾನು ವರವನ್ನು ಕೊಟ್ಟೆನು. ||೨೧||

ಆಗ ವಿದುರನು ಹುಟ್ಟಿದನು. ಹೀಗೆ ನನ್ನಿಂದ ಪರಕ್ಷೇತ್ರದಲ್ಲಿ ಮೂರು ಜನ ಮಕ್ಕಳಾದರು. ಆ ಮಕ್ಕಳಲ್ಲಿ ನನ್ನ ಮಕ್ಕಳು ಎಂಬ ಅಭಿಮಾನ ರೂಪವಾದ ಮಾಯೆಯು ನನ್ನಲ್ಲಿ ವೃದ್ಧಿಯಾಯಿತು. ದುಃಖಕ್ಕೆ ಕಾರಣವಾಗಿದ್ದ ಶುಕನ ಸಂಬಂಧವಾದ ಅಗಲಿಕೆಯೂ ಮರೆತುಹೋಯಿತು. ಪರಾಕ್ರಮಶಾಲಿಗಳಿಂದಲೂ ಅಭಿನಂದನೀಯರಾದ ಮೂವರು ಮಕ್ಕಳನ್ನು ನೋಡಿ ನಾನೂ ಪರಾಕ್ರಮಿಯಂತಾದೆನು. ||೨೨-೨೩||

**ಮಯಾ ಬಲವತೀ ಬ್ರಹ್ಮನ್ದುಸ್ತ್ಯಜಾ ಹ್ಯಕೃತಾತ್ಮಭಿಃ ।**
**ಅರೂಪಾ ಚ ನಿರಾಲಂಬಾ ಜ್ಞಾನಿನಾಮಪಿ ಮೋಹಿನೀ ॥೨೪॥**

**ಮಾತರಿ ಸ್ನೇಹಸಂಬದ್ಧಂ ತಥಾ ಪುತ್ರೇಷು ಸಂವೃತಂ ।**
**ನ ಮೇ ಚಿತ್ತಂ ವನೇ ಶಾಂತಿಮಗಾನ್ಮುನಿವರೋತ್ತಮ ॥೨೫॥**

**ದೋಲಾರೂಪಂ ಮನೋ ಜಾತಂ ಕದಾಚಿದ್ಧಸ್ತಿನಾಪುರೇ ।**
**ಪುನಃ ಸರಸ್ವತೀತೀರೇ ನ ಚೈಕತ್ರ ವ್ಯವಸ್ಥಿತಿಃ ॥೨೬॥**

**ಕದಾಚಿಚ್ಚಿಂತಯನ್ ಜ್ಞಾನಂ ಮಾನಸೇ ಪ್ರತಿಭಾತಿ ವೈ ।**
**ಕೇಽಮೀ ಪುತ್ರಾಃ ಕ್ವ ಮೋಹೋಽಯಂ ನ ಶ್ರಾದ್ಧಾರ್ಹಾ ಮೃತಸ್ಯ ಮೇ॥೨೭॥**

**ವ್ಯಭಿಚಾರೋದ್ಭವಾಃ ಕಿಂ ಮೇ ಸುಖದಾಃ ಸ್ಯುಃ ಸುತಾಃ ಕಿಲ ।**
**ಮಾಯಾ ಬಲವತೀ ಮೋಹಂ ವಿತನೋತಿ ಹಿ ಮಾನಸೇ ॥೨೮॥**

---

ಓ ಬ್ರಹ್ಮಪುತ್ರನೇ, ಮಾಯೆಯೆಂಬುದು ಅತ್ಯಂತ ಪ್ರಬಲವಾದುದು. ಪುಣ್ಯಹೀನರು ಇದರಿಂದ ಬಿಡುಗಡೆಯನ್ನು ಹೊಂದಲಾರರು! ಇದು ಆಕಾರವಿಲ್ಲದುದು, ಆಶ್ರಯವಿಲ್ಲದುದು, ಜ್ಞಾನಿಗಳನ್ನೂ ಕೂಡ ಮೋಹಗೊಳಿಸುವುದು! ॥೨೪॥

ಆ ಮಾಯೆಯಿಂದ ತಾಯಿಯಲ್ಲಿ ಪ್ರೀತಿಯುಂಟಾಯಿತು. ಆ ಪ್ರೀತಿಯು ಮಕ್ಕಳಿಗೂ ವ್ಯಾಪಿಸಿತು. ನನ್ನ ಮನಸ್ಸು ಕಾಡಿನಲ್ಲಿದ್ದರೂ ಶಾಂತಿಯನ್ನು ಹೊಂದಲಿಲ್ಲ. ಎಲೈ ಮುನಿಶ್ರೇಷ್ಠನೇ ನನ್ನ ಮನಸ್ಸು ಉಯ್ಯಾಲೆಯಂತೆ ಒಂದು ಕಾಲದಲ್ಲಿ ಹಸ್ತಿನಾಪಟ್ಟಣದಲ್ಲಿಯೂ ಮತ್ತೊಂದು ಕಾಲದಲ್ಲಿ ಸರಸ್ವತೀನದಿಯ ತೀರದ ನನ್ನ ಆಶ್ರಮದಲ್ಲಿಯೂ, ಇರುತ್ತಾ ಒಂದೆಡೆ ನಿಲ್ಲದೆಹೋಯಿತು! ॥೨೫-೨೬॥

ಹೀಗಿರುವಲ್ಲಿ ಒಂದೊಂದು ಕಾಲದಲ್ಲಿ ಈ ಅಜ್ಞಾನಸ್ವರೂಪವನ್ನು ವಿಚಾರ ಮಾಡುತ್ತಾ ನನ್ನ ಮನಸ್ಸಿನಲ್ಲಿ ಈ ಮಕ್ಕಳಾರು? ಈ ಮೋಹವೆಲ್ಲಿಂದ ಬಂದಿತು? ನಾನು ಮರಣಹೊಂದಿದರೆ ಈ ಮಕ್ಕಳು ನನಗೆ ಶ್ರಾದ್ಧಾದಿಗಳನ್ನು ಮಾಡಲೂ ಅರ್ಹರಲ್ಲವು. ವ್ಯಭಿಚಾರದಿಂದ ಹುಟ್ಟಿದ ಈ ಮಕ್ಕಳು ನನಗೆ ಏನು ಸುಖವನ್ನುಂಟು ಮಾಡಬಲ್ಲರು? ಎಂದು ತಿಳಿವಳಿಕೆಯುಂಟಾಗುವುದು! ಆದರೂ ಬಲವಾದ ಈ ಮಾಯೆಯು ಮಾತ್ರ ನನ್ನ ಮನಸ್ಸಿನಲ್ಲಿ ಅಜ್ಞಾನವನ್ನು ವಿಸ್ತರಿಸುತ್ತಲೇ ಇರುವುದು! ॥೨೭-೨೮॥

ಜಾನನ್ಮೋಹಾಂಧಕೂಪೇಽಸ್ಮಿನ್ಪತಿತೋಽಹಂ ಮೃಷಾ ಮುನೇ ।
ಇತ್ಯಕುರ್ವಂ ರಹಸ್ತಾಪಂ ಕದಾಚಿತ್ಸುಸಮಾಹಿತಃ ॥೨೯॥

ರಾಜ್ಯಂ ಪ್ರಾಪ ತತಃ ಪಾಂಡುರ್ಬಲವಾನ್ಭೀಷ್ಮಸಂಮತಃ ।
ತದಾ ಮಮ ಮನೋ ಜಾತಂ ಪ್ರಸನ್ನಂ ಸುತಕಾರಣಾತ್ ॥೩೦॥

ಕುಂತೀ ಮಾದ್ರೀ ಸುರೂಪೇ ದ್ವೇ ಭಾರ್ಯೇ ತಸ್ಯ ಬಭೂವತುಃ ।
ಶೂರಸೇನಸುತಾ ಕುಂತೀ ಮದ್ರರಾಜಸುತಾ ಪರಾ ॥೩೧॥

ಸ ಶಾಪಂ ದ್ವಿಜತಃ ಪ್ರಾಪ್ಯ ಕಾಮಿನೀದ್ವಯಸಂಯುತಃ ।
ಪಾಂಡುರ್ನಿರ್ವೇದಮಾಪನ್ನಸ್ತ್ಯಕ್ತ್ವಾ ರಾಜ್ಯಂ ವನಂ ಗತಃ ॥೩೨॥

ತದಾ ಮಾಮಾವಿಶಚ್ಛೋಕಃ ಶ್ರುತ್ವಾ ಪುತ್ರಂ ವನೇ ಸ್ಥಿತಂ ।
ಗತೋಽಹಂ ತತ್ರ ಯತ್ರಾಽಸೌ ಭಾರ್ಯಾಭ್ಯಾಂ ಸಹ ಸಂಸ್ಥಿತಃ ॥೩೩॥

ತಮಾಶ್ವಾಸ್ಯ ವನೇ ಪಾಂಡುಂ ಪುನಃ ಪ್ರಾಪ್ತೋ ಗಜಾಹ್ವಯೇ ।
ಧೃತರಾಷ್ಟ್ರಂ ಸಮಾಭಾಷ್ಯ ಹ್ಯಗಮಂ ಬ್ರಹ್ಮಜಾತಟೇ ॥೩೪॥

---

ಓ ನಾರದಮುನಿಯೇ, ನಾನು ವಿವೇಕಿಯಾಗಿದ್ದರೂ ಕೂಡ ಅಜ್ಞಾನವೆಂಬ ಕತ್ತಲೆಯ ಬಾವಿಯಲ್ಲಿ ವ್ಯರ್ಥವಾಗಿ ಬಿದ್ದಿರುವೆನು! ಹೀಗೆಂದು ಒಂದಾನೊಂದು ಕಾಲದಲ್ಲಿ ಏಕಾಗ್ರಚಿತ್ತದಿಂದ ವಿಚಾರಮಾಡಿ ಗೋಪ್ಯವಾಗಿ ಸಂತಾಪಪಟ್ಟೆನು.॥೨೯॥

ಆಮೇಲೆ ಭೀಷ್ಮನ ಸಮ್ಮತಿಯಂತೆ ಬಲಿಷ್ಠನಾದ ಪಾಂಡುವು ರಾಜ್ಯವನ್ನು ಪಡೆದನು. ಆಗ ಮಗನ ಅಭಿವೃದ್ಧಿಯನ್ನು ಕೇಳಿ ನನ್ನ ಮನಸ್ಸು ಸಂತೋಷವನ್ನು ಹೊಂದಿತು! ॥೩೦॥

ಆ ಪಾಂಡುವಿಗೆ ಕುಂತೀ, ಮಾದ್ರೀ ಎಂಬಿಬ್ಬರು ಪತ್ನಿಯರಾದರು. ಶೂರಸೇನ ರಾಜನ ಮಗಳೇ ಕುಂತಿಯು; ಮದ್ರರಾಜನ ಮಗಳು ಮಾದ್ರಿಯು. ಆ ಪಾಂಡುವು ಸ್ತ್ರೀಸಂಭೋಗಮಾಡಿದರೆ ತನಗೆ ಮರಣವುಂಟಾಗುವುದು. ಹೀಗೆಂಬ ಬ್ರಾಹ್ಮಣನ ಶಾಪದಿಂದ ವೈರಾಗ್ಯವನ್ನು ಹೊಂದಿ ರಾಜ್ಯವನ್ನು ಬಿಟ್ಟು, ತನ್ನಿಬ್ಬರು ಪತ್ನಿಯರೊಡನೆ ಕಾಡಿಗೆ ಹೋದನು. ॥೩೧-೩೨॥

ಆ ಮೇಲೆ ಪುತ್ರನು ಕಾಡಿನಲ್ಲಿರುವನೆಂದು ಕೇಳಿದ ನನಗೆ ದುಃಖವು ಪ್ರಾಪ್ತವಾಯಿತು. ಆಗ ನಾನು ಪತ್ನಿಯರ ಜತೆಯಲ್ಲಿ ಪಾಂಡುವು ಎಲ್ಲಿದ್ದನೋ ಅಲ್ಲಿಗೆ

ಕ್ಷೇತ್ರಜಾನ್ಪಂಚಪುತ್ರಾನ್ಸ ಸಮುತ್ಪಾದ್ಯ ವನಾಶ್ರಮೇ ।
ಧರ್ಮತೋ ವಾಯುತಃ ಶಕ್ರಾದಶ್ವಿಭ್ಯಾಂ ಪಂಚ ಪಾಂಡವಾನ್॥೩೫॥

ಯುಧಿಷ್ಠಿರೋ ಭೀಮಸೇನಸ್ತಥೈವಾಽರ್ಜುನ ಇತ್ಯಪಿ ।
ಕುಂತೀಪುತ್ರಾಃ ಸಮಾಖ್ಯಾತಾ ಧರ್ಮಾನಿಲಸುರೇಶಜಾಃ ॥೩೬॥

ನಕುಲಃ ಸಹದೇವಶ್ಚ ಮದ್ರರಾಜಸುತಾಸುತೌ ।
ಕದಾಚಿತ್ತು ರಹೋ ಮಾದ್ರೀಂ ಸಮಾಲಿಂಗ್ಯ ಮಹೀಪತಿಃ ॥೩೭॥

ಮೃತಃ ಶಾಪಾತ್ತು ಮುನಿಭಿಃ ಸಂಸ್ಕೃತೋ ಹುತಭುಙ್ಮುಖೇ ।
ಮಾದ್ರೀ ತತ್ರ ಸತೀ ಭೂತ್ವಾ ಪ್ರವಿಷ್ಟಾ ಪತಿನಾ ಸಹ ॥೩೮॥

ಸ್ಥಿತಾ ಪುತ್ರಯುತಾ ಕುಂತೀ ಜ್ವಲಿತೇ ಜಾತವೇದಸಿ ।
ಮುನಯಃ ಸುತಸಂಯುಕ್ತಾಂ ಶೂರಸೇನ ಸುತಾಂ ತದಾ ॥೩೯॥

ದುಃಖಿತಾಂ ಪತಿಹೀನಾಂ ತಾಮಾನಿನ್ಯುರ್ಗಜಸಾಹ್ವಯೇ ।
ಸಮರ್ಪಿತಾಽಥ ಭೀಷ್ಮಾಯ ವಿದುರಾಯ ಮಹಾತ್ಮನೇ ॥೪೦॥

---

ಹೋದೆನು. ಅಲ್ಲಿ ಪಾಂಡುವನ್ನು ಸಂತೈಸಿ ಮತ್ತೆ ಹಸ್ತಿನಾಪಟ್ಟಣಕ್ಕೆ ಹೋಗಿ ಧೃತರಾಷ್ಟ್ರನನ್ನು ಕುರಿತು ಯೋಗಕ್ಷೇಮಗಳನ್ನು ತಿಳಿದು ಸರಸ್ವತೀನದಿಯ ತೀರಕ್ಕೆ ಬಂದೆನು. ||೩೩-೩೪||

ಬಳಿಕ ಆ ಪಾಂಡುವು, ಧರ್ಮ, ವಾಯು, ಇಂದ್ರ, ಅಶ್ವಿನೀದೇವತೆಗಳು ಇವರಿಂದ ಕ್ಷೇತ್ರಜರಾದ ಪಂಚಪಾಂಡವರೆಂಬ ಪುತ್ರರನ್ನು ಪಡೆದನು. ಯುಧಿಷ್ಠಿರ ಭೀಮಸೇನ ಅರ್ಜುನ ಇವರು ಕುಂತಿಯ ಮಕ್ಕಳು; ನಕುಲ, ಸಹದೇವ, ಇವರಿಬ್ಬರೂ ಮಾದ್ರಿಯ ಮಕ್ಕಳು. ||೩೫-೩೬||

ಪಾಂಡುರಾಜನು ಒಂದಾನೊಂದು ದಿನ ರಹಸ್ಯವಾಗಿ ಮಾದ್ರಿಯಲ್ಲಿ ಕೂಡಲು, ಹಿಂದೆ ಬಂದಿದ್ದ ಶಾಪದಿಂದ ಮರಣಹೊಂದಿದನು. ಮುನಿಗಳು ಅವನಿಗೆ ಅಗ್ನಿಸಂಸ್ಕಾರವನ್ನು ಮಾಡಿಸಿದರು. ಅಗ್ನಿಯು ಉರಿಯುತ್ತಿರಲು ಮಾದ್ರಿಯು ಪತಿವ್ರತೆಯಾಗಿ ಪತಿಯೊಡನೆ ಸಹಗಮನವನ್ನು ಮಾಡಿದಳು. ಕುಂತಿಯು ಮಕ್ಕಳನ್ನು ಕಾಪಾಡಲು ಅವರೊಡನೆ ಇದ್ದಳು. ||೩೭-೩೮||

ಆಗ ಮುನಿಗಳು ಮಕ್ಕಳೊಡನೆ ಕೂಡಿ ಪತಿಹೀನಳಾಗಿ ದುಃಖ ಪಡುತ್ತಿರುವ

ಶ್ರುತ್ವಾಽಹಂ ಸುಖದುಃಖಾಭ್ಯಾಂ ಪೀಡಿತಸ್ತು ಪರಾತ್ಮಭಿಃ ।
ಭೀಷ್ಮೇಣ ಪಾಲಿತಾಃ ಪುತ್ರಾಃ ಪಾಂಡೋರಿತಿ ವಿಚಿಂತ್ಯ ತೇ ॥೪೧॥

ವಿದುರೇಣ ತಥಾ ಪ್ರೀತ್ಯಾ ಧೃತರಾಷ್ಟ್ರೇಣ ಧೀಮತಾ ।
ದುರ್ಯೋಧನಾದಯಸ್ತಸ್ಯ ಪುತ್ರಾ ಯೇ ಕ್ರೂರಮಾನಸಾಃ ॥೪೨॥

ಏಕತ್ರ ಸ್ಥಿತಿಮಾಪನ್ನಾ ವಿರೋಧಂ ಚಕ್ರುರದ್ಭುತಂ ।
ದ್ರೋಣಾಚಾರ್ಯಸ್ತು ಸಂಪ್ರಾಪ್ತಸ್ತತ್ರ ಭೀಷ್ಮೇಣ ಮಾನಿತಃ ॥೪೩॥

ಅಧ್ಯಾಪನಾಯ ಪುತ್ರಾಣಾಂ ಪುರೇ ತಸ್ಮಿನ್ನಿವಾಸಿತಃ ।
ಕರ್ಣಃ ಕುಂತ್ಯಾ ಪರಿತ್ಯಕ್ತೋ ಜಾತಮಾತ್ರಃ ಶಿಶುರ್ಯದಾ ॥೪೪॥

ಸೂತೇನ ಪಾಲಿತೋ ನದ್ಯಾಂ ಪ್ರಾಪ್ತಶ್ಚಾಧಿರಥೇನ ಹ ।
ದುರ್ಯೋಧನಪ್ರಿಯಶ್ಚಾಽಭೂತ್ಕರ್ಣಃ ಶೂತರತಮಸ್ತಥಾ ॥೪೫॥

---

ಶೂರಸೇನರಾಜನ ಮಗಳಾದ ಕುಂತಿಯನ್ನು ಹಸ್ತಿನಾಪಟ್ಟಣಕ್ಕೆ ಕರೆದುಕೊಂಡು ಬಂದು, ಮಹಾತ್ಮರಾದ ಭೀಷ್ಮವಿದುರರ ವಶದಲ್ಲಿ ಬಿಟ್ಟರು. ॥೩೯-೪೦॥

ನಾನು ಈ ಮಾತನ್ನು ಕೇಳಿ ಪರರಶರೀರಕ್ಕೆ ಉಂಟಾದ ಸುಖದುಃಖಗಳಿಂದ ನಾನೂ ಸುಖದುಃಖಗಳನ್ನನುಭವಿಸಿದೆನು! ಇದೂ ಮಾಯೆಯೇ! ಭೀಷ್ಮನೂ, ವಿದುರನೂ, ಧೃತರಾಷ್ಟ್ರನೂ, ಪಾಂಡುರಾಜನ ಮಕ್ಕಳನ್ನು ಕಾಪಾಡಿದರು. ॥೪೧॥

ಆದರೆ ಕ್ರೂರವಾದ ಮನಸ್ಸುಳ್ಳವರಾದ ಧೃತರಾಷ್ಟ್ರನ ಮಕ್ಕಳಾದ ದುರ್ಯೋಧ ನಾದಿಗಳು ಮಾತ್ರ ಪಾಂಡುಪುತ್ರರೊಡನೆ ಒಂದೇ ಕಡೆಯಲ್ಲಿದ್ದು, ವಿಶೇಷವಾಗಿ ಆಶ್ಚರ್ಯಕರವಾಗುವಂತೆ ದ್ವೇಷವನ್ನು ಹೆಚ್ಚಿಸಿಕೊಳ್ಳುತ್ತಾ ಬಂದರು. ॥೪೨॥

ಹೀಗಿರಲು ಅಲ್ಲಿಗೆ ದ್ರೋಣಾಚಾರ್ಯನು ಬಂದನು. ಭೀಷ್ಮನು ಅವನಿಗೆ ಮರ್ಯಾದೆಯನ್ನು ಮಾಡಿ ಮಕ್ಕಳುಗಳ ಧನುರ್ವಿದ್ಯಾಭ್ಯಾಸಕ್ಕೋಸ್ಕರ ಆ ಪಟ್ಟಣ ದಲ್ಲಿಯೇ ಅವನನ್ನಿಟ್ಟುಕೊಂಡನು. ॥೪೩॥

ಕನ್ಯಾವಸ್ಥೆಯಲ್ಲಿದ್ದ ಕುಂತಿಯು ಸೂರ್ಯನಿಂದ ಪಡೆದಿದ್ದ ಹಿರಿಯ ಮಗನನ್ನು ಹುಟ್ಟಿದೊಡನೆಯೇ ಶಿಶುವಾಗಿದ್ದಾಗಲೇ ಗಂಗಾನದಿಯಲ್ಲಿ ಹಾಕಿದಳು. ಆ ಕರ್ಣ ನೆಂಬ ಶಿಶುವನ್ನು ಅಧಿರಥನೆಂಬ ಸೂತನು ಆ ಗಂಗಾನದಿಯಲ್ಲಿ ಪಡೆದು ಸಾಕಿದನು.

ಪರಸ್ಪರಂ ವಿರೋಧೋಽಭೂದ್ಭೀಮದುರ್ಯೋಧನಾದಿಷು ।
ಧೃತರಾಷ್ಟ್ರಸ್ತು ಸಂಚಿಂತ್ಯ ಕ್ಲೇಶಂ ಪುತ್ರೇಷು ತೇಷು ಚ ॥೪೬॥

ನಿವಾಸಂ ಕಲ್ಪಯಾಮಾಸ ಪಾಂಡವಾನಾಂ ಮಹಾತ್ಮನಾಂ ।
ವಿರೋಧಶಮನಾಯೈವ ನಗರೇ ವಾರಣಾವತೇ ॥೪೭॥

ದುರ್ಯೋಧನೇನ ತತ್ರೈವ ದ್ರೋಹಾಜ್ಜತುಗೃಹಾಣಿ ವೈ ।
ಕಾರಿತಾನಿ ಚ ದಿವ್ಯಾನಿ ಪ್ರೇಷ್ಯ ಮಿತ್ರಂ ಪುರೋಚನಂ ॥೪೮॥

ಶ್ರುತ್ವಾ ಜತುಗೃಹೇ ದಗ್ಧಾನ್ಪಾಂಡವಾನ್ಪೃಥಯಾ ಯುತಾನ್ ।
ಪೌತ್ರಭಾವಾನ್ಮುನಿಶ್ರೇಷ್ಠ ಮಗ್ನೋಽಹಂ ವ್ಯಸನಾರ್ಣವೇ ॥೪೯॥

ಶೋಕಾತುರೋ ಭೃಶಂ ಶೂನ್ಯೇ ವನೇ ಪಶ್ಯನ್ನಹರ್ನಿಶಂ ।
ದೃಷ್ಟ್ವಾ ಮಯೈಕಚಕ್ರಾಯಾಂ ಪಾಂಡವಾ ದುಃಖಕರ್ಶಿತಾಃ ॥೫೦॥

---

ಅತ್ಯಂತ ಶೂರನಾದ ಆ ಕರ್ಣನು ದುರ್ಯೋಧನನಲ್ಲಿ ಆಶ್ರಯವನ್ನು ಪಡೆದು ಅವನಿಗೆ ಅತ್ಯಂತ ಪ್ರೀತಿಪಾತ್ರನಾಗಿದ್ದನು. ॥೪೪-೪೫॥

ಹೀಗೆ ಒಟ್ಟಿಗೆ ಇರುತ್ತಿದ್ದ ಭೀಮದುರ್ಯೋಧನಾದಿಗಳಿಗೆ ಅಸೂಯೆಯಿಂದ ಪರಸ್ಪರ ವಿರೋಧವುಂಟಾಗಲು ಧೃತರಾಷ್ಟ್ರನು ಆಲೋಚಿಸಿ ಆ ಮಕ್ಕಳುಗಳಲ್ಲಿರುವ ಪರಸ್ಪರ ವಿರೋಧದ ಬೆಳವಳಿಗೆ ಮತ್ತು ಪರಿಣಾಮವನ್ನು ನಿವಾರಣೆಮಾಡುವುದಕ್ಕಾಗಿ, ವಾರಣಾವತವೆಂಬ ಪಟ್ಟಣದಲ್ಲಿ ಸಜ್ಜನರಾದ ಪಾಂಡವರಿಗೆ ವಾಸಸ್ಥಾನವನ್ನು ಏರ್ಪಡಿಸಿದನು. ॥೪೬-೪೭॥

ಆದರೆ ದುರ್ಯೋಧನನು ತನ್ನ ಸ್ನೇಹಿತನಾದ ಪುರೋಚನನೆಂಬವನನ್ನು ಕಳುಹಿಸಿ ಆ ವಾರಣಾವತದಲ್ಲಿಯೇ ಮೋಸದಿಂದ ಪಾಂಡವರನ್ನು ನಾಶಮಾಡುವ ಉದ್ದೇಶದಿಂದ ಮನೋಹರವಾದ ಅರಗಿನ ಮನೆಯನ್ನು ಕಟ್ಟಿಸಿದನು. ॥೪೮॥

ಪಾಂಡವರು ಕುಂತಿಯೊಡನೆ ಅರಗಿನ ಮನೆಯಲ್ಲಿ ಸುಟ್ಟುಹೋದರೆಂದು ಸಮಾಚಾರವನ್ನು ಕೇಳಿ ಮೊಮ್ಮಕ್ಕಳೆಂಬ ಅಭಿಮಾನ ಮೂಲಕವಾದ ಪ್ರೀತಿಯಿಂದ ನಾನು ದುಃಖಸಮುದ್ರದಲ್ಲಿ ಮುಳುಗಿದೆನು. ನಾರದಮುನಿಯೇ, ನಾನು ಜನರಹಿತವಾದ ಕಾಡಿನಲ್ಲಿ ಹಗಲೂ ರಾತ್ರಿಯೂ ಪಾಂಡವರನ್ನು ಹುಡುಕುತ್ತಾ ದುಃಖಪಡುತ್ತಾ ಕಡೆಗೆ ಏಕಚಕ್ರನಗರದಲ್ಲಿ ದುಃಖದಿಂದ ಕೃಶರಾಗಿದ್ದ ಆ ಪಾಂಡವರನ್ನು ಕಂಡೆನು. ॥೪೯-೫೦॥

**ತತಸ್ತುಷ್ಟಮನಾಶ್ಚಾಹಂ ಜಾತಃ ಪಾರ್ಥಾನ್ವಿಲೋಕ್ಯ ಚ ।**
**ಪ್ರೇರಿತಾಸ್ತೇ ಮಯಾ ತೂರ್ಣಂ ದ್ರುಪದಸ್ಯ ಪುರಂ ಪ್ರತಿ ॥೫೧॥**

**ತೇ ಗತಾಸ್ತತ್ರ ದುಃಖಾರ್ತಾ ವಿಪ್ರವೇಷಧರಾಃ ಕೃಶಾಃ ।**
**ಮೃಗಚರ್ಮ ಪರೀಧಾನಾಃ ಸಭಾಯಾಂ ಸಂಸ್ಥಿತಾಸ್ತದಾ ॥೫೨॥**

**ಕೃತ್ವಾ ಪರಾಕ್ರಮಂ ಜಿಷ್ಣುಃ ಸ ಜಿತ್ವಾ ದ್ರುಪದಾತ್ಮಜಾಂ ।**
**ಚಕ್ರುರ್ವಿವಾಹಂ ಮಾನಿನ್ಯಾಃ ಪಂಚೈವ ಮಾತೃವಾಕ್ಯತಃ ॥೫೩॥**

**ದೃಷ್ಟ್ವಾ ವಿವಾಹಂ ತೇಷಾಂ ತು ಮುದಿತೋಽಹಂ ಭೃಶಂ ತದಾ ।**
**ತತೋ ನಾಗಾಹ್ವಯೇ ಪ್ರಾಪ್ತಾಃ ಪಾಂಚಾಲೀಸಹಿತಾ ಮುನೇ ॥೫೪॥**

**ನಿವಾಸಂ ಖಾಂಡವಪ್ರಸ್ಥಂ ಧೃತರಾಷ್ಟ್ರೇಣ ಕಲ್ಪಿತಂ ।**
**ಪಾಂಡವಾನಾಂ ದ್ವಿಜಶ್ರೇಷ್ಠ ವಸುದೇವಸುತೇನ ವೈ ॥೫೫॥**

---

ಆಮೇಲೆ ನಾನು ಕುಂತಿಯಮಕ್ಕಳು ಬದುಕಿರುವುದನ್ನು ನೋಡಿ ಮನಸ್ಸಿನಲ್ಲಿ ಸಂತೋಷವನ್ನು ಹೊಂದಿದೆನು. ಮತ್ತು ಅವರನ್ನು ಬೇಗನೆ ದ್ರುಪದನ ಪಟ್ಟಣದಲ್ಲಿ ನಡೆಯಲಿದ್ದ ಸ್ವಯಂವರಕ್ಕೆ ಹೋಗುವಂತೆ ಪ್ರೇರಿಸಿ ಕಳುಹಿಸಿದೆನು. ಅವರು ಬ್ರಾಹ್ಮಣವೇಷವನ್ನು ಧರಿಸಿ ಕೃಶರಾಗಿ ಜಿಂಕೆಯ ಚರ್ಮವನ್ನು ಟ್ಟು ಹೊದೆದುಕೊಂಡು ದುಃಖದಿಂದ ಕಷ್ಟಪಡುತ್ತಾ ಆ ದ್ರುಪದರಾಜನ ಪಟ್ಟಣಕ್ಕೆ ಹೋಗಿ ಅವನ ಸಭೆಯಲ್ಲಿದ್ದರು. ॥೫೧-೫೨॥

ಓ ನಾರದಮುನಿಯೇ, ಅರ್ಜುನನು ಪರಾಕ್ರಮವನ್ನು ತೋರಿಸಿ ದ್ರುಪದರಾಜಪುತ್ರಿಯನ್ನು ಗೆದ್ದನು. ತಾಯಿಯ ಮಾತಿನಂತೆ ಆ ಪಾಂಡವರು ಐವರೂ ಆ ದ್ರೌಪದಿಯನ್ನು ಮದುವೆಯಾದರು. ಅವರ ವಿವಾಹವನ್ನು ನೋಡಿ ನಾನು ಬಹಳ ಸಂತೋಷವನ್ನು ಹೊಂದಿದೆನು. ಆ ಮೇಲೆ ಅವರು ಪಾಂಚಾಲ ರಾಜಪುತ್ರಿಯಾದ ದ್ರೌಪದಿಯೊಡನೆ ಹಸ್ತಿನಾಪಟ್ಟಣಕ್ಕೆ ಹೋದರು. ॥೫೩-೫೪॥

ಧೃತರಾಷ್ಟ್ರನು ಖಾಂಡವಪ್ರಸ್ಥವೆಂಬ ಸ್ಥಳವನ್ನು ಪಾಂಡವರ ವಾಸಕ್ಕಾಗಿ ಗೊತ್ತುಮಾಡಿದನು. ಓ ಬ್ರಾಹ್ಮಣ ಶ್ರೇಷ್ಠನಾದ ನಾರದನೇ, ವಸುದೇವ ಪುತ್ರನಾದ ಕೃಷ್ಣನೂ ಅರ್ಜುನನೂ ಕೂಡಿ ಧರ್ಮರಾಯನಿಂದ ರಾಜಸೂಯ ಯಜ್ಞ

ತರ್ಪಿತಃ ಪಾವಕಸ್ತತ್ರ ವಿಷ್ಣುನಾ ಸಹ ಜಿಷ್ಣುನಾ ।
ರಾಜಸೂಯಃ ಕೃತೋ ಯಜ್ಞಸ್ತದಾಽಹಂ ಮುದಿತೋಽಭವಂ ॥೫೬॥

ದೃಷ್ಟ್ವಾಽಥ ವಿಭವಂ ತೇಷಾಂ ತಥಾ ಮಯಕೃತಾಂ ಸಭಾಂ ।
ದುರ್ಯೋಧನೋಽತಿಸಂತಪ್ತೋ ದುರೋದರಮಥಾಕರೋತ್॥೫೭॥

ದುದ್ಯೂತವೇದೀ ಶಕುನಿರನಕ್ಷಜ್ಞಶ್ಚ ಧರ್ಮಜಃ ।
ಹೃತಂ ರಾಜ್ಯಂ ಧನಂ ಸರ್ವಂ ಯಾಜ್ಞಸೇನೀ ಚ ಕ್ಲೇಶಿತಾ ೫೮॥

ವನೇ ದ್ವಾದಶವರ್ಷಾಣಿ ಪಾಂಡವಾಸ್ತೇ ವಿವಾಸಿತಾಃ ।
ಪಾಂಚಾಲೀಸಹಿತಾಸ್ತೇನ ದುಃಖಂ ಮೇ ಜನಿತಂ ಭೃಶಂ ॥೫೯॥

ಏವಂ ನಾರದ ಸಂಸಾರೇ ಸುಖದುಃಖಾತ್ಮಕೇ ಭೃಶಂ ।
ನಿಮಗ್ನೋಽಹಂ ಭ್ರಮೇಣೈವ ಜಾನನ್ಧರ್ಮಂ ಸನಾತನಂ ॥೬೦॥

---

ವನ್ನು ಮಾಡಿಸಿ ಅಗ್ನಿಯನ್ನು ತೃಪ್ತಿಪಡಿಸಿದರು. ಆಗ ನಾನು ಅವರ ಏಳಿಗೆಯನ್ನು ನೋಡಿ ಪುನಃ ಸಂತೋಷವನ್ನು ಹೊಂದಿದೆನು. ||೫೫-೫೬||

ಆದರೆ ದುರ್ಯೋಧನನು ಪಾಂಡವರ ವಿಭವವನ್ನೂ ಮಯನು ಅವರಿಗೆ ಮಾಡಿಕೊಟ್ಟ ಸಭಾಮಂದಿರವನ್ನೂ ನೋಡಿ ಅಸೂಯೆಯಿಂದ ಬಹಳ ಸಂತಾಪ ವನ್ನು ಹೊಂದಿ, ದ್ಯೂತ ವಿನೋದವೆಂಬ ಮೋಸವನ್ನು ಹೂಡಿದನು. ||೫೭||

ಶಕುನಿಯು ಮೋಸದ ಜೂಜನ್ನು ತಿಳಿದವನು. ಧರ್ಮರಾಯನಿಗೆ ಆ ಪಗಡೆಯಾಟದ ಗುಟ್ಟೂ ವಂಚನೆಯೂ ಸ್ವಲ್ಪವೂ ತಿಳಿಯದು. ಆ ಜೂಜಿನಲ್ಲಿ ಕೌರವರು ಪಾಂಡವರ ರಾಜ್ಯವನ್ನ ಸಹರಿಸಿ ದ್ರೌಪದಿಯನ್ನು ಅವಮಾನಪಡಿಸಿ ಎಲ್ಲ ರನ್ನೂ ತೊಂದರೆ ಪಡಿಸಿದರು. ಕಡೆಗೆ ಪಾಂಡವರನ್ನು ದ್ರೌಪದಿಯೊಡನೆ ಹನ್ನೆರಡು ವರ್ಷ ವನವಾಸಮಾಡಬೇಕೆಂದು ಗೊತ್ತುಮಾಡಿ ಕಾಡಿಗೆ ಕಳುಹಿಸಿದರು! ಅದ ರಿಂದ ನನಗೆ ಪುನಃ ಬಹಳ ದುಃಖವುಂಟಾಯಿತು. ||೫೮-೫೯||

ಓ ನಾರದನೇ, ನಾನು ಸನಾತನವಾದ ಬ್ರಹ್ಮವಿದ್ಯೆಯನ್ನೂ ಅದರ ಸಾಧನ ವಾದ ಧರ್ಮವನ್ನೂ ತಿಳಿದಿದ್ದರೂ ಕೂಡ, ಈ ಸುಖದುಃಖಗಳ ಅನಂತ ಪರಂಪರೆಯ ಸ್ವರೂಪವಾದ ಈ ಸಂಸಾರದಲ್ಲಿ ಭ್ರಾಂತಿಯಿಂದ ಪುನಃ ಪುನಃ ಮುಳುಗಿದೆನು. ಜ್ಞಾನಿಯಾದ ವ್ಯಾಸನಿಗೂ ಕೂಡ ಹಿಂದೆ ಹೇಳಿದ ರೀತಿಯಲ್ಲಿ ಅನೇಕ ಸಂದರ್ಭ

**ಕೋಽಹಂ ಕಸ್ಯ ಸುತಾಸ್ತೇಽಮೀ ಕಾ ಮಾತಾ ಕಿಂ ಸುಖಂ ಪುನಃ ।**
**ಯೇನ ಮೇ ಹೃದಯಂ ಮೋಹಾದ್ಭ್ರಮತೀತಿ ದಿವಾನಿಶಂ ॥೬೧॥**

**ಕಿಂ ಕರೋಮಿ ಕ್ವ ಗಚ್ಛಾಮಿ ಸಂತೋಷೋ ನಾಽಧಿಗಚ್ಛತಿ ।**
**ದೋಲಾರೂಪಂ ಮನೋ ಮೇಽತ್ರ ಚಂಚಲಂ ನ ಸ್ಥಿರಂ ಭವೇತ್ ॥೬೨॥**

**ಸರ್ವಜ್ಞೋಽಸಿ ಮುನಿಶ್ರೇಷ್ಠ ಸಂದೇಹಂ ಮೇ ನಿವರ್ತಯ ।**
**ತಥಾ ಕುರು ಯಥಾಽಹಂ ಸ್ಯಾಂ ಸುಖಿತೋ ವಿಗತಜ್ವರಃ ॥೬೩॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ**
**ಪಂಚವಿಂಶೋಽಧ್ಯಾಯಃ**

---

ಗಳಲ್ಲಿ ಸುಖದುಃಖಾದಿಗಳುಂಟಾದುವೇ ಹೊರತು ತಪ್ಪಲಿಲ್ಲವೆಂದು ಅಭಿಪ್ರಾಯವು. ದೊಡ್ಡವರಿಗೂ ಅನೇಕ ಸಂದರ್ಭಗಳಲ್ಲಿ ಅಜ್ಞಾನಾದಿಗಳುಂಟಾಗುವುವೆಂಬುದನ್ನು ತಿಳಿಸುವುದಕ್ಕಾಗಿಯೇ ಪ್ರಸಿದ್ಧವಾದ ಈ ಕಥೆಯನ್ನು ಇದುವರೆಗೆ ಉಪನ್ಯಾಸಮಾಡಲಾಯಿತು. ||೬೦||

ನಾನು ಯಾರು? ಆ ಕೌರವರೂ ಈ ಪಾಂಡವರೂ ಯಾರ ಮಕ್ಕಳು? ತಾಯಿ ಯಾರು? ಸುಖವೆಂಬುದಾವುದು? ಯಾವ ಕಾರಣದಿಂದ ನನ್ನ ಮನಸ್ಸು ಹಗಲೂ ರಾತ್ರಿಯೂ ಅಜ್ಞಾನದಿಂದ ಹೀಗೆ ಭ್ರಾಂತವಾಗಿರುವುದು. ||೬೧||

ಇಷ್ಟಾದರೂ ಕಡೆಗೂ ಸಂತೋಷವು ದೊರೆಯಲಿಲ್ಲ! ನನ್ನ ಮನಸ್ಸು ಉಯ್ಯಾಲೆಯಂತೆ ಚಂಚಲವಾಗಿ ಹಿಂದಕ್ಕೂ ಮುಂದಕ್ಕೂ ತೂಗಾಡುತ್ತಾ ಹೋಗುತ್ತಿದೆಯೇ ಹೊರತು ಅದು ಚಲಿಸದೆ ಸ್ಥಿರವಾಗಿ ಒಂದೆಡೆ ನಿಲ್ಲುವುದಿಲ್ಲವಲ್ಲ! ನಾನು ಏನನ್ನು ಮಾಡಲಿ? ಎಲ್ಲಿಗೆ ಹೋಗಲಿ? ಎಂದು ಆಗಾಗ್ಗೆ ನನ್ನ ಮನಸ್ಸಿನಲ್ಲಿ ಪಶ್ಚಾತ್ತಾಪವೂ ಉಂಟಾಗುತ್ತದೆ. ||೬೨||

ಓ ಮುನಿಶ್ರೇಷ್ಠನಾದ ನಾರದನೇ, ನೀನು ಸಮಸ್ತವನ್ನೂ ತಿಳಿದ ಜ್ಞಾನಿಯಾಗಿರುವೆ. ನನ್ನ ಈ ಸಂದೇಹವನ್ನು ಪರಿಹರಿಸು. ನಾನು ದುಃಖವನ್ನೂ ಅದು ತಿರುಗಿ ಬರದಂತೆ ನಿರ್ಮೂಲವಾಗಿ ಕಳೆದುಕೊಂಡು ಯಾವಾಗಲೂ ನಾಶವಾಗದ ಸುಖವುಳ್ಳವನಾಗಿರುವಂತೆ ಮಾಡು! ||೬೩||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

### || ಷಡ್ವಿಂಶೋಽಧ್ಯಾಯಃ ||

### ಇಪ್ಪತ್ತಾರನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಇತಿ ಮೇ ವಚನಂ ಶ್ರುತ್ವಾ ನಾರದಃ ಪರಮಾರ್ಥವಿತ್ ।**
**ಮಾಮಾಹ ಚ ಸ್ಮಿತಂ ಕೃತ್ವಾ ಪೃಚ್ಛಂತಂ ಮೋಹಕಾರಣಂ ॥೧॥**

|| ನಾರದ ಉವಾಚ ||

**ಪಾರಾಶರ್ಯ ಪುರಾಣಜ್ಞ ಕಿಂ ಪೃಚ್ಛಸಿ ಸುನಿಶ್ಚಯಂ ।**
**ಸಂಸಾರೇಽಸ್ಮಿನ್ವಿನಾ ಮೋಹಂ ಕೋಽಪಿ ನಾಸ್ತಿ ಶರೀರವಾನ್ ॥೨॥**

---

ವ್ಯಾಸಮುನಿಯು ಹೇಳಿದನು—ಓ ಜನಮೇಜಯರಾಯನೇ, ಕೇಳು. ಹೀಗೆ ಹೇಳಿದ ನನ್ನ ಮಾತನ್ನು ಕೇಳಿ, ಜ್ಞಾನಿಯಾದ ನಾರದನೂ ನಗುತ್ತಾ, ಅಜ್ಞಾನಕ್ಕೆ ಕಾರಣವೇನೆಂದು ಕೇಳುತ್ತಿರುವ ನನ್ನನ್ನು ಕುರಿತು ಹೀಗೆ ಹೇಳಿದನು. ||೧||

ನಾರದ ಋಷಿಯು ಹೇಳಿದನು—ಪುರಾಣಗಳನ್ನು ತಿಳಿದಿರುವ, ಪರಾಶರ ಪುತ್ರನಾದ, ವ್ಯಾಸನೇ, ಜ್ಞಾನಿಯಾದ ನನಗೂ ಮಾಯಾಮೋಹದುಃಖಾದಿಗಳು ಹೇಗೆ ಉಂಟಾಯಿತೆಂಬ ವಿಷಯವನ್ನು ನೀನು ಕೇಳುತ್ತಿರುವೆಯಲ್ಲವೇ? ನಿಜವಾದ ಅಂಶವನ್ನು ಹೇಳುವೆನು ಕೇಳು. ಈ ಸಂಸಾರದಲ್ಲಿ ಶರೀರವನ್ನು ಧರಿಸಿರುವವರಲ್ಲಿ ಒಬ್ಬನಾದರೂ ಮೋಹ, ಮಾಯಾ ಅಥವಾ ಅಜ್ಞಾನವಿಲ್ಲದವನಲ್ಲವು! ಹೇಗೆಂದರೆ ಮಾಯೆಗೆ ಎರಡುವಿಧವಾದ ಶಕ್ತಿಗಳಿರುವುವು. ಒಂದು ಆವರಣ ಶಕ್ತಿಯು ಮತ್ತೊಂದು ವಿಕ್ಷೇಪಶಕ್ತಿಯು. ಆತ್ಮಜ್ಞಾನವುಂಟಾದರೆ ಎಂದರೆ ಬ್ರಹ್ಮತತ್ವವೂ

ಬ್ರಹ್ಮಾ ವಿಷ್ಣುಸ್ತಥಾ ರುದ್ರಃ ಸನಕಃ ಕಪಿಲಸ್ತಥಾ ।
ಮಾಯಯಾ ವೇಷ್ಟಿತಾಃ ಸರ್ವೇ ಭ್ರಮಂತಿ ಭವವರ್ತ್ಮನಿ ॥೩॥

ಜ್ಞಾನಿನಂ ಮಾಂ ಜನೋ ವೇತ್ತಿ ಭ್ರಾಂತೋಽಹಂ ಸರ್ವಲೋಕವತ್ ।
ಶೃಣು ಮೇ ಪೂರ್ವವೃತ್ತಾಂತಂ ಪ್ರಬ್ರವೀಮಿ ಸುನಿಶ್ಚಿತಂ ॥೪॥

---

ಜೀವರೂ ಸಚ್ಚಿದಾನಂದರೂಪದಲ್ಲಿ ಯಾವಾಗಲೂ ಅಭಿನ್ನರೆಂಬ ಸಾಕ್ಷಾತ್ಕಾರವಾದರೆ, ಆವರಣಶಕ್ತಿಯು ನಾಶವಾಗುವುದು. ಆದರೂ ವಿಕ್ಷೇಪಶಕ್ತಿಯು ಮಾತ್ರ ಧನುಸ್ಸಿನಿಂದ ಬಿಟ್ಟ ಬಾಣವು ಹೇಗೆ ಅದಕ್ಕೆ ಪ್ರಯೋಗಿಸಿದ ವೇಗವಿರುವ ಪರಿಯಂತವೂ ಹೋಗಿ ಆಮೇಲೆ ಬೀಳುವುದೋ, ಹಾಗೆ ಪ್ರಾರಬ್ಧಕರ್ಮ ಕ್ಷಯಪರ್ಯಂತವಾಗಿಯೂ, ಇರುವುದು. ಆ ವಿಕ್ಷೇಪಶಕ್ತಿಯಿಂದಲೇ ಹಿಂದಿನಂತೆಯೇ ಜ್ಞಾನಿಗಳಿಗೂ ದೊಡ್ಡವರಿಗೂ ಒಂದೊಂದು ಸಮಯದಲ್ಲಿ ಮೋಹಾದಿಗಳುಂಟಾಗುವುವು! ಆದುದರಿಂದ ವಿವೇಕಿಯಾದ ನೀನು ನನಗೂ ಮೋಹಾದಿಗಳು ಹೇಗೆ ಉಂಟಾಯಿತೆಂದು ಆಶ್ಚರ್ಯಪಡಬೇಕಾದುದಿಲ್ಲ! ಅದೃಷ್ಟ ರೂಪವಾದ ಪ್ರಾರಬ್ಧಕರ್ಮಫಲದ ಸ್ವಭಾವವೇ ಇದು. ॥೨॥

ಸಾಮಾನ್ಯರಾದ ಜೀವರಿಗೆ ಮಾತ್ರ ಮೋಹಾದಿಗಳುಂಟಾಗುವುವೆಂದು ತಿಳಿಯಬಾರದು. ಮತ್ತೇನೆಂದರೆ ಬ್ರಹ್ಮ, ವಿಷ್ಣು, ರುದ್ರ, ಸನಕ, ಕಪಿಲ ಮುಂತಾದ ದೊಡ್ಡವರೂ ಮಾಯೆಯಿಂದ ಆವೃತರಾಗಿ ಸಂಸಾರಮಾರ್ಗದಲ್ಲಿ ಭ್ರಾಂತರಾಗಿ ವ್ಯವಹರಿಸುತ್ತಿರುವರು! ಅವರಿಗೂ ಆ ಮಾಯೆಯ ವಿಕ್ಷೇಪಶಕ್ತಿಯು ಇನ್ನೂ ಅನುಸರಿಸಿ ಇರುವುದರಿಂದಲೇ ನೀಚವಾದ ಮೀನು ಮೊದಲಾದ ಯೋನಿಗಳಲ್ಲಿ ಜನ್ಮವನ್ನೆತ್ತಿದರು. ಅವರಿಗುಂಟಾದ ಮೋಹದ ವಿಷಯಗಳನ್ನು ಪ್ರಥಮ ಸ್ಕಂಧವೇ ಮೊದಲಾಗಿ ಅಲ್ಲಲ್ಲಿ ವಿವರಿಸಿರುವುದು. ದೇವಾದಿಗಳಿಗೇ ಈ ಸ್ಥಿತಿಯುಂಟಾದಮೇಲೆ ಮನುಷ್ಯರ ವಿಷಯದಲ್ಲಿ ಹೇಳುವುದೇನು? ॥೩॥

ಅಷ್ಟೇ ಅಲ್ಲದೆ ಜನರು ನನ್ನನ್ನು ಜ್ಞಾನಿಯೆಂದು ತಿಳಿದಿರುವರು. ನಾನೂ ಮೇಲೆ ಹೇಳಿದ ರೀತಿಯಲ್ಲಿ ಇತರ ಸಮಸ್ತ ಜನರಂತೆ ಭ್ರಾಂತನಾಗಿರುವೆನು. ನನ್ನ ಪೂರ್ವವೃತ್ತಾಂತವನ್ನು ಹೇಳುವೆನು, ಕೇಳು. ನನ್ನಂತೆ ಕಷ್ಟವನ್ನೂ ಪ್ರಪಂಚದಲ್ಲಿ ಯಾರೂ ಅನುಭವಿಸಲಿಲ್ಲವೆಂಬುದು ನಿಜವಾದುದು. ಹೇಗೆಂದರೆ, ॥೪॥

**ದುಃಖಂ ಮಯಾ ಯಥಾಪೂರ್ವಮನುಭೂತಂ ಮಹತ್ತರಂ ।**
**ಸ್ವಕೃತೇನ ಚ ಮೋಹೇನ ಭಾರ್ಯಾರ್ಥೇ ವಾಸವೀಸುತ ॥೫॥**

**ಏಕದಾ ಪರ್ವತಶ್ಚಾಽಹಂ ದೇವಲೋಕಾನ್ಮಹೀತಲಂ ।**
**ಸಂಪ್ರಾಪ್ತೌ ವಿಲೋಕನಾರ್ಥಾಯ ಭಾರತಂ ಖಂಡಮುತ್ತಮಂ ॥೬॥**

**ಭ್ರಮಂತೌ ಸಹಿತಾವುರ್ವ್ಯಾಂ ಪಶ್ಯಂತೌ ತೀರ್ಥಮಂಡಲಂ ।**
**ಪಾವನಾನಿ ಚ ಸ್ಥಾನಾನಿ ಮುನೀನಾಮಾಶ್ರಮಾನ್ ಶುಭಾನ್ ॥೭॥**

**ಶಪಥಂ ದೇವಲೋಕಾತ್ತು ಕೃತ್ವಾ ಪೂರ್ವಂ ಪರಸ್ಪರಂ ।**
**ಚಲಿತೌ ಸಮಯಂ ಚೇಮಂ ಸಂಮಂತ್ರ್ಯ ನಿಶ್ಚಯೇನ ವೈ ॥೮॥**

**ಚಿತ್ತವೃತ್ತಿಸ್ತು ವಕ್ತವ್ಯಾ ಯಾದೃಶೀ ಯಸ್ಯ ಜಾಯತೇ ।**
**ಶುಭಾ ವಾಽಪ್ಯಶುಭಾ ವಾಽಪಿ ನ ಗೋಪ್ತವ್ಯಾ ಕದಾಚನ ॥೯॥**

---

ಎಲೈ ವಾಸವೀಪುತ್ರನಾದ ವ್ಯಾಸನೇ, ನನ್ನ ಅಜ್ಞಾನದಿಂದಲೇ ಪತ್ನಿಗೋಸ್ಕರ ವಾಗಿ ಪೂರ್ವದಲ್ಲಿ ನಾನು ದೊಡ್ಡ ದುಃಖವನ್ನು ಹೇಗೆ ಅನುಭವಿಸಿದೆನೆಂಬುದನ್ನು ಹೇಳುವೆನು, ಕೇಳು. ॥೫॥

ಒಂದಾನೊಂದು ಕಾಲದಲ್ಲಿ ನನ್ನ ಸಹೋದರಿಯ ಮಗನಾದ ಪರ್ವತನೆಂಬ ಮುನಿಯೂ, ನಾನೂ, ಉತ್ತಮವಾದ ಭರತಖಂಡವನ್ನು ನೋಡಬೇಕೆಂದು ದೇವ ಲೋಕದಿಂದ ಭೂಲೋಕಕ್ಕೆ ಬಂದೆವು. ಇಲ್ಲಿ ಬ್ರಹ್ಮಪುತ್ರನಾದ ನಾರದನಿಗೆ ಪರ್ವತನು ಸಹೋದರಿಯ ಮಗನು ಹೇಗಾದನೆಂದರೆ, ಮುಂದೆ ಏಳನೆಯ ಸ್ಕಂಧದಲ್ಲಿ ದಕ್ಷನಿಂದ ನಾರದನಿಗೆ ಎರಡನೆಯ ಜನ್ಮವು ಬಂದಿತೆಂದು ಹೇಳಿರುವುದರಿಂದ ಆ ಎರಡನೆಯ ಜನ್ಮಸಂಬಂಧದಿಂದ ಪರ್ವತನು ನಾರದನಿಗೆ ಸೋದರಳಿಯನಾಗಬೇಕು. ॥೬॥

ನಾವಿಬ್ಬರೂ ಭೂಮಿಯಲ್ಲಿ ಪರಿಶುದ್ಧವಾದ ಕ್ಷೇತ್ರತೀರ್ಥಗಳ ಸ್ಥಳಗಳನ್ನೂ ಮಂಗಳಕರಗಳಾದ ಋಷಿಗಳ ಆಶ್ರಮಗಳನ್ನೂ ಪುಣ್ಯತೀರ್ಥಗಳನ್ನೂ ನೋಡುತ್ತಾ ಸಂಚರಿಸುತ್ತಿದ್ದೆವು. ॥೭॥

ದೇವಲೋಕದಿಂದ ಬರುವಾಗ ಮೊದಲೇ ನಾವಿಬ್ಬರೂ ಮುಂದೆ ಹೇಳುವ ಮೇರೆಗೆ ಪರಸ್ಪರವಾಗಿ ನಿಜವಾದ ಪ್ರತಿಜ್ಞೆಯನ್ನು ಮಾಡಿಕೊಂಡು ಹೊರಟೆವು. ॥೮॥

ಆ ಪ್ರತಿಜ್ಞೆಯೇನೆಂದರೆ—ಭೂಮಿಯಲ್ಲಿ ಬಗೆಬಗೆಯಾದ ವಸ್ತುಗಳನ್ನು ನೋಡಿ ಯಾರಿಗೆ ಯಾವ ಮನೋವೃತ್ತಿಯುಂಟಾಗುವುದೋ ಅದು ಶುಭವಾಗಲಿ

ಭೋಜನೇಚ್ಛಾ ಧನೇಚ್ಛಾಽಪಿ ರತೀಚ್ಛಾ ವಾ ಭವೇದಪಿ ।
ಯಾದೃಶೀ ಯಸ್ಯ ಚಿತ್ತೇ ತು ಕಥನೀಯಾ ಪರಸ್ಪರಂ ॥೧೦॥

ಇತ್ಯಾವಾಂ ಸಮಯಂ ಕೃತ್ವಾ ಸ್ವರ್ಗಾದ್ಭೂಲೋಕಮಾಗತೌ ।
ಏಕಚಿತ್ತೌ ಮುನೀಭೂತೌ ವಿಚರಂತೌ ಯಥೇಚ್ಛಯಾ ॥೧೧॥

ಏವಂ ಭ್ರಮಂತೌ ಲೋಕೇಽಸ್ಮಿನ್ಗ್ರೀಷ್ಮಾಂತೇ ಸಮುಪಾಗತೇ ।
ಸಂಜಯಸ್ಯ ಪುರಂ ರಮ್ಯಂ ಸಂಪ್ರಾಪ್ತೌ ನೃಪತೇಃ ಪುನಃ ॥೧೨॥

ತೇನ ಸಂಪೂಜಿತೌ ಭಕ್ತ್ಯಾ ರಾಜ್ಞಾ ಸಂಮಾನಿತೌ ಭೃಶಂ ।
ಸ್ಥಿತೌ ತತ್ರ ಗೃಹೇ ತಸ್ಯ ಚಾತುರ್ಮಾಸ್ಯಂ ಮಹಾತ್ಮನಃ ॥೧೩॥

ವಾರ್ಷಿಕಾಶ್ಚತುರೋಮಾಸಾ ದುರ್ಗಮಾಃ ಪಥಿ ಸರ್ವದಾ ।
ತಸ್ಮಾದೇಕತ್ರ ವಿಬುಧೈಃ ಸ್ಥಾತವ್ಯಮಿತಿ ನಿಶ್ಚಯಃ ॥೧೪॥

---

ಅಶುಭವಾಗಲಿ ಎಂದಿಗೂ ಮರೆಮಾಡದೆ ಒಬ್ಬರಿಗೊಬ್ಬರು ಹೇಳಬೇಕು. ಅದು ಊಟದ ಆಸೆಯಾಗಲಿ, ಹಣದಾಸೆಯಾಗಲಿ, ಕಾಮಭೋಗದ ವಿಷಯವಾದ ಆಸೆಯಾಗಲಿ, ಯಾರ ಮನಸ್ಸಿನಲ್ಲಿ ಎಂತಹ ವೃತ್ತಿಯುಂಟಾದರೂ ಅದನ್ನು ಒಬ್ಬರಿಗೊಬ್ಬರು ಹೇಳಲೇಬೇಕು. ಎಂದು. ||೯-೧೦||

ಹೀಗೆಂದು ನಾವಿಬ್ಬರೂ ಪ್ರತಿಜ್ಞೆಯನ್ನು ಮಾಡಿಕೊಂಡು ಸ್ವರ್ಗದಿಂದ ಭೂಲೋಕಕ್ಕೆ ಬಂದು, ಒಂದೇ ಮನಸ್ಸಿನಿಂದ ಮೌನವಾಗಿ ಮನಸ್ಸು ಬಂದೆಡೆಯಲ್ಲಿ ಸಂಚರಿಸುತ್ತಾ ಗ್ರೀಷ್ಮ ಋತುವಿನ ಕೊನೆಗಾಲವು ಬರುತ್ತಲು, ಸಂಜಯನೆಂಬ ರಾಜನ ಮನೋಹರವಾದ ಪಟ್ಟಣಕ್ಕೆ ಬಂದು ಸೇರಿದೆವು. ||೧೧-೧೨||

ಆ ರಾಜನು ಭಕ್ತಿಯಿಂದ ನಮ್ಮನ್ನು ಪೂಜಿಸಿ ವಿಶೇಷವಾಗಿ ಗೌರವಿಸಿದನು. ಆ ಮಹಾತ್ಮನಾದ ರಾಜನ ಮನೆಯಲ್ಲಿ ನಾಲ್ಕು ತಿಂಗಳು ವಾಸವಾಗಿದ್ದೆವು. ಮಳೆಗಾಲದ ನಾಲ್ಕುತಿಂಗಳಲ್ಲಿ ದಾರಿಯನ್ನು ನಡೆಯಲೂ ರಾತ್ರಿಗಳಲ್ಲಿ ತಂಗಲೂ ಸೌಕರ್ಯಗಳಿಲ್ಲದೆ ಸಾಧ್ಯವಿಲ್ಲವಾದುದರಿಂದ ಬುದ್ಧಿವಂತರಾದವರು ಒಂದೆಡೆಯಲ್ಲಿ ವಾಸಮಾಡಬೇಕೆಂದು ನಿಶ್ಚಯವಿರುವುದು. ||೧೩-೧೪||

ಅಷ್ಟೌ ಮಾಸಾಂಸ್ತು ಪ್ರವಸೇತ್ಸದಾ ಕಾರ್ಯವಶಾದ್ದ್ವಿಜಃ ।
ವರ್ಷಾಕಾಲೇ ನ ಗಂತವ್ಯಂ ಪ್ರವಾಸೇ ಸುಖಮಿಚ್ಛತಾ ॥೧೫॥

ಇತಿ ಸಂಚಿಂತ್ಯ ಮನಸಾ ಸಂಜಯಸ್ಯ ಗೃಹೇ ತದಾ ।
ಸಂಸ್ಥಿತೌ ಮಾನಿತೌ ರಾಜ್ಞಾ ಕೃತಾತಿಥ್ಯೌ ಮಹಾತ್ಮನಾ ॥೧೬॥

ದಮಯಂತೀತಿ ವಿಖ್ಯಾತಾ ತಸ್ಯ ಪುತ್ರೀ ಮಹೀಪತೇಃ ।
ಆಜ್ಞಪ್ತಾ ಪರಿಚರ್ಯಾರ್ಥಂ ಸುದತೀ ಸುಂದರೀ ಭೃಶಂ ॥೧೭॥

ವಿವೇಕಜ್ಞಾ ವಿಶಾಲಾಕ್ಷೀ ರಾಜಪುತ್ರೀ ಕೃತೋದ್ಯಮಾ ।
ಸೇವನಂ ಸರ್ವಕಾಲೇ ಚ ವ್ಯದಧಾದುಭಯೋರಪಿ ॥೧೮॥

ಸ್ನಾನಾರ್ಥಮುದಕಂ ಕಾಲೇ ಭೋಜನಂ ಮೃಷ್ಟಮಾಯತಂ ।
ಮುಖವಾಸಂ ತಥಾ ಚಾನ್ಯತ್ ಯದಿಷ್ಟಂ ತದ್ದದಾತಿ ಸಾ ॥೧೯॥

ಮನೋಽಭಿಲಷಿತಾನ್ಕಾಮಾನುಭಯೋರಪಿ ಕನ್ಯಕಾ ।
ವ್ಯಜನಾಸನಶಯ್ಯಾದೀನ್ಸಾಂಛಿತಾನಪ್ಯಕಲ್ಪಯತ್ ॥೨೦॥

---

ದ್ವಿಜನಾದವನು ತನ್ನ ಕಾರ್ಯಕ್ಕಾಗಿ ಎಂಟು ತಿಂಗಳವರೆಗೂ ದೇಶವಿದೇಶಗಳಲ್ಲಿ ಸಂಚರಿಸಬಹುದು. ಆದರೆ ಸುಖಾಪೇಕ್ಷೆಯುಳ್ಳವನು ಮಳೆಗಾಲದಲ್ಲಿ ಪರಸ್ಥಳಗಳಿಗೆ ಹೋಗಬಾರದು. ಹೀಗೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ಮಹಾತ್ಮನಾದ ಆ ಸಂಜಯನೆಂಬ ರಾಜನು ನಮಗೆ ಅತಿಥಿ ಸತ್ಕಾರವನ್ನು ಮಾಡಿ ಗೌರವಿಸಿದುದರಿಂದ ಅವನ ಮನೆಯಲ್ಲಿಯೇ ಇದ್ದೆವು. ॥೧೫-೧೬॥

ಆ ರಾಜನು ತನ್ನ ಮಗಳಾದ ತುಂಬ ಸುಂದರಿಯಾದ ದಮಯಂತೀ ಎಂಬವಳನ್ನು ನಮ್ಮ ಸೇವೆಗಾಗಿ ಗೊತ್ತುಮಾಡಿದನು. ವಿಸ್ತಾರವಾಗಿರುವ ಕಣ್ಣುಳ್ಳ ಆ ದಮಯಂತಿಯು ಯುಕ್ತಾಯುಕ್ತಗಳನ್ನು ತಿಳಿದವಳಾಗಿ ಕೆಲಸಗಳನ್ನು ಮಾಡುತ್ತಾ ಯಾವಾಗಲೂ ನಮ್ಮಿಬ್ಬರ ಸೇವೆಯನ್ನೂ ಮಾಡುತ್ತಿದ್ದಳು.॥೧೭-೧೮॥

ಹೇಗೆಂದರೆ, ಸ್ನಾನಕ್ಕೆ ನಮಗೆ ನೀರನ್ನು ಕೊಡುವುದು, ಮೃಷ್ಟಾನ್ನಭೋಜನ, ತಾಂಬೂಲ, ಮುಂತಾದ ಇಷ್ಟವಾದ ವಸ್ತುಗಳನ್ನು ಕೊಡುವುದಲ್ಲದೆ, ಆ ಕನ್ಯೆಯು ನಮ್ಮಿಬ್ಬರಿಗೂ ನಾವು ಅಪೇಕ್ಷಿಸುವ ಬೀಸಣಿಗೆ, ಪೀಠಗಳು, ಹಾಸಿಗೆ, ಮುಂತಾದುವುಗಳನ್ನೂ ಅನುಕೂಲವಾಗಿ ಸಿದ್ಧಪಡಿಸಿಕೊಡುತ್ತಿದ್ದಳು. ॥೧೯-೨೦॥

**ಏವಂ ಸಂಸೇವ್ಯಮಾನೌ ತು ಸ್ಥಿತೌ ರಾಜ್ಞೋ ಗೃಹೇ ಕಿಲ ।**
**ವೇದಾಧ್ಯಯನಸಂಶೀಲಾವಾವಾಂ ವೇದವ್ರತೇ ರತೌ ॥೨೧॥**

**ಅಹಂ ವೀಣಾಂ ಕರೇ ಕೃತ್ವಾ ಸಾಧಯಿತ್ವಾ ಸ್ವರೋತ್ತಮಂ ।**
**ಗಾಯತ್ರಂ ಸಾಮ ಸುಸ್ವಾದಮಗಾಂ ಕರ್ಣರಸಾಯನಂ ॥೨೨॥**

**ರಾಜಪುತ್ರೀ ತು ತಚ್ಛ್ರುತ್ವಾ ಸಾಮಗಾನಂ ಮನೋಹರಂ ।**
**ಬಭೂವ ಮಯಿ ರಾಗಾಢ್ಯಾ ಪ್ರೀತಿಯುಕ್ತಾ ವಿಶಾರದಾ ॥೨೩॥**

**ದಿನೇದಿನೇಽನುರಾಗೋಽಸ್ಯಾ ಮಯಿವೃದ್ಧಿಂ ಗತಃ ಪರಃ ।**
**ಮಮಾಽಪಿ ಪ್ರೀತಿಯುಕ್ತಾಯಾಂ ಮನೋ ಜಾತಂ ಸ್ಪೃಹಾ ಪರಂ ॥೨೪॥**

**ಮಮ ತಸ್ಯ ಚ ಸಾ ಕನ್ಯಾ ಭೋಜನಾದಿಷು ಕರ್ಹಿಚಿತ್ ।**
**ಅಕರೋದಂತರಂ ಕಿಂಚಿತ್ಸೇವಾಭೇದಂ ರಸಾನ್ವಿತಾ ॥೨೫॥**

---

ಹೀಗೆ ನಾವಿಬ್ಬರೂ ವೇದಪಾರಾಯಣ ಮುಂತಾದ ವ್ರತನಿಷ್ಠರಾಗಿ ವೇದಾಧ್ಯಯನವನ್ನು ಮಾಡುತ್ತಾ ರಾಜನ ಮನೆಯಲ್ಲಿ ಆ ಕನ್ಯೆಯ ಸೇವೆಯನ್ನು ಸ್ವೀಕರಿಸುತ್ತಾ ಇದ್ದೆವು. ನಾನು ವೀಣೆಯನ್ನು ಹಿಡಿದು ಉತ್ತಮವಾದ ಸ್ವರಗಳನ್ನು ನುಡಿಯಿಸುತ್ತಾ, ಮಧುರವಾದ ಕಿವಿಗಿಂಪಾದ ಗಾಯತ್ರಸಾಮವನ್ನು ಗಾನಮಾಡಿದೆನು. ॥೨೧-೨೨॥

ಆ ರಾಜಪುತ್ರಿಯು ಮನೋಹರವಾದ ಆ ಸಾಮಗಾನವನ್ನು ಕೇಳಿ ಬುದ್ಧಿವಂತಳಾದುದರಿಂದ ಗಾನಸೌಂದರ್ಯದಿಂದ ಪರವಶಳಾಗಿ ನನ್ನಲ್ಲಿ ವಿಶೇಷವಾದ ಪ್ರೀತಿಯುಳ್ಳವಳಾದಳು. ದಿನದಿನಕ್ಕೆ ಅವಳ ಪ್ರೀತಿಯು ನನ್ನ ವಿಷಯದಲ್ಲಿ ಹೆಚ್ಚುತ್ತಾ ಬಂದಿತು. ನನಗೂ ಕೂಡ ಪ್ರೀತಿಯುಕ್ತಳಾದ ಅವಳಲ್ಲಿ ಆಶಾರೂಪವಾದ ಮನೋವೃತ್ತಿಯುಂಟಾಯಿತು. ॥೨೩-೨೪॥

ಹೀಗಿರುವಲ್ಲಿ, ಶೃಂಗಾರ ರಸಾಸಕ್ತಳಾದ ಆ ಕನ್ಯೆಯು ನನಗೂ ಆಪರ್ವತನಿಗೂ ಭೋಜನಾದಿಗಳಲ್ಲಿಯೂ ಸೇವೆಯಲ್ಲಿಯೂ ಸ್ವಲ್ಪ ಹೆಚ್ಚು ಕಡಿಮೆಯ ಭೇದವನ್ನು ಮಾಡಲು ಉಪಕ್ರಮಿಸಿದಳು. ॥೨೫॥

ಸ್ನಾನಾಯೋಷ್ಣಜಲಂ ಮಹ್ಯಂ ಪರ್ವತಾಯ ಚ ಶೀತಲಂ ।
ದಧಿ ಮಹ್ಯಂ ತಥಾ ತಕ್ರಂ ಪರ್ವತಾಯಾಽಪ್ಯಕಲ್ಪಯತ್ ॥೨೬॥

ಶಯನಾಸ್ತರಣಂ ಶುಭ್ರಂ ಮದರ್ಥೇ ಪರ್ಯಕಲ್ಪಯತ್ ।
ಪ್ರೀತ್ಯಾ ಪರಮಯಾ ಯದ್ವತ್ಪರ್ವತಾಯ ನ ತಾದೃಶಂ ॥೨೭॥

ವಿಲೋಕಯತಿ ಮಾಂ ಪ್ರೇಮ್ಣಾ ಸುಂದರೀ ನ ಚ ಪರ್ವತಂ ।
ತತೋಽಸ್ಯಾಸ್ತಾದೃಶಂ ದೃಷ್ಟ್ವಾ ಪರ್ವತಃ ಪ್ರೇಮಕಾರಣಂ ॥೨೮॥

ಮನಸಾ ಚಿಂತಯಾಮಾಸ ಕಿಮೇತದಿತಿ ವಿಸ್ಮಿತಃ ।
ಪಪ್ರಚ್ಛ ಮಾಂ ರಹಃ ಸಮ್ಯಗ್ಬ್ರೂಹಿ ನಾರದ ಸರ್ವಥಾ ॥೨೯॥

ರಾಜಪುತ್ರೀ ತ್ವಯಿ ಪ್ರೇಮ ಕರೋತಿ ಮುದಿತಾ ಭೃಶಂ ।
ದದಾತಿ ಭಕ್ಷ್ಯಭೋಜ್ಯಾನಿ ಸ್ನೇಹಯುಕ್ತಾ ಸಮಂತತಃ ॥೩೦॥

---

ಹೇಗೆಂದರೆ, ಸ್ನಾನಕ್ಕೆ ನನಗೆ ಬಿಸಿನೀರು, ಪರ್ವತನಿಗೆ ತಣ್ಣೀರು, ಊಟದಲ್ಲಿ ನನಗೆ ಮೊಸರು, ಅವನಿಗೆ ಮಜ್ಜಿಗೆ, ಪ್ರೀತಿಯಿಂದ ನನಗೆ ಮಲಗಲು ಶುಭ್ರವಾದ ಹಾಸಿಗೆ, ಮೊದಲಾದುವು, ಅವನಿಗೆ ಅಂತಹವಿಲ್ಲ! ಹೀಗೆ ಭೇದಕಲ್ಪನೆಯಾಯಿತು. ||೨೬-೨೭||

ಸುಂದರಿಯಾದ ಆ ದಮಯಂತಿಯು ನನ್ನನ್ನು ಪ್ರೀತಿಯಿಂದ ನೋಡುವಳು. ಆದರೆ ಪರ್ವತನನ್ನು ಹಾಗೆ ನೋಡುತ್ತಿರಲಿಲ್ಲ. ಆಮೇಲೆ ಆ ರೀತಿಯಾದ ಅವಳ ಪ್ರೇಮಕ್ಕೆ ಕಾರಣವೇನೆಂದು ಆಶ್ಚರ್ಯಪಡುತ್ತಾ ಪರ್ವತನು ತನ್ನ ಮನಸ್ಸಿನಲ್ಲಿ ಯೋಚಿಸಿದನು. ||೨೮||

ಆ ಪರ್ವತನು ನನ್ನನ್ನು ಗುಟ್ಟಾಗಿ ಪ್ರಶ್ನೆಮಾಡಿದನು. ನಾರದನೇ, ನಿಜವಾದ ಮಾತನ್ನು ಹೇಳು. ರಾಜಪುತ್ರಿಯು ಸಂತೋಷದಿಂದ ನಿನ್ನಲ್ಲಿ ವಿಶೇಷವಾದ ಪ್ರೀತಿಯನ್ನು ತೋರಿಸುವಳು. ಸಂಪೂರ್ಣವಾದ ಸ್ನೇಹದಿಂದ ಕೂಡಿ ಭಕ್ಷ್ಯಭೋಜ್ಯಗಳನ್ನು ನಿನಗೆ ಕೊಡುವಳು. ನನಗೆ ಆ ರೀತಿಯಲ್ಲಿ ಕೊಡುತ್ತಿಲ್ಲ. ಈ ಭೇದವು ನನಗೆ ಸಂದೇಹವನ್ನು ಹುಟ್ಟಿಸುತ್ತಿದೆ! ||೨೯-೩೦||

ನ ತಥಾ ಮಯಿ ಭೇದೋಽತ್ರ ಸಂದೇಹಂ ಜನಯತ್ಯಸೌ ।
ಮನ್ಯತೇ ತ್ವಾಂ ಪತಿಂ ಕರ್ತುಂ ಸರ್ವಥಾ ಸಂಜಯಾತ್ಮಜಾ ॥೩೧॥

ತವಾಽಪಿ ತಾದೃಶಂ ಭಾವಂ ಜಾನಾಮಿ ಲಕ್ಷಣೈರಹಂ ।
ನೇತ್ರವಕ್ತ್ರವಿಕಾರೈಶ್ಚ ಜ್ಞಾಯತೇ ಪ್ರೀತಿಕಾರಣಂ ॥೩೨॥

ಸತ್ಯಂ ವದ ನ ಮೇ ಮಿಥ್ಯಾ ವಕ್ತವ್ಯಂ ವಚನಂ ಮುನೇ ।
ಸ್ವರ್ಗತಃ ಸಮಯಂ ಕೃತ್ವಾ ಚಲಿತೌ ಸಂಸ್ಮರಾಽಧುನಾ ॥೩೩॥

ಪೃಷ್ಟೋಽಹಂ ಪರ್ವತೇನೇದಂ ಕಾರಣಂ ತು ಹಠಾದ್ಯದಾ ।
ತದಾಽಹಂ ಹ್ರೀಸಮಾಕ್ರಾಂತಃ ಸಂಜಾತಶ್ಚಾಽಬ್ರವಂ ಪುನಃ ॥೩೪॥

ಪರ್ವತೈಷಾ ವಿಶಾಲಾಕ್ಷೀ ಪತಿಂ ಮಾಂ ಕರ್ತುಮುದ್ಯತಾ ।
ಮಮಾಽಪಿ ಮಾನಸೋ ಭಾವೋ ವರ್ತತೇಽಸ್ಯಾಂ ವಿಶೇಷತಃ ॥೩೫॥

---

ಸಂಜಯರಾಜನ ಮಗಳು ಹೇಗಾದರೂ ನಿನ್ನನ್ನೇ ಪತಿಯನ್ನಾಗಿ ಮಾಡಿಕೊಳ್ಳಲು ಮನಸ್ಸುಮಾಡಿರುವಳು ಎಂದೂ, ನಿನ್ನ ಲಕ್ಷಣಗಳಿಂದಲೂ ನಿನಗೂ ಅದೇ ಅಭಿಪ್ರಾಯವಿರುವುದೆಂದೂ, ನಾನು ತಿಳಿಯುತ್ತೇನೆ! ಕಣ್ಣುಗಳು ಮುಖ ಇವುಗಳ ವಿಕಾರಗಳಿಂದ ಪರಸ್ಪರ ಪ್ರೀತಿಯು ಇರುವುದೆಂದು ನಿಶ್ಚಯಿಸಿರುವೆನು. ನನಗೆ ನಿಜವನ್ನು ಹೇಳು. ಸುಳ್ಳನ್ನು ಹೇಳಕೂಡದು. ಸ್ವರ್ಗದಿಂದ ಬರುವಾಗ ಎಂತಹ ಪ್ರತಿಜ್ಞೆಯನ್ನು ಮಾಡಿಕೊಂಡು ಹೊರಟೆವು, ಅದನ್ನು ಈಗ ನೀನೂ ಜ್ಞಾಪಿಸಿಕೊಳ್ಳುವವನಾಗು. ॥೩೧-೩೨-೩೩॥

ನಾರದನು ಹೇಳಿದನು. ಪರ್ವತನು ನಿರ್ಬಂಧಪಡಿಸಿ ಈ ಪ್ರೀತಿಗೆ ಕಾರಣವನ್ನು ಪ್ರಶ್ನೆಮಾಡಿದಾಗ ನಾನು ನಾಚಿಕೆಯಿಂದ ಕೂಡಿದವನಾಗಿ ಅವನನ್ನು ಕುರಿತು ಹೇಳಿದೆನು. ॥೩೪॥

"ಎಲೈ ಪರ್ವತನೇ, ವಿಸ್ತಾರವಾದ ಕಣ್ಣುಗಳುಳ್ಳ ಈ ರಾಜಪುತ್ರಿಯು ನನ್ನನ್ನು ಪತಿಯನ್ನಾಗಿ ಮಾಡಿಕೊಳ್ಳಲು ಪ್ರಯತ್ನಪಡುತ್ತಿರುವಳು. ನನಗೂ ಕೂಡ ಈಕೆಯಲ್ಲಿ ವಿಶೇಷವಾದ ಮನೋಭಾವವು ಉಂಟಾಗಿರುವುದು! ಎಂದೆನು. ॥೩೫॥

**ತಚ್ಛ್ರುತ್ವಾ ವಚನಂ ಸತ್ಯಂ ಪರ್ವತಃ ಕೋಪಸಂಯುತಃ ।**
**ಮಾಮುವಾಚ ಮುನಿರ್ವಾಕ್ಯಂ ಧಿಗ್ಧಿಗಿತಿ ಪುನಃಪುನಃ ॥೩೬॥**

**ಪ್ರಥಮಂ ಶಪಥಾನ್ಕೃತ್ವಾ ವಂಚಿತೋಽಹಂ ತ್ವಯಾ ಯತಃ ।**
**ಭವ ವಾನರವಕ್ತ್ರಸ್ತ್ವಂ ಶಾಪಾಚ್ಚ ಮಮ ಮಿತ್ರಧ್ರುಕ್ ॥೩೭॥**

**ಇತಿ ಶಪ್ತಸ್ತು ತೇನಾಽಹಂ ಕುಪಿತೇನ ಮಹಾತ್ಮನಾ ।**
**ಸಹಸಾ ಹ್ಯಭವಂ ಕ್ರೂರಃ ಶಾಖಾಮೃಗಮುಖಸ್ತದಾ ॥೩೮॥**

**ಮಯಾಽಪಿ ನ ಕೃತಾ ತಸ್ಮಿನ್ಕ್ಷಮಾ ತು ಭಗಿನೀಸುತೇ ।**
**ಸೋಽಪಿ ಶಪ್ತೋಽತಿಕೋಪಾದ್ವೈ ಮಾ ಸ್ವರ್ಗೇ ತೇ ಗತಿಃ ಕಿಲ ॥೩೯॥**

**ಸ್ವಲ್ಪೇಽಪರಾಧೇ ಯಸ್ಮಾನ್ಮಾಂ ಶಪ್ತವಾನಸಿ ಪರ್ವತ ।**
**ತಸ್ಮಾತ್ತ್ವಮಪಿ ಮಂದಾತ್ಮನ್ ಮೃತ್ಯುಲೋಕೇ ಸ್ಥಿತಿಃ ಕಿಲ ॥೪೦॥**

---

ಆ ನನ್ನ ನಿಜವಾದ ಮಾತನ್ನು ಕೇಳಿಯೂ, ಪರ್ವತನು ಕೋಪವನ್ನು ಹೊಂದಿ, ನಿನ್ನನ್ನು ನಿಂದಿಸಬೇಕು! ನಿಂದಿಸಬೇಕು! ಎಂದು ಮತ್ತೆ ಮತ್ತೆ ಹೇಳಿದನು. ||೩೬||

ಮೊದಲೇ ಪ್ರತಿಜ್ಞೆಗಳನ್ನು ಮಾಡಿ ನೀನು ನನಗೆ ಮೋಸಮಾಡಿದುದರಿಂದ ಮಿತ್ರದ್ರೋಹಿಯಾದ ನೀನು ನನ್ನ ಶಾಪದಿಂದ ಕಪಿಯ ಮುಖವುಳ್ಳವನಾಗು!||೩೭||

ಹೀಗೆಂದು ಮಹಾಮಹಿಮನಾದ ಅವನು ಕೋಪದಿಂದ ನನಗೆ ಶಾಪವನ್ನು ಕೊಡುತ್ತಲು, ನಾನು ಆ ಕ್ಷಣದಲ್ಲಿಯೇ ಕ್ರೂರವಾದ ಕಪಿಯ ಮುಖವುಳ್ಳವನಾದೆನು. ||೩೮||

ನಾನೂ ನನ್ನ ಸಹೋದರಿಯ ಮಗನ ವಿಷಯದಲ್ಲಿ ಕ್ಷಮೆಯನ್ನು ಮಾಡಲಿಲ್ಲ. ಕೋಪದಿಂದ ಅವನಿಗೂ ನಾನು ಶಾಪವನ್ನು ಕೊಟ್ಟೆನು. 'ಎಲೈ ಅಲ್ಪಬುದ್ಧಿಯುಳ್ಳವನೇ, ಸ್ವಲ್ಪ ತಪ್ಪಿಗಾಗಿ ನನಗೆ ನೀನು ಹೆಚ್ಚಾದ ಶಾಪವನ್ನು ಕೊಟ್ಟುದರಿಂದ, ನೀನೂ ಸ್ವರ್ಗಲೋಕಕ್ಕೆ ಹೋಗುವ ಶಕ್ತಿಯನ್ನು ಕಳೆದುಕೊಂಡು, ಸಾವಿನಿಂದ ಕೂಡಿರುವ ಮನುಷ್ಯಲೋಕದಲ್ಲಿಯೇ ಇರು.' ಎಂಬುವೀ ನನ್ನ ಶಾಪವು ನಿನಗೂ ತಟ್ಟಲಿ! ಎಂದೆನು. ||೩೯-೪೦||

**ಪರ್ವತಸ್ತು ಗತಸ್ತಸ್ಮಾನ್ನಗರಾದ್ವಿಮನಾ ಭೃಶಂ ।**
**ಅಹಂ ವಾನರವಕ್ತ್ರಸ್ತು ಸಂಜಾತಸ್ತತ್ಕ್ಷಣಾದಪಿ ॥೪೧॥**

**ದೃಷ್ಟ್ವಾ ಮಾಂ ವಾನರಂ ಕ್ರೂರಂ ರಾಜಪುತ್ರೀ ವಿಲಕ್ಷಣಾ ।**
**ವಿಮನಾಃತೀವ ಸಂಜಾತಾ ವೀಣಾಶ್ರವಣಲಾಲಸಾ ॥೪೨॥**

॥ ವ್ಯಾಸ ಉವಾಚ ॥

**ತತಃ ಕಿಮಭವದ್ಬ್ರಹ್ಮನ್ಕಥಂ ಶಾಪಾನ್ನಿವರ್ತಿತಃ ।**
**ಮಾನುಷಾಸ್ಯಃ ಪುನರ್ಜಾತೋ ಭವಾನ್ಬ್ರೂಹಿ ಯಥಾವಿಧಿ ॥೪೩॥**

**ಪರ್ವತಃ ಕ್ವ ಗತೋ ಭೂಯಃ ಸಂಗಮೋ ಯುವಯೋರಭೂತ್ ।**
**ಕದಾ ಕುತ್ರ ಕಥಂ ಸರ್ವಂ ವಿಸ್ತರೇಣ ವದಸ್ವ ಹ ॥೪೪॥**

॥ ನಾರದ ಉವಾಚ ॥

**ಕಿಂ ಬ್ರವೀಮಿ ಮಹಾಭಾಗ ಮಾಯಾಯಾಶ್ಚರಿತಂ ಮಹತ್ ।**
**ದುಃಖಿತೋಽಹಂ ಭೃಶಂ ತತ್ರ ಪರ್ವತೇ ರುಷಿತೇ ಗತೇ ॥೪೫॥**

---

ಆಗ ಪರ್ವತನು ಇನ್ನು ಮುಂದೆಯೂ ಅಲ್ಲಿ ಇರಲು ಮನಸ್ಸಿಲ್ಲದವನಾಗಿ ಆ ಪಟ್ಟಣದಿಂದ ಹೊರಟುಹೋದನು. ಆ ಕ್ಷಣವೇ ನಾನೂ ಕಪಿಯಮುಖವುಳ್ಳವನಾದೆನು. ॥೪೧॥

ರಾಜಪುತ್ರಿಯು ಕ್ರೂರವಾದ ಕಪಿಯ ಮುಖವುಳ್ಳವನಾದ ನನ್ನನ್ನು ನೋಡಿ ವಿಕಾರವಾದ ಮನಸ್ಸುಳ್ಳವಳಾದರೂ, ವೀಣೆಯನ್ನು ಕೇಳುವುದರಲ್ಲಿ ಮಾತ್ರ ಮುಂಚಿನಂತೆಯೇ ಆಸಕ್ತಳಾಗಿದ್ದಳು. ॥೪೨॥

ವ್ಯಾಸನು ಹೇಳಿದನು—ಬ್ರಹ್ಮಪುತ್ರನಾದ ನಾರದನೇ, ಆಮೇಲೆ ಏನಾಯಿತು ? ನಿನಗೆ ಶಾಪವು ಹೋಗಿ ಮನುಷ್ಯನ ಮುಖವು ಹೇಗೆ ಉಂಟಾಯಿತು ? ಪರ್ವತನು ಎಲ್ಲಿಗೆ ಹೋದನು ? ಪುನಃ ನಿಮ್ಮಿಬ್ಬರಿಗೂ ಯಾವಾಗ, ಎಲ್ಲಿ, ಹೇಗೆ, ಸಂಗಮವುಂಟಾಯಿತು ? ಇವುಗಳನ್ನೆಲ್ಲ ವಿಸ್ತಾರವಾಗಿ ಹೇಳು. ಎಂದನು. ॥೪೩-೪೪॥

ನಾರದನು ಹೇಳಿದನು—ಪುಣ್ಯವಂತನಾದ ವ್ಯಾಸನೇ, ವಿಸ್ತಾರವಾದ ಮಾಯೆಯ ಚರಿತ್ರೆಯನ್ನು ನಾನು ಎಷ್ಟೆಂದು ವಿವರಿಸಲಿ ! ಪರ್ವತನು ಕೋಪಿಸಿಕೊಂಡು ಹೊರಟುಹೋದ ಮೇಲೆ ನಾನು ದುಃಖದಿಂದ ಅಲ್ಲಿಯೇ ಇದ್ದೆನು. ಆದರೆ

**ಪುನಃ ಸೇವಾಪರಾತ್ಯರ್ಥಂ ರಾಜಪುತ್ರೀ ಮಮಾಭವತ್ ।**
**ಗತೇಽಥ ಪರ್ವತೇ ಕಾಮಂ ಸ್ಥಿತಸ್ತತ್ರೈವ ಸದ್ಮನಿ ॥೪೬॥**

**ಅಹಂ ದುಃಖಾನ್ವಿತೋ ದೀನಸ್ತಥಾ ವಾನರವನ್ಮುಖಃ ।**
**ವಿಶೇಷೇಣ ತು ಚಿಂತಾರ್ತಃ ಕಿಂ ಮೇ ಸ್ಯಾದಿತಿ ಚಿಂತಯನ್ ॥೪೭॥**

**ಸಂಜಯೋಽಥ ಸುತಾಂ ದೃಷ್ಟ್ವಾ ಕಿಂಚಿತ್ಪ್ರಕಟಯೌವನಾಂ ।**
**ವಿವಾಹಾರ್ಥೇ ರಾಜಸುತಾಮಪೃಚ್ಛತ್ಸಚಿವಂ ತದಾ ॥೪೮॥**

**ವಿವಾಹಕಾಲಃ ಸಂಪ್ರಾಪ್ತಃ ಸುತಾಯಾ ಮಮ ಸಾಂಪ್ರತಂ ।**
**ಯೋಗ್ಯಂ ವರಂ ಮಮ ಬ್ರೂಹಿ ರಾಜಪುತ್ರಂ ಸುಸಂಮತಂ ॥೪೯॥**

**ರೂಪೌದಾರ್ಯಗುಣೈರ್ಯುಕ್ತಂ ಶೂರಂ ಸುಕುಲಸಂಭವಂ ।**
**ವಿವಾಹಂ ವಿಧಿವತ್ಪುತ್ರ್ಯಾಃ ಕರೋಮಿ ಕಿಲ ಸಾಂಪ್ರತಂ ॥೫೦॥**

---

ರಾಜಪುತ್ರಿಯು ಮಾತ್ರ ಪುನಃ ನನಗೆ ಮುಂಚಿನಂತೆಯೇ ವಿಶೇಷವಾಗಿ ಸೇವೆಯನ್ನು ಮಾಡುತ್ತಿದ್ದಳು. ॥೪೫॥

ಪರ್ವತನು ಹೊರಟುಹೋದ ಮೇಲೆ ನಾನು ಆ ಮನೆಯಲ್ಲಿಯೇ ಇರುತ್ತಾ ಕಪಿಯಂತೆ ಮುಖವುಳ್ಳವನಾಗಿದ್ದುದರಿಂದ ಉಂಟಾದ ದುಃಖದಿಂದ ದೀನನಾಗಿ, ' ನನಗೆ ಮುಂದೇನಾದೀತು ' ಎಂದು ಯೋಚಿಸುತ್ತಾ ಬಹಳ ವ್ಯಸನದಿಂದ ಸಂತಾಪ ಪಡುತ್ತಿದ್ದೆನು. ॥೪೬-೪೭॥

ಸಂಜಯರಾಜನು ಪ್ರಾಯಕ್ಕೆ ಬರುತ್ತಿದ್ದ ತನ್ನ ಮಗಳನ್ನು ನೋಡಿ ವಿವಾಹ ಮಾಡಬೇಕೆಂಬ ಮನಸ್ಸಿನಿಂದ ಅವಳನ್ನೂ ಮಂತ್ರಿಯನ್ನೂ ಕುರಿತು ಪ್ರಶ್ನೆಮಾಡಿದನು. ॥೪೮॥

ಎಲೈ ಮಂತ್ರಿಯೇ, ನನ್ನ ಮಗಳಿಗೆ ಈಗ ವಿವಾಹಕಾಲವು ಪ್ರಾಪ್ತವಾಗಿರುತ್ತದೆ. ವರನು ರಾಜಪುತ್ರನಾಗಿಯೂ ಶೂರನಾಗಿಯೂ ಸತ್ಕುಲಪ್ರಸೂತನಾಗಿಯೂ ರೂಪ ಔದಾರ್ಯ ಮುಂತಾದ ಸುಗುಣಗಳಿಂದ ಕೂಡಿದವನಾಗಿಯೂ ಇರಬೇಕು. ನೀನು ಒಪ್ಪಿದ ಇಂತಹ ವರನನ್ನು ಹೇಳು. ಶಾಸ್ತ್ರದಲ್ಲಿ ಹೇಳಿರುವ ವಿಧಿಗನುಸಾರವಾಗಿ ಮಗಳಿಗೆ ವಿವಾಹವನ್ನು ಈಗಲೇ ಮಾಡಬೇಕು. ಎಂದು ಸಂಜಯರಾಜನು ಹೇಳಿದನು. ॥೪೯-೫೦॥

**ಪ್ರಧಾನಸ್ತ್ವಬ್ರವೀದ್ರಾಜನ್ ರಾಜಪುತ್ರಾ ಹ್ಯನೇಕಶಃ ।**
**ವರ್ತಂತೇ ಭುವಿ ಪುತ್ರ್ಯಾಸ್ತೇ ಯೋಗ್ಯಾಃ ಸರ್ವಗುಣಾನ್ವಿತಾಃ ॥೫೧॥**

**ಯಸ್ಮಿನ್ರುಚಿಸ್ತೇ ರಾಜೇಂದ್ರ ತಮಾಹೂಯ ನೃಪಾತ್ಮಜಂ ।**
**ದೇಹಿ ಕನ್ಯಾಂ ಧನಂ ಭೂರಿ ಹಸ್ತ್ಯಶ್ವರಥಸಂಯುತಂ ॥೫೨॥**

॥ ನಾರದ ಉವಾಚ ॥

**ಪಿತುಶ್ಚಿಕೀರ್ಷಿತಂ ಜ್ಞಾತ್ವಾ ದಮಯಂತೀ ತದಾ ನೃಪಂ ।**
**ಧಾತ್ರ್ಯಾ ಮುಖೇನ ವಾಕ್ಯಜ್ಞಾ ತಮುವಾಚ ರಹಃ ಸ್ಥಿತಂ ॥೫೩॥**

॥ ಧಾತ್ರ್ಯುವಾಚ ॥

**ದಮಯಂತೀ ಮಹಾರಾಜ ಪುತ್ರೀ ತೇ ಮಾಮಥಾಽಬ್ರವೀತ್ ।**
**ಪಿತರಂ ಬ್ರೂಹಿ ಧಾತ್ರೇಯಿ ವಚನಾನ್ಮೇ ಸುಖಾನ್ವಿತಂ ॥೫೪॥**

**ಮಯಾ ವೃತೋಽಥ ಮೇಧಾವೀ ನಾರದೋ ಮಹತೀಯುತಃ ।**
**ನಾದಮೋಹಿತಯಾ ಕಾಮಂ ನಾಽನ್ಯಃ ಕೋಽಪಿ ಪ್ರಿಯೋ ಮಮ॥೫೫॥**

---

ಮಂತ್ರಿಯು ದೊರೆಯನ್ನು ಕುರಿತು, ಓ ರಾಜನೇ, ಭೂಮಿಯಲ್ಲಿ ಯೋಗ್ಯರಾಗಿಯೂ ಸಮಸ್ತ ಗುಣಗಳಿಂದಲೂ ಕೂಡಿದವರಾಗಿಯೂ ಇರುವ ಅನೇಕ ರಾಜಪುತ್ರರು ನಿನ್ನ ಮಗಳಿಗೆ ತಕ್ಕವರಾಗಿರುವರು. ॥೫೧॥

ಓ ರಾಜನೇ, ಯಾವನಲ್ಲಿ ನಿನಗೆ ಇಷ್ಟವೋ ಆ ರಾಜಪುತ್ರನನ್ನು ಕರೆಸಿ ಅವನಿಗೆ ಕನ್ಯೆಯನ್ನೂ ವಿಶೇಷವಾಗಿ ಹಣವನ್ನೂ ಆನೆ, ಕುದುರೆ, ರಥಗಳೊಡನೆ ಕೊಡು, ಎಂದನು. ॥೫೨॥

ನಾರದನು ಹೇಳಿದನು—ದಮಯಂತಿಯು ತನ್ನ ತಂದೆಯು ಮಾಡಬೇಕೆಂದಿರುವ ಕೆಲಸವನ್ನು ತಿಳಿದು, ತನ್ನ ದಾದಿಯ ಮೂಲಕವಾಗಿ ರಾಜನಿಗೆ ಗುಟ್ಟಾಗಿ ಇದ್ದ ಸಂಗತಿಯನ್ನು ಹೇಳಿಕಳುಹಿಸಿದಳು. ॥೫೩॥

ದಾದಿಯು ರಾಜನನ್ನು ಕುರಿತು ಹೀಗೆ ಹೇಳಿದಳು—ಓ ಮಹಾರಾಜನೇ, ನಿನ್ನ ಮಗಳಾದ ದಮಯಂತಿಯು ನಮ್ಮ ತಂದೆಗೆ ಹೀಗೆಂದು ಹೇಳು ಎಂದು ನನ್ನನ್ನು ಕಳುಹಿಸಿರುವಳು. ಅವಳು ಹೇಳಿದುದೇನೆಂದರೆ—'ಮಹತೀ ಎಂಬ ವೀಣೆಯೊಡನೆ ಕೂಡಿದ ಬುದ್ಧಿವಂತನಾದ ನಾರದನನ್ನು ನಾನು ವರಿಸಿರುವೆನು.

**ಕುರು ಮೇ ವಾಂಛಿತಂ ತಾತ ವಿವಾಹಂ ಮುನಿನಾ ಸಹ ।**
**ನಾಽನ್ಯಂ ವರಿಷ್ಯೇ ಧರ್ಮಜ್ಞ ನಾರದಂ ತು ಪತಿಂ ವಿನಾ ॥೫೬॥**

**ಮಗ್ನಾಽಹಂ ನಾದಸಿಂಧೌ ವೈ ನಕ್ರಹೀನೇ ರಸಾತ್ಮಕೇ ।**
**ಅಕ್ಷಾರೇ ಸುಖಸಂಪೂರ್ಣೇ ತಿಮಿಂಗಿಲವಿವರ್ಜಿತೇ ॥೫೭॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ**
**ಷಡ್ವಿಂಶೋಽಧ್ಯಾಯಃ.**

---

ನಾನು ನಾದಕ್ಕೆ ಮೋಹಿತಳಾಗಿರುವೆನು. ಮತ್ತಾರೂ ನನಗೆ ಪ್ರೀತಿಪಾತ್ರರಿಲ್ಲ. ||೫೪-೫೫||

ಓ ತಂದೆಯೇ, ನನಗೆ ಇಷ್ಟವಾದ ನಾರದಮುನಿಯೊಡನೆ ನನ್ನ ವಿವಾಹವನ್ನು ಮಾಡು. ಧರ್ಮವನ್ನು ತಿಳಿದ ತಂದೆಯೇ, ನಾನು ಪತಿಯಾದ ನಾರದನನ್ನು ಬಿಟ್ಟು ಮತ್ತೊಬ್ಬನನ್ನು ವರಿಸುವುದಿಲ್ಲ. ||೫೬||

ನಾನು ಶೃಂಗಾರಾದಿ ನವರಸಗಳ ರುಚಿಗಳ ಆಸ್ವಾದಸ್ವರೂಪವಾದ, ದೋಷಗಳೆಂಬ ಮೊಸಳೆ ತಿಮಿಂಗಿಲ ಮುಂತಾದ ದುಷ್ಟಪ್ರಾಣಿಗಳಿಲ್ಲದ, ದುಃಖವೆಂಬ ಉಪ್ಪಿಲ್ಲದ, ಸುಖದಿಂದ ಪೂರ್ಣವಾದ, ನಾದವೆಂಬ ಶಬ್ದಬ್ರಹ್ಮಾನಂದದ ಸಮುದ್ರದಲ್ಲಿ ಮುಳುಗಿರುವೆನು! ಎಂದಳು. ||೫೭||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

॥ ಸಪ್ತವಿಂಶೋಽಧ್ಯಾಯಃ ॥

**ಇಪ್ಪತ್ತೇಳನೆಯ ಅಧ್ಯಾಯವು**

॥ ನಾರದ ಉವಾಚ ॥

**ತತ್ಪುತ್ರ್ಯಾ ವಚನಂ ಶ್ರುತ್ವಾ ರಾಜಾ ಧಾತ್ರೀಮುಖಾತ್ತತಃ ।**
**ಭಾರ್ಯಾಂ ಪ್ರೋವಾಚ ಕೈಕೇಯೀಂ ಸಮೀಪಸ್ಥಾಂ ಸುಲೋಚನಾಂ ॥೧॥**

॥ ರಾಜೋವಾಚ ॥

**ಯದುಕ್ತಂ ವಚನಂ ಕಾಂತೇ ಧಾತ್ರ್ಯಾ ತತ್ತ್ವಯಾ ಶ್ರುತಂ ।**
**ವೃತೋಽಯಂ ನಾರದಃ ಕಾಮಂ ಮುನಿರ್ವಾನರವಕ್ತ್ರಭಾಕ್ ॥೨॥**

**ಕಿಮಿದಂ ಚಿಂತಿತಂ ಪುತ್ರ್ಯಾ ಬುದ್ಧಿಹೀನಂ ವಿಚೇಷ್ಟಿತಂ ।**
**ಕಥಮಸ್ಮೈ ಮಯಾ ದೇಯಾ ಕನ್ಯಾ ಹರಿಮುಖಾಯ ಸಾ ॥೩॥**

---

ನಾರದನು ಹೇಳಿದನು—ದಾದಿಯು ಹೇಳಿದ ತನ್ನ ಮಗಳ ಮಾತನ್ನು ಕೇಳಿ ರಾಜನು ತನ್ನ ಸಮೀಪದಲ್ಲಿರುವ ಸುಂದರವಾದ ಕಣ್ಣುಗಳುಳ್ಳ ಕೈಕೇಯಿಯೆಂಬ ಪತ್ನಿಯನ್ನು ಕುರಿತು ಹೀಗೆ ಹೇಳಿದನು. ॥೧॥

ರಾಜನು ಹೇಳಿದನು—ಎಲೈ ಪ್ರಿಯೆ, ದಾದಿಯು ಹೇಳಿದ ಮಾತನ್ನು ಕೇಳಿದೆಯಲ್ಲವೇ? ಕಪಿಯ ಮುಖವನ್ನು ಹೊಂದಿದ ಮುನಿಯಾದ ನಾರದನನ್ನು ವರಿಸಿರುವೆನೆಂದು ಹೇಳಿಕಳುಹಿಸಿರುವಳು ! ॥೨॥

ನನ್ನ ಮಗಳು ಬುದ್ಧಿಹೀನರು ಮಾಡುವ ಕೆಲಸವನ್ನು ಮಾಡಬೇಕೆಂದು ಏಕೆ ಯೋಚಿಸಿದಳು ? ಕಪಿಯ ಮುಖವುಳ್ಳ ಈ ನಾರದನಿಗೆ ನಾನು ಹೇಗೆ ಕನ್ಯೆಯನ್ನು ಕೊಡಲಿ ? ಕುರೂಪಿಯೂ ಭಿಕ್ಷುಕನೂ ಆದ ಆ ನಾರದನೆಲ್ಲಿ? ದೊರೆ

ಕ್ವಾऽಸೌ ಭಿಕ್ಷುಃ ಕುರೂಪಃ ಕ್ವ ದಮಯಂತೀ ಮಮಾತ್ಮಜಾ ।
ವಿಪರೀತಮಿದಂ ಕಾರ್ಯಂ ನ ವಿಧೇಯಂ ಕದಾಚನ ॥೪॥

ತಾಮೇಕಾಂತೇ ಸುಕೇಶಾಂತೇ ನಿವಾರಯ ಹಠಾತ್ಸುತಾಂ ।
ಯುಕ್ತ್ಯಾ ಮುನಿರತಾಂ ಮುಗ್ಧಾಂ ಶಾಸ್ತ್ರವೃದ್ಧಾನುಸಾರಯಾ ॥೫॥

ಇತಿ ಭರ್ತೃರ್ವಚಃ ಶ್ರುತ್ವಾ ಜನನೀ ತಾಮಥಾಬ್ರವೀತ್ ।
ಕ್ವ ತೇ ರೂಪಂ ಮುನಿಃ ಕ್ವಾऽಸೌ ವಾನರಾಸ್ಯೋऽಧನಃ ಪುನಃ ॥೬॥

ಕಥಂ ಮೋಹಮವಾಪ್ತಾऽಸಿ ಭಿಕ್ಷುಕೇ ಚತುರಾ ಪುನಃ ।
ಲತಾಕೋಮಲರೂಪಾ ತ್ವಂ ಭಸ್ಮರೂಕ್ಷತನುಸ್ತ್ವಯಂ ॥೭॥

ವಾರ್ತಾ ವಾನರವಕ್ತ್ರೇಣ ಕಥಂ ಯುಕ್ತಾ ತವಾऽನಘೇ ।
ಕಾ ಪ್ರೀತಿಃ ಕುತ್ಸಿತೇ ಪುಂಸಿ ಭವಿಷ್ಯತಿ ಶುಚಿಸ್ಮಿತೇ ॥೮॥

---

ಯಾದ ನನ್ನ ಮಗಳಾದ ದಮಯಂತಿಯೆಲ್ಲಿ? ಪರಸ್ಪರವಾಗಿ ಅನುರೂಪ್ಯವೂ ಔಚಿತ್ಯವೂ ಇಲ್ಲದುದರಿಂದ ವಿರುದ್ಧವಾದ ಈ ಕೆಲಸವನ್ನು ಎಂದಿಗೂ ಮಾಡಬಾರದು. ॥೩-೪॥

ಒಳ್ಳೆಯ ತಲೆಗೂದಲಿನ ತುದಿಯುಳ್ಳ ಪತ್ನಿಯೇ, ಗುಟ್ಟಾಗಿ ಯುಕ್ತಿಯಿಂದಲೂ ಶಾಸ್ತ್ರ ಮತ್ತು ವೃದ್ಧಾಚಾರಗಳಿಂದಲೂ ಕೂಡಿದ ಮಾತುಗಳನ್ನು ಹೇಳಿ ಇನ್ನೂ ಸರಿಯಾದ ತಿಳಿವಳಿಕೆಯಿಲ್ಲದ ಬಾಲ್ಯದ ಅವಸ್ಥೆಯಿಂದಿರುವ ನಿನ್ನ ಮಗಳು ಮುನಿಯಲ್ಲಿ ಆಸಕ್ತಳಾಗಿ ಹಿಡಿದಿರುವ ಈ ಹಠವನ್ನು ಬಿಡಿಸು. ॥೫॥

ಹೀಗೆಂದು ಹೇಳಿದ ಗಂಡನ ಮಾತನ್ನು ಕೇಳಿದ ತಾಯಿಯು ಮಗಳನ್ನು ಕುರಿತು ಎಲೈ ಮಗಳೇ, ನಿನ್ನ ರೂಪವೆಲ್ಲಿ? ದರಿದ್ರನೂ ಕಪಿಯ ಮುಖದವನೂ ಆದ ಮುನಿಯೆಲ್ಲಿ? ಚತುರಳಾದ ನೀನು ತಿರಿಕೆಯವನಲ್ಲಿ ಹೇಗೆ ಮೋಹವನ್ನು ಹೊಂದಿದೆ? ನಿನ್ನ ಶರೀರವು ಬಳ್ಳಿಯಂತೆ ಕೋಮಲವಾಗಿರುವುದು! ಅವನ ಶರೀರವು ಬೂದಿಯನ್ನು ಬಳಿದುಕೊಳ್ಳುವುದರಿಂದ ಕಠಿನವಾಗಿರುವುದು! ಪಾಪರಹಿತಳಾದ ಮಗಳೇ, ಕಪಿಯ ಮುಖದ ಅವನೊಡನೆ ನೀನು ಮಾತನಾಡುವುದು ಯೋಗ್ಯವೆ? ಮುಗುಳು ನಗೆಯಿಂದ ಕೂಡಿದ ಮಗಳೇ, ನೀಚ ಮನುಜನಲ್ಲಿ ಎಂತಹ ಪ್ರೀತಿಯುಂಟಾಗುವುದು? ಆದುದರಿಂದ ॥೬-೭-೮॥

ವರಸ್ತೇ ರಾಜಪುತ್ರೋಽಸ್ತು ಮಾ ಕುರು ತ್ವಂ ವೃಥಾ ಶಠಂ ।
ಪಿತಾ ತೇ ದುಃಖಮಾಪ್ನೋತಿ ಶ್ರುತ್ವಾ ಧಾತ್ರೀಮುಖಾದ್ವಚಃ ॥೯॥

ಲಗ್ನಾಂ ಬುಬೂಲವೃಕ್ಷೇಣ ಕೋಮಲಾಂ ಮಾಲತೀಲತಾಂ ।
ದೃಷ್ಟ್ವಾ ಕಸ್ಯ ಮನಃ ಖೇದಂ ಚತುರಸ್ಯ ನ ಗಚ್ಛತಿ ॥೧೦॥

ದಾಸೇರಕಾಯ ತಾಂಬೂಲೀ ದಲಾನಿ ಕೋಮಲಾನಿ ಕಃ ।
ದದಾತಿ ಭಕ್ಷಣಾರ್ಥಾಯ ಮೂರ್ಖೋಽಪಿ ಧರಣೀತಲೇ ॥೧೧॥

ವೀಕ್ಷ್ಯ ತ್ವಾಂ ಕರಸಂಲಗ್ನಾಂ ನಾರದಸ್ಯ ಸಮೀಪತಃ ।
ವಿವಾಹೇ ವರ್ತಮಾನೇ ತು ಕಸ್ಯ ಚೇತೋ ನ ದಹ್ಯತಿ ॥೧೨॥

ಕುಮುಖೇನ ಸಮಂ ವಾರ್ತಾ ನ ರುಚಿಂ ಜನಯತ್ಯತಃ ।
ಆಮರಣಾತ್ತು ಕಥಂ ಕಾಲಃ ಕ್ಷಪಿತವ್ಯಸ್ತ್ವಯಾಽಮುನಾ ॥೧೩॥

---

ನಿನಗೆ ತಕ್ಕವನಾದ ರಾಜಪುತ್ರನೇ ವರನಾಗಲಿ. ನಿನಗೆ ಗುಟ್ಟಾಗಿ ಮೋಸ ಮಾಡಿರುವ ಮುನಿಯನ್ನು ಗಂಡನನ್ನಾಗಿಮಾಡಿಕೊಳ್ಳಬೇಡ. ನೀನು ವ್ಯರ್ಥವಾಗಿ ಈ ಹಠವನ್ನು ಮಾಡಬೇಡ. ದಾದಿಯ ಮೂಲಕ ನಿನ್ನ ತಂದೆಯು ನಿನಗೆ ಹೇಳಿರುವ ಮಾತನ್ನು ಕೇಳಿ ಆದರಂತೆ ನಡೆ. ಇಲ್ಲದಿದ್ದರೆ ಅದನ್ನು ಕೇಳಿ ನಿನ್ನ ತಂದೆಯು ದುಃಖಪಡುವನು. ||೯||

ಕೋಮಲವಾದ ಇರುವಂತಿಗೆಯ; ಬಳ್ಳಿಯು ಗೊಬ್ಬಳಿಯ ಮರಕ್ಕೆ ಹಬ್ಬಿ ದುದನ್ನು ನೋಡಿ ಯಾವ ಚತುರನ ಮನಸ್ಸು ತಾನೆ ದುಃಖಪಡುವುದಿಲ್ಲ? ಒಂಟೆಗೆ ಎಳೆಯದಾಗಿ ಕೋಮಲವಾಗಿರುವ ವೀಳೆಯದೆಲೆಯನ್ನು ತಿನ್ನುವುದಕ್ಕೆಂದು ಭೂಮಂಡಲದಲ್ಲಿ ಯಾವ ಮೂರ್ಖನಾದರೂ ಕೊಡುವನೇ? ನಿನ್ನನ್ನು ನಾರದನಿಗೆ ಕೊಟ್ಟರೆ ಹೀಗಾಗುವುದು ಎಂದು ಅಭಿಪ್ರಾಯವು. ||೧೦-೧೧||

ನಾರದನ ಸಮೀಪದಲ್ಲಿ ವಿವಾಹಕಾಲದಲ್ಲಿ ಅವನ ಕೈಯನ್ನು ಹಿಡಿದಿರುವ ನಿನ್ನನ್ನು ನೋಡಿ ಯಾರ ಮನಸ್ಸು ತಾನೆ ಉರಿದು ಹೋಗುವುದಿಲ್ಲ? ವಿಕಾರವಾದ ಮುಖವುಳ್ಳ ಅವನೊಡನೆ ಮಾತನಾಡುವುದು ಕೂಡ ನಿನಗೆ ಹಿತವಾಗಿರುವುದಿಲ್ಲ. ಆದುದರಿಂದ ಮರಣ ಪರ್ಯಂತವಾಗಿ ನೀನು ಅವನೊಡನೆ ಹೇಗೆ ಕಾಲವನ್ನು ಕಳೆಯುವೆ? ||೧೨-೧೩||

|| ನಾರದ ಉವಾಚ ||

ಇತಿ ಮಾತುರ್ವಚಃ ಶ್ರುತ್ವಾ ದಮಯಂತೀ ಭೃಶಾತುರಾ ।
ಮಾತರಂ ಪ್ರಾಹ ತನ್ವಂಗೀ ಮಯಿ ಸಾ ಕೃತನಿಶ್ಚಯಾ ||೧೪||

ಕಿಂ ಮುಖೇನ ಚ ರೂಪೇಣ ಮೂರ್ಖಸ್ಯ ಚ ಧನೇನ ಕಿಂ ।
ಕಿಂ ರಾಜ್ಯೇನಾಽವಿದಗ್ಧಸ್ಯ ರಸಮಾರ್ಗವಿದೋಽಸ್ಯ ಚ ||೧೫||

ಹರಿಣ್ಯೋಽಪಿ ವನೇ ಧನ್ಯಾ ಯಾ ನಾದೇನ ವಿಮೋಹಿತಾಃ ।
ಮಾತಃ ಪ್ರಾಣಾನ್ಪ್ರಯಚ್ಛಂತಿ ಧಿಙ್ಮೂರ್ಖಾನ್ಮಾನುಷಾನ್ಭುವಿ ||೧೬||

ನಾರದೋ ವೇತ್ತಿ ಯಾಂ ವಿದ್ಯಾಂ ಮಾತಃ ಸಪ್ತಸ್ವರಾತ್ಮಿಕಾಂ ।
ತೃತೀಯಃ ಕೋಽಪಿ ನೋ ವೇದ ಶಿವಾದನ್ಯಃ ಪುಮಾನ್ಕಿಲ ||೧೭||

---

ಹೀಗೆಂದು ಹೇಳಿದ ತಾಯಿಯ ಮಾತನ್ನು ಕೇಳಿ ದಮಯಂತಿಯು ವಿಶೇಷವಾದ ದುಃಖವನ್ನು ಹೊಂದಿ ನನ್ನಲ್ಲೇ ನಿಶ್ಚಯವಾದ ಪ್ರೀತಿಯುಳ್ಳವಳಾಗಿ ತಾಯಿಯನ್ನು ಕುರಿತು ಹೇಳಿದಳು. ||೧೪||

ರಸಮಾರ್ಗವನ್ನು ತಿಳಿಯದಿರತಕ್ಕ ಅವಿವೇಕಿಯಾದ ಮೂಢನಿಗೆ ರೂಪದಿಂದಲೂ ಮುಖದಿಂದಲೂ ಧನದಿಂದಲೂ ರಾಜ್ಯದಿಂದಲೂ ಏನು ಪ್ರಯೋಜನವಾಗುವುದು ? ರಸಜ್ಞನಾದ ಈ ಮುನಿಗೆ ಕಪಿಮುಖವು ದೋಷವಲ್ಲವು. ||೧೫||

ಓ ತಾಯಿಯೇ, ಕಾಡಿನಲ್ಲಿ ಜಿಂಕೆಗಳು ಕೂಡ ನಾದಕ್ಕೆ ಮೋಹಗೊಂಡು ತಮ್ಮ ಪ್ರಾಣವನ್ನೇ ಒಪ್ಪಿಸಲೂ ಹಿಂಜರಿಯವು. ಗಾನದ ರಸವನ್ನು ಬಲ್ಲ ಅವೇ ಕೃತಾರ್ಥತೆಯನ್ನು ಹೊಂದಿರುವುವು ! ಭೂಮಿಯಲ್ಲಿ ಆ ಗಾನದ ರಸವನ್ನು ತಿಳಿಯದ ಮೂಢಜನರನ್ನು ನಿಂದಿಸಬೇಕು. ||೧೬||

ಅಮ್ಮಾ, ನಾರದನು ಸಪ್ತ ಸ್ವರರೂಪವಾದ ಯಾವ ವಿದ್ಯೆಯನ್ನು ತಿಳಿದಿರುವನೋ ಅದನ್ನು ಶಿವನು ಹೊರತಾಗಿ ಮೂರನೆಯ ಮತ್ತೊಬ್ಬ ಯಾವ ಮನುಜನೂ ತಿಳಿದಿಲ್ಲವಲ್ಲವೇ ? ||೧೭||

ಮೂರ್ಖೇಣ ಸಹ ಸಂವಾಸೋ ಮರಣಂ ತತ್ಕ್ಷಣೇಕ್ಷಣೇ ।
ರೂಪವಾನ್ಧನವಾಂಸ್ತ್ಯಾಜ್ಯೋ ಗುಣಹೀನೋ ನರಃ ಸದಾ ॥೧೮॥

ಧಿಙ್ಮೈತ್ರೀಂ ಮೂರ್ಖಭೂಪಾಲೇ ವೃಥಾ ಗರ್ವಸಮನ್ವಿತೇ ।
ಗುಣಜ್ಞೇ ಭಿಕ್ಷುಕೇ ಶ್ರೇಷ್ಠಾ ವಚನಾತ್ಸುಖದಾಯಿನೀ ॥೧೯॥

ಸ್ವರಜ್ಞೋ ಗ್ರಾಮವಿತ್ಕಾಮಂ ಮೂರ್ಛನಾಜ್ಞಾನಭೇದಭಾಕ್ ।
ದುರ್ಲಭಃ ಪುರುಷಶ್ಚಾಪ್ಯರಸಜ್ಞೋ ದುರ್ಲಭೋಽಪಿ ವೈ ॥೨೦॥

ಯಥಾ ನಯತಿ ಕೈಲಾಸಂ ಗಂಗಾ ಚೈವ ಸರಸ್ವತೀ ।
ತಥಾ ನಯತಿ ಕೈಲಾಸಂ ಸ್ವರಜ್ಞಾನವಿಶಾರದಃ ॥೨೧॥

ಸ್ವರಮಾನಂ ತು ಯೋ ವೇದ ಸ ದೇವೋ ಮಾನುಷೋಽಪಿ ಸನ್ ।
ಸಪ್ತಭೇದಂ ನ ಯೋ ವೇದ ಸ ಪಶುಃ ಸುರರಾಡಪಿ ॥೨೨॥

---

ಮೂರ್ಖನ ಜತೆಯಲ್ಲಿ ವಾಸಮಾಡುವುದು ಪ್ರತಿ ಕ್ಷಣದಲ್ಲಿಯೂ ಮರಣ ಸಂಕಟವನ್ನುಂಟುಮಾಡುವುದು. ಗುಣಹೀನನಾದ ಮನುಷ್ಯನೂ ರೂಪವಂತನಾದರೂ ಹಣವಂತನಾದರೂ ಅವನ ಸಹವಾಸವನ್ನು ಬಿಡಲೇಬೇಕು. ||೧೮||

ವ್ಯರ್ಥವಾದ ಅಹಂಕಾರದಿಂದ ಕೂಡಿದ ಮೂಢನಾದ ರಾಜನ ಸ್ನೇಹವನ್ನು ನಿಂದಿಸಬೇಕು. ಗುಣವಂತನಾದ ಭಿಕ್ಷುಕನಾದರೂ ಅವನೊಡನೆ ಸ್ನೇಹಮಾಡಿದರೆ ಅವನೊಡನೆ ಸಲ್ಲಾಪದಿಂದಲೇ ಜನರಿಗೆ ಸುಖವುಂಟಾಗುವುದು. ||೧೯||

ಗಾನದಲ್ಲಿ ಸ್ವರ, ಗ್ರಾಮ, ಮೂರ್ಛನಾಭೇದ ಶೃಂಗಾರಾದಿ ಎಂಟು ರಸಗಳು ಇವುಗಳನ್ನು ತಿಳಿದ ಮನುಷ್ಯನು ದೊರೆಯುವುದು ಕಷ್ಟ. ||೨೦||

ಗಂಗಾ ಮತ್ತು ಸರಸ್ವತಿಯ ತೀರ್ಥಗಳಲ್ಲಿ ಸ್ನಾನಮಾಡಿದರೆ ಅವು ಹೇಗೆ ಕೈಲಾಸವಾಸದ ಸುಖವನ್ನು ಕೊಡುವುವೋ, ಹಾಗೆಯೇ ಸ್ವರಜ್ಞಾನವನ್ನು ಸಂಪೂರ್ಣವಾಗಿ ತಿಳಿದ ಗಾನವಿದ್ಯಾವಿಶಾರದನೂ ಗಾನವನ್ನು ಕೇಳುವವರಿಗೆ ಕೈಲಾಸವಾಸದಷ್ಟು ಸುಖವನ್ನುಂಟುಮಾಡುವನು. ಸ್ವರಗಳ ಉಚ್ಚಾರಣೆಯ ಕಾಲ ಪ್ರಮಾಣವನ್ನು ಯಾವನು ತಿಳಿದಿರುವನೋ ಅವನು ಮನುಷ್ಯನಾದರೂ ದೇವನೇ ಸರಿ. ಸಪ್ತ ಸ್ವರಗಳ ಭೇದವನ್ನು ತಿಳಿಯದವನು ದೇವೇಂದ್ರನಾದರೂ ಪಶುಸಮಾನನಾಗುವನು! ||೨೧-೨೨||

**ಮೂರ್ಛನಾತಾನಮಾರ್ಗಂ ತು ಶ್ರುತ್ವಾ ಮೋದಂ ನ ಯಾತಿ ಯಃ ।**
**ಸ ಪಶುಃ ಸರ್ವಥಾ ಜ್ಞೇಯೋ ಹರಿಣಾಃ ಪಶವೋ ನ ಹಿ ॥೨೩॥**

**ವರಂ ವಿಷಧರಃ ಸರ್ಪಃ ಶ್ರುತ್ವಾ ನಾದಂ ಮನೋಹರಂ ।**
**ಅಶ್ರೋತ್ರೋಽಪಿ ಮುದಂ ಯಾತಿ ಧಿಕ್ಸಕರ್ಣಾಂಶ್ಚ ಮಾನವಾನ್ ॥೨೪॥**

**ಬಾಲೋಽಪಿ ಸುಸ್ವರಂ ಗೇಯಂ ಶ್ರುತ್ವಾ ಮುದಿತಮಾನಸಃ ।**
**ಜಾಯತೇ ಕಿಂ ತು ತೇ ವೃದ್ಧಾ ನ ಜಾನಂತಿ ಧಿಗಸ್ತು ತಾನ್ ॥೨೫॥**

**ಪಿತಾ ಮೇ ಕಿಂ ನ ಜಾನಾತಿ ನಾರದಸ್ಯ ಗುಣಾನ್ಬಹೂನ್ ।**
**ದ್ವಿತೀಯಃ ಸಾಮಗೋ ನಾಸ್ತಿ ತ್ರಿಷು ಲೋಕೇಷು ತತ್ಸಮಃ ॥೨೬॥**

**ತಸ್ಮಾದಸೌ ಮಯಾ ನೂನಂ ವೃತಃ ಪೂರ್ವಂ ಸಮಾಗಮಾತ್ ।**
**ಪಶ್ಚಾಚ್ಛಾಪವಶಾಜ್ಜಾತೋ ವಾನರಾಸ್ಯೋ ಗುಣಾಕರಃ ॥೨೭॥**

---

ಮೂರ್ಛನಾಭೇದಗಳನ್ನೂ ತಾನಗಳ ಮಾರ್ಗವನ್ನೂ ಕೇಳಿ ಯಾವನು ಸಂತೋಷವನ್ನು ಹೊಂದುವುದಿಲ್ಲವೋ ಅವನನ್ನು ಪಶುವೆಂದು ತಿಳಿಯಬೇಕು. ಜಿಂಕೆಗಳು ಪಶುಗಳಾದರೂ ಗಾನರಸವನ್ನು ತಿಳಿವ ಶಕ್ತಿಯಿಂದ ಅವು ಪಶುಗಳಲ್ಲ ವೆನ್ನಬೇಕು. ॥೨೩॥

ಕಿವಿಯಿಲ್ಲದಿದ್ದರೂ ವಿಷವುಳ್ಳ ಸರ್ಪವೂ ಮನೋಹರವಾದ ನಾದವನ್ನು ಕೇಳಿ ಸಂತೋಷಪಡುವುದು. ಕಿವಿಗಳಿದ್ದರೂ ನಾದವನ್ನು ಕೇಳಿ ಸಂತೋಷಪಡದ ಮಾನವರನ್ನು ನಿಂದಿಸಬೇಕು. ॥೨೪॥

ಎಳೆಯ ಮಕ್ಕಳಾದರೂ ಒಳ್ಳೆಯ ಸ್ವರದಿಂದ ಕೂಡಿದ ಗಾನವನ್ನು ಕೇಳಿ ಸಂತೋಷಪಡುವುವು. ವೃದ್ಧರಾದರೂ ಅದನ್ನು ಕೇಳಿ ಸಂತೋಷಪಡದಿದ್ದರೆ ಅವ ರನ್ನು ನಿಂದಿಸಬೇಕು. ॥೨೫॥

ನನ್ನ ತಂದೆಯೂ ನಾರದನ ಅನೇಕ ಸುಗುಣಗಳನ್ನೂ ತಿಳಿದಿಲ್ಲವೇ? ಮೂರು ಲೋಕಗಳಲ್ಲಿಯೂ ಅವನಿಗೆ ಸಮಾನವಾಗಿ ಸಾಮಗಾನವನ್ನು ಮಾಡತಕ್ಕ ಎರಡನೆಯ ಮನುಷ್ಯನು ಇಲ್ಲ. ॥೨೬॥

ಆ ಕಾರಣದಿಂದಲೇ ಮೊದಲೇ ದೊರೆತ ಸಹವಾಸದಿಂದ ಆ ನಾರದನ ಸುಗುಣ ಗಳನ್ನು ತಿಳಿದು ಅವನನ್ನೇ ಪತಿಯನ್ನಾಗಿ ವರಿಸಿದೆನು. ಆಮೇಲೆ ಶಾಪದಿಂದ ಅವ ನಿಗೆ ಕಪಿಯ ಮುಖವುಂಟಾಯಿತು. ॥೨೭॥

ಕಿನ್ನರಾ ನ ಪ್ರಿಯಾಃ ಕಸ್ಯ ಭವಂತಿ ತುರಗಾನನಾಃ ।
ಗಾನವಿದ್ಯಾಸನಾಯುಕ್ತಾಃ ಕಿಂ ಮುಖೇನ ವರೇಣ ಹ ॥೨೮॥

ಪಿತರಂ ಬ್ರೂಹಿ ಮೇ ಮಾತರ್ವೃತೋಽಯಂ ಮುನಿಸತ್ತಮಃ ।
ತಸ್ಮಾತ್ತ್ವಮಾಗ್ರಹಂ ತ್ಯಕ್ತ್ವಾ ದೇಹಿ ತಸ್ಮೈ ಚ ಮಾಂ ಮುದಾ॥೨೯॥

ಇತಿ ಪುತ್ರ್ಯಾ ವಚಃ ಶ್ರುತ್ವಾ ರಾಜ್ಞೀ ರಾಜ್ಞೇ ನ್ಯವೇದಯತ್ ।
ಆಗ್ರಹಂ ಸುಂದರೀ ಜ್ಞಾತ್ವಾ ಸುತಾಯಾ ನಾರದೇ ಮುನೇ ॥೩೦॥

॥ ನಾರದ ಉವಾಚ ॥

ವಿವಾಹಂ ಕುರು ರಾಜೇಂದ್ರ ದಮಯಂತ್ಯಾಃ ಶುಭೇ ದಿನೇ ।
ಮುನಿನಾ ಸ ಚ ಸರ್ವಜ್ಞೋ ವೃತೋಽಸೌ ಮನಸಾಽನಯಾ ॥೩೧॥

॥ ನಾರದ ಉವಾಚ ॥

ಇತಿ ಸಂಚೋದಿತೋ ರಾಜ್ಞ್ಯಾ ಸಂಜಯಃ ಪೃಥಿವೀಪತಿಃ ।
ಚಕಾರ ವಿಧಿವತ್ಸರ್ವಂ ವಿಧಿಂ ವೈವಾಹಿಕಂ ತತಃ ॥೩೨॥

---

ಗಾನವಿದ್ಯೆಯಿಂದ ಕೂಡಿದ ಕುದುರೆಯ ಮುಖವುಳ್ಳ ಕಿನ್ನರರೆಂಬ ದೇವತೆಗಳನ್ನು ಯಾರು ತಾನೆ ಪ್ರೀತಿಸುವುದಿಲ್ಲ? ಉತ್ತಮವಾದ ಮುಖವಿದ್ದ ಮಾತ್ರಕ್ಕೆ ಪ್ರಯೋಜನವೇನು? ॥೨೮॥

ಅಮ್ಮಾ ನಾನು ಆ ಶ್ರೇಷ್ಠನಾದ ನಾರದ ಮುನಿಯನ್ನು ವರಿಸಿರುವೆನು. ಆಕಾರಣದಿಂದ ನೀನು ಕೋಪವನ್ನು ಬಿಟ್ಟು ಆ ಮುನಿಗೇ ನನ್ನನ್ನು ಸಂತೋಷದಿಂದ ಕೊಟ್ಟು ವಿವಾಹವನ್ನು ಮಾಡೆಂದು ನನ್ನ ತಂದೆಗೆ ಹೇಳು. ॥೨೯॥

ಹೀಗೆಂದು ಹೇಳಿದ ಮಗಳ ಮಾತನ್ನು ಕೇಳಿ ರಾಣಿಯು ತನ್ನ ಮಗಳು ನಾರದ ಮುನಿಯಲ್ಲಿ ವಿಶೇಷವಾಗಿ ಆಸಕ್ತಳಾಗಿರುವಳೆಂದು ತಿಳಿದು ರಾಜನನ್ನು ಕುರಿತು 'ಓ ಮಹಾರಾಜನೇ, ದಮಯಂತಿಯು ಸರ್ವಜ್ಞನಾದ ನಾರದನನ್ನು ಮನಸ್ಸಿನಿಂದ ವರಿಸಿರುವಳು. ಆದುದರಿಂದ ಶುಭದಿನದಲ್ಲಿ ಅವಳನ್ನು ಆ ಮುನಿಗೆ ಕೊಟ್ಟು ವಿವಾಹವನ್ನು ಮಾಡು' ಎಂದು ಹೇಳಿದಳು. ॥೩೧॥

ಹೀಗೆಂದು ರಾಣಿಯು ಹೇಳುತ್ತಲು ರಾಜನಾದ ಸಂಜಯನು ವಿಧಿಗನುಸಾರವಾಗಿ ನಮ್ಮಿಬ್ಬರಿಗೂ ವಿವಾಹವನ್ನು ನೆರವೇರಿಸಿದನು. ॥೩೨॥

ಏವಂ ದಾರಗ್ರಹಂ ಕೃತ್ವಾ ವಾನರಾಸ್ಯಃ ಪರಂತಪ ।
ಸ್ಥಿತಸ್ತತ್ರೈವ ಮನಸಾ ದಹ್ಯಮಾನೇನ ಚಾನ್ವಹಂ ॥೩೩॥

ಯದಾಗಚ್ಛದ್ರಾಜಸುತಾ ಸೇವಾರ್ಥಂ ಮಮ ಸನ್ನಿಧೌ ।
ಅಭವಂ ದುಃಖಸಂತಪ್ತಸ್ತದಾಽಹಂ ವಾನರಾನನಃ ॥೩೪॥

ದಮಯಂತೀ ತು ಮಾಂ ವೀಕ್ಷ್ಯ ಪ್ರಫುಲ್ಲವದನಾಂಬುಜಾ ।
ಶೋಕಂ ವಾನರವಕ್ತ್ರತ್ವಾನ್ನ ಚಕಾರ ಕದಾಚನ ॥೩೫॥

ಏವಂ ಗಚ್ಛತಿ ಕಾಲೇ ತು ಸಹಸಾ ಪರ್ವತೋ ಮುನಿಃ ।
ಕುರ್ವಂಸ್ತೀರ್ಥಾನ್ಯನೇಕಾನಿ ದ್ರಷ್ಟುಂ ಮಾಂ ಸಮುಪಾಗತಃ ॥೩೬॥

ಮಯಾಽತಿಮಾನಿತಃ ಪ್ರೇಮ್ಣಾ ಪೂಜಿತಶ್ಚ ಯಥಾವಿಧಿ ।
ಆಸೀನ ಆಸನೇ ದಿವ್ಯೇ ವೀಕ್ಷ್ಯ ಮಾಂ ದುಃಖಿತೋ ಹ್ಯಭೂತ್ ॥೩೭॥

---

ಶ್ರೇಷ್ಠತಪಸ್ವಿಯಾದ ವ್ಯಾಸನೇ—ಹೀಗೆ ನಾನು ದಮಯಂತಿಯನ್ನು ವಿವಾಹಮಾಡಿಕೊಂಡರೂ ಕಪಿಯ ಮುಖವುಳ್ಳವನಾದುದರಿಂದ ಪ್ರತಿದಿನವೂ ದುಃಖದಿಂದ ಕೂಡಿದ ಮನಸ್ಸುಳ್ಳವನಾಗಿ ಅಲ್ಲಿಯೇ ಇದ್ದನು. ರಾಜಪುತ್ರಿಯು ಸೇವೆಗೋಸ್ಕರವಾಗಿ ನನ್ನ ಸಮೀಪಕ್ಕೆ ಬಂದಾಗಲೆಲ್ಲ ಕಪಿಯ ಮುಖವುಳ್ಳ ನಾನು ದುಃಖದಿಂದ ಸಂತಾಪಪಡುತ್ತಿದ್ದೆನು. ॥೩೩-೩೪॥

ದಮಯಂತಿಯಾದರೋ ನನ್ನನ್ನು ನೋಡಿ ಅರಳಿದ ಮುಖವುಳ್ಳವಳಾಗಿ ನನ್ನ ಕಪಿಯ ಮುಖಕ್ಕಾಗಿ ಯಾವಾಗಲೂ ದುಃಖಪಡಲಿಲ್ಲ. ॥೩೫॥

ಹೀಗೆ ಕಾಲವು ಕಳೆಯುತ್ತಿರಲು ಪರ್ವತ ಮುನಿಯು ಅನೇಕ ತೀರ್ಥಯಾತ್ರೆಗಳನ್ನು ಮಾಡುತ್ತಾ ಅಕಸ್ಮಾತ್ತಾಗಿ ನನ್ನನ್ನು ನೋಡುವುದಕ್ಕಾಗಿ ಬಂದನು. ॥೩೬॥

ಬಂದ ಆ ಪರ್ವತಮುನಿಯನ್ನು ನಾನು ಅತ್ಯಂತ ಪ್ರೀತಿಯಿಂದ ಗೌರವಿಸಿ ಯಥಾವಿಧಿಯಾಗಿ ಪೂಜಿಸಿದೆನು. ಆ ಮುನಿಯು ಶ್ರೇಷ್ಠವಾದ ಪೀಠದಲ್ಲಿ ಕುಳಿತು ನನ್ನನ್ನು ನೋಡಿ ದುಃಖವುಳ್ಳವನಾದನು. ॥೩೭॥

**ಕೃತದಾರಂವಾನರಾಸ್ಯಂ ದೀನಂ ಚಿಂತಾತುರಂಭೃಶಂ ।**
**ದಯಾವಾನ್ಮಾಮುವಾಚೇದಂ ಪರ್ವತೋ ಮಾತುಲಂ ಕೃಶಂ ॥೩೮॥**

**ಮಯಾ ನಾರದ ಕೋಪಾತ್ತ್ವಂ ಶಪ್ತೋಽಸಿ ಮುನಿಸತ್ತಮ ।**
**ನಿಷ್ಕೃತಿಂ ತಸ್ಯ ಶಾಪಸ್ಯ ಕರೋಮ್ಯದ್ಯ ನಿಶಾಮಯ ॥೩೯॥**

**ಭವ ತ್ವಂ ಚಾರುವದನೋ ಮಮ ಪುಣ್ಯೇನ ನಾರದ ।**
**ದೃಷ್ಟ್ವಾ ರಾಜಸುತಾಂ ಚಿತ್ತೇ ಕೃಪಾ ಜಾತಾ ಮಮಾಧುನಾ ॥೪೦॥**

॥ ನಾರದ ಉವಾಚ ॥

**ಮಯಾಽಪಿ ಪ್ರವಣಂ ಚಿತ್ತಂ ಕೃತ್ವಾ ಶ್ರುತ್ವಾಽಸ್ಯ ಭಾಷಿತಂ ।**
**ಅನುಗ್ರಹಃ ಕೃತಃ ಸದ್ಯಸ್ತಸ್ಯ ಶಾಪಸ್ಯ ತತ್ಕ್ಷಣಾತ್ ॥೪೧॥**

**ಭಾಗಿನೇಯ ತವಾಪ್ಯಸ್ತು ಗಮನಂ ಸುರಸದ್ಮನಿ ।**
**ಶಾಪಸ್ಯಾಽನುಗ್ರಹಃ ಕಾಮಂ ಕೃತೋಽಯಂ ಪರ್ವತಾಽಧುನಾ ॥೪೨॥**

---

ಮದುವೆಯನ್ನು ಮಾಡಿಕೊಂಡು ಕಪಿಯ ಮುಖವುಳ್ಳವನಾಗಿ ದೈನ್ಯದಿಂದ ವಿಶೇಷವಾಗಿ ಚಿಂತಿಸುತ್ತಿರುವ ಕೃಶನಾದ ತನ್ನ ಸೋದರಮಾವನನ್ನು ನೋಡಿ ಪರ್ವತಮುನಿಯು ದಯೆಯಿಂದ ನನ್ನನ್ನು ಕುರಿತು ಈ ಮಾತನ್ನು ಹೇಳಿದನು. ॥೩೮॥

ಓ ಮುನಿಶ್ರೇಷ್ಠನಾದ ನಾರದನೇ, ನಾನು ಕೋಪದಿಂದ ನಿನಗೆ ಶಾಪವನ್ನು ಕೊಟ್ಟಿನು. ರಾಜಪುತ್ರಿಯ ಸ್ಥಿತಿಯನ್ನು ನೋಡಿ ಈಗ ನನ್ನ ಮನಸ್ಸಿನಲ್ಲಿ ದಯೆಯುಂಟಾಗಿರುವುದು. ಆ ಶಾಪಕ್ಕೆ ಪರಿಹಾರೋಪಾಯವನ್ನು ಈ ದಿನ ಹೇಳುವೆನು ಕೇಳು. ಓ ನಾರದನೇ, ನಾನು ಸಂಪಾದಿಸಿದ ಪುಣ್ಯ ಫಲದಿಂದ ನೀನು ಸುಂದರವಾದ ಮುಖವುಳ್ಳವನಾಗು. ॥೩೯-೪೦॥

ನಾರದನು ಹೇಳಿದನು—ನಾನೂ ಕೂಡ ಆ ಪರ್ವತನ ಮಾತನ್ನು ಕೇಳಿ ಮನಸ್ಸನ್ನು ಪರಿಶುದ್ಧವಾಗಿ ಮಾಡಿಕೊಂಡು ಅ ಕ್ಷಣದಲ್ಲಿಯೇ ನಾನು ಅವನಿಗೆ ಕೊಟ್ಟಿದ್ದ ಶಾಪಕ್ಕೂ ಕೂಡ ಬಿಡುಗಡೆಯ ರೂಪವಾದ ಅನುಗ್ರಹವನ್ನು ಮಾಡಿದೆನು. ಎಲೈ ಸೋದರಳಿಯನಾದ ಪರ್ವತನೇ, ನಿನ್ನನ್ನೂ ಶಾಪದಿಂದ ನಾನು ಬಿಡುಗಡೆಮಾಡುವೆನು. ನಿನಗೂ ದೇವಲೋಕದಲ್ಲಿ ಗಮನವು ಉಂಟಾಗಲಿ ಎಂದೆನು. ॥೪೧-೪೨॥

|| ನಾರದ ಉವಾಚ ||

ಜಾತೋಽಹಂ ಚಾರುವದನೋ ವಚನಾತ್ತಸ್ಯ ಪಶ್ಯತಃ ।
ರಾಜಪುತ್ರೀ ತು ಸಂತುಷ್ಟಾ ಮಾತರಂ ಪ್ರಾಹ ಸತ್ವರಂ ||೪೩||

ಮಾತಸ್ತೇ ಸುಮುಖೋ ಜಾತೋ ಜಾಮಾತಾ ಚ ಮಹಾದ್ಯುತಿಃ ।
ವಚನಾತ್ಪರ್ವತಸ್ಯಾಽದ್ಯ ಮುಕ್ತಶಾಪೋ ಮುನೇರಭೂತ್ ||೪೪||

ತಚ್ಛ್ರುತ್ವಾ ವಚನಂ ರಾಜ್ಞ್ಯಾ ಕಥಿತಂ ತತ್ತು ರಾಜನಿ ।
ಯಯೌ ದ್ರಷ್ಟುಂ ಮುನಿಂ ತತ್ರ ಸಂಜಯಃ ಪ್ರೀತಿಮಾಂಸ್ತದಾ ||೪೫||

ಧನಂ ಸಮರ್ಪಿತಂ ರಾಜ್ಞಾ ಸಂತುಷ್ಟೇನ ತದಾ ಮಹತ್ ।
ಮಹ್ಯಂ ಚ ಭಾಗಿನೇಯಾಯ ಪಾರಿಬರ್ಹಂ ಮಹಾತ್ಮನಾ ||೪೬||

ಏತತ್ತೇ ಸರ್ವಮಾಖ್ಯಾತಂ ವರ್ತನಂ ಯತ್ಪುರಾತನಂ ।
ಮಾಯಾಯಾ ಬಲಮಾಹಾತ್ಮ್ಯಂ ಹ್ಯನುಭೂತಂ ಯಥಾ ಮಯಾ ||೪೭||

---

ಅವನ ಮಾತಿನಿಂದ ಅವನು ನೋಡುತಿದ್ದ ಹಾಗೆಯೇ ನಾನು ಸುಂದರವಾದ ಮುಖವುಳ್ಳವನಾದೆನು. ರಾಜಪುತ್ರಿಯು ಸಂತೋಷಗೊಂಡು ಬೇಗನೆ ತನ್ನ ತಾಯಿಗೆ ಈ ವಿಷಯವನ್ನು ಹೇಳಿದಳು. ||೪೩||

ಓ ತಾಯಿಯೇ, ನಿನ್ನ ಅಳಿಯನು ಈ ದಿನ ಪರ್ವತಮುನಿಯ ಮಾತಿನಿಂದ ಶಾಪದ ಬಿಡುಗಡೆಯನ್ನು ಹೊಂದಿದನು. ಸುಂದರವಾದ ಮುಖವುಳ್ಳವನೂ ವಿಶೇಷವಾದ ಕಾಂತಿಯುಳ್ಳವನೂ ಆಗಿರುವನು! ಎಂದಳು. ||೪೪||

ರಾಣಿಯು ಈ ಮಾತನ್ನು ಕೇಳಿ ರಾಜನಿಗೆ ಹೇಳಿದಳು. ಸಂಜಯರಾಜನು ಆಗ ಸಂತೋಷದಿಂದ ಕೂಡಿ ಆ ಮುನಿಯನ್ನು ನೋಡುವುದಕ್ಕಾಗಿ ಹೋದನು. ||೪೫||

ಆಗ ಸಂತೋಷಗೊಂಡ ರಾಜನು ವಿಶೇಷವಾಗಿ ಧನವನ್ನು ದಾನಮಾಡಿದನು. ನನಗೂ ನನ್ನ ಸೋದರಳಿಯನಿಗೂ ಕೂಡ ಮಹಾತ್ಮನಾದ ಆ ರಾಜನು ಬಹುಮಾನಗಳನ್ನು ಕೊಟ್ಟನು. ||೪೬||

ಎಲೈ ವ್ಯಾಸನೇ, ಮಾಯೆಯ ಬಲವಾದ ಮಹಿಮೆಯಿಂದ ಪೂರ್ವದಲ್ಲಿ ನಾನು ಅನುಭವಿಸಿದ ಸುಖದುಃಖಗಳ ಸ್ವರೂಪವನ್ನೆಲ್ಲ ನಿನಗೆ ಹೇಳಿರುವೆನು.

**ಸಂಸಾರೇಽಸ್ಮಿನ್ಮಹಾಭಾಗ ಮಾಯಾಗುಣಕೃತೇಽನೃತೇ ।**
**ತನುಭೃತ್ತು ಸುಖೀ ನಾಸ್ತಿ ನ ಭೂತೋ ನ ಭವಿಷ್ಯತಿ ॥೪೮॥**

**ಕಾಮಕ್ರೋಧೌ ತಥಾಲೋಭೋ ಮತ್ಸರೋ ಮಮತಾ ತಥಾ ।**
**ಅಹಂಕಾರೋ ಮದಃ ತೇನ ಜಿತಾಃ ಸರ್ವೇ ಮಹಾಬಲಾಃ ॥೪೯॥**

**ಸತ್ತ್ವಂ ರಜಸ್ತಮಶ್ಚೈವ ಗುಣಾಸ್ತ್ರಯ ಇಮೇ ಕಿಲ ।**
**ಕಾರಣಂ ಪ್ರಾಣಿನಾಂ ದೇಹಸಂಭವೇ ಸರ್ವಥಾ ಮುನೇ ॥೫೦॥**

**ಕಸ್ಮಿಂಶ್ಚಿತ್ಸಮಯೇ ವ್ಯಾಸ ವನೇಽಹಂ ವಿಷ್ಣುನಾ ಸಹ ।**
**ಗಚ್ಛನ್ಹಾಸ್ಯವಿನೋದೇನ ಸ್ತ್ರೀಭಾವಂ ಗಮಿತಃ ಕ್ಷಣಾತ್ ॥೫೧॥**

**ರಾಜಪತ್ನೀತ್ವಮಾಪನ್ನೋ ಮಾಯಾಬಲವಿಮೋಹಿತಃ ।**
**ಪುತ್ರಾಃ ಪ್ರಸೂತಾ ಬಹವೋ ಗೇಹೇ ತಸ್ಯ ನೃಪಸ್ಯ ಹ ॥೫೨॥**

---

ಜ್ಞಾನಿಯಾದ ನನಗೂ ಕೂಡ ಮಾಯೆಯ ವಿಕ್ಷೇಪಶಕ್ತಿರೂಪವಾದ ಸುಖದುಃಖಾದಿಗಳು ಇದ್ದೇ ಇರುವುವು. ||೪೭||

ಮಹಾಪುಣ್ಯವಂತನಾದ ವ್ಯಾಸನೇ, ಮಾಯೆಯ ಸಂಬಂಧದಿಂದ ಮಿಥ್ಯಾರೂಪವಾದ, ಪ್ರಾಣಿಗಳ ಶರೀರದ ಉತ್ಪತ್ತಿಗೆ ಕಾರಣವಾದ ಸತ್ತ್ವರಜಸ್ತಮೋಗುಣಗಳಿಂದುಂಟಾದ, ಈ ಸಂಸಾರದಲ್ಲಿ ನಿತ್ಯಸುಖವನ್ನು ಅನುಭವಿಸುವ ಮನುಷ್ಯನು ಈಗ ಇಲ್ಲ. ಹಿಂದೆ ಇರಲಿಲ್ಲ. ಮುಂದೆಯೂ ಇರುವುದಿಲ್ಲ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಅಹಂಕಾರ, ಅಭಿಮಾನ ಇವುಗಳನ್ನು ಯಾರು ಜಯಿಸಿರುವರು ? ಮಾಯೆಯ ವಿಕ್ಷೇಪಶಕ್ತಿಯಿಂದುಂಟಾದ ಈ ಗುಣಗಳು ಸಕಲರಿಗೂ ಇದ್ದೇ ಇರುವುವು. ಇವುಗಳಿಗೆ ಪ್ರತೀಕಾರವಿಲ್ಲವೇ ಇಲ್ಲ. ಹಾಗೆಯೇ ಗುಣತ್ರಯಗಳ ವ್ಯತ್ಯಾಸವೂ ನಿಯತವಾಗಿ ಇದ್ದೇ ಇರುವುದು. ||೪೮-೪೬-೫೦||

ಎಲೈ ವ್ಯಾಸನೇ, ಮತ್ತೊಂದು ಕಥೆಯನ್ನು ಹೇಳುವೆನು ಕೇಳು : ಒಂದಾನೊಂದು ಕಾಲದಲ್ಲಿ ನಾನು ವಿಷ್ಣುವಿನ ಜತೆಯಲ್ಲಿ ಕಾಡಿನಲ್ಲಿ ಹೋಗುತ್ತಾ ವಿನೋದವಾಗಿ ಹಾಸ್ಯಮಾಡುತ್ತಿರಲು ಆ ವಿಷ್ಣುವು ನನ್ನನ್ನು ಒಂದು ಕ್ಷಣದೊಳಗಾಗಿ ಸ್ತ್ರೀಯನ್ನಾಗಿ ಮಾಡಿಬಿಟ್ಟನು. ||೫೧||

ಮಾಯಾಬಲದಿಂದ ಅಜ್ಞಾನಿಯಾಗಿ ರಾಜನ ಪತ್ನಿಯಾಗಿ ಆ ರಾಜನ ಮನೆಯಲ್ಲಿ ನಾನು ಅನೇಕ ಮಕ್ಕಳನ್ನು ಹೆತ್ತೆನು. ||೫೨||

|| ವ್ಯಾಸ ಉವಾಚ ||

**ಸಂಶಯೋಽಯಂ ಮಹಾನ್ನಾಥೋ ಶ್ರುತ್ವಾ ತೇ ವಚನಂ ಕಿಲ ।**
**ಕಥಂ ನಾರೀತ್ವಮಾಪನ್ನಸ್ತ್ವಂ ಮುನೇ ಜ್ಞಾನವಾನ್ ಭೃಶಂ ॥೫೩॥**

**ಕಥಂ ಚ ಪುರುಷೋ ಜಾತೋ ಬ್ರೂಹಿ ಸರ್ವಮಶೇಷತಃ ।**
**ಕಥಂ ಪುತ್ರಾಸ್ತ್ವಯಾ ಜಾತಾಃ ಕಸ್ಯ ರಾಜ್ಞೋ ಗೃಹೇಽಂಜಸಾ॥೫೪॥**

**ಏತದಾಖ್ಯಾಹಿ ಚರಿತಂ ಮಾಯಾಯಾ ಮಹದದ್ಭುತಂ ।**
**ಮೋಹಿತಂ ಚ ಯಯಾ ಸರ್ವಮಿದಂ ಸ್ಥಾವರಜಂಗಮಂ ॥೫೫॥**

**ನ ತೃಪ್ತಿಮಧಿಗಚ್ಛಾಮಿ ಶೃಣ್ವಂಸ್ತವ ಕಥಾಮೃತಂ ।**
**ಸರ್ವಗ್ರಂಥಾರ್ಥತತ್ತ್ವಂ ಚ ಸರ್ವಸಂಶಯನಾಶನಂ ॥೫೬॥**

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ ಸಪ್ತವಿಂಶೋಽಧ್ಯಾಯಃ.

---

ವ್ಯಾಸಋಷಿಯು ಹೇಳಿದನು—ಓ ಸತ್ಪುರುಷನಾದ ನಾರದನೇ, ನಿನ್ನ ಮಾತನ್ನು ಕೇಳಿ ನನಗೆ ದೊಡ್ಡ ಸಂದೇಹವು ಬಂದಿರುವುದು. ಮುನಿಶ್ರೇಷ್ಠನೂ ಸಂಪೂರ್ಣವಾದ ಜ್ಞಾನಿಯೂ ಆದ ನೀನು ಹೇಗೆ ಸ್ತ್ರೀಯಾದೆ? ॥೫೩॥

ಆ ಮೇಲೆ ಹೇಗೆ ಪುರುಷನಾದೆ. ಅವೆಲ್ಲವನ್ನೂ ವಿಸ್ತಾರವಾಗಿ ಹೇಳು. ಯಾವ ರಾಜನ ಮನೆಯಲ್ಲಿ ನಿನ್ನಿಂದ ಹೇಗೆ ಮಕ್ಕಳು ಹುಟ್ಟಿದರು? ಇದನ್ನೂ ವಿಸ್ತರಿಸಿ ಹೇಳು. ॥೫೪॥

ಯಾವ ಮಾಯಾಶಕ್ತಿಯಿಂದ ಈ ಚರಾಚರ ಪ್ರಾಣಿಗಳಿಂದ ಕೂಡಿದ ಪ್ರಪಂಚವು ಅಜ್ಞಾನದಲ್ಲಿ ಮುಳುಗಿರುವುದೋ ಆ ಮಾಯೆಯ ಆಶ್ಚರ್ಯಕರವಾದ ಚರಿತ್ರೆಯನ್ನು ಹೇಳು. ॥೫೫॥

ನಿನ್ನ ಸಂಬಂಧವಾದ ಅಮೃತದಂತಿರುವ ಕಥೆಯನ್ನು ಕೇಳಿ ನಾನು ತೃಪ್ತಿಯನ್ನು ಹೊಂದಲಿಲ್ಲ. ನಿನ್ನ ಕಥೆಯು ಸಮಸ್ತ ಗ್ರಂಥಗಳ ತತ್ತ್ವಾರ್ಥಸ್ವರೂಪವಾದುದಾಗಿ ಸಮಸ್ತ ಸಂಶಯಗಳನ್ನೂ ನಾಶಮಾಡತಕ್ಕುದಾಗಿರುವುದು. ॥೫೬॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠ ಸ್ಕಂಧೇ

### || ಅಷ್ಟವಿಂಶೋಽಧ್ಯಾಯಃ ||

### ಇಪ್ಪತ್ತೆಂಟನೆಯ ಅಧ್ಯಾಯವು

|| ನಾರದ ಉವಾಚ ||

**ನಿಶಾಮಯ ಮುನಿಶ್ರೇಷ್ಠ ಗದತೋ ಮಮ ಸತ್ಕಥಾಂ ।**
**ಮಾಯಾಬಲಂ ಸುದುರ್ಜ್ಞೇಯಂ ಮುನಿಭಿರ್ಯೋಗವಿತ್ತಮೈಃ ॥೧॥**

**ಮಾಯಯಾ ಮೋಹಿತಂ ಸರ್ವಂ ಜಗತ್ಸ್ಥಾವರಜಂಗಮಂ ।**
**ಬ್ರಹ್ಮಾದಿಸ್ತಂಬಪರ್ಯಂತಂ ಅಜಯಾ ದುರ್ವಿಭಾವ್ಯಯಾ ॥೨॥**

**ಕದಾಚಿತ್ಸತ್ಯಲೋಕಾದ್ವೈ ಶ್ವೇತದ್ವೀಪೇ ಮನೋಹರೇ ।**
**ಗತೋಽಹಂ ದರ್ಶನಾಕಾಂಕ್ಷೀ ಹರೇರದ್ಭುತಕರ್ಮಣಃ ॥೩॥**

---

ನಾರದನು ಹೇಳಿದನು. ಎಲೈ ಋಷಿಶ್ರೇಷ್ಠನೇ, ಕೇಳು, ನಾನು ನನ್ನ ಉತ್ತಮವಾದ ಒಳ್ಳೆಯ ಕಥೆಯನ್ನು ಹೇಳುತ್ತೇನೆ. ಯೋಗವನ್ನು ಅಭ್ಯಾಸಮಾಡಿರುವ ಬ್ರಹ್ಮಜ್ಞಾನಿಗಳಿಂದಲೂ ಮಾಯೆಯ ಸಾಮರ್ಥ್ಯವು ಇಷ್ಟೇ, ಹೀಗೆಯೇ ಇದೆ, ಎಂದು ತಿಳಿಯಲಸಾಧ್ಯವಾಗಿರುವುದು ! ||೧||

ಸ್ಥಿರಚರಾತ್ಮಕವಾದ ಈ ಜಗತ್ತೆಲ್ಲವೂ ಬ್ರಹ್ಮನೇ ಮೊದಲುಗೊಂಡು ತೃಣಕಾಷ್ಠದವರೆಗೂ, ನಿತ್ಯಳಾದ ಮತ್ತು ಹೀಗೇ ಸರಿ ಎಂದು ಊಹಿಸಲಶಕ್ಯವಾದ ಸ್ವಭಾವವುಳ್ಳವಳಾದ ಮಾಯೆಯಿಂದ ಮೋಹಗೊಳಿಸಲ್ಪಟ್ಟಿರುವುದು. ||೨||

ನಾನು ಒಂದಾನೊಂದು ಕಾಲದಲ್ಲಿ ಸತ್ಯಲೋಕದಿಂದ ಹೊರಟು ಮನೋಹರವಾದ ಶ್ವೇತದ್ವೀಪಕ್ಕೆ ಬಂದವನಾಗಿ ಆಶ್ಚರ್ಯಕರವಾದ ಕೆಲಸವನ್ನು ಮಾಡಬಲ್ಲವನಾದ ಶ್ರೀಮಹಾವಿಷ್ಣುವಿನ ದರ್ಶನವನ್ನು ಅಪೇಕ್ಷಿಸುವವನಾಗಿದ್ದೆನು. ||೩||

ವಾದಯನ್ ಮಹತೀಂ ವೀಣಾಂ ಸ್ವರತಾನವಿಭೂಷಿತಾಂ ।
ಗಾಯತ್ರಂ ಗಾಯಮಾನಸ್ತು ಸಾಮ ಸಪ್ತಸ್ವರಾನ್ವಿತಂ ॥೪॥

ದೃಷ್ಟೋ ಮಯಾ ದೇವದೇವಶ್ಚಕ್ರಪಾಣಿರ್ಗದಾಧರಃ ।
ಕೌಸ್ತುಭೋದ್ಭಾಸಿತೋರಸ್ಕೋ ಮೇಘಶ್ಯಾಮಶ್ಚತುರ್ಭುಜಃ ॥೫॥

ಪೀತಾಂಬರ ಪರೀಧಾನೋ ಮುಕುಟಾಂಗದರಾಜಿತಃ ।
ಲಕ್ಷ್ಮ್ಯಾ ಸಹ ವಿಲಾಸಿನ್ಯಾ ಕ್ರೀಡಮಾನೋ ಮುದಾಯುತಃ ॥೬॥

ವೀಕ್ಷ್ಯ ಮಾಂ ಕಮಲಾದೇವೀ ಗತಾಽಂತರ್ಧಾನಮಂತಿಕಾತ್ ।
ಸರ್ವಲಕ್ಷಣಸಂಪನ್ನಾ ಸರ್ವಭೂಷಣಭೂಷಿತಾ ॥೭॥

ನಾರೀಣಾಂ ಪ್ರವರಾ ಕಾಂತಾ ರೂಪಯೌವನ ಗರ್ವಿತಾ ।
ಸುಪ್ರಿಯಾ ವಾಸುದೇವಸ್ಯ ವರಚಾಮೀಕರಪ್ರಭಾ ॥೮॥

---

ನಾನು ವಿಷ್ಣುವನ್ನು ದರ್ಶನಮಾಡಲು ಅಪೇಕ್ಷೆಯಿಂದ ಹೋಗಿದ್ದಾಗ ಸಪ್ತ ಸ್ವರಗಳಿಂದ ಕೂಡಿರುವ ಗಾಯತ್ರವೆಂಬ ಸಾಮವನ್ನು, ಸಪ್ತಸ್ವರಗಳು, ಅವುಗಳ ವಿಸ್ತಾರಮತ್ತು ಸ್ವರಸ್ಥಾಯಿಗಳ ಜೋಡಣೆಯ ಕ್ರಮಗಳಿಂದ ಚೆನ್ನಾಗಿ ನುಡಿಯುತ್ತಿರುವ ನನ್ನ ಮಹತೀ ಎಂಬ ವೀಣೆಯಲ್ಲಿ ಗಾನಮಾಡುವವನಾಗಿ ಇದ್ದೆನು. ॥೪॥

ಚಕ್ರವೆಂಬ ಆಯುಧವನ್ನೂ, ಗದಾಯುಧವನ್ನೂ ಧರಿಸಿರುವವನಾಗಿಯೂ, ಕೌಸ್ತುಭವೆಂಬ ರತ್ನದಿಂದ ಹೊಳೆಯುವ ಎದೆಯುಳ್ಳ, ಮೇಘದಂತಿರುವ ದೇಹ ಕಾಂತಿಯುಳ್ಳ, ನಾಲ್ಕು ತೋಳುಗಳುಳ್ಳ, ಪೀತಾಂಬರವನ್ನು ಧರಿಸಿಕೊಂಡು ಕಿರೀಟ ಭುಜಕೀರ್ತಿಯೇ ಮುಂತಾದ ಆಭರಣಗಳಿಂದ ಪ್ರಕಾಶಿಸುವ, ದೇವದೇವನಾದ ವಿಷ್ಣುವನ್ನು ಸಂತೋಷದಿಂದ ಲಕ್ಷ್ಮಿಯೊಡನೆ ವಿಹರಿಸುತ್ತಿರುವಾಗ ನಾನು ಕಂಡೆನು. ॥೫-೬॥

ಎಲ್ಲ ವಿಧವಾದ ಶುಭ ಲಕ್ಷಣಗಳಿಂದ ಕೂಡಿರುವ, ಸಮಸ್ತಾಭರಣಗಳಿಂದ ಅಲಂಕೃತಳಾಗಿ, ಸ್ತ್ರೀಯರಲ್ಲಿ ಎಲ್ಲರಿಗಿಂತಲೂ ಶ್ರೇಷ್ಠಳಾಗಿ, ಮನೋಹರವಾದ ಆಕಾರವೂ, ಯೌವನವೂ ಇವುಗಳಿಂದ ಹೆಮ್ಮೆ ಪಡುವವಳಾಗಿ, ಉತ್ತಮವಾದ ಚಿನ್ನದ ಕಾಂತಿಯಂತಿರುವ ದೇಹದ ಕಾಂತಿಯುಳ್ಳವಳಾಗಿ ಇರುವ ವಿಷ್ಣುವಿನ ಪ್ರೀತಿಪಾತ್ರಳಾದ ಲಕ್ಷ್ಮೀದೇವಿಯು, ನನ್ನನ್ನು ನೋಡಿದ ಕೂಡಲೇ, ವಿಷ್ಣುವಿನ

ಅಂತರ್ಗೃಹಂ ಗತಾಂ ದೃಷ್ಟ್ವಾ ಸಿಂಧುಜಾಂ ವ್ಯಂಜನಾನ್ವಿತಾಂ ।
ಮಯಾಪೃಷ್ಟೋ ದೇವದೇವೋ ವನಮಾಲೀ ಜಗತ್ಪ್ರಭುಃ ॥೯॥

ಭಗವನ್ ದೇವದೇವೇಶ ಪದ್ಮನಾಭ ಮುರಾರಿಹನ್ ।
ಕಥಂ ಚ ಮಾ ಗತಾ ದೃಷ್ಟ್ವಾ ಮಾಮಾಗಚ್ಛಂತಮಂತಿಕಾತ್ ॥೧೦॥

ನಾಹಂ ವಿಟೋ ನ ವಾ ಧೂರ್ತೋ ತಾಪಸೋಽಹಂ ಜಗದ್ಗುರೋ ।
ಜಿತೇಂದ್ರಿಯೋ ಜಿತಕ್ರೋಧೋ ಜಿತಮಾಯೋ ಜನಾರ್ದನ ॥೧೧॥

॥ ನಾರದ ಉವಾಚ ॥

ನಿಶಮ್ಯ ವಚನಂ ಕಿಂಚಿದ್ಗರ್ವಯುಕ್ತಂ ಜನಾರ್ದನಃ ।
ಉವಾಚ ಮಾಂ ಸ್ಮಿತಂ ಕೃತ್ವಾ ವೀಣಾವನ್ಮಧುರಾಂ ಗಿರಂ ॥೧೨॥

---

ಸಮೀಪದಿಂದ ನನ್ನ ಕಣ್ಣಿಗೆ ಕಾಣಿಸದ ಹಾಗೆ ಅಂತರ್ಧಾನವನ್ನು ಹೊಂದಿದಳು. ॥೭-೮॥

ತೆಳುವಾದ ವಸ್ತ್ರದ ಒಳಗಿದ್ದರೂ ಹೊರಗೆ ಕಾಣುತ್ತಿರುವ ಅವಯವಗಳುಳ್ಳ ಸಮುದ್ರ ಪುತ್ರಿಯಾದ ಲಕ್ಷ್ಮೀದೇವಿಯು ಅಂತಃಪುರವನ್ನು ಹೊಂದಿದ್ದನ್ನು ನೋಡಿ, ಜಗತ್ತಿಗೆ ಸ್ವಾಮಿಯಾದ, ವನಮಾಲೆಯನ್ನು ಧರಿಸಿರುವ, ದೇವದೇವನಾದ ವಿಷ್ಣುವನ್ನು ಕುರಿತು ನಾನು ಪ್ರಶ್ನೆ ಮಾಡಿದೆನು. ॥೯॥

ಷಡ್ಗುಣೈಶ್ವರ್ಯಸಂಪನ್ನನಾದ, ದೇವತೆಗಳ ಮುಖಂಡರಿಗೂ ಅಧಿಪತಿಯಾದ, ಪದ್ಮವೇ ನಾಭಿಯಲ್ಲಿ ಉಳ್ಳವನಾದ, ಮುರಾಸುರನನ್ನೂ ಶತ್ರುಗಳನ್ನೂ ನಾಶಮಾಡಿದವನಾದ, ಓ ಸ್ವಾಮಿಯೇ, ಲಕ್ಷ್ಮಿಯು ನಾನು ನಿನ್ನ ಸಮೀಪಕ್ಕೆ ಬರುತ್ತಿರುವುದನ್ನು ಕಂಡು ಏತಕ್ಕಾಗಿ ನನ್ನ ಕಣ್ಣಿಗೆ ಕಾಣಿಸದಂತೆ ಹೊರಟು ಹೋದಳು. ? ॥೧೦॥

ನಾನು ವಿಟಪುರುಷನಲ್ಲ. ನಾನು ವಂಚಕನಲ್ಲ. ಓ ಜಗದ್ಗುರುವೇ, ಹೇ ಜನಾರ್ದನನೇ, ನಾನು ಇಂದ್ರಿಯಗಳನ್ನು ಜಯಿಸಿದವನು. ಕೋಪವನ್ನು ಜಯಿಸಿದವನು ಮತ್ತು ಮಾಯೆಯನ್ನೂ ಜಯಿಸಿದವನು. ॥೧೧॥

ನಾರದನು ಹೇಳಿದನು, ಆಗ ದುಷ್ಟರಾದ ಜನಗಳನ್ನು ಶಿಕ್ಷಿಸುವವನಾದ ನಾರಾಯಣನು ಕೊಂಚಮಟ್ಟಿನ ಅಹಂಕಾರದಿಂದ ಕೂಡಿರುವ ನನ್ನ ಮಾತನ್ನು

|| ವಿಷ್ಣುರುವಾಚ ||

ನಾರದೈವಂ ವಿಧಾ ನೀತಿರ್ನ ಸ್ಥಾತವ್ಯಂ ಕದಾಚನ ।
ಪತಿಂ ವಿನಾಽನ್ಯಸಾನ್ನಿಧ್ಯೇ ಕಸ್ಯಚಿದ್ಯೋಷಯಾ ಕ್ವಚಿತ್ ॥೧೩॥

ಮಾಯಾ ಸುದುರ್ಜಯಾ ವಿದ್ವನ್ ಯೋಗಿಭಿರ್ಜಿತಮಾರುತೈಃ ।
ಸಾಂಖ್ಯವಿದ್ಭಿರ್ನಿರಾಹಾರೈಸ್ತಾಪಸೈಶ್ಚ ಜಿತೇಂದ್ರಿಯೈಃ ॥೧೪॥

ದೇವೈಶ್ಚ ಮುನಿಶಾರ್ದೂಲ ಯತ್ ತ್ವಯೋಕ್ತಂ ವಚೋಽಧುನಾ ।
ಜಿತಮಾಯೋಽಸ್ಮಿ ಗೀತಜ್ಞ ನೈವಂ ವಾಚ್ಯಂ ಕದಾಚನ ॥೧೫॥

ನಾಹಂ ಶಿವೋ ನ ವಾ ಬ್ರಹ್ಮಾ ಜೇತುಂ ತಾಂ ಪ್ರಭವೋಽಪ್ಯಜಾಂ ।
ಮುನಯಸ್ಸನಕಾದ್ಯಾಶ್ಚ ಕಸ್ತ್ವಂ ಕೇಽನ್ಯೇ ಕ್ಷಮಾ ಜಯೇ ॥೧೬॥

---

ಕೇಳಿ ಮಂದಹಾಸವನ್ನು ಮಾಡುತ್ತಾ ವೀಣೆಯ ಧ್ವನಿಯಂತೆ ಇಂಪಾಗಿ ಮಧುರ ವಾದ ಮಾತನ್ನು ನನ್ನ ಸಂಗಡ ಹೀಗೆ ಹೇಳಿದನು. ||೧೨||

ವಿಷ್ಣುವು ಹೇಳಿದನು. ಎಲೈ ನಾರದನೇ, ಕೇಳು. ಯಾವ ಸ್ತ್ರೀಯಾದರೂ ಪತಿಯು ಹೊರತಾಗಿ ಬೇರೆಯೊಬ್ಬ ಪುರುಷನ ಸಮೀಪದಲ್ಲಿ ಯಾವಾಗಲೂ ಇರ ಕೂಡದು. ಎಂಬುದು ನೀತಿಯಾಗಿ ಇರುವುದು. ||೧೩||

ಎಲೈ ಜ್ಞಾನಿಯಾದ ನಾರದನೇ, ಕೇಳು— ಪ್ರಾಣವಾಯುವನ್ನು ಯೋಗಾ ಭ್ಯಾಸದಿಂದ ಜಯಿಸಿ ಇರುವ, ಇಂದ್ರಿಯ ಜಯವುಳ್ಳ, ಆಹಾರವನ್ನೂ ಬಿಟ್ಟಿರುವ, ತಪಸ್ಸಿನಲ್ಲಿರುವ, ಸಾಂಖ್ಯಶಾಸ್ತ್ರವನ್ನು ತಿಳಿದಿರುವವರಿಂದಲೂ ದೇವತೆಗಳಿಂದಲೂ ಮಾಯೆಯು ಜಯಿಸಲಶಕ್ಯವೆಂಬುದು ನಿಶ್ಚಯಿಸಲ್ಪಟ್ಟಿರುವುದು. ||೧೪||

ಸಂಗೀತವನ್ನು ಚೆನ್ನಾಗಿ ಹೇಳಬಲ್ಲವನಾದ ನಾರದನೇ, ನೀನು ಮಾಯೆ ಯನ್ನು ಜಯಿಸಿದ್ದೇನೆಂದು ಈಗ ಹೇಳಿದೆ! ಇಂತಹ ಹೆಮ್ಮೆಯ ಮಾತನ್ನೂ ದೇವತೆಗಳಂಥವರೂ ಹೇಳಬಾರದು. ಅಲ್ಲದೆ ಇನ್ನು ಮುಂದೆ ಯಾವಾಗಲೂ ನೀನೂ ಹೀಗೆ ಹೇಳಬಾರದು ! ಏಕೆಂದರೆ ||೧೫||

ಮಾಯೆಯನ್ನು ಜಯಿಸುವ ವಿಷಯದಲ್ಲಿ ನಾನೂ ಶಕ್ತನಲ್ಲ. ಶಿವನೂ ಸಮರ್ಥನಲ್ಲವು. ಬ್ರಹ್ಮನೂ ಮಾಯೆಯನ್ನು ಗೆಲ್ಲಲಾರನು- ಸನಕನೇ ಮೊದಲಾದ ಋಷಿಗಳೂ ಮಾಯೆಯನ್ನು ಜಯಿಸಲಾರದೆ ಇರುವಾಗ ಪಂಡಿತಪಾಮರನಾದ ನೀನು

**ದೇವದೇಹಂ ನೃದೇಹಂ ವಾ ತಿರ್ಯಗ್ದೇಹಮಥಾಪಿ ವಾ ।**
**ಬಿಭೃಯಾದ್ಯಶ್ಶರೀರಂ ಚ ಸ ಕಥಂ ತಾಂ ಜಯೇದಜಾಂ ॥೧೭॥**

**ತ್ರಿಯುತಸ್ತಾಂ ಕಥಂ ಮಾಯಾಂ ಜೇತುಂ ಶಕ್ತಃ ಪುಮಾನ್ಭವೇತ್ ।**
**ವೇದವಿದ್ಯೋಗವಿದ್ವಾಽಪಿ ಸರ್ವಜ್ಞೋ ವಿಜಿತೇಂದ್ರಿಯಃ ॥೧೮॥**

---

ಎಷ್ಟರವನು ? ಇತರರು ಇನ್ನು ಯಾರು ತಾನೇ ಆ ಮಾಯೆಯನ್ನು ಗೆಲ್ಲಬಲ್ಲರು ? ||೧೬||

ಯಾವ ಪ್ರಾಣಿಯೇ ಆಗಲಿ ದೇಹವನ್ನು ಧರಿಸದೆ ಇರಲು ಸಾಧ್ಯವಿಲ್ಲವು. ದೇವತೆಗಳ ಶರೀರವನ್ನಾಗಲಿ, ಮನುಷ್ಯನ ಶರೀರವನ್ನಾಗಲಿ, ತಿರ್ಯಕ್ಪ್ರಾಣಿಗಳ ಶರೀರವನ್ನಾಗಲಿ ಧರಿಸಲೇ ಬೇಕು. ನಾನು, ನನ್ನದು, ಎಂಬ ಅಭಿಮಾನದಿಂದ ದೇಹವನ್ನು ಧರಿಸುವುದೇ ಮಾಯೆಯ ಕಾರ್ಯವಾಗಿದೆ. ಅಲ್ಲದೆ ಮಾಯೆಯನ್ನು ಜಯಿಸಿದನಂತರ ದೇಹಸಂಬಂಧವಿಲ್ಲದೆ ಇರಬೇಕಾಗುತ್ತದೆ. ಏಕೆಂದರೆ ಲೋಕದಲ್ಲಿ ಕಾರಣವಿಲ್ಲದೆ ಕಾರ್ಯವು ಇರುವುದಿಲ್ಲ. ದೇಹ ಸಂಬಂಧವಿಲ್ಲದೆ ಯಾವ ಪ್ರಾಣಿಯೂ ಇರುವುದಿಲ್ಲವಾದ್ದರಿಂದ ಯಾರು ತಾನೇ ಈ ಲೋಕದಲ್ಲಿ ಮಾಯೆಯನ್ನು ಗೆದ್ದಿರುವರು? ಮಾಯೆಯನ್ನು ಜಯಿಸಿರುವುದೂ, ದೇಹವನ್ನು ಧರಿಸಿರುವುದೂ, ಎಂದರೆ ಇತರರಂತೆ ಲೌಕಿಕ ವ್ಯವಹಾರದಲ್ಲಿ ತೊಡಗಿರುವುದೂ, ಇವೆರಡೂ ಕತ್ತಲೆ ಬೆಳಕುಗಳಂತೆ ಒಂದೆಡೆಯಲ್ಲಿ ಒಟ್ಟಿಗೇ ಇರುವುದು ಅಸಂಭವವು ಎಂದು ತಾತ್ಪರ್ಯವು.||೧೭||

ಆತ್ಮಜ್ಞಾನಿಯಾದವನಿಗೆ ಆತ್ಮಸಾಕ್ಷಾತ್ಕಾರವು ಸರ್ವದಾ ಆಗುತ್ತಿರುವ ಕಾರಣದಿಂದ ಅವನ ಆತ್ಮಜ್ಞಾನಕ್ಕೆ ಮಾಯೆಯ ಆವರಣವಿಲ್ಲದೆ ಇರುವುದು. ಆದುದರಿಂದ ಅಂಥವನು ಮಾಯೆಯನ್ನು ಜಯಿಸಿದಾನೆಂದು ಹೇಳಬಹುದಾದರೂ, ಅವನಿಗೂ ಶರೀರವಿರುವುದರಿಂದ ಮಾಯೆಯ ವಿಕ್ಷೇಪಶಕ್ತಿಯು ತೀರ ನಾಶವಾಗದೆ ದೃಢವಾಗಿರುವುದರಿಂದ, ಅದೇ ಮಾಯೆಯೆನಿಸಿಕೊಳ್ಳುವುದು. ಅದರಿಂದ ಅವನು ಸ್ವಲ್ಪಮಟ್ಟಿಗಾದರೂ ಬದ್ಧನಾಗಿ ಸುಖದುಃಖ ಮೋಹಗಳನ್ನು ಇತರರಂತೆ ಅನುಭವಿಸುತ್ತಿರುವನು. ಆದ್ದರಿಂದ ಅಂಥವನೂ ಸತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳಿಂದ ಕೂಡಿದವನಾಗಿ, ಅವನು ವೇದವನ್ನು ಬಲ್ಲವನಾಗಲಿ, ಯೋಗವನ್ನು ಸಾಧಿಸಿದವನಾಗಲಿ, ಸರ್ವವನ್ನೂ ತಿಳಿದವನಾಗಲಿ, ಜಿತೇಂದ್ರಿಯನೇ ಆಗಲಿ, ಯಾವನಾದರೂ, ಮಾಯೆಯನ್ನು ಸಂಪೂರ್ಣವಾಗಿ ಗೆಲ್ಲುಲು ಶಕ್ತನಾಗುವನೇ ? ||೧೮||

ಕಾಲೋಽಪಿ ತಸ್ಯಾ ರೂಪಂ ಹಿ ರೂಪಹೀನಃ ಸ್ವರೂಪಕೃತ್ ।
ತದ್ವಶೇ ವರ್ತತೇ ದೇಹೀ ವಿದ್ವಾನ್ ಮುರ್ಖೋಽಥಮಧ್ಯಮಃ॥೧೯॥

ಕಾಲಃ ಕರೋತಿ ಧರ್ಮಜ್ಞಂ ಕದಾಚಿದ್ವಿಕಲಂ ಪುನಃ ।
ಸ್ವಭಾವಾತ್ಕರ್ಮತೋ ವಾಽಪಿ ದುಜ್ಞೇಯಂ ತಸ್ಯ ಚೇಷ್ಟಿತಂ॥೨೦॥

॥ ನಾರದ ಉವಾಚ ॥

ಇತ್ಯುಕ್ತ್ವಾ ವಿರತೋ ವಿಷ್ಣುರಹಂ ವಿಸ್ಮಯಮಾನಸಃ ।
ತಮಬ್ರವಂ ಜಗನ್ನಾಥಂ ವಾಸುದೇವಂ ಸನಾತನಂ ॥೨೧॥

---

ಜಗತ್ತಿನಲ್ಲಿ ಮಾಯೆಯನ್ನು ಗೆಲ್ಲುವವರು ಯಾರೂ ಇಲ್ಲದಿದ್ದರೆ, ಜಗತ್ತೆಲ್ಲವೂ ಮಾಯೆಗೆ ಅಧೀನವಾಯಿತು. ಕಾಲಕ್ಕೆ ಎಲ್ಲವೂ ಅಧೀನವೆಂದು ಲೋಕದಲ್ಲಿ ಎಲ್ಲರೂ ಹೇಗೆ ಹೇಳುವರು ? ಎಂದರೆ ಕಾಲವೂ ಕೂಡ ಮಾಯೆಗೆ ಆಧೀನವಾದದ್ದು, ಬ್ರಹ್ಮನಿಗಿಂತ ವ್ಯತಿರಿಕ್ತವಾದ ವಸ್ತುವೆಲ್ಲವೂ ಮಾಯಾ ಪರಿಣಾಮರೂಪವಾದ ಕಾರಣ ಕಾಲವೂ ಮಾಯೆಯಲ್ಲಿ ಅಡಕವಾಗಿರುವುದು. ಅದೂ ಮಾಯೆಯ ಒಂದು ಬೇರೆ ಯಾದ ರೂಪವು. ಅಲ್ಲದೆ ಆ ಕಾಲವು ತಾನು ರೂಪದಿಂದ ಬಿಡಲ್ಪಟ್ಟದ್ದಾಗಿರುವುದು. ಆದಾಗ್ಯೂ ಪ್ರಾಣಿಗಳಿಗೆ ಆಕಾರವನ್ನು ಕಲ್ಪಿಸಿಕೊಡುವ ಶಕ್ತಿಯುಳ್ಳದ್ದಾಗಿರುವುದು. ಆದ್ದರಿಂದ ಪ್ರಾಣಿಯಾದವನು ದಡ್ಡನಾಗಲಿ, (ಮಧ್ಯಮ) ಕೊಂಚ ತಿಳಿವಳಿಕೆ ಯುಳ್ಳವನಾಗಲಿ, ಜ್ಞಾನಿಯಾಗಲಿ, ಯಾರೇ ಆದಾಗ್ಯೂ ಎಲ್ಲರೂ ಕಾಲಕ್ಕೆ ಅಧೀನ ರಾಗಿರುವರು ಎಂದು ಲೋಕದಲ್ಲಿ ಎಲ್ಲರೂ ಹೇಳುತ್ತಿರುವರು. ॥೧೯॥

ಕಾಲವು ಮನುಷ್ಯನನ್ನು ಧರ್ಮಜ್ಞನನ್ನಾಗಿಯೂ ಮಾಡುವುದು. ಒಂದಾ ನೊಂದು ವೇಳೆಯಲ್ಲಿ ಅದೇ ಕಾಲವು ಅದೇ ಮನುಷ್ಯನನ್ನು ಬುದ್ಧಿಹೀನನನ್ನಾಗಿಯೂ ಮಾಡುವುದು. ಹೀಗೆ ಇರುವುದರಿಂದ ಕಾಲದ ಸ್ವಭಾವದಿಂದಲೂ ಮತ್ತು ಅದರ ಕೆಲಸದಿಂದಲೂ ಸಹ ಅದರ ಮಹಿಮೆಯನ್ನೂ ತಿಳಿಯಲಶಕ್ಯವಾಗಿ ಇರುವುದು! ॥೨೦॥

ನಾರದ ಋಷಿಯು ಹೇಳಿದನು—ವಿಷ್ಣುವು ಹೀಗೆ ಹೇಳಿ ಸುಮ್ಮನಾದನು. ನಾನು ಆಶ್ಚರ್ಯದಿಂದ ಕೂಡಿದ ಮನಸ್ಸುಳ್ಳವನಾಗಿ, ನಿತ್ಯನಾಗಿ ಜಗತ್ತಿಗೆಲ್ಲಕ್ಕೂ ಅಧಿಪತಿಯಾಗಿರುವ ಆ ಮಹಾವಿಷ್ಣುವನ್ನು ಕುರಿತು ಹೀಗೆ ಮಾತನಾಡಿದೆನು. ॥೨೧॥

ರಮಾಪತೇ ಕಥಂ ರೂಪಾ ಮಾಯಥಾ ಸಾ ಕೀದೃಶೀ ಪುನಃ ।
ಕಿಯದ್ಬಲಾ ಕ್ವಸಂಸ್ಥಾನಾ ಕಸ್ಯಾಧಾರಾ ವದಸ್ವ ಮೇ ॥೨೨॥

ದ್ರಷ್ಟುಕಾಮೋಽಸ್ಮಿ ತಾಂ ಮಾಯಾಂ ದರ್ಶಯಾಶು ಮಹೀಧರ ।
ಜ್ಞಾತುಮಿಚ್ಛಾಮಿ ತಾಂ ಸಮ್ಯಕ್ ಪ್ರಸಾದಂ ಕುರು ಮಾಪತೇ ॥೨೩॥

॥ ವಿಷ್ಣುರುವಾಚ ॥

ತ್ರಿಗುಣಾಸಾಽಖಿಲಾಧಾರಾ ಸರ್ವಜ್ಞಾ ಸರ್ವಸಮ್ಮತಾ ।
ಅಜೇಯಾಽನೇಕರೂಪಾ ಚ ಸರ್ವಂ ವ್ಯಾಪ್ಯ ಸ್ಥಿತಾ ಜಗತ್ ॥೨೪॥

ದಿದೃಕ್ಷಾ ಯದಿ ತೇ ಚಿತ್ತೇ ನಾರದಾರೋಹಣಂ ಕುರು ।
ಗರುಡೇ ಮತ್ಸಮೇತೋಽದ್ಯ ಗಚ್ಛಾವೋಽನ್ಯತ್ರ ಸಾಂಪ್ರತಂ ॥೨೫॥

---

ಲಕ್ಷ್ಮೀಪತಿಯಾದ ಓ ವಿಷ್ಣುವೇ, ಹಾಗಾದರೆ ಆ ಮಾಯೆಯೆಂಬುದು ಎಂಥದು? ಯಾವ ರೂಪದಿಂದಿರುವುದು? ಅದರ ಬಲವೆಷ್ಟು? ಆ ಮಾಯೆಯ ವಾಸಸ್ಥಳವು ಯಾವುದು? ಆ ಮಾಯೆಯು ಯಾವುದನ್ನು ಅವಲಂಬಿಸಿ ಇರುವುದು? ಇದನ್ನು ಎಲ್ಲವನ್ನೂ ನನಗೆ ತಿಳಿಸು. ॥೨೨॥

ಭೂಮಿಯನ್ನು ಉದ್ಧರಿಸಿದ ವಿಷ್ಣುವೇ, ನಾನು ಆ ಮಾಯೆಯನ್ನು ನೋಡಲು ಇಚ್ಛೆಯುಳ್ಳವನಾಗಿ ಇದೇನೆ. ನನಗೆ ಆ ಮಾಯೆಯನ್ನು ಬೇಗನೆ ತೋರಿಸು. ಆ ಮಾಯೆಯನ್ನು ಚೆನ್ನಾಗಿ ತಿಳಿಯಲು ಅಪೇಕ್ಷಿಸುತ್ತೇನೆ. ಓ ಲಕ್ಷ್ಮೀಪತಿಯೇ, ನನ್ನ ವಿಷಯದಲ್ಲಿ ಅನುಗ್ರಹವನ್ನು ಮಾಡು. ॥೨೩॥

ವಿಷ್ಣುವು ಹೇಳಿದನು—ಆ ಮಾಯೆಯು ಸತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳುಳ್ಳದ್ದಾಗಿರುವುದು. ಎಲ್ಲಕ್ಕೂ ಆಧಾರವಾಗಿರುವುದು. ಎಲ್ಲವನ್ನೂ ತಿಳಿದಿರುವುದು. ಎಲ್ಲರಿಗೂ ಸಮ್ಮತವಾಗಿರುವುದು. ಇದು ಯಾರಿಂದಲೂ ಜಯಿಸಲಶಕ್ಯವಾಗಿರುವುದು. ಅನೇಕ ವಿಧವಾದ ರೂಪುವುಳ್ಳದ್ದಾಗಿ ಪ್ರಪಂಚವೆಲ್ಲವನ್ನೂ ವ್ಯಾಪಿಸಿಕೊಂಡು ಇರುವುದು. ॥೨೪॥

ಎಲೈ ನಾರದನೇ, ನೀನು ಆ ಮಾಯೆಯನ್ನು ನೋಡಬೇಕೆಂಬ ಇಚ್ಛೆಯು ನಿನ್ನ ಮನಸ್ಸಿನಲ್ಲಿ ಇದ್ದರೆ ಈಗ ನನ್ನ ಜತೆಯಲ್ಲಿ ಗರುಡನನ್ನು ಹತ್ತಿಕೊಂಡು ಬಾ, ಬೇರೆಯ ಕಡೆಗೆ ಹೋಗೋಣ! ॥೨೫॥

ದರ್ಶಯಿಷ್ಯಾಮಿ ತೇ ಮಾಯಾಂ ದುರ್ಜಯಾಮಜಿತಾತ್ಮಭಿಃ ।
ದೃಷ್ಟ್ವಾ ತಾಂ ಬ್ರಹ್ಮಪುತ್ರ ತ್ವಂ ಮಾ ವಿಷಾದೇ ಮನಃ ಕೃಥಾಃ॥೨೬॥

ಇತ್ಯುಕ್ತ್ವಾ ದೇವದೇವೋ ಮಾಂ ಸಸ್ಮಾರ ವಿನತಾಸುತಂ ।
ಸ್ಮೃತಮಾತ್ರಸ್ತು ಗರುಡಸ್ತದಾಗಾದ್ಧರಿಸನ್ನಿಧೌ ॥೨೭॥

ಆಗತಂ ಗರುಡಂ ವೀಕ್ಷ್ಯ ಆರುರೋಹ ಜನಾರ್ದನಃ ।
ಸಮಾರೋಪ್ಯ ಚ ಮಾಂ ಪೃಷ್ಠೇ ಗಮನಾಯ ಕೃತಾದರಃ ॥೨೮॥

ಚಲಿತೋ ವಿನತಾಪುತ್ರೋ ವೈಕುಂಠಾದ್ವಾಯುವೇಗವಾನ್ ।
ಪ್ರೇರಿತೋ ಯತ್ರ ಕೃಷ್ಣೇನ ಗಂತುಕಾಮೇನ ಕಾನನಂ ॥೨೯॥

ಮಹಾವನಾನಿ ದಿವ್ಯಾನಿ ಸರಾಂಸಿ ಸರಿತಸ್ತಥಾ ।
ಪುರಗ್ರಾಮಾಕರಾದೀಂಶ್ಚ ಖೇಟಖರ್ವಟಗೋವ್ರಜಾನ್ ॥೩೦॥

---

ಬ್ರಹ್ಮನ ಮಗನಾದ ನಾರದನೇ, ಕೇಳು. ನಾನು ಜಿತೇಂದ್ರಿಯರಲ್ಲದವರಿಂದ ಜಯಿಸಲಶಕ್ಯವಾದ ಆ ಮಾಯೆಯನ್ನು ನಿನಗೆ ತೋರಿಸಿಕೊಡುವೆನು. ನೀನು ಮಾಯೆಯನ್ನು ನೋಡಿದಮೇಲೆ ಮನಸ್ಸಿನಲ್ಲಿ ದುಃಖವನ್ನು ಪಡಬಾರದು. ॥೨೬॥

ದೇವತೆಗಳಿಗೂ ಪ್ರಭುವಾದ ದೇವತೆಯಾಗಿರುವ ವಿಷ್ಣುವು ನನ್ನ ಸಂಗಡ ಹೀಗೆ ಹೇಳಿ ವಿನತಾದೇವಿಯ ಮಗನಾದ ಗರುಡನನ್ನು ಸ್ಮರಿಸಿದನು. ಗರುಡನು ವಿಷ್ಣುವಿನ ಸ್ಮರಣಮಾತ್ರದಿಂದಲೇ ಆಗ ವಿಷ್ಣುವಿನ ಸಮೀಪವನ್ನು ಸೇರಿದನು. ॥೨೭॥

ದುಷ್ಟಜನಗಳನ್ನು ಶಿಕ್ಷಿಸುವವನಾದ ವಿಷ್ಣುವು ಗರುಡನು ಬಂದದ್ದನ್ನು ನೋಡಿ, ನನ್ನನ್ನು ತನ್ನ ಹಿಂಭಾಗದಲ್ಲಿ ಕೂರಿಸಿಕೊಂಡು ಹೊರಡಲು ಆದರವುಳ್ಳವನಾಗಿ ಗರುಡನನ್ನು ಹತ್ತಿದನು. ॥೨೮॥

ವಿಷ್ಣುವು ತಾನು ಯಾವ ಕಾಡಿನಲ್ಲಿ ಯಾವ ಭಾಗವನ್ನು ಹೊಂದಬೇಕೋ ಅಲ್ಲಿಗೆ ಗರುಡನನ್ನು ಪ್ರೇರಿಸಿದನು. ಆ ಪ್ರದೇಶವನ್ನು ಕುರಿತು ಗರುಡನು ವೈಕುಂಠದಿಂದ ವಾಯುವಿನಂತೆ ವೇಗವುಳ್ಳವನಾಗಿ ಹೊರಟನು. ॥೨೯॥

ನಾವಿಬ್ಬರೂ ಗರುಡನನ್ನು ಹತ್ತಿದವರಾಗಿ, ದಾರಿಯಲ್ಲಿ ದೊಡ್ಡದಾದ ಕಾಡುಗಳು ಸರೋವರಗಳು, ಹೊಳೆಗಳು, ಪಟ್ಟಣ, ಹಳ್ಳಿ, ಖನಿಗಳು, ಇವೇ ಮೊದಲಾದುವುಗಳು ಸಂತೆಯ ಊರುಗಳು, ಬೆಟ್ಟದ ತಪ್ಪಲಿನಲ್ಲಿರುವ ಗ್ರಾಮಗಳು. ಹಕ್ಕಿಗಳು,

ಮುನೀನಾಮಾಶ್ರಮಾನ್ ರಮ್ಯಾನ್ ವಾಪೀಶ್ಚ ಸುಮನೋಹರಾಃ ।
ಪಲ್ವಲಾನಿ ವಿಶಾಲಾನಿ ಹ್ರದಾನ್ ಪಂಕಜಭೂಷಿತಾನ್ ॥೩೦॥

ಮೃಗಾಣಾಂ ಚ ವರಾಹಾಣಾಂ ವೃಂದಾನ್ಯಪ್ಯವಲೋಕ್ಯ ಚ ।
ಗತಾವಾವಾಂ ಕಾನ್ಯಕುಬ್ಜ ಸಮೀಪಂ ಗರುಡಾಸನೌ ॥೩೨॥

ತತ್ರರಮ್ಯಂ ಸರೋ ದಿವ್ಯಂ ದೃಷ್ಟಂ ಪಂಕಜಮಂಡಿತಂ ।
ಹಂಸಕಾರಂಡವಾಕೀರ್ಣಂ ಚಕ್ರವಾಕೋಪಶೋಭಿತಂ ॥೩೩॥

ನಾನಾವರ್ಣೈಃ ಪ್ರಫುಲ್ಲೈಶ್ಚ ಪಂಕಜೈರುಪರಂಜಿತಂ ।
ಶುಚಿಮಿಷ್ಟಜಲಂ ಭೃಂಗ ಯೂಥನಾದವಿರಾಜಿತಂ ॥೩೪॥

ಮಾಮಾಹ ಭಗವಾನ್ ವೀಕ್ಷ್ಯ ತಟಾಕಂ ಪರಮಾದ್ಭುತಂ ।
ಸ್ಪರ್ಧಕಂ ಚೋದಧೇಃ ಕ್ಷೀರಂ ಮಿಷ್ಟಂ ವಾರಿವಿಶೇಷತಃ ॥೩೫॥

---

ರೊಪ್ಪಗಳು, ದನಗಳು ವಾಸಮಾಡುವ ಪ್ರದೇಶಗಳಲ್ಲಿ ದನಗಳ ಗುಂಪುಗಳು ಇವುಗಳನ್ನು ನೋಡಿದೆವು. ಅಲ್ಲಿಂದ ಮುಂದೆ ಪ್ರಯಾಣಮಾಡುತ್ತಾ ಮುನಿಗಳ ಮನೋಹರವಾದ ಆಶ್ರಮಗಳನ್ನೂ ಚೆನ್ನಾಗಿರುವ ಬಾವಿಗಳನ್ನೂ, ದೊಡ್ಡ ದೊಡ್ಡದಾಗಿರುವ ನೀರಿನ ಹಳ್ಳಗಳನ್ನೂ, ಕಮಲಗಳಿಂದ ಅಲಂಕೃತವಾದ ಮಡುಗಳನ್ನೂ, ಮೃಗಗಳ ಮತ್ತು ಹಂದಿಗಳ ಗುಂಪುಗಳನ್ನೂ ನೋಡುತ್ತಾ ಕಾನ್ಯಕುಬ್ಜವೆಂಬ ಪಟ್ಟಣದ ಸಮೀಪವನ್ನು ಪಡೆದೆವು. ||೩೦-೩೧-೩೨||

ಅಲ್ಲಿ ಕಮಲದಿಂದ ಅಲಂಕೃತವಾಗಿರುವ, ಹಂಸ, ಕಾರಂಡವ, ಚಕ್ರವಾಕ ಎಂಬ ಹಕ್ಕಿಗಳಿಂದ ತುಂಬಿದ್ದಾಗಿ ಚೆನ್ನಾಗಿ ಶೋಭಿಸುತ್ತಿರುವ ಮನೋಹರವಾದ, ಉತ್ತಮವಾದ ಸರೋವರವನ್ನು ನಾವಿಬ್ಬರೂ ನೋಡಿದೆವು. ||೩೩||

ಚೆನ್ನಾಗಿ ಅರಳಿರುವ, ಅನೇಕ ವಿಧವಾದ ಬಣ್ಣಗಳಿಂದ ಕೂಡಿರುವ, ಕಮಲಗಳಿಂದ ಸರೋವರವು ಪ್ರಕಾಶಿಸುತ್ತಿತ್ತು. ಈ ಸರೋವರದಲ್ಲಿ ಸಮುದ್ರವನ್ನು ಅನುಕರಿಸಿ ಮೀರಿಸುವಂತೆ ಅಪಾರವಾಗಿ ನೀರು ತುಂಬಿತ್ತು. ಈ ನೀರೂ ಸಹ ಶುದ್ಧವಾಗಿಯೂ, ರುಚಿಕರವಾಗಿಯೂ ದುಂಬಿಗಳ ಹಿಂಡಿನ ಧ್ವನಿಯಿಂದ ರಮ್ಯವಾಗಿಯೂ ಇತ್ತು. ಹೀಗೆ ಅತ್ಯಾಶ್ಚರ್ಯಕರವಾದ ಸರೋವರವನ್ನು ನೋಡಿ ಷಡ್ಗುಣೈಶ್ವರ್ಯ ಸಂಪನ್ನನಾದ ವಿಷ್ಣುವು ನನ್ನನ್ನು ಕುರಿತು ಹೇಳಿದನು. ||೩೪-೩೫||

**ಪಶ್ಯ ನಾರದ ಗಂಭೀರಂ ಸರಸ್ಸಾರಸನಾದಿತಂ ।**
**ಸರ್ವತ್ರ ಪಂಕಜೈಶ್ಛನ್ನಂ ಸ್ವಚ್ಛನೀರಪ್ರಪೂರಿತಂ ॥೩೬॥**

**ಅತ್ರ ಸ್ನಾತ್ವಾ ಗಮಿಷ್ಯಾವಃ ಕಾನ್ಯಕುಬ್ಜಂ ಪುರೋತ್ತಮಂ ।**
**ಇತ್ಯುಕ್ತ್ವಾ ಗರುಡಾದಾಶು ಮಾಮುತ್ತಾರ್ಯ ವ್ಯತಾರಯತ್ ॥೩೭॥**

**ವಿಹಸ್ಯ ಭಗವಾಂಸ್ತತ್ರ ಜಗ್ರಾಹ ಮಮ ತರ್ಜನೀಂ ।**
**ಸ್ತುವನ್ ಸರೋವರಂ ಭೂಯಸ್ತೀರೇ ಮಾಮನಯತ್ಪ್ರಭುಃ ॥೩೮॥**

**ವಿಶ್ರಮ್ಯ ತಟಭಾಗೇ ತು ಸ್ನಿಗ್ಧಛಾಯೇ ಮನೋಹರೇ ।**
**ಮಾಮುವಾಚ ಮುನೇ ಸ್ನಾನಂ ಕುರು ತ್ವಂ ವಿಮಲೇ ಜಲೇ ॥೩೯॥**

**ಪಶ್ಚಾದಹಂ ಕರಿಷ್ಯಾಮಿ ತಡಾಗೇಽಸ್ಮಿನ್ ಸುಪಾವನೇ ।**
**ಸಾಧೂನಾಮಿವ ಚೇತಾಂಸಿ ಜಲಾನಿ ನಿರ್ಮಲಾನಿ ಚ ॥೪೦॥**

---

ಶ್ರೀಯುತನಾದ ಷಡ್ಗುಣೈಶ್ವರ್ಯಸಂಪನ್ನನಾದ ನಾರಾಯಣನು ಹೇಳಿದನು. ಎಲೈ ನಾರದನೇ, ಎಲ್ಲ ಕಡೆಯಲ್ಲಿಯೂ ತಾವರೆಯ ಹೂವುಗಳಿಂದ ತುಂಬಿರುವುದಾಗಿ, ನಿರ್ಮಲವಾದ ನೀರಿನಿಂದ ತುಂಬಿದ್ದಾಗಿ, ಸಾರಸಪಕ್ಷಿಗಳ ಧ್ವನಿಯಿಂದ ಕೂಡಿರುವ ಗಂಭೀರವಾದ ಈ ಸರೋವರವನ್ನು ನೋಡು. ನಾವಿಬ್ಬರೂ ಇಲ್ಲಿ ಸ್ನಾನವನ್ನು ಮಾಡಿದಮೇಲೆ ಶ್ರೇಷ್ಠವಾದ ಕಾನ್ಯಕುಬ್ಜಪಟ್ಟಣವನ್ನು ಕುರಿತು ಹೋಗೋಣವೆಂದು ವಿಷ್ಣುವು ಹೇಳಿ, ಬೇಗನೆ ಗರುಡನಿಂದ ನನ್ನನ್ನು ಇಳಿಸಿ ತಾನೂ ಇಳಿದನು. ॥೩೬-೩೭॥

ನನ್ನ ತರ್ಜನೀ ಬೆರಳನ್ನು ಹಿಡಿದುಕೊಂಡು, ಸರೋವರವನ್ನು ಹೊಗಳುತ್ತಾ ಆ ಪ್ರಭುವು ನನ್ನನ್ನು ಸರೋವರದ ದಡಕ್ಕೆ ಕರೆದುಕೊಂಡು ಹೋದನು. ॥೩೮॥

ಆ ಸರೋವರದ ದಡದಲ್ಲಿ ದಟ್ಟವಾದ ನೆರಳಿನಿಂದ ಮನೋಹರವಾದ ಪ್ರದೇಶದಲ್ಲಿ ವಿಶ್ರಮಿಸಿಕೊಳ್ಳುತ್ತಾ ವಿಷ್ಣುವು, ಎಲೈ ಮುನಿಯೇ, ನಿರ್ಮಲವಾದ ನೀರಿನಲ್ಲಿ ನೀನು ಸ್ನಾನವನ್ನು ಮಾಡು. ಎಂದು ನನಗೆ ಹೇಳಿದನು. ॥೩೯॥

ಈ ಕೊಳದಲ್ಲಿ ಇರುವ ನಿರ್ಮಲವಾದ ಹಿತವಾದ ನೀರು ಕಮಲಗಳ ಪರಾಗಗಳಿಂದ ಸುವಾಸನೆಯುಳ್ಳದ್ದಾಗಿರುವುದು ಮತ್ತು ಸತ್ಪುರುಷರ ಮನಸ್ಸಿನ ಹಾಗೇ ನಿರ್ಮಲವಾಗಿರುವುದು. ಪರಿಶುದ್ಧವಾದ ಈ ಕೊಳದಲ್ಲಿ ನೀನು ಸ್ನಾನಮಾಡಿದ ಅನಂತರದಲ್ಲಿ ನಾನೂ ಸ್ನಾನಮಾಡುವೆನು. ॥೪೦॥

ಸುರಭೀಣಿ ಪರಾಗೈಸ್ತು ಪಂಕಜಾನಾಂ ವಿಶೇಷತಃ ।
ಇತ್ಯುಕ್ತೋಽಹಂ ಭಗವತಾ ಮುಕ್ತ್ವಾ ವೀಣಾಂ ಮೃಗಾಜಿನಂ ॥೪೧॥

ಸ್ನಾನಾಯ ಕೃತಧೀಸ್ತೀರೇ ಗತಃ ಪ್ರೇಮುಸಮನ್ವಿತಃ ।
ಪಾದೌ ಪ್ರಕ್ಷಾಳ್ಯ ಹಸ್ತೌ ಚ ಶಿಖಾಂ ಬಧ್ವಾ ಕುಶಗ್ರಹಂ ॥೪೨॥

ಕೃತ್ವಾಽಚಮ್ಯ ಶುಚಿಸ್ತೋಯೇ ಸ್ನಾತವಾನಸ್ಮಿ ತಜ್ಜಲೇ ।
ಯದಾ ತಸ್ಮಿನ್ ಜಲೇ ರಮ್ಯೇ ಸ್ನಾತೋಽಹಂ ಪಶ್ಯತೋ ಹರೇಃ॥೪೩॥

ವಿಹಾಯ ಪೌರುಷಂ ರೂಪಂ ಪ್ರಾಪ್ತಃ ಸ್ತ್ರೀತ್ವಮನುತ್ತಮಂ ।
ಹರಿರ್ಗೃಹೀತ್ವಾ ಮೇ ವೀಣಾಂ ತಥಾ ಕೃಷ್ಣಾಜಿನಂ ಶುಭಂ ॥೪೪॥

ಆರುಹ್ಯ ಗಗನಂ ತೂರ್ಣಂ ಜಗಾಮ ಸ್ವಗೃಹಂ ಕ್ಷಣಾತ್ ।
ತತೋಽಹಂ ಸ್ತ್ರೀತ್ವಮಾಪನ್ನಶ್ಚಾರುಭೂಷಣ ಭೂಷಿತಃ ॥೪೫॥

---

ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವಿನಿಂದ ಹೀಗೆ ಹೇಳಲ್ಪಟ್ಟವನಾಗಿ ವೀಣೆಯನ್ನೂ ಕೃಷ್ಣಾಜಿನವನ್ನೂ ಸಹ ತೆಗೆದಿಟ್ಟು, ಸಂತೋಷವುಳ್ಳವನಾಗಿ ಸ್ನಾನವನ್ನು ಮಾಡಲು ನಿಶ್ಚಯಿಸಿದ ಬುದ್ಧಿಯುಳ್ಳವನಾಗಿ ಕೊಳದ ದಡದ ಹತ್ತಿರಕ್ಕೆ ಹೋದೆನು. ಅನಂತರ ಕೈಕಾಲುಗಳನ್ನು ತೊಳೆದುಕೊಂಡು ದರ್ಭೆಯನ್ನು ಹಿಡಿದುಕೊಂಡು ತಲೆಯ ಕೂದಲನ್ನು ಕಟ್ಟಿಕೊಂಡು ಆಚಮನವನ್ನು ಮಾಡಿ ಪರಿಶುದ್ಧನಾಗಿ ಆ ಕೊಳದ ನೀರಿನಲ್ಲಿ ಸ್ನಾನವನ್ನು ಮಾಡಿದೆನು! ||೪೨-೪೩||

ಯಾವಾಗ ನಾನು ಮನೋಹರವಾದ ಆ ನೀರಿನಲ್ಲಿ ವಿಷ್ಣುವಿನ ಎದುರಿಗೆ ಸ್ನಾನಮಾಡಿದೆನೋ ಆ ಕ್ಷಣದಲ್ಲಿಯೇ ನಾನು ಗಂಡಸಿನ ಆಕಾರವನ್ನು ಬಿಟ್ಟು ಉತ್ತಮವಾದ ಹೆಣ್ಣಿನ ಆಕಾರವನ್ನು ಹೊಂದಿದೆನು. ||೪೪||

ವಿಷ್ಣುವು ನನ್ನ ವೀಣೆಯನ್ನೂ ಮತ್ತು ಮಂಗಳಕರವಾದ ಕೃಷ್ಣಾಜಿನವನ್ನೂ ಸಹ ತೆಗೆದುಕೊಂಡು ಗರುಡನನ್ನು ಹತ್ತಿ ಬೇಗನೇ ತನ್ನ ಮನೆಗೆ ಒಂದು ಕ್ಷಣಕಾಲದಲ್ಲಿ ಹೊರಟುಹೋದನು. ||೪೫||

ಅನಂತರದಲ್ಲಿ ನಾನು ಸುಂದರವಾಗಿರುವ ಅಲಂಕಾರಗಳಿಂದ ಕೂಡಿರುವ ಹೆಂಗುಸಿನ ಆಕಾರವನ್ನು ಧರಿಸಿದವನಾದೆನು. ಆ ಕ್ಷಣದಲ್ಲಿಯೇ ನನ್ನ ಮನಸ್ಸಿನಲ್ಲಿ ನನ್ನ ಹಿಂದಿನ ದೇಹದ ಸ್ಮೃತಿಯು ತಪ್ಪಿಹೋಯಿತು. ಜಗತ್ಪತಿಯಾದ ನಾರಾಯಣ

ತತ್ಕ್ಷಣಾನ್ಮನಸಾ ಜಾತಾ ಪೂರ್ವದೇಹಸ್ಯ ವಿಸ್ಮೃತಿಃ ।
ವಿಸ್ಮೃತೋಽಸೌ ಜಗನ್ನಾಥೋ ಮಹತೀ ವಿಸ್ಮೃತಾ ಪುನಃ ॥೪೭॥

ಸಂಪ್ರಾಪ್ಯ ಮೋಹಿನೀರೂಪಂ ತಟಾಕಾ ನ್ನಿರ್ಗತೋ ಬಹಿಃ ।
ಅಪಶ್ಯಂ ನಲಿನೀ ಜುಷ್ಟಂ ಸರಸ್ತದ್ವಿಮಲೋದಕಂ ॥೪೮॥

ಕಿಮೇತದಿತಿ ಮನಸಾಽಕರವಂ ನಿಶ್ಚಯಂ ಮುಹುಃ ।
ಏವಂ ಚಿಂತಯಮಾನಸ್ಯ ನಾರೀರೂಪಧರಸ್ಯ ಮೇ ॥೪೯॥

ಸಹಸಾ ದೃಕ್ಪಥಂ ಪ್ರಾಪ್ತಸ್ತತ್ರ ತಾಲಧ್ವಜೋ ನೃಪಃ ।
ಗಜಾಶ್ವರಥವೃಂದೈಶ್ಚ ಸಂವೃತೋ ರಥ ಸಂಸ್ಥಿತಃ ॥೫೦॥

ಯುವಾ ಭೂಷಣ ಸಂವೀತೋ ದೇಹವಾನಿವ ಮನ್ಮಥಃ ।
ವೀಕ್ಷ್ಯ ಮಾಂ ಭೂಪತಿಸ್ತತ್ರ ದಿವ್ಯಭೂಷಣ ಭೂಷಿತಾಂ ॥೫೧॥

---

ನನ್ನೂ ಮರೆತೆನು. ನನ್ನ ವೀಣೆಯ ಸ್ಮರಣೆಯೂ ಸಹ ಇಲ್ಲದೇಹೋಯಿತು! ||೪೬-೪೭||

ನಾನು ಎಲ್ಲರನ್ನೂ ಮೋಹಗೊಳಿಸುವ ಹೆಂಗುಸಿನ ಆಕಾರವನ್ನು ಧರಿಸಿಕೊಂಡು ಕೊಳದ ಹೊರಗಡೆಗೆ ಬಂದು ನಿರ್ಮಲವಾದ ನೀರುಳ್ಳದ್ದಾದ ಕಮಲಗಳಿಂದ ಕೂಡಿದ ಆ ಕೊಳವನ್ನು ನೋಡಿದೆನು. ಇನ್ನು ಯಾರನ್ನೂ ಕಾಣಲಿಲ್ಲ. ಆಗ ನಾನು ನನ್ನ ಮನಸ್ಸಿನಿಂದ ಇದು ಏನು? ಎಂದು ಮನಸ್ಸಿನಲ್ಲಿ ಬಾರಿಬಾರಿಗೂ ನಿಶ್ಚಯವನ್ನು ಮಾಡಲು ಪ್ರಯತ್ನಮಾಡುತ್ತಿದ್ದೆನು. ||೪೮||

ಹೆಂಗುಸಿನ ಆಕಾರವನ್ನು ಧರಿಸಿಕೊಂಡು ಇರುವ ನಾನು ಆ ಕೊಳದ ತೀರದಲ್ಲಿ ಹೀಗೆಯೇ ಯೋಚನೆಮಾಡುತ್ತಿದ್ದೆನು. ಆಗ ಆ ಪ್ರದೇಶಕ್ಕೆ ತಾಲಧ್ವಜನೆಂಬ ದೊರೆಯು ಬೇಗನೆ ಬಂದನು. ಅವನು ಆನೆ ಕುದುರೆ ಇವುಗಳ ಗುಂಪಿನಿಂದ ಕೂಡಿದವನಾಗಿ ರಥದಲ್ಲಿ ಕೂತುಕೊಂಡಿದ್ದನು. ಅವನು ಯೌವನಸ್ಥನಾಗಿ ಅಲಂಕಾರಗಳಿಂದ ಕೂಡಿದವನಾಗಿ ಆಕಾರವನ್ನು ಧರಿಸಿರುವ ಮನ್ಮಥನಂತೆ ಇದ್ದನು. ಹೀಗೆ ಇದ್ದ ಆ ರಾಜನು ನನ್ನನ್ನು ನೋಡಿದನು. ||೪೯-೫೦||

ದೊರೆಯು ನನ್ನನ್ನು ನೋಡಿ ಆಚ್ಚರಿಗೊಂಡನು. ನಾನಾದರೋ ಉತ್ತಮವಾದ ಆಭರಣಗಳಿಂದ ಅಲಂಕೃತಳಾಗಿದ್ದೆನು. ಪೂರ್ಣಚಂದ್ರನಂತಿರುವ ಮುಖವುಳ್ಳವಳಾಗಿ

ರಾಕಾಚಂದ್ರಮುಖೀಂ ಯೋಷಾಂ ವಿಸ್ಮಯಂ ಪರಮಂ ಗತಃ ।
ಪಪ್ರಚ್ಛ ಕಾಽಸಿ ಕಲ್ಯಾಣಿ ಕಸ್ಯ ಪುತ್ರೀ ಸುರಸ್ಯ ವಾ ॥೫೨॥

ಮಾನುಷಸ್ಯ ವಾ ಕಾಂತೇ ಗಂಧರ್ವಸ್ಯೋರಗಸ್ಯ ಚ ।
ಏಕಾಕಿನೀ ಕಥಂ ಬಾಲಾ ರೂಪಯೌವನ ಭೂಷಿತಾ ॥೫೩॥

ವಿವಾಹಿತಾಽಥವಾ ಕನ್ಯಾ ಸತ್ಯಂ ವದ ಸುಲೋಚನೇ ।
ಕಿಂ ಪಶ್ಯಸಿ ಸುಕೇಶಾಂತೇ ತಟಾಕೇಽಸ್ಮಿನ್ ಸುಮಧ್ಯಮೇ ।
ಚಿಕೀರ್ಷಿತಂ ಪಿಕಾಲಾಪೇ ಬ್ರೂಹಿ ಮನ್ಮಥಮೋಹಿನೀ ॥೫೪॥

ಭುಂಕ್ಷ್ವ ಭೋಗಾನ್ ಮರಾಳಾಕ್ಷಿ ಮಯಾ ಸಹ ಕೃಶೋದರಿ ।
ವಾಂಛಿತಾನ್ ಮನಸಾ ನೂನಂ ಕೃತ್ವಾ ಮಾಂ ಪತಿಮುತ್ತಮಂ॥೫೫॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ
ಅಷ್ಟಾವಿಂಶೋಽಧ್ಯಾಯಃ

---

ದ್ದೆನು. ಹೀಗಿರುವ ಹೆಂಗುಸಾದ ನನ್ನನ್ನು ಆದರದಿಂದ ನೋಡಿ ರಾಜನು ತುಂಬ ಆಶ್ಚರ್ಯವನ್ನು ಹೊಂದಿದನು. ಆಗ ಅವನು ನನ್ನನ್ನು ಕುರಿತು, ಎಲೌ ಮಂಗಳ ಕರಳೇ, ನೀನು ಯಾರು? ಯಾರ ಮಗಳು? ದೇವತೆಯೋ? ಯಾವ ದೇವತೆಯ ಪುತ್ರಿಯು? ಎಂದು ಪ್ರಶ್ನೆ ಮಾಡಿದನು. ॥೫೧-೫೨॥

ಎಲೌ ಸುಂದರಸ್ತ್ರೀಯೇ, ನೀನು ಮನುಷ್ಯನ, ಗಂಧರ್ವನ ಅಥವಾ ಉರಗನ ಕನ್ಯೆಯಾಗಿರುವೆಯಾ? ನೀನು ರೂಪದಿಂದಲೂ, ಯೌವನದಿಂದಲೂ ಅಲಂಕೃತಳಾಗಿ ಒಬ್ಬಳೇ ಇಲ್ಲಿರುವೆ! ಎಲೌ ಉತ್ತಮವಾದ ಕಣ್ಣುಳ್ಳ ಸ್ತ್ರೀಯೇ, ನೀನು ಮದುವೆ ಯಾದವಳೇ? ಅಥವಾ ಮದುವೆಯಿಲ್ಲದಿರುವ ಕನ್ಯೆಯೇ? ಹೇಳು. ॥೫೩॥

ಚೆನ್ನಾಗಿರುವ ತಲೆಗೂದಲಿನ ಕೊನೆಯುಳ್ಳ ಎಲೌ ಉತ್ತಮವಾದ ಮಧ್ಯ ಭಾಗವುಳ್ಳ ತರುಣಿಯೇ, ಈ ಕೊಳದಲ್ಲಿ ಏನನ್ನು ನೋಡುತ್ತಿರುವೆ? ಮನ್ಮಥನಿಗೂ ಮೋಹವನ್ನುಂಟುಮಾಡುವ ಮತ್ತು ಕೋಗಿಲೆಯಂತೆ ಧ್ವನಿಯುಳ್ಳ ಎಲೌ ಪ್ರಿಯಳೇ, ನೀನು ಮಾಡಬೇಕೆಂದಿರುವ ಕೆಲಸವೇನು? ॥೫೪॥

ಹಂಸದಂತಿರುವ ಕಣ್ಣುಳ್ಳವಳಾದ ಕೃಶವಾದ ಉದರವುಳ್ಳವಳಾದ ಎಲೌ ಕಾಂತೆಯೇ, ಉತ್ತಮನಾಗಿರುವ ನನ್ನನ್ನು ಪತಿಯನ್ನಾಗಿ ಹೊಂದು, ಅನಂತರ ನನ್ನೊ

ಡನೆ, ನಿನ್ನ ಮನಸ್ಸಿನಲ್ಲಿ ಅಪೇಕ್ಷಿಸುವ ಅನೇಕ ವಿಧವಾದ ಸೌಖ್ಯಗಳನ್ನು ಎಲ್ಲವನ್ನೂ ಅನುಭವಿಸು, ಎಂದು ಆ ರಾಜನು ಹೇಳಿದನು. ||೫೫||

ಮಹಾಪುರಾಣವಾಗಿರುವ ಸಂಪದ್ಯುಕ್ತವಾದ ದೇವೀಭಾಗವತದ ಆರನೆಯ

ಸ್ಕಂಧದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದಿರುವುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

### || ಏಕೋನತ್ರಿಂಶೋಽಧ್ಯಾಯಃ ||

### ಇಪ್ಪತ್ತೊಂಬತ್ತನೆಯ ಅಧ್ಯಾಯವು

|| ನಾರದ ಉವಾಚ ||

**ಇತ್ಯುಕ್ತೋಽಹಂ ತದಾ ತೇನ ರಾಜ್ಞಾ ತಾಲಧ್ವಜೇನ ಚ ।**
**ವಿಮೃಶ್ಯಮನಸಾಽತ್ಯರ್ಥಂ ತಮುವಾಚ ವಿಶಾಂಪತೇ ॥೧॥**

**ರಾಜನ್ನಾಹಂ ವಿಜಾನಾಮಿ ಪುತ್ರೀ ಕಸ್ಯೇತಿ ನಿಶ್ಚಯಂ ।**
**ಪಿತರೌ ಕ್ವ ಚ ಮೇ ಕೇನ ಸ್ಥಾಪಿತಾ ಚ ಸರೋವರೇ ॥೨॥**

**ಕಿಂ ಕರೋಮಿ ಕ್ವ ಗಚ್ಛಾಮಿ ಕಥಂ ಮೇ ಸುಕೃತಂ ಭವೇತ್ ।**
**ನಿರಾಧಾರಾಽಸ್ಮಿ ರಾಜೇಂದ್ರ ಚಿಂತಯಾಮಿ ಚಿಕೀರ್ಷಿತಂ ॥೩॥**

---

ನಾರದನು ಹೇಳಿದನು.—ಎಲೈ ಜನಮೇಜಯ ರಾಜನೇ, ಕೇಳು, ನಾನು ಆಗ ರಾಜನಾದ ತಾಲಧ್ವಜನಿಂದ ಹೀಗೆ ಹೇಳಲ್ಪಟ್ಟವಳಾಗಿ ಬಹಳವಾಗಿ ಮನಸ್ಸಿನಲ್ಲಿ ಯೋಚಿಸುತ್ತಾ ಆ ರಾಜನ ಸಂಗಡ ಮಾತನಾಡಿದೆನು. ||೧||

ಎಲೈ ರಾಜನೇ ಕೇಳು, ನಾನು ಯಾರ ಮಗಳೆಂಬ ಅಂಶವನ್ನು ನಿಶ್ಚಯವಾಗಿಯೂ ತಿಳಿದಿಲ್ಲ. ನನ್ನನ್ನು ಇಲ್ಲಿ ಯಾರು ಬಿಟ್ಟರೋ ಅದನ್ನೂ ತಿಳಿಯೆನು! ನನ್ನ ತಂದೆತಾಯಿಗಳು ಎಲ್ಲಿರುವರೋ ಕಾಣೆನು ! ||೨||

ಎಲೈ ರಾಜಶ್ರೇಷ್ಠನೇ, ನಾನು ಏನನ್ನು ಮಾಡಲಿ, ಎಲ್ಲಿಗೆ ಹೋಗಲಿ, ನನ್ನ ಪುಣ್ಯವು ಹೇಗೆ ಫಲವನ್ನು ಕೊಡುವುದು, ನನಗೆ ಯಾವ ಆಶ್ರಯವೂ ಇಲ್ಲ. ಮುಂದೆ ಏನನ್ನು ಮಾಡಬೇಕು? ಎಂಬುದನ್ನು ಯೋಚಿಸುತ್ತಿರುವೆನು. ||೩||

ದೈವಮೇವ ಪರಂರಾಜನ್ ನಾಸ್ತ್ಯತ್ರ ಪೌರುಷಂ ಮಮ ।
ಧರ್ಮಜ್ಞೋಽಸಿ ಮಹೀಪಾಲ ಯಥೇಚ್ಛಸಿ ತಥಾ ಕುರು ॥೪॥

ತವಾಧೀನಾಸ್ಮ್ಯಹಂ ಭೂಪ ನ ಮೇ ಕೋಽಪ್ಯಸ್ತಿ ಪಾಲಕಃ ।
ನ ಪಿತಾ ನ ಚ ಮಾತಾ ಚ ನ ಸ್ಥಾನಂ ನ ಚ ಬಾಂಧವಾಃ ॥೫॥

ಇತ್ಯುಕ್ತೋಽಸೌ ಮಯಾ ರಾಜಾ ಬಭೂವ ಮದನಾತುರಃ ।
ಮಾಂ ನಿರೀಕ್ಷ್ಯ ವಿಶಾಲಾಕ್ಷೀಂ ಸೇವಕಾನಿತ್ಯುವಾಚ ಹ ॥೬॥

ನರಯಾನಮಾನಯಧ್ವಂ ಚತುರ್ವಾಹ್ಯಂ ಮನೋಹರಂ ।
ಆರೋಹಣಾರ್ಥಮಸ್ಯಾಸ್ತು ಕೌಶೇಯಾಂಬರವೇಷ್ಟಿತಂ ॥೭॥

ಮೃದ್ವಾಸ್ತರಣಸಂಯುಕ್ತಂ ಮುಕ್ತಾಜಾಲವಿಭೂಷಿತಂ ।
ಚತುರಸ್ರಂ ವಿಶಾಲಂ ಚ ಸುವರ್ಣರಚಿತಂ ಶುಭಂ ॥೮॥

---

ಎಲೈ ರಾಜನೇ, ಅದೃಷ್ಟವೇ ಎಲ್ಲಕ್ಕೂ ಮಿಗಿಲಾದುದೆಂದು ನಾನು ತಿಳಿಯುವೆನು. ನನ್ನ ಪುರುಷಪ್ರಯತ್ನವು ಇಲ್ಲಿ ಯಾವುದೂ ಇಲ್ಲವು. ಎಲೈ ರಾಜನೇ, ನೀನು ಧರ್ಮವನ್ನು ತಿಳಿದಿರುತ್ತೀಯೆ, ನಿನ್ನ ಇಚ್ಛೆಯು ಹೇಗೆ ಉಂಟಾಗುವುದೋ ಹಾಗೆ ಮಾಡು. ॥೪॥

ಎಲೈ ರಾಜನೇ, ನಾನು ನಿನಗೆ ಅಧೀನಳಾಗಿರುವೆನು. ನನಗೆ ಪಾಲಕರು ಯಾರೂ ಇಲ್ಲವು. ನನಗೆ ತಂದೆ ಇಲ್ಲ. ತಾಯಿ ಇಲ್ಲ. ನೆಂಟರಿಷ್ಟರಿಲ್ಲ. ನಾನು ವಾಸವಾಗಿರಲು ಮನೆಯಿಲ್ಲ. ಹೀಗೆ ಇರುವ ನಾನು ನಿನಗೆ ಸರ್ವ ವಿಧದಿಂದಲೂ ಆಧೀನಳಾಗಿರುವೆನು. ಎಂದು ಹೇಳಿದೆನು. ॥೫॥

ನಾನು ಹೀಗೆ ಹೇಳುತ್ತಿರುವಾಗಲೇ ಆ ರಾಜನು ಕಾಮವಿಕಾರದಿಂದ ಕೂಡಿದವನಾದನು. ವಿಸ್ತಾರವಾದ ಕಣ್ಣುಳ್ಳವಳಾದ ನನ್ನನ್ನು ನೋಡಿ ತನ್ನ ದೂತರ ಸಂಗಡ ಹೀಗೆ ಅಪ್ಪಣೆಯ ಮಾತನಾಡಿದನು. ॥೬॥

ಎಲೈ ದೂತರಿರಾ, ನೀವು, ಈ ಹೆಂಗುಸು ಕುಳಿತುಕೊಳ್ಳುವುದಕ್ಕೂ ಮತ್ತು ಇಲ್ಲಿಂದ ಪ್ರಯಾಣ ಮಾಡುವುದಕ್ಕೂ, ನಾಲ್ಕು ಜನಗಳು ವಹಿಸುವುದಕ್ಕೂ, ಅನುಕೂಲವಾಗಿರುವ ರೇಶಿಮೆಯ ಪರದೆಯಿಂದ ಮುಚ್ಚಲ್ಪಟ್ಟಿರುವ ಮೇನೆಯೊಂದನ್ನು ಬೇಗನೆ ತನ್ನಿರಿ. ಎಂದನು. ॥೭॥

ತಸ್ಯ ತದ್ವಚನಂ ಶ್ರುತ್ವಾ ಭೃತ್ಯಾಸ್ಸತ್ವರಗಾಮಿನಃ ।
ಆನಿನ್ಯುಶ್ಶಿಬಿಕಾಂ ದಿವ್ಯಾಂ ಮುದರ್ಥೇ ವಸ್ತ್ರವೇಷ್ಟಿತಾಂ ॥೯॥

ಆರೂಢಾಽಹಂ ತದಾ ತಸ್ಯಾಂ ತಸ್ಯ ಪ್ರಿಯಚಿಕೀರ್ಷಯಾ ।
ಮುದಿತೋಽಸೌ ಗೃಹೇ ನೀತ್ವಾ ಮಾಂ ತದಾ ಪೃಥಿವೀಪತಿಃ ॥೧೦॥

ವಿವಾಹವಿಧಿನಾ ರಾಜಾ ಶುಭೇ ಲಗ್ನೇ ಶುಭೇ ದಿನೇ ।
ಉಪಯೇಮೇ ಚ ಮಾಂ ತತ್ರ ಹುತಭುಕ್‌ಸನ್ನಿಧೌ ತತಃ ॥೧೧॥

ತಸ್ಯಾಹಂ ವಲ್ಲಭಾ ಜಾತಾ ಪ್ರಾಣೇಭ್ಯೋಽಪಿ ಗರೀಯಸೀ ।
ಸೌಭಾಗ್ಯಸುಂದರೀತ್ಯೇವಂ ನಾಮ ತತ್ರ ಕೃತಂ ಮಮ ॥೧೨॥

---

ಅಲ್ಲದೆ ಈಗ ನೀವು ತರತಕ್ಕ ಶಿಬಿಕೆಯು ಚಿನ್ನದಿಂದ ಮಾಡಿದ್ದಾಗಿರಬೇಕು. ಮೃದುವಾದ ರತ್ನಗಂಬಳಿಯನ್ನು ಅದರಲ್ಲಿ ಹಾಸಿದ್ದಾಗಿಯೂ, ಮತ್ತು ವಿಸ್ತಾರವಾದುದಾಗಿಯೂ, ಚಚ್ಚೌಕವಾಗಿಯೂ ಇರಬೇಕು. ಶಿಬಿಕೆಯ ಸುತ್ತಲೂ, ಮುತ್ತಿನ ಕುಚ್ಚುಗಳಿಂದ ಅಲಂಕಾರಮಾಡಿರಬೇಕು. ಹೀಗೆ ಇರುವ ಮಂಗಳಕರವಾದ ಮೇನೆಯನ್ನು, ಈ ಸ್ತ್ರೀಯನ್ನು ಕರೆದುಕೊಂಡು ಹೋಗುವುದಕ್ಕಾಗಿ, ನೀವುಗಳು ಬೇಗನೆ ತೆಗೆದುಕೊಂಡು ಬನ್ನಿರಿ, ಎಂದು ರಾಜನು ದೂತರಿಗೆ ಹೇಳಿದನು. ॥೮॥

ಆ ರಾಜನ ದೂತರು ಮಾತನ್ನು ಕೇಳಿ ಬೇಗನೆ ಹೋಗಿ, ನನಗಾಗಿ ಉತ್ತಮವಾಗಿಯೂ, ಬಟ್ಟೆಯಿಂದ ಮುಚ್ಚಲ್ಪಟ್ಟದ್ದಾಗಿಯೂ ಇರುವ ಪಲ್ಲಕ್ಕಿಯನ್ನು ತೆಗೆದುಕೊಂಡು ಬಂದರು. ॥೯॥

ನಾನು ಆ ರಾಜನನ್ನು ಸಂತೋಷಪಡಿಸುವ ಇಚ್ಛೆಯಿಂದ ಆ ರಾಜನು ತರಿಸಿದ ಆ ಶಿಬಿಕೆಯಲ್ಲಿ ಹತ್ತಿ ಕುಳಿತುಕೊಂಡೆನು. ॥೧೦॥

ರಾಜನು ಮಂಗಳಕರವಾದ ದಿನದಲ್ಲಿ ಉತ್ತಮವಾದ ಲಗ್ನದಲ್ಲಿ ಅಗ್ನಿಸನ್ನಿಧಿಯಲ್ಲಿ ನನ್ನನ್ನು ಶಾಸ್ತ್ರೋಕ್ತರೀತಿಯಿಂದ ಮದುವೆಮಾಡಿಕೊಂಡನು. ॥೧೧॥

ನಾನು ಆ ರಾಜನಿಗೆ ಪ್ರಾಣಕ್ಕಿಂತಲೂ ಹೆಚ್ಚಾದ ಪ್ರೀತಿಪಾತ್ರಳಾದೆನು. ಆ ಕಾರಣದಿಂದಲೂ ನನಗೆ ಅಲ್ಲಿ ಸೌಭಾಗ್ಯಸುಂದರೀ ಎಂದು ಹೆಸರಿಟ್ಟರು. ॥೧೨॥

ರಮಮಾಣೋ ಮಯಾಸಾರ್ಧಂ ಸುಖಮಾಪ ಮಹೀಪತಿಃ ।
ನಾನಾಭೋಗವಿಲಾಸೈಶ್ಚ ಕಾಮಶಾಸ್ತ್ರೋದಿತೈಸ್ತಥಾ ॥೧೩॥

ರಾಜಕಾರ್ಯಾಣಿ ಸಂತ್ಯಜ್ಯ ಕ್ರೀಡಾಸಕ್ತೋ ದಿವಾನಿಶಂ ।
ನಾಸೌ ವಿವೇದ ಗಚ್ಛಂತಂ ಕಾಲಂ ಕಾಮುಕಲಾರತಃ ॥೧೪॥

ಉದ್ಯಾನೇಷು ಚ ರಮ್ಯೇಷು ವಾಪೀಷು ಚ ಗೃಹೇಷು ಚ ।
ಹರ್ಮ್ಯೇಷು ವರಶೈಲೇಷು ದೀರ್ಘಿಕಾಸು ವರಾಸು ಚ ॥೧೫॥

ವಾರುಣೀ ಮದಮತ್ತೋಽಸೌ ವಿಹರನ್ ಕಾನನೇ ಶುಭೇ ।
ವಿಸೃಜ್ಯ ಸರ್ವಕಾರ್ಯಾಣಿ ಮದಧೀನೋ ಬಭೂವ ಹ ॥೧೬॥

ವ್ಯಾಸಾಹಂ ತೇನ ಸಂಸಕ್ತಾ ಕ್ರೀಡಾರಸವಶೀಕೃತಾ ।
ಸ್ಮೃತವಾನ್ ಪೂರ್ವದೇಹಂ ನ ಪುಂಭಾವಂ ಮುನಿಜನ್ಮ ಚ ॥೧೭॥

---

ಆ ತಾಲಧ್ವಜರಾಜನು ಅನೇಕ ವಿಧವಾದ ಕಾಮಶಾಸ್ತ್ರದಲ್ಲಿ ಹೇಳಿರುವ ಕ್ರಮದಿಂದ ನನ್ನ ಸಂಗಡ ಸಂತೋಷವಾಗಿ ಭೋಗಗಳನ್ನು ಅನುಭವಿಸುವವನಾಗಿ ಸುಖವನ್ನು ಹೊಂದಿದನು. ॥೧೩॥

ಈ ರಾಜನು ಕಾಮುಕಲೆಯಲ್ಲಿ ಆಸಕ್ತನಾಗಿ ಹಗಲೂ ಮತ್ತು ರಾತ್ರಿಯೂ ಸಹ ರಾಜಕಾರ್ಯಗಳನ್ನು ಬಿಟ್ಟು ನನ್ನ ಸಂಗಡ ವಿಹರಿಸುವವನಾಗಿ ಇದ್ದನು. ಹೀಗೆ ವಿಹರಿಸುವುದರಲ್ಲಿ ಬಹು ಕಾಲವು ಕಳೆದುಹೋದದ್ದೂ ಸಹ ಇವನಿಗೆ ತಿಳಿಯ ಲಿಲ್ಲ. ॥೧೪॥

ಆ ರಾಜನು ಮನೋಹರವಾದ ಉದ್ಯಾನವನದಲ್ಲಿಯೂ, ಎತ್ತರವಾಗಿ ಚೆನ್ನಾಗಿರುವ ಉಪ್ಪರಿಗೆಯ ಮನೆಗಳಲ್ಲಿಯೂ, ಕೊಳಗಳಲ್ಲಿಯೂ, ಶ್ರೇಷ್ಠವಾದ ಸರೋವರಗಳಲ್ಲಿಯೂ, ಕಾಡುಗಳಲ್ಲಿಯೂ, ಸಹ ಮದ್ಯಪಾನದಿಂದ ಮತ್ತನಾಗಿ ಎಲ್ಲಾ ಕಾರ್ಯಗಳನ್ನೂ ಬಿಟ್ಟು ನನ್ನೊಡನೆ ಆಟವಾಡುತ್ತಾ ನನಗೆ ಅಧೀನನಾಗಿ ದ್ದನು. ॥೧೫-೧೬॥

ಎಲೈ ವ್ಯಾಸನೇ, ಕೇಳು, ನಾನು ಅವನೊಡನೆ ಸೇರಿಕೊಂಡು ವಿಹರಿಸುವುದ ರಲ್ಲಿನ ಆಶೆಗೆ ಅಧೀನಳಾಗಿ ನನ್ನ ಪೂರ್ವದ ಶರೀರವನ್ನೂ, ಪುರುಷನಾಗಿದ್ದುದನ್ನೂ ಮತ್ತು ಮುನಿಯಾಗಿದ್ದುದನ್ನೂ ಸಹ ಮರೆತೆನು. ಆಗ ನನ್ನ ಭಾವನೆಯು ಹೇಗಿತ್ತೆಂದರೆ—॥೧೭॥

ಮನ್ಯೈವಾಯಂ ಪತಿರ್ಯೋಽಷಾಽಹಂ ಪತ್ನೀಷು ಪ್ರಿಯಾ ಸತೀ ।
ಪಟ್ಟರಾಜ್ಞೀ ವಿಲಾಸಜ್ಞಾ ಸಫಲಂ ಜೀವಿತಂ ಮಮ ॥೧೮॥

ಇತಿ ಚಿಂತಯತೀ ತಸ್ಮಿನ್ ಪ್ರೇಮಬದ್ಧಾ ದಿವಾನಿಶಂ ।
ಕ್ರೀಡಾಸಕ್ತಾ ಸುಖೇಲುಬ್ಧಾ ತಂ ಸ್ಥಿತಾ ವಶವರ್ತಿನೀ ॥೧೯॥

ವಿಸ್ಮೃತಂ ಬ್ರಹ್ಮವಿಜ್ಞಾನಂ ಬ್ರಹ್ಮಜ್ಞಾನಂ ಚ ಶಾಶ್ವತಂ ।
ಧರ್ಮಶಾಸ್ತ್ರಪರಿಜ್ಞಾನಂ ತದಾಸಕ್ತಮನಾಃ ಸ್ಥಿತಾ ॥೨೦॥

---

ನಾನೇ ಅವನಿಗೆ ಅತ್ಯಂತ ಪ್ರೀತಿಪಾತ್ರಳಾದ ಪತಿವ್ರತೆಯಾಗಿರುವ ಹೆಂಡಿತಿಯು. ನನಗೂ ಹಾಗೆಯೇ ಅತ್ಯಂತ ಪ್ರೀತಿಪಾತ್ರನಾದ ಗಂಡನೂ ಅವನೇ ಆಗಿದ್ದನು. ಎಂದರೆ ನಮ್ಮ ದಾಂಪತ್ಯದಲ್ಲಿ ಅಷ್ಟುಮಟ್ಟಿನ ಆದರ್ಶಭೂತವಾದ ಪ್ರೀತಿಯ ಪರಾಕಾಷ್ಠೆಯು ಇದ್ದಿತು! ನಾನು ಮಾತ್ರ ಆ ರಾಜನಿಗೆ ಪಟ್ಟದ ರಾಣಿಯಾಗಿ ಅವನ ಜತೆಯಲ್ಲಿ ವಿಹರಿಸಲು ಚೆನ್ನಾಗಿ ತಿಳಿವಳಿಕೆಯುಳ್ಳವಳಾಗಿದ್ದೆನು. ಹೀಗೆ ಸಫಲವಾಗಿರುವ ನನ್ನ ಬಾಳು ಉತ್ತಮವಾದ ಮಾದರಿಯಾಗಿರುವುದು. ನಾನು ಇವನಿಗೆ ಪಟ್ಟದರಾಣಿಯು, ರಾಜನೊಡನೆ ವಿಹಾರದಲ್ಲಿ ಆಸಕ್ತಳಾದವಳೂ, ಸುಖದಲ್ಲಿ ಆಸೆಯುಳ್ಳವಳೂ ಸಹ ನಾನೇ ಆಗಿರುವೆನು! ಎಂದು ಮುಂತಾಗಿ ನಾನು ತಿಳಿದುಕೊಂಡು ಅವನಲ್ಲಿ ಹಗಲೂ ರಾತ್ರಿಯೂ ಸಹ ಪ್ರೀತಿಗೆ ಅಧೀನಳಾಗಿದ್ದೆನು. ||೧೮-೧೯||

ನನಗೆ ಹಿಂದಿನ ಜನ್ಮದಲ್ಲಿದ್ದ ಬ್ರಹ್ಮವಿಜ್ಞಾನವೂ ಎಂದರೆ ಅಪರೋಕ್ಷ ಜ್ಞಾನವೂ, ವೇದಾಂತಶಾಸ್ತ್ರದ ಪಾಂಡಿತ್ಯವೂ ಸಹ ಮರೆತುಹೋಯಿತು. ಧರ್ಮಶಾಸ್ತ್ರದ ಜ್ಞಾನವೂ ಮರೆತುಹೋಯಿತು. ನಾನು ಮಾತ್ರ ಆ ರಾಜನಲ್ಲಿ ಏಕಾಗ್ರವಾಗಿ ಆಸಕ್ತವಾದ ಮನಸ್ಸುಳ್ಳವಳಾಗಿ ಇದ್ದೆನು.

ಇಂತಹ ಸಂದರ್ಭದಲ್ಲಿ ನಾವು ಗಮನಿಸಬೇಕಾದ ಅಂಶವು ಏನೆಂದರೆ— ಒಂದು ಜನ್ಮದಲ್ಲಿ, ಬ್ರಹ್ಮತತ್ವದ ವಿಜ್ಞಾನ ಅಥವಾ ಅಪರೋಕ್ಷಾನುಭವವು ಉಂಟಾದರೂ, ಅದರಿಂದ ನಷ್ಟವಾದ ಅಜ್ಞಾನವು ಅಥವಾ ಮಾಯೆಯ ಆವರಣಶಕ್ತಿಯು, ಹುರಿದ ಬೀಜದಂತಾಗಿ, ಸಂಸ್ಕಾರರೂಪದಲ್ಲಿರುತ್ತದೆ. ಅದು ವಿಶೇಷ ಸಂದರ್ಭದಿಂದ, ಈಗಿನಂತಹ ವಿಶೇಷ ಸನ್ನಿವೇಶದಿಂದ ಪುನಃ ಉದ್ಭವಿಸಬಹುದು. ಹೀಗೆಂದರೆ ಬ್ರಹ್ಮವಿಜ್ಞಾನವಾದ ಮೇಲೂ ಅಜ್ಞಾನದ ಫಲವುಂಟಾಗುವುದೆಂದಾಗಿ ಬ್ರಹ್ಮವಿಜ್ಞಾನವೂ ನಿಷ್ಫಲವಾದುದು ಎಂಬ ಆಕ್ಷೇಪಣೆಯು ಉಳಿಯುತ್ತದೆ. ಅದಕ್ಕೆ ಸಮಾ

**ಏವಂ ವಿಹರತಸ್ತತ್ರ ವರ್ಷಾಣಿ ದ್ವಾದಶೈವ ತು ।**
**ಗತಾನಿ ಕ್ಷಣವತ್ಕಾಮ ಕ್ರೀಡಾಸಕ್ತಸ್ಯ ಮೇ ಮುನೇ ॥೨೦॥**

**ಜಾತಾ ಗರ್ಭವತೀ ಚಾಹಂ ಮೋದಂ ಪ್ರಾಪ ನೃಪಸ್ತದಾ ।**
**ಕಾರಯಾಮಾಸ ವಿಧಿವತ್ ಗರ್ಭಸಂಸ್ಕಾರ ಕರ್ಮ ಚ ॥೨೨॥**

---

ಧಾನವೇನೆಂದರೆ, ಅಂತಹ ಅಜ್ಞಾನವು ಈ ಜನ್ಮಕಾಲದಲ್ಲಿ ಮಾತ್ರ ಉದ್ಭವಿಸಿ ಸ್ವಲ್ಪ ಕಾಲದವರೆಗೆ ತನ್ನ ಪ್ರಾಬಲ್ಯವನ್ನು ತೋರಿಸಿ, ಆಯಾ ವಿಶೇಷ ಸಂದರ್ಭದ ಉದ್ದೇಶವೂ, ಉಪದೇಶ ವಿಶೇಷವೂ, ನೆರವೇರುವವರೆಗೆ ಮಾತ್ರ ಇರುತ್ತದೆಯೇ ಹೊರತು, ಅದು ಜನ್ಮಾಂತರವನ್ನೂ ಉಂಟುಮಾಡಲಾರದೆಂಬುದನ್ನು ಗಮನಿಸಬೇಕು. ಈ ಅಂಶವನ್ನು ಪರಮಾರ್ಥಸಾರದಲ್ಲಿ ಪತಂಜಲಿಯು ಹೀಗೆ ಹೇಳಿರುವನು.—ತೀರ್ಥೇ ಶ್ವಪಚಗೃಹೇವಾ ನಷ್ಟಸ್ಮೃತಿರಪಿತ್ಯಜನ್ ಪ್ರಾಣಾನ್ । ಜ್ಞಾನಸಮಕಾಲಮೇವ ಕೈವಲ್ಯಂಯಾತಿ ಹತಶೋಕಃ ॥ ಈ ಕಥಾಸಂದರ್ಭದ ಉದ್ದೇಶವಿಶೇಷವೇನೆಂದರೆ — ಶಾಸ್ತ್ರಪಾಂಡಿತ್ಯವೆಂಬ ಜ್ಞಾನವಾದ ಮೇಲಾಗಲಿ, ಅದರಿಂದ ಕ್ರಮವಾಗಿ ಉಂಟಾಗುವ ಬ್ರಹ್ಮವಿಜ್ಞಾನವೆಂಬ ಅಪರೋಕ್ಷಜ್ಞಾನವಾದ ಮೇಲಾಗಲಿ, ಅಂತಹ ಜ್ಞಾನಿಗಳೂ, ನಾರದ, ವ್ಯಾಸರಂಥವರೂ, ಹೆಮ್ಮೆಪಡಬಾರದು. ಅಂಥ ನಾರದ ಮಹರ್ಷಿಯ ಹೆಮ್ಮೆಯನ್ನೂ ಹೋಗಲಾಡಿಸುವುದೇ ಈಗಿನ ಉದ್ದೇಶವಾಗಿದೆ. ಅಲ್ಲದೆ ಆ ವಿಜ್ಞಾನವೂ, " ಯದೇತದ್ಗಚ್ಛತೀವ ಚ ಮನಃ " ಎಂದು ಕೇನೋಪನಿಷತ್ತಿನಲ್ಲಿ ಹೇಳಿರುವಂತೆ ಮೊದಲು ಉಂಟಾದರೂ, ಆದೂ ಅ ಮೇಲೆ ದೃಢಪಡಬೇಕು. ಈ ಮಧ್ಯಕಾಲದಲ್ಲಿ ಮೇಲೆ ಹೇಳಿದಂತಹ ಕಥಾಸಂದರ್ಭದಿಂದ ತಿಳಿದುಬರುವ ಸಂಗತಿ ವಿಶೇಷಗಳು ಸಂಭವಿಸಬಹುದು. ಅಷ್ಟು ಮಾತ್ರದಿಂದ ಬ್ರಹ್ಮ ವಿಜ್ಞಾನವು ಕದಲದೆ, ಕಡೆಗೆ ದೃಢವಾಗಿ ಉಳಿಯುತ್ತದೆ. ಎಂದು ತಾತ್ಪರ್ಯವು. ಅಲ್ಲದೆ ಮಹಾಮಾಯೆಯ ಪ್ರಭಾವವೂ ವೈಚಿತ್ರ್ಯವೂ ಆಶ್ಚರ್ಯಕರವಾದುದೆಂದೂ ತಿಳಿಯಬೇಕು. ॥೨೦॥

ಎಲೈ ವ್ಯಾಸಋಷಿಯೇ, ಕೇಳು, ಹೀಗೆ ಆ ರಾಜನ ಸಂಗಡ ವಿಹಾರಮಾಡುತ್ತಿರುವಾಗ ನನ್ನ ಜೀವಮಾನದ ಹನ್ನೆರಡು ವರ್ಷಗಳು ಒಂದೊಂದು ಕ್ಷಣದಂತೆ ಕಳೆದುಹೋದುವು. ॥೨೧॥

ಹೀಗೆಯೇ ಇರುವಲ್ಲಿ ನಾನು ಗರ್ಭಿಣಿಯಾದೆನು. ಆಗ ರಾಜನು ಸಂತೋಷವನ್ನು ಹೊಂದಿದನು. ಗರ್ಭಕ್ಕೆ ಸಂಸ್ಕಾರವನ್ನುಂಟುಮಾಡುವ ಪುಂಸವನ, ಸೀಮಂತೋನ್ನಯನ ಮುಂತಾದ ಕರ್ಮಗಳನ್ನೂ ಮಾಡಿದನು. ॥೨೨॥

ಅಪೃಚ್ಛದ್ದೋಹದಂ ರಾಜಾ ಪ್ರೀಣಯನ್ ಮಾಂ ಪುನಃ ಪುನಃ ।
ನಾಬ್ರವಂ ಲಜ್ಜಮಾನಾಽಹಂ ನೃಪಂ ಪ್ರೀತಮನಾ ಭೃಶಂ ॥೨೩॥

ಸಂಪೂರ್ಣೇ ದಶಮೇ ಮಾಸಿ ಪುತ್ರೋ ಜಾತಸ್ತತೋ ಮಮ ।
ಶುಭೇಽಹ್ನಿ ಗ್ರಹನಕ್ಷತ್ರ ಲಗ್ನ ತಾರಾಬಲಾನ್ವಿತೇ ॥೨೪॥

ಬಭೂವ ನೃಪತೇರ್ಗೇಹೇ ಪುತ್ರಜನ್ಮಮಹೋತ್ಸವಃ ।
ರಾಜಾ ಪರಮಸಂತುಷ್ಟೋ ಬಭೂವ ಸುತಜನ್ಮತಃ ॥೨೫॥

ಸೂತಕಾಂತೇ ಸುತಂ ವೀಕ್ಷ್ಯ ರಾಜಾ ಮುದಮವಾಪ ಹ ।
ಅಹಂ ಭೂಮಿಪತೇಶ್ಚಾಸಂ ಪ್ರಿಯಾ ಭಾರ್ಯಾ ಪರಂತಪ ॥೨೬॥

ತತೋ ವರ್ಷದ್ವಯಸ್ಯಾಂತೇ ಪುನರ್ಗರ್ಭೋ ಮಯಾ ಧೃತಃ ।
ದ್ವಿತೀಯಸ್ತು ಸುತೋ ಜಾತಃ ಸರ್ವಲಕ್ಷಣಸಂಯುತಃ ॥೨೭॥

---

ರಾಜನು ನನ್ನನ್ನು ಸಂತೋಷಪಡಿಸುವವನಾಗಿ ಗರ್ಭವತಿಯಾಗಿರುವ ನನ್ನ ಬಯಕೆಗಳನ್ನು ಅನೇಕ ಸಾರಿ ಪ್ರಶ್ನೆಮಾಡಿದನು. ನಾನು ರಾಜನ ವಿಷಯದಲ್ಲಿ ಸಂತೋಷವುಳ್ಳವಳಾದಾಗ್ಯೂ ನಾಚಿಕೆಯುಳ್ಳವಳಾಗಿ ನನ್ನ ಗರ್ಭದ ಸಂಬಂಧವಾದ ಬಯಕೆಗಳನ್ನು ಹೇಳುತ್ತಿರಲಿಲ್ಲ. ॥೨೩॥

ಹತ್ತನೇ ತಿಂಗಳು ತುಂಬಿದ ಅನಂತರದಲ್ಲಿ ನನಗೆ ಗಂಡುಮಗನು ಹುಟ್ಟಿದನು. ಶುಭಕರಗಳಾಗಿರುವ ಗ್ರಹಗಳು, ಒಳ್ಳೆಯ ನಕ್ಷತ್ರ ಲಗ್ನ ಇವುಗಳೆಲ್ಲದರಿಂದಲೂ ಕೂಡಿರುವ ಉತ್ತಮವಾದ ಮುಹೂರ್ತದಲ್ಲಿ ರಾಜನ ಮನೆಯಲ್ಲಿ ಪುತ್ರನು ಹುಟ್ಟಿದುದಕ್ಕಾಗಿ ಬಹಳ ಸಂತೋಷದ ಉತ್ಸವವು ನಡೆಯಿತು. ॥೨೪॥

ರಾಜನು ಮಗನು ಹುಟ್ಟಿದುದರ ನಿಮಿತ್ತವಾಗಿ ಬಹಳ ಸಂತೋಷಪಟ್ಟನು. ಮಗುವು ಹುಟ್ಟಿದ ಮೈಲಿಗೆಯು ಕಳೆದ ಅನಂತರದಲ್ಲಿ ರಾಜನು ಮಗುವನ್ನು ನೋಡಿ ಸಂತೋಷವನ್ನು ಹೊಂದಿದನು. ನಾನು ರಾಜನಿಗೆ ಪ್ರೀತಿಪಾತ್ರಳಾದ ಹೆಂಡತಿಯಾಗಿದ್ದೆನು. ॥೨೫-೨೬॥

ಈಗ ಹುಟ್ಟಿದ ಮಗುವಿಗೆ ಎರಡು ವರುಷಗಳು ಕಳೆದ ಅನಂತರದಲ್ಲಿ ನಾನು ಪುನಃ ಗರ್ಭವತಿಯಾದೆನು. ಎಲ್ಲ ರಾಜಲಕ್ಷಣಗಳಿಂದ ಕೂಡಿದ ಎರಡನೆಯ ಮಗನು ಹುಟ್ಟಿದನು. ॥೨೭॥

ಸುಧನ್ವೇತಿ ಸುತಸ್ಯಾಥ ನಾಮ ಚಕ್ರೇ ನೃಪಸ್ತದಾ ।
ವೀರವರ್ಮೇತಿ ಜ್ಯೇಷ್ಠಸ್ಯ ಬ್ರಾಹ್ಮಣೈಃ ಪ್ರೇರಿತಸ್ಸ್ವಯಂ ॥೨೮॥

ಏವಂ ದ್ವಾದಶಪುತ್ರಾಶ್ಚ ಪ್ರಸೂತಾಃ ಭೂಪಸಮ್ಮತಾಃ ।
ಮೋಹಿತೋಽಹಂ ತದಾ ತೇಷಾಂ ಪ್ರೀತ್ಯಾ ಪಾಲನಲಾಲನೇ ॥೨೯॥

ಪುನರಷ್ಟಸುತಾಃ ಕಾಲೇ ಕಾಲೇ ಜಾತಾಃ ಸ್ವ(ಸು)ರೂಪಿಣಃ ।
ಗಾರ್ಹಸ್ಥ್ಯಂ ಮೇ ತತಃ ಪೂರ್ಣಂ ಸಂಪನ್ನಂ ಸುಖಸಾಧನಂ ॥೩೦॥

ತೇಷಾಂ ದಾರಕ್ರಿಯಾಃ ಕಾಲೇ ಕೃತಾ ರಾಜ್ಞಾ ಯಥೋಚಿತಾಃ ।
ಸ್ನುಷಾಭಿಶ್ಚ ತಥಾಪುತ್ರೈಃ ಪರಿವಾರೋ ಮಹಾನಭೂತ್ ॥೩೧॥

ತತಃ ಪೌತ್ರಾದಿ ಸಂಭೂತಾಸ್ತೇಽಪಿ ಕ್ರೀಡಾಸಮನ್ವಿತಾಃ ।
ಆಸನ್ನಾನಾರಸೋಪೇತಾ ಮೋಹವೃದ್ಧಿಕರಾಭೃಶಂ ॥೩೨॥

---

ಆಗ ರಾಜನು ಬ್ರಾಹ್ಮಣರಿಂದ ಪ್ರೇರಿತನಾಗಿ, ಹಿರಿಯವನಿಗೆ ವೀರವರ್ಮನೆಂತಲೂ, ಎರಡನೆಯವನಿಗೆ ಸುಧನ್ವನೆಂತಲೂ, ನಾಮಕರಣವನ್ನು ಮಾಡಿದನು. ||೨೮||

ಹೀಗೆಯೇ ಆ ರಾಜನಿಗೆ ನನ್ನಲ್ಲಿ ಆ ರಾಜನಿಗೆ ಸಮನಾದ ಹನ್ನೆರಡು ಮಕ್ಕಳು ಹುಟ್ಟಿದರು. ನಾನೂ ಆ ಮಕ್ಕಳಲ್ಲಿ ಮೋಹವುಳ್ಳವಳಾಗಿ ಅವುಗಳ ಪಾಲನೆಯಲ್ಲಿಯೂ, ಆಟವಾಡಿಸುವುದರಲ್ಲಿಯೂ ಆಸಕ್ತಳಾಗಿದ್ದೆನು. ||೨೯||

ಆ ಮೇಲೂ ನನಗೆ ಹೀಗೆಯೇ ರೂಪವಂತರಾದ ಎಂಟು ಜನ ಮಕ್ಕಳು ಆಯಾಯ ಕಾಲದಲ್ಲಿ ಹುಟ್ಟಿದರು. ಅದರಿಂದ ನನ್ನ ಸಂಸಾರವು ಚೆನ್ನಾಗಿ ಸುಖವನ್ನುಂಟುಮಾಡುವುದಾಗಿತ್ತು. ||೩೦||

ರಾಜನು ಆ ಮಕ್ಕಳೆಲ್ಲರಿಗೂ ಅವರ ವಯಸ್ಸಿನ ಅನುಗುಣ್ಯದಿಂದ ಅವರವರಿಗೆ ಯೋಗ್ಯವಾದ ರೀತಿಯಲ್ಲಿ ಮದುವೆಯನ್ನು ಮಾಡಿದನು. ನಮ್ಮ ಸಂಸಾರವು ಮಕ್ಕಳುಗಳಿಂದಲೂ, ಸೊಸೆಯರಿಂದಲೂ ತುಂಬಿತ್ತು. ಇದರಿಂದ ನಮ್ಮ ಪರಿವಾರವು ಬಹಳವಾಗಿ ಬೆಳೆದಿತ್ತು. ||೩೧||

ಅನಂತರದಲ್ಲಿ ಮೊಮ್ಮಕ್ಕಳು, ಇವರೇ ಮುಂತಾದವರೂ ಹುಟ್ಟಿದರು. ಅವರೆಲ್ಲರೂ, ಆಟಪಾಟಗಳಲ್ಲಿ ನಿರತರಾಗಿರುತ್ತಿದ್ದರು. ಇವರೆಲ್ಲರೂ ಅನೇಕ ವಿಧವಾದ ಅಭಿಲಾಷೆಯುಳ್ಳವರಾಗಿ ಬಹಳಮಟ್ಟಿಗೆ ಮೋಹವನ್ನು ಹೆಚ್ಚಿಸುವವರಾಗಿದ್ದರು.||೩೨||

ಕದಾಚಿತ್ಸುಖಮೈಶ್ವರ್ಯಂ ಕದಾಚಿದ್ದುಃಖಮುದ್ಭುತಂ ।
ಪುತ್ರೇಷು ರೋಗಜನಿತಂ ದೇಹಸಂತಾಪಕಾರಕಂ ॥೩೩॥

ಪರಸ್ಪರಂ ಕದಾಚಿತ್ತು ವಿರೋಧೋಽಭೂತ್ಸುದಾರುಣಃ ।
ಪುತ್ರಾಣಾಂ ವಾ ವಧೂನಾಂ ಚ ತೇನ ಸಂತಾಪಸಂಭವಃ ॥೩೪॥

ಸುಖದುಃಖಾತ್ಮಕೇ ಘೋರೇ ಮಿಥ್ಯಾಚಾರಕರೇ ಭೃಶಂ ।
ಸಂಕಲ್ಪ ಜನಿತೇ ಕ್ಷುದ್ರೇ ಮಗ್ನೋಽಹಂ ಮುನಿಸತ್ತಮ ॥೩೫॥

ವಿಸ್ಮೃತಂ ಪೂರ್ವವಿಜ್ಞಾನಂ ಶಾಸ್ತ್ರಜ್ಞಾನಂ ತಥಾ ಗತಂ ।
ಯೋಷಾಭಾವೇ ವಿಲೀನೋಽಹಂ ಗೃಹಕಾರ್ಯೇಷು ಸರ್ವದಾ॥೩೬॥

---

ಒಂದೊಂದು ವೇಳೆಯಲ್ಲಿ ಐಶ್ವರ್ಯವು ಸುಖವನ್ನುಂಟುಮಾಡುವುದಾಗಿಯೂ, ಒಂದೊಂದು ವೇಳೆಯಲ್ಲಿ ಬಹಳ ಹೆಚ್ಚಾದ ದುಃಖವು ಮಕ್ಕಳಿಗೆ ಖಾಯಿಲೆಯಿಂದ ಉಂಟಾದದ್ದಾಗಿ ಶರೀರಕ್ಕೆ ಆಯಾಸವನ್ನೂ ಮನಸ್ಸಿಗೆ ಸಂಕಟವನ್ನೂ ಉಂಟುಮಾಡುವುದಾಗಿಯೂ ಇತ್ತು. ||೩೩||

ಒಂದೊಂದು ವೇಳೆ ಮಕ್ಕಳಿಗೂ ಮತ್ತು ಹೆಂಗಸರಿಗೂ ಸಹ ಬಹಳಮಟ್ಟಿನ ಭಯವನ್ನುಂಟುಮಾಡುವಷ್ಟು ವಿರೋಧವೂ ಉಂಟಾಗಿ ಎಲ್ಲರಿಗೂ ಅನ್ಯೋನ್ಯವಾಗಿ ಸಂಕಟವೂ ಉಂಟಾಗುತ್ತಿತ್ತು ! ||೩೪||

ಎಲೈ ಋಷಿಶ್ರೇಷ್ಠನೇ, ಕೇಳು. ಯಾವಾಗಲೂ ಪಾರಮಾರ್ಥಿಕವಲ್ಲದಿರುವ ನಡೆವಳಿಯಿಂದ ಬಹಳಮಟ್ಟಿಗೆ ತುಂಬಿರುವ, ಸುಖದುಃಖಾದಿಗಳ ರೂಪದಿಂದಿರುವ, ಭಯವನ್ನುಂಟುಮಾಡುವುದಾದ, ನನ್ನ ಸಂಕಲ್ಪದಿಂದಲೇ ಉಂಟಾದ, ನೀಚವಾದ ಈ ಸಂಸಾರದಲ್ಲಿ ನಾನು ಯಾವಾಗಲೂ ಆಸಕ್ತಳಾಗಿದ್ದೆನು. ||೩೫||

ನನಗೆ ಹಿಂದಿನ ಜನ್ಮದಲ್ಲಿದ್ದ ಜ್ಞಾನವು ಮರೆತುಹೋಯಿತು. ಶಾಸ್ತ್ರದಿಂದ ಉಂಟಾದ ಜ್ಞಾನವೂ ಹಾಗೆಯೇ ಹೋಯಿತು. ನಾನು ಸ್ತ್ರೀ ಜನ್ಮದಲ್ಲಿನ ಭಾವಗಳಲ್ಲಿ ಮುಳುಗಿದವಳಾಗಿ ಎಲ್ಲಾ ಕಾಲದಲ್ಲಿಯೂ, ಸರ್ವ ಪ್ರಕಾರದಿಂದಲೂ, ಮನೆಯ ಕೆಲಸದಲ್ಲಿ ನಿರತಳಾಗಿದ್ದೆನು. ||೩೬||

**ಅಹಂಕಾರಸ್ತು ಸಂಜಾತೋ ಭೃಶಂ ಮೋಹವಿವರ್ಧಕಃ ।**
**ಏತೇ ಮೇ ಬಲಿನಃ ಪುತ್ರಾಃ ಸ್ನುಷಾಃ ಸ್ವಕುಲ ಸಂಭವಾಃ ॥೩೭॥**

**ಏತೇ ಪುತ್ರಾಸ್ಸುಸನ್ನದ್ಧಾಃ ಕ್ರೀಡಂತಿ ಮಮ ವೇಶ್ಮಸು ।**
**ಧನ್ಯಾಽಹಂ ಖಲು ನಾರೀಣಾಂ ಸಂಸಾರೇಽಸ್ಮಿನ್ನಹೋ ಭೃಶಂ ॥೩೮॥**

**ನಾರದೋಽಹಂ ಭಗವತಾ ವಂಚಿತೋ ಮಾಯಯಾ ಕಿಲ ।**
**ನ ಕದಾಚಿನ್ಮಯಾಪ್ಯೇವಂ ಚಿಂತಿತಂ ಮನಸಾ ಕಿಲ ॥೩೯॥**

**ರಾಜಪತ್ನೀ ಶುಭಾಚಾರಾ ಬಹುಪುತ್ರಾ ಪತಿವ್ರತಾ ।**
**ಧನ್ಯಾಽಹಂ ಕಿಲ ಸಂಸಾರೇ ಕೃಷ್ಣ್ಯೈವಂ ಮೋಹಿತಸ್ತ್ವಹಂ ॥೪೦॥**

---

ಇವಿಷ್ಟರ ಜತೆಗೆ ನನಗೆ ತುಂಬಾ ಮೋಹವನ್ನು ಹೆಚ್ಚಿಸುವ ಅಹಂಕಾರವೂ ಹೆಚ್ಚುತ್ತಿತ್ತು. ಹೇಗೆಂದರೆ, ಇವರು ನನ್ನ ಮಕ್ಕಳು, ಬಹಳ ಬಲವುಳ್ಳವರು, ಇವರು ನನ್ನ ಸೊಸೆಯರು, ಸತ್ಕುಲದಲ್ಲಿ ಹುಟ್ಟಿದವರು, ಇವರು ಚೆನ್ನಾಗಿ ಬೆಳೆದಿರುವ ಮಕ್ಕಳುಗಳು. ಇವರೆಲ್ಲರೂ ನನ್ನ ಮನೆಯಲ್ಲಿ ಆಟವಾಡುತ್ತಲಿರುವರು. ನಾನು ಹೀಗೆ ಚೆನ್ನಾಗಿ ಬೆಳೆಸಿ ಇರುವ ನನ್ನ ಈ ಸಂಸಾರದಲ್ಲಿ ಪ್ರಪಂಚದಲ್ಲಿರುವ ಎಲ್ಲ ಹೆಂಗುಸರಿಗಿಂತಲೂ ನಾನೇ ಹೆಚ್ಚು ಧನ್ಯಳಾಗಿರುವೆನು! ಹೀಗೆ ನನ್ನ ಜನ್ಮವೇ ಆಶ್ಚರ್ಯಕರವಾಗಿ ಉತ್ತಮವಾಗಿರುವುದು. ಎಂಬ ಅಹಂಕಾರವು ನನಗೆ ಬಹಳ ಮಟ್ಟಿಗೆ ಹೆಚ್ಚುತ್ತಿತ್ತು. ॥೩೭-೩೮॥

ನಾನು ನಾರದನು, ಭಗವಂತನಾದ ವಿಷ್ಣುವಿನಿಂದ, ಮಾಯೆಯಿಂದ ಮೋಸ ಮಾಡಲ್ಪಟ್ಟಿರುವೆನು. ಎಂದು ಯಾವಾಗಲೂ ನನ್ನ ಮನಸ್ಸಿನಲ್ಲಿ ಯೋಚನೆಯು ಕೊಂಚಮಟ್ಟಿಗಾದರೂ ಹುಟ್ಟಲಿಲ್ಲ. ॥೩೯॥

ಎಲೈ ವ್ಯಾಸಋಷಿಯೇ ಕೇಳು, ನಾನು ಆ ರಾಜನ ಪ್ರೀತಿಪಾತ್ರಳಾದ ಹೆಂಡತಿಯು, ಸದಾಚಾರ ಸಂಪನ್ನಳು, ತುಂಬ ಮಕ್ಕಳುಳ್ಳವಳು ಮತ್ತು ಪತಿವ್ರತೆಯೂ ಆಗಿರುವುದರಿಂದ ನಾನು ಧನ್ಯಳಾಗಿರುವೆನು, ಎಂದು ಸಂಸಾರದಲ್ಲಿ ನಾನು ಮೋಹವುಳ್ಳವಳಾಗಿದ್ದೆನು. ॥೪೦॥

ಹೀಗೆ ಇರುವಾಗ ನಾವು ವಾಸಮಾಡುವ ದೇಶಕ್ಕೆ ದೂರದ ದೊಡ್ಡ ದೇಶದಲ್ಲಿ ದೊರೆಯಾಗಿರುವವನಾದ ಒಬ್ಬ ರಾಜನು ನನ್ನ ಗಂಡನಿಗೆ ಶತ್ರುವಾಗಿ, ರಥಗಳು ಮತ್ತು ಆನೆಗಳು ಇವುಗಳಿಂದ ತುಂಬಿರುವ ಬಲವಾದ ಸೇನೆಯನ್ನು ಸೇರಿಸಿ

ಅಥ ಕಶ್ಚಿದ್ರಿಪುಃ ಕಾಮಂ ದೂರದೇಶಾಧಿಪೋ ಮಹಾನ್ ।
ಅರಾತಿಭಾವಮಾಪನ್ನಃ ಪತಿನಾ ಮಮ ಮಾನದ ॥೪೧॥

ಕೃತ್ವಾ ಸೈನ್ಯಸಮಾಯೋಗಂ ರಥೈಶ್ಚ ವಾರಣೈರ್ಯುತಂ ।
ಆಜಗಾಮ ಕಾನ್ಯಕುಬ್ಜೇ ಪುರೇ ಯುದ್ಧಮಚಿಂತಯತ್ ॥೪೨॥

ವೇಷ್ಟಿತಂ ನಗರಂ ತೇನ ರಾಜ್ಞಾ ಸೈನ್ಯಯುತೇನ ಚ ।
ಮಮ ಪುತ್ರಾಶ್ಚ ಪೌತ್ರಾಶ್ಚ ನಿರ್ಗತಾ ನಗರಾತ್ತದಾ ॥೪೩॥

ಸಂಗ್ರಾಮಸ್ತುಮುಲಸ್ತತ್ರ ಕೃತಸ್ತೈಸ್ತೇನ ಪುತ್ರಕೈಃ ।
ಹತಾ ರಣೇ ಸುತಾಸ್ಸರ್ವೇ ವೈರಿಣಾ ಕಾಲಯೋಗತಃ ॥೪೪॥

ರಾಜಾ ಭಗ್ನಸ್ತು ಸಂಗ್ರಾಮಾದಾಗತಃ ಸ್ವಗೃಹಂ ಪುನಃ ।
ಶ್ರುತಂ ಮಯಾ ಮೃತಾಃ ಪುತ್ರಾಃ ಸಂಗ್ರಾಮೇ ಭೃಶದಾರುಣೇ ॥೪೫॥

---

ಕೊಂಡು ಯುದ್ಧಕ್ಕಾಗಿ ಬಂದನು ಮತ್ತು ಕಾನ್ಯಕುಬ್ಜ ಪಟ್ಟಣದಲ್ಲಿ ಯುದ್ಧವನ್ನು ಮಾಡಲು ನಿಶ್ಚಯಿಸಿ ನಿಂತನು. ॥೪೧-೪೨॥

ಸೇನೆಯಿಂದ ಕೂಡಿರುವ ಆ ರಾಜನು ನಮ್ಮ ಪಟ್ಟಣವನ್ನು ಮುತ್ತಿದನು. ನನ್ನ ಮಕ್ಕಳೂ ಮೊಮ್ಮಕ್ಕಳೂ ಸಹ ಆಗ ಯುದ್ಧಮಾಡುವುದಕ್ಕಾಗಿ ನಗರದಿಂದ ಹೊರಕ್ಕೆ ಹೊರಟರು. ॥೪೩॥

ಆಗ ನನ್ನ ಮಕ್ಕಳೂ ಮೊಮ್ಮಕ್ಕಳೂ ಸಹ ಆ ರಾಜನೊಡನೆ ಭಯಂಕರ ವಾಗಿ ಯುದ್ಧವನ್ನು ಮಾಡಿದರು. ಆದರೆ ದುರದೃಷ್ಟದಿಂದ ಕೂಡಿದ ಕಾಲದ ದೆಶೆ ಯಿಂದ, ಶತ್ರುವಾದ ಆ ರಾಜನಿಂದ ಯುದ್ಧದಲ್ಲಿ ನನ್ನ ಮಕ್ಕಳೆಲ್ಲರೂ ನಾಶವನ್ನು ಹೊಂದಿದರು. ॥೪೪॥

ದೊರೆಯಾದರೋ ಯುದ್ಧದಲ್ಲಿ ಅಪಜಯವನ್ನು ಹೊಂದಿ ತನ್ನ ಮನೆಗೆ ಹಿಂತಿರುಗಿ ಬಂದನು. ನಾನು ಬಹಳ ಮಟ್ಟಿಗೆ ಕ್ರೂರವಾದ (ಭಯಂಕರವಾದ) ಆ ಯುದ್ಧದಲ್ಲಿ ನನ್ನ ಮಕ್ಕಳು ನಾಶಹೊಂದಿದರೆಂದು ವರ್ತಮಾನವನ್ನು ಕೇಳಿದೆನು. ॥೪೫॥

ಸ ಹತ್ವಾ ಮೇ ಸುತಾನ್ ಪೌತ್ರಾನ್ ಗತೋ ರಾಜಾ ಬಲಾನ್ವಿತಃ ।
ಕ್ರಂದಮಾನಾ ಹ್ಯಹಂ ತತ್ರ ಗತಾ ಸಮರಮಂಡಲೇ ॥೪೬॥

ದೃಷ್ಟ್ವಾ ತಾನ್ ಪತಿತಾನ್ ಪುತ್ರಾನ್ ಪೌತ್ರಾಂಶ್ಚ ದುಃಖಪೀಡಿತಾ ।
ವಿಲಲಾಪಾಹ ಮಾಯುಷ್ಮನ್ ಶೋಕಸಾಗರಸಂಪ್ಲವೇ ॥೪೭॥

ಹಾ ಪುತ್ರಾಃ ಕ್ವ ಗತಾಃ ಮೇಽದ್ಯ ಹಾ ಹತಾಽಸ್ಮಿ ದುರಾತ್ಮನಾ ।
ದೈವೇನಾತಿ ಬಲಿಷ್ಠೇನ ದುರ್ವಾರೇಣಾತಿಪಾಪಿನಾ ॥೪೮॥

ಏತಸ್ಮಿನ್ನಂತರೇ ತತ್ರ ಭಗವಾನ್ ಮಧುಸೂದನಃ ।
ಕೃತ್ವಾ ರೂಪಂ ದ್ವಿಜಸ್ಯಾಗಾದ್ವೃದ್ಧಃ ಪರಮಶೋಭನಃ ॥೪೮॥

---

ಶತ್ರುಭಾವವನ್ನು ಹೊಂದಿದ್ದ ಆ ರಾಜನು ನನ್ನ ಮಕ್ಕಳನ್ನೂ ಮೊಮ್ಮಕ್ಕಳನ್ನೂ ಸಹ ಕೊಂದು ತನ್ನ ಸೇನೆಯೊಡನೆ ಹಿಂತಿರುಗಿ ಹೋದನು. ಆಗ ನಾನು ಹೋಗಿ ಆ ರಣರಂಗದ ಪ್ರದೇಶದಲ್ಲಿ ಅಳುತ್ತಿರುವವಳಾಗಿ ತಿರುಗುತ್ತಿದ್ದೆನು. ॥೪೬॥

ಎಲೈ ಆಯುಷ್ಮಂತನಾದ ವ್ಯಾಸಋಷಿಯೇ, ಕೇಳು, ನಾನು, ಮಕ್ಕಳೂ, ಮೊಮ್ಮಕ್ಕಳೂ ಸಹ ರಣಭೂಮಿಯಲ್ಲಿ ಬಿದ್ದಿರುವುದನ್ನು ನೋಡಿ, ದುಃಖಸಮುದ್ರದಲ್ಲಿ ಮುಳುಗಿದವಳಾದೆನು. ಅಯ್ಯೋ ಮಕ್ಕಳಿರಾ, ನೀವೆಲ್ಲರೂ ಎಲ್ಲಿಗೆ ಹೋದಿರಿ? ಈಗ ನಾನು ಬಹಳ ಪಾಪಿಯಾಗಿರುವ, ಯಾರಿಂದಲೂ ತಡೆಯಲಶಕ್ಯವಾದ, ದೈವಗತಿಯಿಂದ ಹೊಡೆಯಲ್ಪಟ್ಟಿರುವೆನು! ಎಂದು ಗೋಳಿಡುತ್ತಿದ್ದೆನು. ॥೪೭-೪೮॥

ಈ ಕಾಲಕ್ಕೆ ಸರಿಯಾಗಿ, ಪೂಜ್ಯನಾದ ವಿಷ್ಣುವು ಮುದುಕನಾದ ಮತ್ತು ಬಹಳ ಲಕ್ಷಣವಾಗಿರುವ ಬ್ರಾಹ್ಮಣನ ಆಕಾರವನ್ನು ಧರಿಸಿಕೊಂಡು, ನಾನು ಅಳುತ್ತಿರುವ ಪ್ರದೇಶಕ್ಕೆ ಬಂದನು. ॥೪೯॥

ವೇದಗಳನ್ನು ಚೆನ್ನಾಗಿ ಅಧ್ಯಯನಮಾಡಿರುವ, ಒಳ್ಳೆಯ ಬಟ್ಟೆಗಳನ್ನು ಧರಿಸಿಕೊಂಡಿರುವ, ಆ ಬ್ರಾಹ್ಮಣನು ನನ್ನ ಸಮೀಪಕ್ಕೆ ಬಂದನು. ಅವನು ಆಗ ಯುದ್ಧರಂಗದಲ್ಲಿ ಬಹಳಮಟ್ಟಿಗೆ ದೀನಳಾಗಿ ಅಳುತ್ತಿರುವ ನನ್ನನ್ನು ನೋಡಿ, ಆ ಒಳ್ಳೆಯ ಮುದುಕನು ಹೀಗೆ ಮಾತನಾಡಿದನು. ॥೫೦॥

॥ ಬ್ರಾಹ್ಮಣ ಉವಾಚ ॥

ಸುವಾಸಾ ವೇದವಿತ್ಕಾಮಂ ಮತ್ಸಮೀಪಂ ಸಮಾಗತಃ ।
ಮಾಮುವಾಚಾತಿದೀನಾಂ ಸ ಕ್ರಂದಮಾನಾಂ ರಣಾಜಿರೇ ॥೫೦॥

ಕಿಂ ವಿಷೀದಸಿ ತನ್ವಂಗಿ ಭ್ರಮೋಽಯಂ ಪ್ರಕಟೀಕೃತಃ ।
ಮೋಹೇನ ಕೋಕಿಲಾಲಾಪೇ ಪತಿಪುತ್ರಗೃಹಾತ್ಮಕೇ ॥೫೧॥

ಕಾ ತ್ವಂ ಕಸ್ಯ ಸುತಾ ಕೇಽಮೀ ಚಿಂತಯಾತ್ಮಗತಿಂ ಪರಾಂ ।
ಉತ್ತಿಷ್ಠ ರೋದನಂ ತ್ಯಕ್ತ್ವಾ ಸ್ವಸ್ಥಾ ಭವ ಸುಲೋಚನೇ ॥೫೨॥

ಸ್ನಾನಂ ಚ ತಿಲದಾನಂ ಚ ಪುತ್ರಾಣಾಂ ಕುರು ಕಾಮಿನಿ ।
ಪರಲೋಕಗತಾನಾಂ ಚ ಮರ್ಯಾದಾರಕ್ಷಣಾಯ ವೈ ॥೫೩॥

---

ಬ್ರಾಹ್ಮಣನು ಹೇಳಿದನು. ಎಲೌ ಕೃಶಾಂಗಿಯೇ, ಕೋಗಿಲೆಯ ಸ್ವರದಂತಿರುವ ಧ್ವನಿಯಿಂದ ಮಾತನಾಡುತ್ತಿರುವವಳೇ, ನೀನು ಏತಕ್ಕಾಗಿ ವ್ಯಸನಪಡುತ್ತೀಯೆ? ಗಂಡ, ಮಕ್ಕಳು, ಮನೆ ಎಂಬ ಇವೇ ಮುಂತಾದುವುಗಳಲ್ಲಿ ನಾನು, ನನ್ನದು, ಎಂಬ ಅಭಿಮಾನದ ರೂಪದಿಂದಿರುವ ಈ ಮೋಹದಿಂದ ನಿನ್ನ ಭ್ರಮೆಯೂ ದುಃಖವೂ ಉಂಟಾಗಿದೆ ಎಂಬುದು ಈಗ ಪ್ರಕಟವಾಯಿತು ಎಂದು ತಿಳಿ. ॥೫೧॥

ಚೆನ್ನಾಗಿರುವ ಕಣ್ಣುಗಳುಳ್ಳ ಸ್ತ್ರೀಯೇ, ನೀನು ಯಾರು? ಯಾರ ಮಗಳು? ಇವರ, ಈ ಸಂಬಂಧದ ಸ್ವರೂಪವೇನು? ಇವುಗಳನ್ನು ಚೆನ್ನಾಗಿ ಯೋಚಿಸು, ನಿನ್ನ ಆತ್ಮಕ್ಕೆ ಉತ್ತಮವಾದ ಗತಿಯು ಉಂಟಾಗುವ ದಾರಿಯನ್ನು ವಿಚಾರಿಸು, ಅಳುವುದನ್ನು ಬಿಡು, ಮೇಲಕ್ಕೆ ಏಳು. ಯಾವ ಯೋಚನೆಯೂ ಇಲ್ಲದವಳಾಗಿ, ಸಮಾಧಾನವನ್ನು ಪಡೆದ ಮನಸ್ಸುಳ್ಳವಳಾಗಿರು. ॥೫೨॥

ಎಲೌ ಸ್ತ್ರೀಯೇ, ಲೋಕಾಂತರವನ್ನು ಹೊಂದಿರುವವರಿಗೆ ರಕ್ಷಣೆಗಾಗಿಯೂ, ಧರ್ಮಾಚರಣೆಯ ಮರ್ಯಾದೆಗಾಗಿಯೂ ಸಹ, ಅವಶ್ಯಕವಾಗಿ ಮಾಡಬೇಕಾಗಿರುವ, ಸ್ನಾನ, ತರ್ಪಣ, ತಿಲದಾನ, ಇವುಗಳೇ ಮುಂತಾದ ಕರ್ಮಗಳನ್ನು ನಿನ್ನ ಮಕ್ಕಳಿಗಾಗಿ ಮಾಡು. ॥೫೩॥

ಕರ್ತವ್ಯಂ ಸರ್ವಥಾ ತೀರ್ಥೇ ಸ್ನಾನಂ ತು ನ ಗೃಹೇ ಕ್ವಚಿತ್ ।
ಮೃತಾನಾಂ ಕಿಲ ಬಂಧೂನಾಂ ಧರ್ಮಶಾಸ್ತ್ರಸ್ಯ ನಿರ್ಣಯಃ ॥೫೪॥

॥ ನಾರದ ಉವಾಚ ॥

ಇತ್ಯುಕ್ತ್ವಾ ತೇನ ವಿಪ್ರೇಣ ವೃದ್ಧೇನ ಪ್ರತಿಬೋಧಿತಾ ।
ಉತ್ಥಿತಾಽಹಂ ನೃಪೇಣಾಥ ಯುಕ್ತಾ ಬಂಧುಭಿರಾವೃತಾ ॥೫೫॥

ಅಗ್ರತೋ ದ್ವಿಜರೂಪೇಣ ಭಗವಾನ್ ಭೂತಭಾವನಃ ।
ಚಲಿತಾಽಹಂ ತತಸ್ತೂರ್ಣಂ ತೀರ್ಥಂ ಪರಮಪಾವನಂ ॥೫೬॥

ಹರಿರ್ಮಾಂ ಕೃಪಯಾ ತತ್ರ ಪುಂತೀರ್ಥೇ ಸರಸಿ ಪ್ರಭುಃ ।
ನೀತ್ವಾಽಹ ಭಗವಾನ್ ವಿಷ್ಣುಃ ದ್ವಿಜರೂಪೀ ಜನಾರ್ದನಃ ॥೫೭॥

---

ಮರಣವನ್ನು ಹೊಂದಿದವರ ಬಂಧುಗಳು ಅಶೌಚವನ್ನು ಅನುಭವಿಸುವುದಕ್ಕಾಗಿಯೂ, ಆಗ ಸ್ನಾನವನ್ನು ಸರ್ವ ಪ್ರಕಾರದಿಂದಲೂ ತೀರ್ಥಗಳಲ್ಲಿ ಮಾಡತಕ್ಕದ್ದು, ಮನೆಯಲ್ಲಿ ಸ್ನಾನವನ್ನು ಮಾಡಕೂಡದೆಂದು ಧರ್ಮಶಾಸ್ತ್ರವು ನಿಶ್ಚಯವಾಗಿ ಹೇಳುತ್ತಿರುವುದಲ್ಲವೇ? ಆದುದರಿಂದ ನೀನೂ ತೀರ್ಥದಲ್ಲಿ ಸ್ನಾನವನ್ನು ಮಾಡು ಎಂದನು. ॥೫೪॥

ನಾರದನು ಹೇಳಿದನು--ರಾಜನಿಂದಲೂ, ಮತ್ತು ಬಂಧುಗಳಿಂದಲೂ ಕೂಡಿದವಳಾದ ನಾನು ವೃದ್ಧನಾದ ಆ ಬ್ರಾಹ್ಮಣನಿಂದ ಹೀಗೆ ಹೇಳಲ್ಪಟ್ಟು, ಎಚ್ಚರಿಸಲ್ಪಟ್ಟವಳಾಗಿ ಸ್ನಾನಕ್ಕಾಗಿ ಹೊರಟೆನು. ॥೫೫॥

ನನ್ನ ಮುಂದುಗಡೆಯಲ್ಲಿ ಭಗವಂತನಾದ ವಿಷ್ಣುವು ಬ್ರಾಹ್ಮಣ ರೂಪದಿಂದ ಕರೆದುಕೊಂಡು ಹೋಗುತ್ತಿದ್ದನು. ನಾನು ಆ ಬ್ರಾಹ್ಮಣನನ್ನು ಹಿಂಬಾಲಿಸಿ ಬಹಳ ಪರಿಶುದ್ಧವಾದ ತೀರ್ಥಕ್ಕೆ ಬೇಗನೇ ಹೋಗುತ್ತಿದ್ದೆನು. ॥೫೬॥

ದುಷ್ಟರನ್ನು ಶಿಕ್ಷಿಸುವ ಮತ್ತು ಶಿಷ್ಟಜನಗಳನ್ನು ಕಾಪಾಡುವವನಾದ ಬ್ರಾಹ್ಮಣರೂಪದಲ್ಲಿದ್ದ ಪ್ರಭುವಾದ, ಶ್ರೀಮಹಾವಿಷ್ಣುವು ನನ್ನಲ್ಲಿ ದಯೆಯಿಂದ ಕೂಡಿರುವವನಾಗಿ, ಸ್ನಾನಮಾಡಿದರೆ ಪುರುಷತ್ವವನ್ನುಂಟುಮಾಡುವ ತೀರ್ಥದಿಂದ ಕೂಡಿರುವ ಕೊಳದಲ್ಲಿ ಸ್ನಾನಮಾಡಿಸುವುದಕ್ಕಾಗಿ ನನ್ನನ್ನು ಕರೆದುಕೊಂಡುಹೋಗಿ, ನನ್ನ ಸಂಗಡ ಹೀಗೆ ಮಾತನಾಡಿದನು. ॥೫೭॥

ಸ್ನಾನಂ ಕುರು ತಟಾಕೇಽಸ್ಮಿನ್ ಪಾವನೇ ಗಜಗಾಮಿನಿ ।
ತ್ಯಜ ಶೋಕಂ ಕ್ರಿಯಾಕಾಲಃ ಪುತ್ರಾಣಾಂಚ ನಿರರ್ಥಕಂ ॥೫೮॥

ಕೋಟಿಶಸ್ತೇ ಮೃತಾಃ ಪುತ್ರಾಃ ಜನ್ಮಜನ್ಮಸಮುದ್ಭವಾಃ ।
ಪಿತರಃ ಪತಯಶ್ಚೈವ ಭ್ರಾತರೋ ಜಾಮಯಸ್ತಥಾ ॥೫೯॥

ಕೇಷಾಂ ದುಃಖಂ ತ್ವಯಾ ಕಾರ್ಯಂ ಭ್ರಮೇಽಸ್ಮಿನ್ ಮಾನಸೋದ್ಭವೇ ।
ವಿತಥೇ ಸ್ವಪ್ನಸದೃಶೇ ತಾಪದೇ ದೇಹಿನಾಮಿಹ ॥೬೦॥

॥ ನಾರದ ಉವಾಚ ॥

ಇತಿ ತಸ್ಯ ವಚಃ ಶ್ರುತ್ವಾ ತೀರ್ಥೇ ಪುರುಷ ಸಂಜ್ಞಿತೇ ।
ಪ್ರವಿಷ್ಟಾ ಸ್ನಾತುಕಾಮಾಽಹಂ ಪ್ರೇರಿತಾ ತತ್ರ ವಿಷ್ಣುನಾ ॥೬೧॥

---

ಆನೆಯ ನಡೆಯಂತೆ ಗತಿಯುಳ್ಳ ಎಲೌ ಸ್ತ್ರೀಯೇ, ಈ ಕೊಳದಲ್ಲಿ ನೀನು ಸ್ನಾನವನ್ನು ಮಾಡು. ಈ ತೀರ್ಥವು ಪರಿಶುದ್ಧವಾದುದು. ನಿನ್ನ ಮಕ್ಕಳಿಗೆ ಮಾಡಬೇಕಾದ ಕರ್ಮಗಳನ್ನು ಮಾಡುವ ಕಾಲವು ಒದಗಿರುವುದು. ನಿಷ್ಪ್ರಯೋಜನವಾದ ದುಃಖವನ್ನು ಬಿಡು. ॥೫೮॥

ಎಲೌ ಸ್ತ್ರೀಯೇ, ನಿನಗೂ ಹಿಂದೆ ಅನೇಕ ಜನ್ಮಗಳು ಕಳೆದಿವೆ. ಆಯಾಯ ಜನ್ಮಗಳಲ್ಲಿ ನಿನಗೆ ಉಂಟಾಗಿದ್ದ ತಂದೆತಾಯಿಗಳೂ, ಅಣ್ಣತಮ್ಮಂದಿರೂ, ಗಂಡಂದಿರೂ, ಅತ್ತಿಗೆ ನಾದಿನಿಯರೂ, ಹಾಗೆಯೇ ಮಕ್ಕಳೂ ಆಗಿದ್ದವರನ್ನು ಲೆಕ್ಕಮಾಡಿದರೆ ಕೋಟಿಗಟ್ಟಲೆಯಾಗಿರುವರು ! ಅವರೆಲ್ಲರೂ ಸಹ ಮೃತರಾಗಿರುವರು. ಹೀಗಿರುವಲ್ಲಿ ॥೫೯॥

ನಿನ್ನ ಮನಸ್ಸಿನ ಅಭಿಮಾನದ ಕಲ್ಪನೆಯಿಂದ ಸಂಬಂಧಿಗಳಾಗಿದ್ದ ಈ ಪುತ್ರರು, ತಾಯಿತಂದೆಗಳು, ಇವರೇ ಮುಂತಾದವರಲ್ಲಿ ನೀನು ಯಾರಿಗಾಗಿ ವ್ಯಸನವನ್ನು ಪಡಬೇಕು ? ಈ ಭ್ರಮೆಯು ವ್ಯರ್ಥವಾದುದು. ಸ್ವಪ್ನಕ್ಕೆ ಸಮಾನವಾದುದು. ಮತ್ತು ಈ ಭ್ರಮೆಯು ಪ್ರಾಣಿಗಳಿಗೆ ಈ ಲೋಕದ ಸಂಸಾರದಲ್ಲಿ ಸಂಕಟವನ್ನುಂಟುಮಾಡತಕ್ಕದ್ದೂ ಆಗಿ ಇರುವುದು. ಆದ್ದರಿಂದ ಈ ಭ್ರಮೆಯನ್ನು ಬಿಟ್ಟು ಸ್ನಾನವನ್ನು ಮಾಡು. ॥೬೦॥

ನಾರದನು ಹೇಳಿದನು—ಅಲ್ಲಿ ವಿಷ್ಣುವಿನಿಂದ ನಾನು ಹೀಗೆ ಪ್ರೇರಿಸಲ್ಪಟ್ಟವಳಾಗಿ ಪುರುಷನೆಂಬ ಹೆಸರುಳ್ಳ ತೀರ್ಥದಲ್ಲಿ ಸ್ನಾನಮಾಡಲು, ಕೊಳದ ನೀರಿನ ಒಳಗಡೆಗೆ ಇಳಿದೆನು. ॥೬೧॥

ಮಜ್ಜನಾದೇವ ತೀರ್ಥೇಷು ಪುಮಾನ್ ಜಾತಃ ಕ್ಷಣಾದಪಿ ।
ಹರಿರ್ವೀಣಾಂ ಕರೇ ಕೃತ್ವಾ ಸ್ಥಿತಸ್ತೀರೇ ಸ್ವದೇಹವಾನ್ ॥೬೨॥

ಉನ್ಮಜ್ಜ್ಯ ಚ ಮಯಾ ತೀರೇ ದೃಷ್ಟಃ ಕಮಲಲೋಚನಃ ।
ಪ್ರತ್ಯಭಿಜ್ಞಾ ತದಾ ಜಾತಾ ಮಮ ಚಿತ್ತೇ ದ್ವಿಜೋತ್ತಮ ॥೬೩॥

ಸಂಚಿಂತಿತಂ ಮಯಾ ತತ್ರ ನಾರದೋಽಹ ಮಿಹಾಗತಃ ।
ಹರಿಣಾ ಸಹ ಸ್ತ್ರೀಭಾವಂ ಪ್ರಾಪ್ತೋ ಮಾಯಾ ವಿಮೋಹಿತಃ ॥೬೪॥

ಇತಿ ಚಿಂತಾ ಪರಶ್ಚಾಹಂ ಯದಾ ಜಾತಸ್ತದಾ ಹರಿಃ ।
ಮಾಮಾಹ ನಾರದಾಗಚ್ಛ ಕಿಂ ಕರೋಷಿ ಜಲೇ ಸ್ಥಿತಃ ॥೬೫॥

ವಿಸ್ಮಿತೋಽಹಂ ತದಾ ಸ್ಮೃತ್ವಾ ಸ್ತ್ರೀಭಾವಂ ದಾರುಣಂ ಭೃಶಂ ।
ಪುನಃ ಪುರುಷಭಾವಶ್ಚ ಸಂಪನ್ನಃ ಕೇನ ಹೇತುನಾ ॥೬೬॥

---

ನಾನು ಆ ತೀರ್ಥದಲ್ಲಿ ಮುಳುಗಿದ ಕೂಡಲೇ, ಒಂದು ಕ್ಷಣಕಾಲದ ಒಳಗೆ ಗಂಡಸಿನ ಆಕಾರವನ್ನು ಹೊಂದಿದೆನು. ಆಗ ವಿಷ್ಣುವು ಆ ಬ್ರಾಹ್ಮಣರೂಪವನ್ನು ಬಿಟ್ಟು ತನ್ನ ಶರೀರವನ್ನು ಧರಿಸಿದವನಾಗಿ ಕೈಯಲ್ಲಿ ವೀಣೆಯನ್ನು ಹಿಡಿದುಕೊಂಡು ಆ ಕೊಳದ ದಡದಲ್ಲಿ ನಿಂತಿದ್ದನು ! ॥೬೨॥

ಎಲೈ ಬ್ರಾಹ್ಮಣಶ್ರೇಷ್ಠನೇ, ನಾನು ಸ್ನಾನಮಾಡಿದ ಕೂಡಲೇ ನೋಡಿದೆನು. ದಡದಲ್ಲಿ ಕಮಲದಂತಿರುವ ಕಣ್ಣುಳ್ಳವನಾದ ವಿಷ್ಣುವನ್ನು ಕಂಡೆನು. ನನ್ನ ಮನಸ್ಸಿನಲ್ಲಿ ಆಗ ಹಿಂದಿನ ಸ್ಮೃತಿಯು ಎಲ್ಲವೂ ಚೆನ್ನಾಗಿ ಉಂಟಾಯಿತು ! ॥೬೩॥

ನಾನು ನಾರದನೆಂತಲೂ, ಇಲ್ಲಿಗೆ ವಿಷ್ಣುವಿನೊಡನೆ ಬಂದಿದ್ದು ಅವನ ಮಾಯೆಯಿಂದ ಮೋಹಿತನಾಗಿ ಸ್ತ್ರೀಭಾವವನ್ನು ಹೊಂದಿದ್ದೆನೆಂದೂ ಚೆನ್ನಾಗಿ ಯೋಚನೆ ಮಾಡಿ ತಿಳಿದೆನು ! ॥೬೪॥

ನನ್ನನ್ನು ಕುರಿತು ಎಲೈ ನಾರದನೇ, ಬೇಗ ಬಾ, ನೀರಿನಲ್ಲಿ ನಿಂತುಕೊಂಡು ಏನನ್ನು ಮಾಡುತ್ತಿರುವೆ ? ಎಂದನು. ॥೬೫॥

ಆಗ ನಾನು ಕ್ರೂರವಾದ ಮತ್ತು ಭಯಂಕರವಾದ ಸ್ತ್ರೀಭಾವವನ್ನು ಹೊಂದಿದುದುಕ್ಕೂ, ಪುನಃ ಹಿಂದಿನಂತೆಯೇ ಪುರುಷಾಕಾರವನ್ನೂ, ಪುರುಷ ಸ್ವಭಾವವನ್ನೂ

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ ಏಕೋನತ್ರಿಂಶೋಽಧ್ಯಾಯಃ.

---

ಸಹ ಹೊಂದಿದುದಕ್ಕೂ ಯಾವುದು ಕಾರಣವು? ಎಂಬದಾಗಿ ಆಶ್ಚರ್ಯವನ್ನು ಪಟ್ಟೆನು. ||೬೬||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

### || ತ್ರಿಂಶೋಽಧ್ಯಾಯಃ ||

### ಮೂವತ್ತನೆಯ ಅಧ್ಯಾಯವು

|| ನಾರದ ಉವಾಚ ||

**ಮಾಂ ದೃಷ್ಟ್ವಾ ನಾರದಂ ವಿಪ್ರಂ ವಿಸ್ಮಿತೋಽಸೌ ಮಹೀಪತಿಃ ।**
**ಕ್ವ ಗತಾ ಮಮ ಭಾರ್ಯಾ ಸಾ ಕುತೋಽಯಂ ಮುನಿಸತ್ತಮಃ ||೧||**

**ವಿಲಲಾಪ ನೃಪಸ್ತತ್ರ ಹಾ ಪ್ರಿಯೇತಿ ಮುಹುರ್ಮುಹುಃ ।**
**ಕ್ವ ಗತಾ ಮಾಂ ಪರಿತ್ಯಜ್ಯ ವಿಲಪಂತಂ ವಿಯೋಗಿನಂ ||೨||**

**ವಿನಾ ತ್ವಾ ವಿಪುಲ ಶ್ರೋಣಿ ವೃಥಾ ಮೇ ಜೀವಿತಂ ಗೃಹಂ ।**
**ರಾಜ್ಯಂ ಕಮಲಪತ್ರಾಕ್ಷಿ ಕಿಂ ಕರೋಮಿ ಶುಚಿಸ್ಮಿತೇ ||೩||**

---

ನಾರದನು ಹೇಳಿದನು—ನನ್ನ ಜತೆಯಲ್ಲಿ ನಾನು ಹೆಂಗುಸಾಗಿದ್ದಾಗ ಬಂದಿದ್ದ ರಾಜನು, ಬ್ರಾಹ್ಮಣನಾದ ನಾರದನಾಗಿರುವ ನನ್ನನ್ನು ನೋಡಿ, ನನ್ನ ಆ ಹೆಂಡತಿಯು ಎಲ್ಲಿಗೆ ಹೋದಳು? ಈಗ ಶ್ರೇಷ್ಠನಾದ ಈ ಋಷಿಯು ಎಲ್ಲಿಂದ ಬಂದನು? ಎಂದು ಆಶ್ಚರ್ಯಪಟ್ಟನು! ||೧||

ಆಗ ಅಲ್ಲಿ ಆ ರಾಜನು, ಎಲೈ ಪ್ರಿಯಳೇ, ವಿರಹದಿಂದ ದುಃಖಪಡುತ್ತಿರುವ ನನ್ನನ್ನು ಬಿಟ್ಟು ನೀನು ಎಲ್ಲಿಗೆ ಹೋದೆ? ಎಂದು ಬಾರಿ ಬಾರಿಗೂ ಅಳುತ್ತಿದ್ದನು. ||೨||

ವಿಸ್ತಾರವಾದ ಕಟಿಪಶ್ಚಾದ್ಭಾಗವುಳ್ಳವಳಾಗಿದ್ದ ಸುಂದರಿಯೇ, ನೀನಿಲ್ಲದ್ದರಿಂದ ನನ್ನ ಜೀವನವೂ ವ್ಯರ್ಥವಾದುದು. ಎಲೈ ಪರಿಶುದ್ಧವಾದ ಮಂದಹಾಸವುಳ್ಳ

ನ ಪ್ರಾಣಾ ಮೇ ಬಹಿರ್ಯಾಂತಿ ವಿರಹೇಣ ತವಾಧುನಾ ।
ಗತೋ ವೈ ಪ್ರೀತಿಧರ್ಮಸ್ತು ತ್ವಾಮೃತೇ ಪ್ರಾಣಧಾರಣಾತ್ ॥೪॥

ವಿಲಪಾಮಿ ವಿಶಾಲಾಕ್ಷಿ ದೇಹಿ ಪ್ರತ್ಯುತ್ತರಂ ಪ್ರಿಯಂ ।
ಕ್ವ ಗತಾ ಸಾ ಮಯಿ ಪ್ರೀತಿರ್ಯಾಽಭೂತ್ಪ್ರಥಮಸಂಗಮೇ ॥೫॥

ನಿಮಗ್ನಾ ಕಿಂ ಜಲೇ ಸುಭ್ರೂರ್ಭಕ್ಷಿತಾ ಮತ್ಸ್ಯಕಚ್ಛಪೈಃ ।
ಗೃಹೀತಾ ವರುಣೇನಾಶು ಮಮ ದೌರ್ಭಾಗ್ಯಯೋಗತಃ ॥೬॥

ಧನ್ಯಾಽಸಿ ಚಾರು ಸರ್ವಾಂಗಿ ಯಾ ತ್ವಂ ಪುತ್ರೈಸ್ಸಮಾಗತಾ ।
ಅಕೃತ್ರಿಮಸ್ತು ಪುತ್ರೇಷು ಸ್ನೇಹಸ್ತೇಽಮೃತಭಾಷಿಣಿ ॥೭॥

---

ವಳೇ, ಕಮಲದಂತಿರುವ ಕಣ್ಣುಗಳುಳ್ಳವಳೇ, ನೀನು ಇಲ್ಲದ್ದರಿಂದ ನನಗೆ ರಾಜ್ಯವೂ ನಿಷ್ಪ್ರಯೋಜನವಾದುದು. ನೀನು ಎಲ್ಲಿಗೆ ಹೋದೆ ? ನಾನು ಏನನ್ನು ಮಾಡಲಿ ? ||೩||

ಈಗ ನಿನ್ನ ವಿರಹದಿಂದ ನನ್ನ ಪ್ರಾಣಗಳೂ ಹೊರಗೆ ಹೋಗದೆ ಇರುವುವು. ನೀನು ಈಗ ಇಲ್ಲದಿದ್ದರೂ ಪ್ರಾಣವನ್ನು ನಾನು ಧರಿಸಿರುವ ಕಾರಣ ಪ್ರೀತಿಯ ಧರ್ಮವು ನಾಶವಾದಂತಾಯಿತು ! ||೪||

ವಿಸ್ತಾರವಾದ ಕಣ್ಣುಳ್ಳವಳಾದ ಎಲೌ ಪ್ರಿಯೇ, ನಾನು ಅಳುತ್ತಿರುವೆನು, ನನಗೆ ಹಿತಕರವಾದ ಪ್ರತ್ಯುತ್ತರವನ್ನು ಕೊಡು, ಮೊದಲನೆಯ ಸಮಾಗಮದಲ್ಲಿ ನನ್ನ ವಿಷಯದಲ್ಲಿದ್ದ ನಿನ್ನ ಪ್ರೀತಿಯು ಈಗ ಎಲ್ಲಿ ಹೋಯಿತು ? ||೫||

ಚೆನ್ನಾಗಿರುವ ಹುಬ್ಬುಗಳುಳ್ಳವಳಾಗಿದ್ದ ಎಲೈ ಪ್ರಿಯೆ, ನೀನು ನೀರಿನಲ್ಲಿ ಮುಳುಗಿಹೋದೆಯಾ ? ಅಥವಾ ಜಲಚರ ಪ್ರಾಣಿಗಳಾದ ಮೀನು, ಮೊಸಳೆ, ಆಮೆ ಇವುಗಳಿಂದ ತಿನ್ನಲ್ಪಟ್ಟಿರುವೆಯಾ ? ಅಥವಾ ನನ್ನ ದುರದೃಷ್ಟದಿಂದ ವರುಣನಿಂದ ಬೇಗನೇ ಹಿಡಿಯಲ್ಪಟ್ಟಿರುವೆಯಾ ಏನು ? ||೬||

ಸುಂದರವಾಗಿರುವ ಅಂಗಪ್ರತ್ಯಂಗಗಳುಳ್ಳವಳಾದ ಯಾವ ನೀನು ಮಕ್ಕಳಿಂದ ಕೂಡಿದವಳಾಗಿ ಧನ್ಯಳಾಗಿದ್ದೆ! ಎಲೌ ಅಮೃತದಂತೆ ಸವಿಯಾದ ಹಿತಕರವಾದ ಮಾತುಗಳುಳ್ಳವಳೇ, ನಿನಗೆ ಮಕ್ಕಳ ವಿಷಯದಲ್ಲಿ ಸ್ನೇಹವು ಕಪಟವಾದುದಾಗಿರದೆ ಸಹಜವಾಗಿತ್ತು. ಮತ್ತು ಹೆಚ್ಚಾಗಿರಬೇಕು. ಆದುದರಿಂದಲೇ ಈಗ ಅವರನ್ನು ಸೇರಿದೆಯಾ ? ||೭||

ನಯುಕ್ತಮಧುನಾ ಯನ್ಮಾಂ ವಿಹಾಯ ತ್ರಿದಿವಂ ಗತಾ ।
ವಿಲಪಂತಂ ಪತಿಂ ದೀನಂ ಪುತ್ರಸ್ನೇಹೇನ ಯಂತ್ರಿತಾ ॥೮॥

ಉಭಯಂ ಮೇ ಗತಂ ಕಾಂತೇ ಪುತ್ರಾಸ್ತ್ವಂ ಪ್ರಾಣವಲ್ಲಭಾ ।
ತಥಾಽಪಿ ಮರಣಂ ನಾಸ್ತಿ ದುಃಖಿತಸ್ಯ ಭೃಶಂ ಪ್ರಿಯೇ ॥೯॥

ಕಿಂ ಕರೋಮಿ ಕ್ವ ಗಚ್ಛಾಮಿ ರಾಮೋ ನಾಸ್ತಿ ಮಹೀತಲೇ ।
ರಾಮಾವಿರಜಂ ದುಃಖಂ ಜಾನಾತಿ ರಘುನಂದನಃ ॥೧೦॥

ವಿಧಿನಾ ನಿಷ್ಠುರೇಣಾತ್ರ ವಿಪರೀತಂ ಕೃತಂ ಭುವಿ ।
ದಂಪತ್ಯೋರ್ಮರಣಂ ಭಿನ್ನಂ ಸರ್ವಥಾ ಸಮಚಿತ್ತಯೋಃ ॥೧೧॥

---

ನೀನು, ಈಗ ಅಳುತ್ತಿರುವ, ಸಂಕಟದಿಂದ ಕೂಡಿರುವ ನನ್ನನ್ನು ಬಿಟ್ಟು ಪುತ್ರಸ್ನೇಹದಿಂದ ಬದ್ಧಳಾಗಿದ್ದಾಗ್ಯೂ ಯಾವ ಕಾರಣದಿಂದ ಸ್ವರ್ಗಕ್ಕೆ ಹೋದೆಯೋ ಅದು ಯುಕ್ತವಾದುದಲ್ಲವು. ॥೮॥

ಪ್ರೀತಿಪಾತ್ರಳಾದ ಎಲೌ ರಮಣಿಯೇ, ನನ್ನ ಪ್ರಾಣಪ್ರಿಯಳಾದ ನೀನೂ, ಮಕ್ಕಳೂ ಇಬ್ಬರೂ ಸಹ ನನ್ನನ್ನು ಬಿಟ್ಟು ಹೋದಿರಿ. ಈ ಎರಡನ್ನೂ ಕಳೆದು ಕೊಂಡು ಬಹಳಮಟ್ಟಿಗೆ ದುಃಖವುಳ್ಳವನಾಗಿದ್ದಾಗ್ಯೂ ನನಗೆ ಮರಣವು ಬರದಿರುವುದು ! ॥೯॥

ನಾನು ಏನನ್ನು ಮಾಡಲಿ? ಎಲ್ಲಿಗೆ ಹೋಗಲಿ? ಈಗ ಭೂಮಿಯಲ್ಲಿ ರಾಮನೂ ಇಲ್ಲವು. ರಘುವಂಶದಲ್ಲಿ ಹುಟ್ಟಿದವನಾದ ಆ ರಾಮನು ಸ್ತ್ರೀಯ ವಿರಹದಿಂದುಂಟಾದ ದುಃಖವನ್ನು ಚೆನ್ನಾಗಿ ತಿಳಿದವನಾಗಿದ್ದನು. ॥೧೦॥

ಕ್ರೂರನಾಗಿರುವ ಬ್ರಹ್ಮನು ಭೂಮಿಯಲ್ಲಿ ಬಹಳ ಮಟ್ಟಿಗೆ ವ್ಯತ್ಯಾಸವನ್ನು ಮಾಡುತ್ತಿರುವನು. ಸರ್ವ ಪ್ರಕಾರದಿಂದಲೂ ಒಂದೇ ಬಗೆಯ ಪ್ರೇಮದಿಂದ ಕೂಡಿದ ಮನುಸ್ಸುಳ್ಳವರಾದ ಗಂಡಹೆಂಡರ ವಿಷಯದಲ್ಲಿಯೂ ಮರಣವು ಬೇರೆ ಬೇರೆಯ ಕಾಲಗಳಲ್ಲಿ ಉಂಟಾಗುವಂತೆ, ಒಂದೇ ಕಾಲದಲ್ಲಿ ಉಂಟಾಗದ ಹಾಗೆ, ಮಾಡುತ್ತಿರುವನು. ॥೧೧॥

ಉಪಕಾರಸ್ತು ನಾರೀಣಾಂ ಮುನಿಭಿರ್ವಿಹಿತಃ ಕಿಲ ।
ಯದುಕ್ತಂ ಧರ್ಮಶಾಸ್ತ್ರೇಷು ಜ್ವಲನಂ ಪತಿನಾ ಸಹ ॥೧೨॥

ಏವಂ ವಿಲಪಮಾನಂ ತಂ ರಾಜಾನಂ ಭಗವಾನ್ ಹರಿಃ ।
ನಿವಾರಯಾಮಾಸ ತದಾ ವಚನೈರ್ಯುಕ್ತಿಯೋಜಿತೈಃ ॥೧೩॥

ಕಿಂ ವಿಷೀದಸಿ ರಾಜೇಂದ್ರ ಕ್ವ ಗತಾ ತೇ ಪ್ರಿಯಾಽಂಗನಾ ।
ನ ಶ್ರುತಂ ಕಿಂ ತ್ವಯಾ ಶಾಸ್ತ್ರಂ ನ ಕೃತೋಽಸೌ ಬುಧಾಶ್ರಯಃ॥೧೪॥

ಕಾ ಸಾ ಕಸ್ತ್ವಂ ಕ್ವ ಸಂಯೋಗೋ ವಿಯೋಗಃ ಕೀದೃಶಸ್ತವ ।
ಪ್ರವಾಹರೂಪಸಂಸಾರೇ ನೃಣಾಂ ನೌತರತಾಮಿವ ॥೧೫॥

---

ಮುನಿಗಳು ಧರ್ಮಶಾಸ್ತ್ರಗಳಲ್ಲಿ ಪತಿವ್ರತೆಯರಾದ ಸ್ತ್ರೀಯರು ಮೃತನಾದ ಪತಿಯ ಜೊತೆಯಲ್ಲಿ ಅಗ್ನಿಪ್ರವೇಶವನ್ನು ಮಾಡಬೇಕೆಂದು ವಿಧಿಸಿರುತ್ತಾರೆ. ಎಂಬುದು ಸ್ತ್ರೀಯರಿಗೆ ಬಹಳಮಟ್ಟಿನ ಉಪಕಾರವನ್ನು ಮಾಡುವುದಾಗಿ ಇರುವುದು, ಹೆಂಡಿತಿಯು ಸತ್ತರೆ ಗಂಡಸರಿಗೂ ಹೀಗೆ ಇರಲೆಂದು ವಿಧಿಸದಿರುವುದು ಅನ್ಯಾಯ ವಾಗಿರುತ್ತದೆ. ವಿಯೋಗದ ವ್ಯಸನವನ್ನು ಅನುಭವಿಸುವುದು ಕಷ್ಟಕರವಾಗಿರುವುದು. ||೧೨||

ಷಡ್ಗುಣೈಶ್ವರ್ಯ ಸಂಪನ್ನನಾದ ವಿಷ್ಣುವು, ಹೀಗೆ ಅಳುತ್ತಿರುವ ಆ ದೊರೆ ಯನ್ನು ಯುಕ್ತಿಯಿಂದ ಕೂಡಿರುವ ಮಾತುಗಳಿಂದ ಅವನ ದುಃಖವು ಶಾಂತವಾಗು ವಂತೆ ಹೇಳಿ ಸಮಾಧಾನ ಪಡಿಸುವುದಕ್ಕಾಗಿ ಹೀಗೆ ಮಾತನಾಡಿದನು. ||೧೩||

ಶ್ರೀ ವಿಷ್ಣುವು ಹೇಳಿದನು—ಎಲೈ ರಾಜಶ್ರೇಷ್ಠನೇ, ನೀನು ಏತಕ್ಕಾಗಿ ದುಃಖಪಡುವೆ? ನಿನ್ನ ಪ್ರೀತಿಪಾತ್ರಳಾದ ಹೆಂಗಸು ಎಲ್ಲಿಗೆ ಹೋದಳು? ವಿದ್ವಾಂ ಸರು ಹೇಳುತ್ತಾ ಇರುವ ಶಾಸ್ತ್ರವು ನಿನ್ನಿಂದ ಕೇಳಲ್ಪಟ್ಟಿಲ್ಲವೇನು? ತಿಳಿವಳಿಕೆಯುಳ್ಳ ವರ ಸಹವಾಸವನ್ನೂ ನೀನು ಮಾಡಿಲ್ಲವೇನು? ||೧೪||

ಹೊಳೆಯನ್ನು ದಾಟುತ್ತಿರುವಾಗ, ನಾವೆಯಲ್ಲಿ ಸೇರುವ ಜನರ ಸಹವಾಸ ಸ್ನೇಹದಂತೆ ಒಂದು ಸಂಸಾರದಲ್ಲಿ ಸೇರುವ ಜನರಿಗೆ ಸಂಬಂಧವು ಸ್ವಲ್ಪಕಾಲ ಮಾತ್ರ ಇರುತ್ತದೆ. ಪ್ರವಾಹದಂತೆ ಪ್ರತಿ ನಿಮಿಷದಲ್ಲಿಯೂ, ಬದಲಾವಣೆಯನ್ನು ಹೊಂದು ತ್ತಿರುವ ಈ ಸಂಸಾರದಲ್ಲಿ ಹೆಂಡಿತಿಯು ಯಾರು? ಗಂಡನು ಯಾರು? ಇದು ಎಲ್ಲವೂ ಅನಿತ್ಯವಾಗಿರುವುದು! ಹೀಗಿರುವಲ್ಲಿ ನಿನಗೆ ದೊರೆತಿದ್ದ ಆ ಹೆಂಗುಸು ಯಾರು? ನೀನು

ಗೃಹಂ ಗಚ್ಛ ನೃಪಶ್ರೇಷ್ಠ ವೃಥಾ ತೇ ರುದಿತೇನ ಕಿಂ ।
ಸಂಯೋಗಶ್ಚ ವಿಯೋಗಶ್ಚ ದೈವಾಧೀನಸ್ಸದಾ ನೃಣಾಂ ॥೧೬॥

ಅನಯಾ ಸಹ ತೇ ರಾಜನ್ ಸಂಯೋಗಸ್ತ್ವಿಹ ಸಂವೃತಃ ।
ಭುಕ್ತಾ ತ್ವಯಾ ವಿಶಾಲಾಕ್ಷೀ ಸುಂದರೀ ತನುಮಧ್ಯಮಾ ॥೧೭॥

ನ ದೃಷ್ಟೌ ಪಿತರಾವಸ್ಯಾಸ್ತ್ವಯಾ ಪ್ರಾಪ್ತಾ ಸರೋವರೇ ।
ಕಾಕತಾಳೀಪ್ರಸಂಗೇನ ಯದ್ಭೂತಂ ತತ್ತಥಾಗತಂ ॥೧೮॥

ಮಾ ಶೋಕಂ ಕುರು ರಾಜೇಂದ್ರ ಕಾಲೋ ಹಿ ದುರತಿಕ್ರಮಃ ।
ಕಾಲಯೋಗಂ ಸಮಾಸಾದ್ಯ ಭುಂಕ್ಷ್ವಭೋಗಾನ್ ಗೃಹೇ ಯಥಾ ॥೧೯॥

---

ಯಾರು? ನಿನಗೂ ಆ ಸ್ತ್ರೀಗೂಸಹ ಇದ್ದ ಸಂಯೋಗ ಸಂಬಂಧವೆಲ್ಲಿಯದು? ಅದೇನು ಶಾಶ್ವತವಾದುದೇ? ನಿಮ್ಮಿಬ್ಬರಿಗೂ ಈಗ ಉಂಟಾಗಿರುವ ವಿಯೋಗವು ತಾನೇ ಎಂಥಾದ್ದಾಗಿರುವುದು? ಇದೂತಾತ್ಕಾಲಿಕವಾದುದೇ ಅಲ್ಲವೇ? ॥೧೫॥

ಶ್ರೇಷ್ಠನಾದ ಎಲೈ ರಾಜನೇ ಕೇಳು, ನೀನು ಸುಮ್ಮನೆ ಮನೆಗೆ ಹೋಗು, ನೀನು ವ್ಯರ್ಥವಾಗಿ ಅಳುವುದರಿಂದ ಏನು ಪ್ರಯೋಜನ? ಯಾವಾಗಲೂ ಮನುಷ್ಯರಿಗೆ ಅನ್ಯೋನ್ಯವಾಗಿ ಸಂಯೋಗವೂ, ಪರಸ್ಪರವಾಗಿ ಅಗಲುವಿಕೆಯೂ, ಸಹ ದೈವಗತಿಗೆ ಅಧೀನವಾಗಿ ತಪ್ಪದೆ ಆಗುತ್ತಾ ಇರುವುದು. ॥೧೬॥

ಎಲೈ ರಾಜನೇ, ಈ ಸ್ತ್ರೀಯೊಡನೆ ನಿನಗೆ ಏಕಾಂತವಾದ ಸಂಬಂಧವು ಇದುವರೆಗೂ ಉಂಟಾಗಿತ್ತು. ವಿಶಾಲವಾದ ಕಣ್ಣುಗಳುಳ್ಳವಳಾಗಿದ್ದ, ಸಣ್ಣನಾದ ಮಧ್ಯಭಾಗವುಳ್ಳ ಸುಂದರಿಯನ್ನು ನೀನೂ ಅನುಭವಿಸಿದೆ! ॥೧೭॥

ಈ ಸ್ತ್ರೀಯ ತಂದೆತಾಯಿಗಳೂ ಯಾರಾಗಿದ್ದರೆಂಬುದೂ ಸಹ ನಿನಗೆ ಗೊತ್ತಿಲ್ಲ, ನಿನಗೆ ಇವಳು ಸರೋವರದ ಹತ್ತಿರ ಸಿಕ್ಕಿದಳು. ನಿನಗೂ ಇವಳಿಗೂ, ಸಹ ಸಂಬಂಧವು ಕಾಕತಾಳೀಯ ನ್ಯಾಯಕ್ಕೆ ಅನುಸಾರವಾಗಿ ಉಂಟಾಯಿತು. ಅದೂ ಹೇಗೆ ಆಯಿತೋ ಹಾಗೆ ನಾಶವನ್ನೂ ಹೊಂದಿತು! ಇಷ್ಟಕ್ಕಾಗಿ ಹೀಗೆ ದುಃಖಪಡುತ್ತಿರುವುದೇಕೆ? ॥೧೮॥

ಎಲೈ ರಾಜಶ್ರೇಷ್ಠನೇ, ನೀನು ಹೀಗೆ ವ್ಯಸನಪಡಬೇಡ, ಕಾಲವನ್ನು ಮೀರುವುದು ಯಾರಿಂದಲೂ ಆಗತಕ್ಕುದಲ್ಲ. ನಿನ್ನ ಅದೃಷ್ಟದ ಫಲವಾಗಿ ಆಯಾ ಕಾಲದಲ್ಲಿ

ಯಥಾ ಗತಾ ಗತಾ ಸಾ ತು ತಥೈವ ವರವರ್ಣಿನೀ ।
ಯಥಾಪೂರ್ವಂ ತಥಾ ತತ್ರ ಗಚ್ಛ ಕಾರ್ಯಂ ಕುರು ಪ್ರಭೋ ॥೨೦॥

ರುದಿತೇನ ತವಾದ್ಯೈವ ನಾಗಮಿಷ್ಯತಿ ಕಾಮಿನೀ ।
ವೃಥಾ ಶೋಚಸಿ ಪೃಥ್ವೀಶ ಯೋಗಯುಕ್ತೋ ಭವಾಧುನಾ ॥೨೧॥

ಭೋಗಃ ಕಾಲವಶಾದೇತಿ ತಥೈವ ಪ್ರತಿಯಾತಿ ಚ ।
ನಾತ್ರ ಶೋಕಸ್ತು ಕರ್ತವ್ಯಃ ನಿಷ್ಫಲೇ ಭವವರ್ತ್ಮನಿ ॥೨೨॥

---

ಸಂಬಂಧವನ್ನು ನೀನು ಇದುವರೆಗೂ ಹೊಂದಿದ್ದಂತೆ ಮುಂದೆಯೂ ನಿನ್ನ ಮನೆಯಲ್ಲಿ ಹಾಗೆಯೇ ಬಂದೊದಗುವ ಸುಖದುಃಖಭೋಗಗಳನ್ನು ಸಮಾಧಾನಗೊಂಡಿರುವ ಮನಸ್ಸುಳ್ಳವನಾಗಿ ಅನುಭವಿಸು! ಇದೇ ವಿವೇಕವು. ॥೧೯॥

ನೀನು ಯಾವ ಸ್ತ್ರೀಯನ್ನು ಹೇಗೆ ಸೇರಿ ಭೋಗವನ್ನು ಅನುಭವಿಸಿದೆಯೋ, ಆ ಸ್ತ್ರೀಯು, ನಿನಗೆ ಹೇಗೆ ಸಿಕ್ಕಿದಳೋ ಹಾಗೆಯೇ ಹೊರಟುಹೋದಳು. ಎಲೈ ರಾಜನೇ, ನೀನು ಈಗಲೂ ಹಿಂದೆ ಇದ್ದಂತೆ ನಿನ್ನ ವಾಸಸ್ಥಳಕ್ಕೆ ಹೋಗಿ ನಿನ್ನ ಕಾರ್ಯಗಳನ್ನು ಮಾಡುತ್ತಿರು. ॥೨೦॥

ನೀನು ಇಲ್ಲಿ ಹೀಗೆ ಸುಮ್ಮನೆ ಅಳುವುದರಿಂದ, ಈಗ ನಿನ್ನ ಆ ಸ್ತ್ರೀಯು ಪುನಃ ಬರುವಳೇನು? ಎಂದಿಗೂ ಬರುವುದಿಲ್ಲವು. ಎಲೈ ರಾಜನೇ, ಸುಮ್ಮನೆ ಏಕೆ ವ್ಯಸನಪಡುತ್ತೀಯೆ? ಈಗ ವ್ಯಸನಪಡುವುದನ್ನು ಬಿಟ್ಟು ಯೋಗಾಭ್ಯಾಸವನ್ನು ಮಾಡು, ಎಂದರೆ ಸುಖದುಃಖಗಳೆರಡನ್ನೂ ಸಮಾಧಾನದಿಂದ ಅನುಭವಿಸುವ ಮನೋವೃತ್ತಿ ಯನ್ನು ಯಾವಾಗಲೂ ಪಡೆದಿರುವಂತೆ ವಿವೇಕದಿಂದ ಅಭ್ಯಾಸವನ್ನು ಮಾಡುತ್ತಿರು. ॥೨೧॥

ಸುಖವು ಅದೃಷ್ಟದ ಫಲ. ಅದು ಕಾಲಕ್ಕೆ ಸರಿಯಾಗಿ ಬರುವುದು. ಹಾಗೆಯೇ ನಾಶವನ್ನೂ ಹೊಂದುವುದು. ನಿತ್ಯವಾದ ಸುಖದ ಪ್ರಯೋಜನವಿಲ್ಲದಿರುವ ಈ ಸಂಸಾರಮಾರ್ಗದಲ್ಲಿರುವ ಮನುಷ್ಯರು ಈ ವಿಷಯದಲ್ಲಿ ದುಃಖವನ್ನು ಮಾಡಬಾರದು. ॥೨೨॥

**ನೈಕತ್ರ ಸುಖಸಂಯೋಗೋ ದುಃಖಯೋಗಸ್ತು ನೈಕತಃ ।**
**ಘಟಿಕಾಯಂತ್ರವತ್ಕಾಮಂ ಭ್ರಮಣಂ ಸುಖದುಃಖಯೋಃ ॥೨೩॥**

**ಮನಃ ಕೃತ್ವಾ ಸ್ಥಿರಂ ಭೂಪ ಕುರು ರಾಜ್ಯಂ ಯಥಾ ಸುಖಂ ।**
**ಅಥವಾ ನ್ಯಸ್ಯ ದಾಯಾದೇ ವನಂ ಸೇವಯ ಸಾಂಪ್ರತಂ ॥೨೪॥**

**ದುರ್ಲಭೋ ಮಾನುಷೋ ದೇಹಃ ಪ್ರಾಣಿನಾಂ ಕ್ಷಣಭಂಗುರಃ ।**
**ತಸ್ಮಿನ್ ಪ್ರಾಪ್ತೇ ತು ಕರ್ತವ್ಯಂ ಸರ್ವಥೈವಾತ್ಮಸಾಧನಂ ॥೨೫॥**

**ಜಿಹ್ವೋಪಸ್ಥರಸೋ ರಾಜನ್ ಪಶುಯೋನಿಷು ವರ್ತತೇ ।**
**ಜ್ಞಾನಂ ಮಾನುಷದೇಹೆ ನೈ ನಾನ್ಯಾಸು ಚ ಕುಯೋನಿಷು ॥೨೬॥**

---

ದುಃಖದ ಸಂಬಂಧವು ಒಂದೇ ಕಡೆಯಲ್ಲಿ ಯಾವಾಗಲೂ ನಿಯತವಾಗಿರುವುದಿಲ್ಲವು. ಹಾಗೆ ಸುಖವೂ ಸಹ ಒಂದೇ ಕಡೆಯಲ್ಲಿ ಒಬ್ಬರಿಗೇ ನಿಯತವಾಗಿರುವುದಿಲ್ಲ. ಸುಖದುಃಖಗಳೆರಡೂ, ಗಳಿಗೆಯನ್ನು ತೋರಿಸುವ ಯಂತ್ರದಂತೆ, ಗಡಿಯಾರದ ಹಾಗೆ ಸುಮ್ಮನೆ ಸುತ್ತುತ್ತಾ ಒಂದಾದ ಮೇಲೆ ಇನ್ನೊಂದು ಬರುತ್ತಿರುವುದು. ॥೨೩॥

ಎಲೈ ರಾಜನೇ, ಮನಸ್ಸನ್ನು ಸ್ಥಿರವಾಗಿ ಮಾಡಿಕೊಂಡು, ನಿನ್ನ ಮನಸ್ಸಿಗೆ ಸುಖವಾಗುವ ಹಾಗೆ ರಾಜ್ಯವನ್ನು ಆಳು, ಹಾಗೆ ಮಾಡುವುದೂ ನಿನಗೆ ಇಷ್ಟವಾಗದಿದ್ದರೆ ನಿನ್ನ ಮಕ್ಕಳೇ ಮೊದಲಾದವರಲ್ಲಿ ಯಾರಿಗಾದರೂ ರಾಜ್ಯಭಾರವನ್ನು ವಹಿಸಿ ಕೊಟ್ಟು, ಆಮೇಲೆ ಕಾಡಿನಲ್ಲಿರುತ್ತಾ ವಿವೇಕ ವೈರಾಗ್ಯಗಳಿಂದ ಮೋಕ್ಷವನ್ನು ಸಾಧಿಸುವುದು ನಿನಗೆ ಯುಕ್ತವಾಗಿರುವುದು. ಏಕೆಂದರೆ, ॥೨೪॥

ಪ್ರಾಣಿಗಳಿಗೆ ಮನುಷ್ಯಶರೀರವು ದೊರಕುವುದು ತುಂಬ ಕಷ್ಟಸಾಧ್ಯವಾದುದು. ಅಂತಹ ಮನುಷ್ಯ ಶರೀರವೂ ಕ್ಷಣಕಾಲದಲ್ಲಿ ನಾಶವಾಗತಕ್ಕದ್ದು. ಆದುದರಿಂದ ಹೀಗೆ ಇರುವ ಮನುಷ್ಯ ಶರೀರವು ಬಂದ ಕಾಲದಲ್ಲಿ ಸರ್ವಪ್ರಕಾರದಿಂದಲೂ ಆತ್ಮ ಜ್ಞಾನವನ್ನು ಸಾಧಿಸುವುದು ಆಯಾಯ ಮಾನವನಿಗೆ ಕರ್ತವ್ಯವಾಗಿರುತ್ತದೆ. ॥೨೫॥

ಜಿಹ್ವಾ ಮತ್ತು ಉಪಸ್ಥ ಎಂದರೆ ಆಹಾರ, ಕಾಮಭೋಗ, ಇವುಗಳಲ್ಲಿ ಅಭಿಲಾಷೆಯು, ಪಶುಗಳಾಗಿ ಹುಟ್ಟಿರುವ ಪ್ರಾಣಿಗಳಿಗೆ ಆಯಾಯ ಜಾತಿಗೆ ತಕ್ಕಂತೆ ಸ್ವಭಾವವಾಗಿರುತ್ತದೆ. ಎಲೈ ರಾಜನೇ, ಮನುಷ್ಯಶರೀರವನ್ನು ಹೊಂದಿರುವವರಿಗೆ ಜ್ಞಾನವೊಂದು ಮಾತ್ರ ಹೆಚ್ಚುಗಾರಿಕೆಯಾಗಿರುವುದು. ಬೇರೆಯಾಗಿರುವ ಕೆಳಗಿನ ಜನ್ಮಗಳಲ್ಲಿ ಇಂತಹ ಜ್ಞಾನದ ಸಂಪಾದನೆಯ ಸಂಭವವೇ ಇರುವುದಿಲ್ಲವು. ॥೨೬॥

**ತಸ್ಮಾದ್ಗಚ್ಛ ಗೃಹಂ ತ್ಯಕ್ತ್ವಾ ಶೋಕಂ ಕಾಂತಾಸಮುದ್ಭವಂ ।**
**ಮಾಯೇಯಂ ಭಗವತ್ಯಾಸ್ತು ಯಯಾ ಸಮ್ಮೋಹಿತಂ ಜಗತ್॥೨೭॥**

|| ನಾರದ ಉವಾಚ ||

**ಇತ್ಯುಕ್ತೋ ಹರಿಣಾ ರಾಜಾ ಪ್ರಣಮ್ಯ ಕಮಲಾಪತಿಂ ।**
**ಕೃತ್ವಾ ಸ್ನಾನವಿಧಿಂ ಸಮ್ಯಕ್ ಜಗಾಮ ನಿಜಮಂದಿರಂ ॥೨೮॥**

ಎಲೈ ರಾಜನೇ, ತತ್ವಮಾರ್ಗವು ಹೀಗೆ ಇರುವುದರಿಂದ ನೀನು ಈ ಸ್ತ್ರೀಗೆ ಸಂಬಂಧಪಟ್ಟ, ಮತ್ತು ಅವಳ ವಿಯೋಗದಿಂದ ಹುಟ್ಟಿದ ದುಃಖವನ್ನು ಬಿಟ್ಟು, ಮನೆಗೆ ಹೋಗು. ಏಕೆಂದರೆ ಯಾವ ದೇವಿಯ ಮಾಯೆಯ ಪ್ರಭಾವದಿಂದ ಪ್ರಪಂಚ ವೆಲ್ಲವೂ, ಮೋಹಗೊಳಿಸಲ್ಪಟ್ಟಿರುವುದೋ, ಪೂಜ್ಯಳಾದ, ಷಡ್ಗುಣೈಶ್ವರ್ಯಸಂಪನ್ನ ಳಾದ, ಮತ್ತು ಮಹಾಮಹಿಮಶಾಲಿನಿಯಾದ ಆ ದೇವಿಯ ಮಾಯೆಯನ್ನು ಮೀರು ವುದು ನಿನಗೂ ಅಸಾಧ್ಯವಾದುದು. ಅದು ಎಲ್ಲರಲ್ಲೂ ವ್ಯಾಪಿಸಿರುವುದಾದರೂ, ಸೂಕ್ಷ್ಮವಾಗಿ ವಿಚಾರಮಾಡುವ ವಿಮರ್ಶಕರ ಅಂತರ್ದೃಷ್ಟಿ ಅಥವಾ ಒಳಗಣ್ಣಿಗೆ ಮಾತ್ರ ಗೋಚರವಾಗುತ್ತದೆ. ಈ ಮಹಾಮಾಯೆಯು ದೇವತೆಗಳು, ರಾಕ್ಷಸರು, ಮಾನವರು ಮುಂತಾದ ಎಲ್ಲ ಪ್ರಾಣಿಗಳನ್ನೂ ಒಳಗೊಂಡಿರುವ ಈ ಜಗತ್ತನ್ನೆಲ್ಲ ವನ್ನೂ ಮೋಹಗೊಳಿಸಿರುವುದು! ಈ ಮೋಹದಿಂದ ಆತ್ಮಚೈತನ್ಯದಲ್ಲಿ ಅನಾತ್ಮ ವಸ್ತುಗಳೊಡನೆ ನಾನು, ನನ್ನದು, ನನ್ನ ದೇಹ, ಹೆಂಡಿತಿ, ಮಗ, ಸ್ವಾಮಿ, ಆಳು, ಗುರು, ಶಿಷ್ಯ, ಎಂದು ಮುಂತಾಗಿ ಅಭಿಮಾನ ಮೂಲಕವಾದ ಸಂಬಂಧಕಲ್ಪನೆಯು ಏರ್ಪಡುತ್ತದೆ. ಕಲ್ಪಿತವಾದ ಸಂಬಂಧರೂಪವಾದ ಈ ಅಜ್ಞಾನವು ಅದರ ಅಧಿಷ್ಠಾನ ವಾದ ವಸ್ತುವಿನ ಜ್ಞಾನದಿಂದಲೇ ನಾಶವಾಗಬೇಕಾಗಿದೆ. ಈ ಅಧಿಷ್ಠಾನವು ಸಚ್ಚಿದಾ ನಂದರೂಪವಾದ ಆತ್ಮಚೈತನ್ಯವೇ ಆಗಿದೆ ಎಂಬುದು, ಮಾನವನಿಗೆ ಪ್ರತಿ ದಿನದಲ್ಲೂ ಅನುಭವಕ್ಕೆ ಬರುವ ಎಚ್ಚರ, ಕನಸು, ನಿದ್ರೆ, ತುರೀಯ, ಎಂಬ ಅವಸ್ಥೆಗಳಲ್ಲಿ ಉಂಟಾ ಗುವ ತಿಳಿವಳಿಕೆಯಿಂದ ಗೊತ್ತಾಗುತ್ತದೆ. ಇದರಂತೆಯೇ ಈ ಜಗತ್ತಿನಲ್ಲೂ ಈ ಮೇಲೆ ಹೇಳಿರುವ ಸಂಬಂಧಗಳ ಜತೆಗೆ ಕಾರ್ಯ, ಕಾರಣ, ಎಂಬ ಸಂಬಂಧವೂ ತೋರುತ್ತಿರು ತ್ತದೆ. ಈ ಸಂಬಂಧಗಳೆಲ್ಲವೂ ಅಭಿಮಾನಮೂಲಕವಾಗಿರುತ್ತಾ, ಮಾಯಾಮಯ ವಾಗಿ, ಮಿಥ್ಯಾರೂಪವಾಗಿದೆ. ಈ ಜಗತ್ತಿಗೆ ಅಧಿಷ್ಠಾನವಾದ ಮಾಯೆಯೂ ಸರ್ವಾಧಿ ಷ್ಠಾನವಾದ ಬ್ರಹ್ಮತತ್ವದೊಡನೆ ಅಭಿನ್ನವಾಗಿದೆ. ಮೇಲಿನ ಪುಟವನ್ನು (೨೩೬) ನೋಡಿ. ॥೨೭॥

ನಾರದನು ಹೇಳಿದನು—ರಾಜನು ವಿಷ್ಣುವಿನಿಂದ ಹೀಗೆ ಬುದ್ಧಿವಾದ ಹೇಳ

ದತ್ವಾ ರಾಜ್ಯಂ ಸ್ವ ಪೌತ್ರಾಯ ಪ್ರಾಪ್ಯ ನಿರ್ವೇದಮುದ್ಭುತಂ ।
ವನಂ ಜಗಾಮ ಭೂಪಾಲಸ್ತತ್ವಜ್ಞಾನಮವಾಪ ಚ ॥೨೯॥

ಗತೇ ರಾಜನ್ಯಹಂ ವೀಕ್ಷ್ಯ ಭಗವಂತಮಧೋಕ್ಷಜಂ ।
ತಮಬ್ರವಂ ಜಗನ್ನಾಥಂ ಹಸಂತಂ ಮಾಂ ಪುನಃಪುನಃ ॥೩೦॥

ವಂಚಿತೋಽಹಂ ತ್ವಯಾ ದೇವ ಜ್ಞಾತಂ ಮಾಯಾಬಲಂ ಮಹತ್ ।
ಸ್ಮರಾಮಿ ಚರಿತಂ ಸರ್ವಂ ಸ್ತ್ರೀದೇಹೇ ಯತ್ಕೃತಂ ಮಯಾ ॥೩೧॥

ಬ್ರೂಹಿ ಮೇ ದೇವದೇವೇಶ ಪ್ರವಿಷ್ಟೋಽಹಂ ಸರೋವರೇ ।
ವಿಗತಂ ಪೂರ್ವ ವಿಜ್ಞಾನಂ ಸ್ನಾನಾದೇವ ಕಥಂ ಹರೇ ॥೩೨॥

---

ಲ್ಪಟ್ಟವನಾಗಿ ಲಕ್ಷ್ಮೀಗೆ ಪತಿಯಾದ ವಿಷ್ಣುವನ್ನು ಭಕ್ತಿಯಿಂದ ನಮಸ್ಕರಿಸಿ, ಶಾಸ್ತ್ರ ಕ್ರಮದಂತೆ ಸ್ನಾನ ಮುಂತಾದ ಕಾರ್ಯವನ್ನು ಮಾಡಿ ತನ್ನ ಮನೆಗೆ ಹೋದನು.||೨೮||

ಆ ರಾಜನು ತನ್ನ ಮೊಮ್ಮಗನಿಗೆ ರಾಜ್ಯಭಾರವನ್ನು ವಹಿಸಿ ಕೊಟ್ಟು, ಇತರರಿಗೆ ಆಶ್ಚರ್ಯವುಂಟಾಗುವಷ್ಟುಮಟ್ಟಿನ ವೈರಾಗ್ಯವನ್ನು ಹೊಂದಿ ಕಾಡಿಗೆ ಹೋದನು, ಮತ್ತು ಅಲ್ಲಿ ತತ್ವಜ್ಞಾನವನ್ನು ಹೊಂದಿದನು. ||೨೯||

ರಾಜನು ಹೋದ ಮೇಲೆ, ಷಡ್ಗುಣೈಶ್ವರ್ಯಸಂಪನ್ನನಾದ, ಜಿತೇಂದ್ರಿಯನಾದ ಜಗತ್ತಿಗೆ ಅಧಿಪತಿಯಾದ, ಶ್ರೀಮಹಾವಿಷ್ಣುವು ನನ್ನನ್ನು ನೋಡಿ ಪದೇ ಪದೇ ನಗುತ್ತಿರುವುದನ್ನು ಕಂಡು, ನಾನು ಅವನ ಸಂಗಡ ಹೀಗೆ ಮಾತನಾಡಿದೆನು. ||೩೦||

ಓ ದೇವನೇ, ನೀನು ನನಗೆ ಮೋಸವನ್ನು ಮಾಡಿರುವೆ. ದೊಡ್ಡದಾಗಿರುವ ಎಂದರೆ ಎಲ್ಲರನ್ನೂ ವ್ಯಾಪಿಸಿರುವ ಮಹಾಮಾಯೆಯ ಸಾಮರ್ಥ್ಯವು ನನಗೆ ತಿಳಿಯಿತು. ಸ್ತ್ರೀ ಶರೀರದಲ್ಲಿ ನಾನು ಮಾಯಾಧೀನನಾಗಿ ಯಾವ ಯಾವ ಕೆಲಸವನ್ನು ಮಾಡಿದೆನೋ ಅದೆಲ್ಲವೂ ನನಗೆ ಈಗಲೂ ಸ್ಮರಣೆಗೆ ಬರುತ್ತಿರುವುದು ! ||೩೧||

ದೇವತೆಗಳಿಗೂ ದೇವನಾದ ಓ ಪ್ರಭುವೇ, ನಾನು ಸರೋವರವನ್ನು ಪ್ರವೇಶ ಮಾಡಿದ ಕೂಡಲೇ ನನ್ನ ಹಿಂದಿನ ಶರೀರದಲ್ಲಿ ನನಗೆ ಇದ್ದ ಜ್ಞಾನವೂ, ವಿಜ್ಞಾನವೂ ಸ್ಮೃತಿಯೂ, ಸ್ನಾನಮಾತ್ರದಿಂದ ಹೇಗೆ ಹೋಯಿತು ? ಎಂಬುದನ್ನು ನನಗೆ ತಿಳಿಯುವ ಹಾಗೆ ವಿವರಿಸಿ ಹೇಳು. ||೩೨||

ಯೋಷಿದ್ದೇಹಂ ಸಮಾಸಾದ್ಯ ಮೋಹಿತೋಽಹಂ ಜಗದ್ಗುರೋ ।
ಪತಿಂ ಪ್ರಾಪ್ಯ ನೃಪಶ್ರೇಷ್ಠಂ ಪೌಲೋಮೀ ವಾಸವಂ ಯಥಾ ॥೩೩॥

ಮನಸ್ತದೇವ ತಚ್ಚಿತ್ತಂ ದೇಹಸ್ಸ ಚ ಪುರಾತನಃ ।
ಲಿಂಗಂ ತದೇವ ದೇವೇಶ ಸ್ಮೃತೇರ್ನಾಶಃ ಕಥಂ ಹರೇ ॥೩೪॥

ವಿಸ್ಮಯೋಽಯಂ ಮಹಾನ್ಮೇಽತ್ರ ಜ್ಞಾನನಾಶಂ ಪ್ರತಿಪ್ರಭೋ ।
ಕಥಯಾದ್ಯ ರಮಾಕಾಂತ ಕಾರಣಂ ಪರಮಂ ಚ ಯತ್ ॥೩೫॥

ನಾರೀದೇಹಂ ಮಯಾಪ್ರಾಪ್ಯ ಭುಕ್ತಾ ಭೋಗಾಹ್ಯನೇಕಶಃ ।
ಸುರಾಪಾನಂ ಕೃತಂ ನಿತ್ಯಂ ವಿಧಿಹೀನಂ ಚ ಭೋಜನಂ ॥೩೬॥

ಮಯಾ ತದೇವ ನ ಜ್ಞಾತಂ ನಾರೀದೇಹ ಮಿತಿ ಸ್ಫುಟಂ ।
ಜಾನಾಮ್ಯದ್ಯ ಯಥಾ ಸರ್ವಂ ವಿವಿಕ್ತಂ ನ ತಥಾ ತದಾ ॥೩೭॥

---

ಓ ಜಗದ್ಗುರುವೇ, ನಾನು ಸ್ತ್ರೀಶರೀರವನ್ನು ಹೊಂದಿದ್ದಾಗ, ಇಂದ್ರನನ್ನು ಗಂಡನನ್ನಾಗಿ ಹೊಂದಿರುವ ಶಚೀದೇವಿಯಂತೆ, ಶ್ರೇಷ್ಠನಾದ ರಾಜನನ್ನು ಪತಿಯನ್ನಾಗಿ ಹೊಂದಿ ಮೋಹಗೊಂಡೆನು. ॥೩೩॥

ಓ ದೇವತೆಗಳಿಗೆ ಒಡೆಯನಾದ ಸ್ವಾಮಿಯೇ, ಆ ಸ್ತ್ರೀದೇಹದಲ್ಲಿಯೂ ಇದ್ದ ಮನಸ್ಸು, ಹಿಂದೆ ಅನೇಕ ಜನ್ಮಗಳಿಂದ ಜ್ಞಾನ, ವಿಜ್ಞಾನಗಳನ್ನು ಪಡೆದಿದ್ದ ಮನಸ್ಸೇ ಆಗಿತ್ತು. ಚಿತ್ತವೂ ಅದೇ ಆಗಿದ್ದಿತು. ಇವುಗಳಿಗೆ ಆಶ್ರಯವಾಗಿದ್ದ ಲಿಂಗ ಶರೀರವೂ ಅದೇ ಆಗಿದ್ದಿತು. ಹೀಗಿರುವಾಗಲೂ ನನಗೆ ಕೊಳದಲ್ಲಿ ಮುಳುಗಿ ಸ್ನಾನಮಾಡಿದ ಮಾತ್ರದಿಂದ ನನ್ನ ಹಿಂದಿನ ಪುರುಷಜನ್ಮದ ಸ್ಮೃತಿ ಮುಂತಾದುದೆಲ್ಲವೂ ಹೇಗೆ ಸಂಪೂರ್ಣವಾಗಿ ತಪ್ಪಿಹೋಯಿತು ? ॥೩೪॥

ಓ ಪ್ರಭುವೇ, ನನಗೆ ಹೀಗೆ ಜ್ಞಾನವು ನಾಶವಾದ ವಿಷಯದಲ್ಲಿ ಬಹಳ ಹೆಚ್ಚಿನ ಆಶ್ಚರ್ಯವು ಉಂಟಾಗುವುದು. ಓ ಲಕ್ಷ್ಮೀಪತಿಯೇ, ಈ ವಿಷಯದಲ್ಲಿ ಹೀಗಾಗಲು ಮುಖ್ಯವಾದ ಕಾರಣವು ಯಾವುದು? ಎಂಬುದನ್ನು ನನಗೆ ತಿಳಿಸು.॥೩೫॥

ನಾನು ಸ್ತ್ರೀ ಶರೀರವನ್ನು ಹೊಂದಿದ್ದಾಗ ಅನೇಕವಿಧವಾದ ಸುಖಗಳು ಬಹಳ ಮಟ್ಟಿಗೆ ಅನುಭವಿಸಲ್ಪಟ್ಟವು. ಪ್ರತಿನಿತ್ಯವೂ ಮದ್ಯಪಾನ ಮಾಡಲ್ಪಟ್ಟಿತು. ಶಾಸ್ತ್ರಕ್ಕೆ

**ಪಶ್ಯ ನಾರದ ಮಾಯಾಯಾ ವಿಲಾಸೋಽಯಂ ಮಹಾಮತೇ ।**
**ದೇಹೇಷು ಸರ್ವಜಂತೂನಾಂ ದಶಾಭೇದಾ ಹ್ಯನೇಕಶಃ ॥೩೮॥**

**ಜಾಗ್ರತ್ಸ್ವಪ್ನ ಸುಷುಪ್ತಿಶ್ಚ ತುರೀಯಾ ದೇಹಿನಾಂ ದಶಾ ।**
**ತಥಾ ದೇಹಾಂತರೇ ಪ್ರಾಪ್ತೇ ಸಂದೇಹಃ ಕೀದೃಶಃ ಪುನಃ ॥೩೯॥**

---

ವಿರುದ್ಧವಾದ ರೀತಿಯಿಂದ ಭೋಜನವು ಮಾಡಲ್ಪಟ್ಟಿತು. ಆಗ ನನಗೆ ನಾನು ನಾರದನೆಂದು ಕೊಂಚವೂ ತಿಳಿವಳಿಕೆಯು ಉಂಟಾಗಲಿಲ್ಲ. ಈಗ ನಾನು ಎಲ್ಲವನ್ನೂ ಪ್ರತ್ಯೇಕವಾಗಿ ಸ್ಪಷ್ಟವಾಗಿ ಹೇಗೆ ತಿಳಿಯುತ್ತಿದ್ದೇನೆಯೋ ಹಾಗೆ ಆಗ ನನಗೆ ಏತಕ್ಕೆ ತಿಳಿಯುತ್ತಿರಲಿಲ್ಲ? ಇದನ್ನು ನನಗೆ ತಿಳಿಸು. ||೩೬-೩೭||

ಎಲೈ ನಾರದನೇ, ಎಲೈ ಸೂಕ್ಷ್ಮವಾದ ಬುದ್ಧಿಯುಳ್ಳವನೇ, ಕೇಳು, ಯಾವ ಮಾತನ್ನು ನೀನು ಹೇಳಿದೆಯೋ ಅದಕ್ಕೆ ಎಂದರೆ, ಈಗ ನಾನು ನಾರದನಾಗಿರುವಾಗ ವಿಶದವಾಗಿ ತಿಳಿಯುವ ಹಾಗೆ, ಆಗ ಎಂದರೆ ಹೆಂಗುಸಾಗಿದ್ದಾಗ, ನಾನು ಏಕೆ ತಿಳಿಯ ಲಿಲ್ಲವೆಂಬುದಕ್ಕೆ, ಕಾರಣವನ್ನು ಈಗ ಹೇಳುವೆನು. ಇವೆಲ್ಲವೂ ಎಲ್ಲರಿಗೂ ಭ್ರಮೆ ಯನ್ನು ಉಂಟುಮಾಡುವ ಮಾಯೆಯ ವಿಲಾಸನಾಗಿ ಇರುವುದು! ಹೇಗೆಂದರೆ— ||೩೮||

ಹಗ್ಗದಲ್ಲಿ ಸರ್ಪವೆಂದು ಭ್ರಮೆಯು ಉಂಟಾಗಿರುವ ಸಮಯದಲ್ಲಿ ಆ ವಿವೇಕ ಜ್ಞಾನವು ಎಲ್ಲಿರುವುದು? ಎಲೈ ನಾರದನೇ ನೀನು ನೋಡು, ಭ್ರಮವು ಉಂಟಾ ಗಿರುವ ಕಡೆಯಲ್ಲಿ ಮಾಯೆಯ ಮಹಿಮೆಯಿಂದ ವಿವೇಕವು ಇರುವುದಿಲ್ಲ. ಜಾಗ್ರತ್, ಸ್ವಪ್ನ, ಸುಷುಪ್ತಿ, ಮತ್ತು ತುರೀಯ, ಎಂಬವಾಗಿ ನಾಲ್ಕು ಅವಸ್ಥೆಗಳು ಪ್ರಾಣಿಗಳಿಗೆ ಉಂಟು. ಎಂಬುದು ಎಲ್ಲರಿಗೂ ಅನುಭವದಲ್ಲಿದೆ. ಈ ನಾಲ್ಕು ಅವಸ್ಥೆಗಳೂ, ಭ್ರಮೆ ಯಲ್ಲಿಯೇ ಅಡಕವಾಗಿರುವುವು. ಹೀಗೆ ಇರುವ ಇವು ಆತ್ಮತತ್ವದ ವಾಸ್ತವಸ್ವರೂಪದ ಜ್ಞಾನಕ್ಕೆ ಪ್ರತಿಬಂಧಕಗಳಾಗಿರುವುವು. ಇವುಗಳನ್ನು ಯಾವಾಗಲೂ ಅನುಭವಿಸುವ ಕಾಲದಲ್ಲಿ ವಿವೇಕಿಯಾದವನು, ಅನುಭವಿಸುತ್ತಿರುವವನಿಗೆ ಸರಿಯಾದ ಉಪದೇಶ ವನ್ನು ಕೊಟ್ಟರೆ, ಆಗ ಅದು ಭ್ರಮೆಯೆಂದು ತಿಳಿದು ವಿವೇಕಜ್ಞಾನವು ಹುಟ್ಟು ವುದು. ಈ ವಿಷಯದಲ್ಲಿ ನಿನ್ನ ಅನುಭವವೇ ದೃಷ್ಟಾಂತವಾಗಿರುವುದು. ಹೀಗೆಯೇ ಪ್ರತಿಯೊಬ್ಬರಿಗೂ ಉಂಟಾಗುವ ಭ್ರಮೆಯು. ಅದು ಜಗದ್ವ್ಯವಹಾರವಾಗಿದ್ದರೆ ಆ

ಜಗತ್ತಿಗೆ ಅಧಿಷ್ಠಾನವಾದ ಬ್ರಹ್ಮಚೈತನ್ಯದ ಜ್ಞಾನದಿಂದಲೂ, ಜೀವಾತ್ಮವಿಷಯವಾಗಿದ್ದರೆ ಈ ಅವಸ್ಥಾತ್ರಯ ಅಥವಾ ಅವಸ್ಥಾಚತುಷ್ಟಯದ ಅಧಿಷ್ಠಾನವಾದ ಆತ್ಮಚೈತನ್ಯದ ಜ್ಞಾನದಿಂದಲೂ, ಒಟ್ಟು ಅನುಭವದಿಂದ ಉಂಟಾಗುವ ಈ ಜಗದಧಿಷ್ಠಾನ ಚೈತನ್ಯವೂ ಆತ್ಮಚೈತನ್ಯವೂ ಸಚ್ಚಿದಾನಂದರೂಪದಲ್ಲಿ ಅಭಿನ್ನತತ್ವವಾಗಿದೆ ಎಂಬ ಬ್ರಹ್ಮಾತ್ಮೈಕ್ಯಜ್ಞಾನದಿಂದಲೂ, ಆ ಭ್ರಮೆ ಎಲ್ಲವೂ ನಾಶವಾಗುತ್ತದೆ. ಈ ಅಂಶವನ್ನು ಪ್ರತಿಯೊಬ್ಬರೂ ವಿವೇಕವೈರಾಗ್ಯಗಳಿಂದ ಪಡೆಯುವ ಅವರವರ ಅನುಭವದಿಂದಲೇ ಮನಗಾಣಬೇಕಾಗಿದೆ. ಎಲ್ಲ ಭ್ರಮೆಗಳ ಸ್ಥಳ, ಸಮಯಗಳಲ್ಲಿ ವಿವೇಕವೂ ಏಕೆ ಇರುವುದಿಲ್ಲವೆಂಬುದು ಮಾಯೆಯ ಪ್ರಭಾವವಾಗಿದೆ ಎಂಬುದನ್ನು ಎಲ್ಲರೂ ಮನಗಾಣಬಹುದು.

ಓ ನಾರದನೇ, ಇದನ್ನು ನೀನು ಚೆನ್ನಾಗಿ ವಿಚಾರಮಾಡಿದಲ್ಲಿ ಈ ವಿಷಯದಲ್ಲಿ ನಿನಗೆ ನಿನ್ನ ವಿಷಯವೇ ಉದಾಹರಣೆಯಾಗಿರುವ ಕಾರಣ ನೀನು ಸಂದೇಹ ಪಡಲು ಕಾರಣವಿಲ್ಲ. ಹಗ್ಗವನ್ನು ತಿಳಿಯದೇ ಇರುವ ಕಾಲದಲ್ಲಿ, ಅಲ್ಲಿ ಹಾವೆಂಬುದು ಭ್ರಮಜ್ಞಾನವು ಎಂಬ ಅಂಶವು ಸರಿಯಾದವರಿಂದ, 'ಇದು ಹಾವಲ್ಲವು, ಹಗ್ಗವೇ ಸರಿ,' ಎಂದು ಹೇಳುವವರಿಂದ, ಉಂಟಾಗುವ ವಿವೇಕದಿಂದ ನಾಶವಾಗುವಂತೆ, ಈ ಭ್ರಮೆಯೂ ನಿನ್ನ ವಿಮರ್ಶೆಯಿಂದಲೇ ನಾಶವನ್ನು ಹೊಂದುವುದು. ಯಾವಾಗಲೂ ಭ್ರಮಜ್ಞಾನವು ಸತ್ಯಾಂಶವನ್ನು ಮುಚ್ಚಿ ಅಸತ್ಯಾಂಶವನ್ನು ಸತ್ಯದಂತೆ ತೋರಿಸುವುದು ! ಇದಕ್ಕೆ ಮಾಯೆಯು ಮುಖ್ಯವಾದ ಕಾರಣವಾಗಿರುವುದು. ಇದು, ವಿವೇಕಿಯಾದವನಿಂದ ದೊರೆಯುವ ಸರಿಯಾದ ಉಪದೇಶವಿಲ್ಲದೆ ನಾಶವನ್ನು ಹೊಂದುವುದಿಲ್ಲವು. ಈ ನಾಲ್ಕು ಅವಸ್ಥೆಗಳೂ ಪ್ರತಿಯೊಬ್ಬರ ಆತ್ಮದಲ್ಲೂ ಇರುವಂತೆ ತೋರುತ್ತವೆ. ಆದರೂ ಅದನ್ನು ಅನುಭವಿಸುತ್ತಿರುವಾಗ ಅದು ಭ್ರಾಂತಿ ಎಂಬುದು ಆ ಅನುಭವಿಸುವವನಿಗೆ ಗೊತ್ತಾಗುವುದಿಲ್ಲವು. ಹಾಗೆಯೇ ದೇಹಾಂತರದಲ್ಲಿ ಉಂಟಾಗುತ್ತಿರುವ ಅನುಭವವೂ ಭ್ರಾಂತಿ ಎಂಬುದು ಸರಿಯಾವ ವಿವೇಕಿಯಾದ ಗುರು ಅಥವಾ ಶಾಸ್ತ್ರದ ಉಪದೇಶವಿಲ್ಲದೆ ವೇದಾಂತ ಶ್ರವಣಾದಿ ಸಹಾಯವಿಲ್ಲದೆ ಗೊತ್ತಾಗುವುದೇ ಇಲ್ಲವು. ಆದುದರಿಂದ ಸ್ತ್ರೀಯಾಗಿದ್ದಾಗ ನನಗೆ ಏಕೆ ತಿಳಿಯಲಿಲ್ಲವೆಂದು ನೀನು ಕೇಳಲು ಕಾರಣವಿಲ್ಲವು. ಓ ನಾರದನೇ, ಇದನ್ನು ನೀನು ಸೂಕ್ಷ್ಮವಾಗಿ ಪರಿಶೀಲಿಸಿದರೆ ನೀನೇ ತಿಳಿಯಬಲ್ಲೆ. ಹೀಗೆ ಮಾಯೆಯ ಈ ಅಘಟಿತ ಘಟನಾ ಸಾಮರ್ಥ್ಯವನ್ನು ಆ ಮಾಯೆಯೊಳಗೆ ಇರುವಾಗ ಯಾರೂ ತಿಳಿಯಲಾಗುವುದಿಲ್ಲವೆಂಬುದು ತಾತ್ಪರ್ಯವು. ॥೩೯॥

ಸುಪ್ತೋ ನರೋ ನ ಜಾನಾತಿ ನ ಶೃಣೋತಿ ವದತ್ಯಪಿ ।
ಪುನಃ ಪ್ರಬುದ್ಧೋ ಜಾನಾತಿ ಸರ್ವಂ ಜ್ಞಾನಮಶೇಷತಃ ॥೨೦॥

ನಿದ್ರಯಾ ಚಾಲ್ಯತೇ ಚಿತ್ತಂ ಭವಂತಿ ಸ್ವಪ್ನಸಂಭವಾಃ ।
ನಾನಾವಿಧಾ ಮನೋಭಾವಾ ಮನೋಭೇದಾ ಹ್ಯನೇಕಶಃ ॥೪೧॥

ಗಜೋ ಮಾಂ ಹಂತುಮಾಯಾತಿ ನ ಶಕ್ತೋಽಸ್ಮಿ ಪಲಾಯನೇ ।
ಕಿಂ ಕರೋಮಿ ನ ಮೇ ಸ್ಥಾನಂ ಯತ್ರ ಗಚ್ಛಾಮಿ ಸತ್ವರಃ ॥೪೨॥

ಮೃತಂ ಪಿತಾಮಹಂ ಸ್ವಪ್ನೇ ಪಶ್ಯತಿ ಸ್ವಗೃಹಾಗತಂ ।
ಸಂಯೋಗಸ್ತೇನ ವಾರ್ತಾ ಚ ಭೋಜನಂ ಸಹ ಮನ್ಯತೇ ॥೪೩॥

---

ಭ್ರಮಜ್ಞಾನವು ಸತ್ಯಾಂಶಕ್ಕೆ ಆವರಣವೆಂಬ ವಿಷಯದಲ್ಲಿ ಉದಾಹರಣೆಯನ್ನು ಹೇಳುತ್ತಾನೆ. ಮಲಗಿರುವ ಮನುಷ್ಯನು ನಿದ್ರೆಯನ್ನು ಮಾಡುವಾಗ ಏನನ್ನೂ ತಿಳಿಯಲಾರನು. ಏನನ್ನೂ ಕೇಳಲಾರನು. ಯಾವ ಮಾತನ್ನೂ ಆಡಲಾರನು. ಹೀಗಿದ್ದರೂ ಎಚ್ಚರವನ್ನು ಹೊಂದಿದಮೇಲೆ ಆವರಣರೂಪವಾದ ಅಜ್ಞಾನವು ನಾಶವಾಗುವುದರಿಂದ ಆಗ ಅವನು ಎಲ್ಲ ವಿಧವಾದ ಜ್ಞಾನವನ್ನೂ ಹೊಂದಿ ಹಿಂದಿನ ಅವಸ್ಥೆಯಲ್ಲಾದ ಅನುಭವವೆಲ್ಲವನ್ನೂ ತಿಳಿಯಬಲ್ಲನು. ||೪೦||

ನಿದ್ರೆಯಿಂದ ಮನಸ್ಸು ಚಂಚಲವಾಗಿರುವುದು. ಆದರಿಂದ ಅನೇಕ ವಿಧವಾದ ಮನಸ್ಸಿನ ಕಲ್ಪನೆಗಳೂ ಮತ್ತು ಅನೇಕ ವಿಧವಾದ ಮನಸ್ಸಿನ ಸಂಸ್ಕಾರಗಳಿಂದ ಉಂಟಾಗುವ ಅಭಿಪ್ರಾಯಗಳೂ ಸಹ ಅಜ್ಞಾನದಿಂದ ಸ್ವಪ್ನಕಾಲದಲ್ಲಿ ನಿಜವಾಗಿರುವಂತೆ ತೋರುವುವು ಹೇಗೆಂದರೆ, ||೪೧||

ಸ್ವಪ್ನದಲ್ಲಿ "ಆನೆಯು ನನ್ನನ್ನು ಕೊಲ್ಲಲು ಬರುತ್ತಿರುವುದು. ನಾನು ಓಡಿ ಹೋಗಲು ನನಗೆ ಶಕ್ತಿ ಇಲ್ಲವು. ನಾನು ಬೇಗನೆ ಎಲ್ಲಿಗೆ ಹೋಗಬೇಕೋ ಆ ಜಾಗವೂ ನನಗೆ ತಿಳಿದಿಲ್ಲವು," ಎಂದು ಮಲಗಿದ್ದವನು ಕನಸುಕಾಣುವನು. ಆ ಮನುಷ್ಯನೇ ತನ್ನ ಸ್ವಪ್ನದಲ್ಲಿಯೇ ಹಿಂದಿನ ಕನಸು ಮುಗಿದ ಕ್ಷಣದಲ್ಲಿಯೇ ತನ್ನ ಅಜ್ಜನು ತನ್ನ ಮನೆಗೆ ಬಂದಂತೆಯೂ, ತಾನು ಅವನ ಸಂಗಡ ಮಾತನಾಡುತ್ತಿರುವಂತೆಯೂ, ಅವನೊಡನೆ ಊಟಮಾಡುತ್ತಿರುವಂತೆಯೂ ಇನ್ನೊಂದು ಸ್ವಪ್ನವನ್ನೂ ಕಾಣುವನು! ಅಲ್ಲದೆ ಆ ಸ್ವಪ್ನವನ್ನು ಅನುಭವಿಸುತ್ತಿರುವಾಗ ಅದೆಲ್ಲವೂ ನಿಜವೆಂದು ತೋರುತ್ತಿರುವುದೇ ಹೊರತು ಭ್ರಾಂತಿ ಎಂದು ತೋರುವುದೇ ಇಲ್ಲವು. ಆದರೂ ||೪೨-೪೩||

ಪ್ರಬುದ್ಧಃ ಖಲು ಜಾನಾತಿ ಸ್ವಪ್ನೇ ದೃಷ್ಟಂ ಸುಖಾಸುಖಂ ।
ಸ್ಮೃತ್ವಾ ಸರ್ವಂ ಜನೇಭ್ಯಸ್ತು ವಿಸ್ತರಾತ್ ಪ್ರವದತ್ಯಪಿ ॥೪೪॥

ಸ್ವಪ್ನೇ ಕೋಽಪಿ ನ ಜಾನಾತಿ ಭ್ರಮೋಽಯಮಿತಿ ನಿಶ್ಚಯಃ ।
ಯಥಾ ತಥೈವ ವಿಭವೋ ಮಾಯಾಯಾ ದುರ್ಗಮಃ ಕಿಲ ॥೪೫॥

---

ನಿದ್ದೆಮಾಡುತ್ತಿದ್ದವನಿಗೇ ಎಚ್ಚರವಾದ ಅನಂತರದಲ್ಲಿ ಅವನು ತನ್ನ ಕನಸುಗಳನ್ನು ತಾನು ಸ್ವಪ್ನದಲ್ಲಿ ಅನುಭವಿಸಿದ ಸುಖದುಃಖಗಳನ್ನೂ ಮತ್ತು ತಾನು ಕಂಡ ಪದಾರ್ಥಗಳೆಲ್ಲವನ್ನೂ ಸಹ ಜ್ಞಾಪಿಸಿಕೊಂಡು ಒಂದನ್ನೂ ಬಿಡದಂತೆ ವಿಸ್ತಾರವಾಗಿ ಎಲ್ಲರಿಗೂ ತಿಳಿಸುವನು. ಹೀಗೆ ಸ್ವಪ್ನವಾಗುತ್ತಿರುವ ಕಾಲದಲ್ಲಿ ಇದು ಸ್ವಪ್ನವೆಂದು ಜ್ಞಾನವಿಲ್ಲ. ಎಚ್ಚರವಾದ ಮೇಲೆ ಸ್ವಪ್ನವೆಂಬ ಜ್ಞಾನವು ಉಂಟು. ಆದ್ದರಿಂದ ಸ್ವಪ್ನವು ಉಂಟಾಗುತ್ತಿರುವವರೆಗೂ ಜ್ಞಾನಕ್ಕೆ ಆವರಣವಿರುವುದು. ಹೀಗೆಯೇ ಪ್ರಾಣಿಗಳಿಗೆ, ಸ್ವಪ್ನವು ಕ್ಷಣಕಾಲವು ಬಂದು ಅನಂತರ ಸರಿಯಾದ ಜ್ಞಾನವು ಉಂಟಾಗುವಂತೆ, ಮಾಯೆಯ ಮಹಿಮೆಯಿಂದ ಅನೇಕ ವರ್ಷಗಳು ಇರುವ ಜನ್ಮದಲ್ಲಿನ ಸುಖದುಃಖಾನುಭವಗಳೂ ಉಂಟಾಗುತ್ತವೆ. ಎಂದು ತಿಳಿಯಬೇಕು. ಇದರಿಂದ ಸ್ವಪ್ನದ ಅನುಭವವು ಸ್ವಲ್ಪ ಕಾಲ ಮಾತ್ರ ಇರುವುದಾದರೂ, ಒಂದು ಜನ್ಮದಲ್ಲಿನ ಅನುಭವವು ಹೆಚ್ಚುಕಾಲ ಎಂದರೆ ಕೆಲವು ವರ್ಷಗಳ ಕಾಲದ ವರೆಗೆ ಇರುವುದಾದರೂ ಎರಡು ಅವಸ್ಥೆಗಳ ಬೆಲೆಯೂ ಒಂದೇ ಎಂಬುದನ್ನೂ ಗಮನಿಸಬೇಕು. ||೪೪||

ಸ್ವಪ್ನವು ಇರುವವರೆಗೂ ಇದು ಸ್ವಪ್ನವೆಂತಲೂ ಮನೋಭ್ರಮವೆಂತಲೂ, ಯಾವನೂ ಅದನ್ನು ತಿಳಿಯುವುದಿಲ್ಲ. ಇದು ಹೇಗೋ ಹಾಗೆಯೇ ಆತ್ಮಸ್ವರೂಪವನ್ನು ಮುಚ್ಚಿ ಜನನ, ಮರಣ, ಕರ್ತೃತ್ವ, ಭೋಕ್ತೃತ್ವ, ಸುಖ, ದುಃಖ, ಇವೇ ಮುಂತಾದ ಅನುಭವಗಳನ್ನು ಉಂಟುಮಾಡುವ ಮಾಯೆಯ ಕೆಲಸವು ಸಂಸಾರದಲ್ಲಿರುವ ಯಾರಿಂದಲೂ ಸಮಗ್ರವಾಗಿ ತಿಳಿಯಲಶಕ್ಯವಾಗಿರುವುದು. ದೊಂಬರವನು ಎಷ್ಟೇ ಬುದ್ಧಿವಂತನಾದರೂ, ಎಂತಹ ದೊಡ್ಡ ಗಣೆಯನ್ನಾದರೂ ಹತ್ತುವಷ್ಟು ಗಟ್ಟಿಗನಾಗಿದ್ದರೂ, ಆವನು ತನ್ನ ಹೆಗಲನ್ನೇ ಹೇಗೆ ಏರಲಾರನೋ, ಹಾಗೆಯೇ ಮಾಯಾಪ್ರಪಂಚದಲ್ಲಿರುವ ಯಾರೊಬ್ಬರೂ ತಮ್ಮ ಕಾರಣವಾದ ಮಾಯೆಯನ್ನೂ ಅದರ ಶಕ್ತಿಯನ್ನೂ ಸಮಗ್ರವಾಗಿ ತಿಳಿಯಲಾರರೆಂದು ತಾತ್ಪರ್ಯವು. ||೪೫||

**ನಾಹಂ ನಾರದ ಜಾನಾಮಿ ಪಾರಂ ಪರಮದುರ್ಘಟಂ।**
**ಗುಣಾನಾಂ ಕಿಲ ಮಾಯಾಯಾ ನೈವ ಶಂಭುರ್ನ ಪದ್ಮಜಃ ॥೪೬॥**

**ಕೋಽನ್ಯೋ ಜ್ಞಾತುಂ ಸಮರ್ಥೋಽಭೂತ್ ಮಾನತೋಽಮಂದಧೀಃ ಪುನಃ।**
**ಮಾಯಾಗುಣಪರಿಜ್ಞಾನಂ ನಕಸ್ಯಾಪಿ ಭವೇದಿಹ ॥೪೭॥**

**ಗುಣತ್ರಯಕೃತಂ ಸರ್ವಂ ಜಗತ್ ಸ್ಥಾವರಜಂಗಮಂ ।**
**ವಿನಾಗುಣೈರ್ನಸಂಸಾರೋ ವರ್ತತೇ ಕಿಂಚಿದಪ್ಯದಃ ॥೪೮॥**

---

ಆದುದರಿಂದ ಓ ನಾರದನೇ, ತ್ರಿಗುಣಗಳ ಅನಂತ ಪರಿಣಾಮಗಳಿಂದ ಕೂಡಿದ ಮಾಯೆಯ ಸಾಮರ್ಥ್ಯವು ಇಷ್ಟು ಎಂದು ಯಾರು ತಿಳಿದಿರುವರು? ಎಂದರೆ ಮಾಯೆಯ ಅಘಟನ ಘಟನಾಶಕ್ತಿಯನ್ನು ನಾನೂ ಪೂರ್ಣವಾಗಿ ತಿಳಿದಿಲ್ಲವು. ಬ್ರಹ್ಮನಿಗೂ ಗೊತ್ತಿರುವುದಿಲ್ಲ. ಶಿವನೂ ಸಮಗ್ರವಾಗಿ ತಿಳಿದಿಲ್ಲವು. ॥೪೬॥

ಬ್ರಹ್ಮ ವಿಷ್ಣು ಮಹೇಶ್ವರರಾಗಿರುವ ನಾವೇ ಮಾಯೆಯ ಗುಣಗಳನ್ನೂ ಶಕ್ತಿಯನ್ನೂ ಸಮಗ್ರವಾಗಿ ತಿಳಿಯಲು ಆಗದಿರುವಾಗ, ದಡ್ಡನಾದ ಇತರನು ಯಾವನು ತಾನೇ ಇದನ್ನು ಯಾವ ಪ್ರಮಾಣದ ಸಹಾಯದಿಂದ ತಿಳಿಯಲು ಶಕ್ತನಾದಾನು? ॥೪೭॥

ಮಾಯೆಯ ಸಾಮರ್ಥ್ಯವನ್ನು ಯಾರಿಂದ ತಿಳಿಯಲು ಶಕ್ಯವೋ ಅಂಥವನು ಗುಣಾತೀತನಾಗಿಯೋ ಅಥವಾ ಗುಣಗಳ ಪ್ರಭಾವದಲ್ಲಿ ಸೇರಿದವನಾಗಿಯೋ ಇರಬೇಕು. ಮೊದಲನೆಯ ಪಕ್ಷದಲ್ಲಿ, ಮಾಯೆಯ ಗುಣಗಳಿಂದ ಅತೀತನಾಗಿರುವವನು ಪರಮಾತ್ಮನೇ ಆಗಿರುವ ಕಾರಣ, ಅವನು ನಿರ್ವಿಕಾರಿಯೂ ಆಗಿರುವನಾದ್ದರಿಂದ, ಮಾಯೆಯ ಅಘಟನ ಘಟನಾಶಕ್ತಿಯನ್ನು ತಿಳಿಯಲಾರನು. ಎಂದರೆ ಜ್ಞಾನಘನಸ್ವರೂಪನಾಗಿರುತ್ತಾ ವೃತ್ತಿರೂಪ ವಿಕಾರಜ್ಞಾನವಿಲ್ಲದಿರುವನು. ಎರಡನೆಯ ಪಕ್ಷದಲ್ಲಿ, ಮಾಯಾಗುಣಗಳ ಪ್ರಭಾವದ ಒಳಗಡೆಯಲ್ಲಿ ಅಂತರ್ಗತನಾದವನು (ತನಗಿಂತ) ತಾನು ಹುಟ್ಟಲು ಕಾರಣವಾದ ಪದಾರ್ಥದ ಸಮಗ್ರಸ್ವರೂಪವನ್ನೂ ಮತ್ತು ಸಾಮರ್ಥ್ಯವನ್ನೂ ತಿಳಿಯಲು ಹೇಗೆ ಶಕ್ತನಾಗಿರುವನು? ಎಂದರೆ ತಂದೆಯಲ್ಲಿ ಮೊದಲು ಉಂಟಾದ ಪುತ್ರ ಜನನ ವ್ಯಾಪಾರವೆಲ್ಲವನ್ನೂ ಆಮೇಲೆ ಉಂಟಾದ ಮಗನು ಹೇಗೆ ತಿಳಿಯಲಾರನೋ, ಹಾಗೆ ಮಾಯಾಪ್ರಪಂಚದಲ್ಲಿರುವ ಯಾರೂ ಆ ಮಾಯೆಯ ಮಹಿಮೆಯನ್ನು ತಿಳಿಯಲಾರರು. ಮಾಯೆಯ ಸಂಬಂಧವಾದ ಸತ್ವರಜಸ್ತಮಸ್ಸೆಂಬ ಗುಣಗಳ ಸಂಬಂಧವಿಲ್ಲದೆ ಜನನಮರಣರೂಪವಾದ ಸಂಸಾರವು

ಅಹಂ ಸತ್ತ್ವಪ್ರಧಾನೋಽಸ್ಮಿ ರಜಸ್ತಮಸ್ಸಮನ್ವಿತಃ ।
ನ ಕದಾಚಿತ್ ತ್ರಿಭಿರ್ಹೀನೋ ಭವಾಮಿ ಭುವನೇಶ್ವರಃ ॥೪೯॥

ತಥಾ ಬ್ರಹ್ಮಾ ಪಿತಾ ತೇಽತ್ರ ರಜೋಮುಖ್ಯಃ ಪ್ರಕೀರ್ತಿತಃ ।
ತಮಸ್ಸತ್ತ್ವಸಮಾಯುಕ್ತೋ ನ ತಾಭ್ಯಾಮುಜ್ಝಿತಃ ಕಿಲ ॥೫೦॥

ಶಿವಸ್ತಥಾ ತಮೋಮುಖ್ಯೋ ರಜಸ್ಸತ್ತ್ವಸಮಾವೃತಃ ।
ಗುಣತ್ರಯವಿಹೀನಸ್ತು ನೈವ ಕೋಽಪಿ ಮಯಾಶ್ರುತಃ ॥೫೧॥

---

ಯಾವ ಪ್ರಾಣಿಗೂ ಇರುವುದಿಲ್ಲವಾಗಿ, ತನ್ನ ಉತ್ಪತ್ತಿಗೇ ಕಾರಣವಾದುದರ ಶಕ್ತಿಯೆಲ್ಲವನ್ನೂ ತಾನು ತಿಳಿಯಲಾರನು. ಅಲ್ಲದೆ ಹೀಗೆ ಅಪಾರವಾಗಿರುವ ಮಾಯೆಯ ವೈಭವ, ವೈಚಿತ್ರ್ಯ, ಶಕ್ತಿಯನ್ನು ಸಮಗ್ರವಾಗಿ ತಿಳಿಯಬೇಕೆಂದು ಶ್ರಮಿಸುವುದನ್ನು ಬಿಟ್ಟು, ವಿವೇಕಿಯಾದವನು ಈ ಮಾಯೆಗೆ ಅಧಿಷ್ಠಾನವಾದ ಬ್ರಹ್ಮಚೈತನ್ಯವನ್ನು ವಿವೇಕ ವೈರಾಗ್ಯಗಳಿಂದ ಸಾಕ್ಷಾತ್ಕರಿಸಿಕೊಳ್ಳುವುದು ಸಫಲವಾಗುತ್ತದೆ ಎಂದು ಭಾವವು. ॥೪೮॥

ಸ್ಥಿರಚರಾತ್ಮಕವಾದ ಈ ಪ್ರಪಂಚವೆಲ್ಲವೂ ಮಾಯೆಯ ಗುಣಗಳ ಪರಿಣಾಮಗಳಿಂದ ಮಾಡಲ್ಪಟ್ಟಿರುವುದು. ನಾನು ಸತ್ತ್ವಗುಣ ಪ್ರಧಾನನಾಗಿರುವೆನು. ನನ್ನಲ್ಲಿ ರಜಸ್ತಮೋಗುಣಗಳು ಸತ್ತ್ವಗುಣಕ್ಕಿಂತ ಕಡಿಮೆಯಾಗಿರುವುವು. ನಾನು ಯಾವಾಗಲೂ ಈ ಮೂರು ಗುಣಗಳಿಂದ ಬಿಡಲ್ಪಟ್ಟವನಾಗಿ ಈ ಲೋಕಕ್ಕೆ ಅಧಿಪತಿಯಾಗಿರಲಾರೆನು. ॥೪೯॥

ನಾನು ಹೇಗೆ ಸತ್ತ್ವಗುಣಪ್ರಧಾನನಾಗಿರುವೆನೋ ಹಾಗೆ ನಿನ್ನ ತಂದೆಯಾದ ಬ್ರಹ್ಮನೂ ರಜೋಗುಣವು ಹೆಚ್ಚಾಗಿ ತಮೋಗುಣವೂ ಸತ್ತ್ವಗುಣವೂ ಕಡಿಮೆಯಾಗಿದ್ದ ಹಾಗಾಯಿತು. ಇಷ್ಟುಮಾತ್ರದಿಂದ ಅವನು ಗುಣಗಳಿಂದ ಬಿಡಲ್ಪಟ್ಟವನೆಂದು ಹೇಳಲು ಆಗುವುದಿಲ್ಲ. ॥೫೦॥

ನಾವಿಬ್ಬರೂ ಇರುವಂತೆ ಶಿವನು ತಮೋಗುಣಪ್ರಧಾನನಾಗಿರುವನು. ರಜೋಗುಣವೂ ಸತ್ವಗುಣವೂ ಸಹ ಅವನಿಗೆ ಕಡಿಮೆಯಾಗಿರುವುವು. ಹೀಗೆಯೇ ಈ ಪ್ರಪಂಚದಲ್ಲಿ ಎಲ್ಲರೂ ಇರುವರು. ಈ ಮೂರು ಗುಣಗಳಿಂದ ಬಿಡಲ್ಪಟ್ಟವನು ಯಾವ ಪ್ರಾಣಿಯಾದರೂ ಇರುವುದೆಂದು ನಾನು ಕೇಳಿರುವುದಿಲ್ಲವು ಮತ್ತು ಹೀಗೆ ಇಷ್ಟು ಮಟ್ಟಿನ ವೈಭವವುಳ್ಳ ಮಾಯೆಯ ಸಾಮರ್ಥ್ಯವನ್ನು "ಕೋ ಅದ್ಧಾ ವೇದ......" ಎಂಬ ಋಗ್ವೇದ ೧೦-೧೨೯-೬, ೭. ಶ್ರುತಿಯು ಚೆನ್ನಾಗಿ ವಿವರಿಸಿ ಹೇಳಿರುವುದು. ॥೫೧॥

**ತಸ್ಮಾನ್ಮೋಹೋ ನ ಕರ್ತವ್ಯಃ ಸಂಸಾರೇಽಸ್ಮಿನ್ ಮುನೀಶ್ವರ ।**
**ಮಾಯಾ ವಿನಿರ್ಮಿತೇಽಸಾರೇಽಸಾರೇ ಪರಮದುರ್ಘಟೇ ॥೫೨॥**

**ದೃಷ್ಟಾ ಮಾಯಾ ತ್ವಯಾಽದ್ಯೈವ ಭುಕ್ತಾ ಭೋಗಾ ಹ್ಯನೇಕಶಃ ।**
**ಕಿಂ ಪೃಚ್ಛಸಿ ಮಹಾಭಾಗ ತಸ್ಯಾಶ್ಚರಿತಮದ್ಭುತಂ ॥೫೩॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ**
**ತ್ರಿಂಶೋಽಧ್ಯಾಯಃ.**

---

ಮಾಯೆಯ ಸಾಮರ್ಥ್ಯವನ್ನು ತಡೆಯುವುದು ಯಾರಿಗೂ ಸಾಧ್ಯವಾಗುವುದಿಲ್ಲ. ಈಸಂಸಾರವು ಮಾಯೆಯಿಂದ ಕೂಡಿಯೇ ಉಂಟಾಗಿರುವುದು. ಅದು ನಿಜವಾದುದಲ್ಲವು. ತೋರಿಕೆಯ ರೂಪವಾದ ಈ ಮಾಯೆಯ ಸಾಮರ್ಥ್ಯವನ್ನೂ ವೈಭವವನ್ನೂ ಸಮಗ್ರವಾಗಿ ಇಷ್ಟೇ ಇದೆ, ಹೀಗೆಯೇ ಸರಿ, ಎಂದೂ ಹೇಳಲಶಕ್ಯವು; ಅದು ಕೊನೆಯಿಲ್ಲದ್ದು, ಮತ್ತು ಸಾರವಿಲ್ಲದಿರುವುದು ಎಂದು ತಿಳಿದು ಈ ಸಂಸಾರದ ವಿಷಯದಲ್ಲಿ ಮೋಹವನ್ನೂ, ಅಭಿಮಾನವನ್ನೂ, ನಂಬಿಕೆಯನ್ನೂ ಇಡಬಾರದು. ಯಾರು ಇದನ್ನು ದಾಟಬೇಕೆನ್ನುವರೋ ಅಂಥವರು ಇದರ ಮೂಲಕಾರಣವಾದ ಮಾಯೆಗೆ ಅಧಿಷ್ಠಾನವಾದ, ಮಾಯಾವಿನಿಯೂ, ಮಾಯಾವಿಶಿಷ್ಟಬ್ರಹ್ಮರೂಪಿಣಿಯೂ, ಆಗಿರುವ ದೇವಿಯ ಧ್ಯಾನದಲ್ಲಿ ಏಕಾಗ್ರಮಾನಸರಾಗಿರಬೇಕು. ಹೀಗೆ ಇದ್ದಲ್ಲಿ ಅದೇ ಪೂಜೆಯಾಗಿ ಪರಿಣಮಿಸಿ ಅದರಿಂದ ಅವರು ಸರ್ವವಿಧವಾದ ಇಷ್ಟಾರ್ಥವನ್ನೂ ಪಡೆಯುವರು. ಈ ಅಂಶವನ್ನು ಸೂತಸಂಹಿತೆಯಲ್ಲೂ ವಿವರಿಸಿ ಹೇಳಿದೆ. ॥೫೨॥

ಎಲೈ ನಾರದನೇ, ಕೇಳು, ನೀನು ಈಗತಾನೇ ಮಾಯೆಯ ಮಹಿಮೆಯನ್ನು ಅನುಭವದಿಂದಲೇ ತಿಳಿದಿರುವೆ. ಮತ್ತು ಅನೇಕ ವಿಧವಾದ ಭೋಗಗಳನ್ನೂ ನೀನು ಈಗತಾನೇ ಅನುಭವಿಸಿರುವೆ. ಎಲೈ ಅದೃಷ್ಟಶಾಲಿಯೇ, ಆ ದೇವಿಯ ಆಶ್ಚರ್ಯಕರವಾದ ಚರಿತ್ರೆಯ ವಿಷಯದಲ್ಲಿ ತಿಳಿಯಬೇಕಾದ ಅಂಶವು ಇನ್ನೂ ಏನು ಇರುವುದು? ಅದನ್ನು ಕೇಳು ಹೇಳುವೆನು. ಎಂದು ವಿಷ್ಣುವು ನಾರದನಿಗೆ ಹೇಳಿದನು. ಇದನ್ನು ನಾರದನು ವ್ಯಾಸನಿಗೆ ಹೇಳಿದನು. ॥೫೩॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಆರನೆಯ ಸ್ಕಂಧದಲ್ಲಿ
ಮೂವತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಷಷ್ಠಸ್ಕಂಧೇ

|| ಏಕತ್ರಿಂಶೋಽಧ್ಯಾಯಃ ||

### ಮೂವತ್ತೊಂದನೆಯ ಅಧ್ಯಾಯವು

|| ವ್ಯಾಸ ಉವಾಚ ||

**ನಿಶಾಮಯ ಮಹಾರಾಜ ಬ್ರವೀಮಿ ವಿಶದಾಕ್ಷರಂ ।**
**ಮಾಹಾತ್ಮ್ಯಂ ಖಲು ಮಾಯಾಯಾ ನಾರದಾತ್ತು ಮಯಾ ಶ್ರುತಂ ॥೧॥**

**ಮಯಾ ಪುನರ್ಮುನಿಃ ಪೃಷ್ಟೋ ನಾರದಸ್ಸರ್ವವಿತ್ತಮಃ ।**
**ಶ್ರುತ್ವಾ ಕಥಾಂ ಮುನೇಸ್ತಸ್ಯ ನಾರೀದೇಹಸಮುದ್ಭವಾಂ ॥೨॥**

**ಬ್ರೂಹಿ ನಾರದ ಪಶ್ಚಾತ್ ಕಿಂ ಕಥಿತಂ ಹರಿಣಾ ತದಾ ।**
**ಕ್ವಗತಶ್ಚ ಜಗನ್ನಾಥೋ ಭವತಾ ಸಹ ಮಾಧವಃ ॥೩॥**

---

ವ್ಯಾಸಋಷಿಯು ಹೇಳಿದನು, ಎಲೈ ಜನಮೇಜಯ ರಾಜನೇ, ಆಗ ನಾನು ನಾರದನಿಂದ ಕೇಳಲ್ಪಟ್ಟ ಮಾಯೆಯ ಮಹಿಮೆಯನ್ನು ಇನ್ನೂ ವಿಸ್ತಾರವಾಗಿ ಹೇಳುವೆನು ಕೇಳು. ||೧||

ನಾನು ನಾರದ ಋಷಿಯಿಂದ, ಆ ನಾರದ ಋಷಿಯು ಸ್ತ್ರೀಶರೀರವನ್ನು ಹೊಂದಿದನಂತರ ಅದರಿಂದುಂಟಾದ ಎಲ್ಲ ವಿಧವಾದ ಕಥೆಯನ್ನೂ ಕೇಳಿದವನಾಗಿ, ಎಲ್ಲವನ್ನೂ ತಿಳಿದಿರುವ ಆ ನಾರದನನ್ನು ಕುರಿತು ಮತ್ತೆ ಪ್ರಶ್ನೆ ಮಾಡಿದೆನು. ||೨||

ಓ ನಾರದ ಋಷಿಯೇ, ಜಗತ್ಪತಿಯಾದ, ಲಕ್ಷ್ಮೀಪತಿಯಾದ ವಿಷ್ಣುವು ಆಮೇಲೆ ನಿನ್ನನ್ನು ಕುರಿತು ಏನನ್ನು ಹೇಳಿದನು ? ಮತ್ತು ನಿನ್ನನ್ನು ಕರೆದುಕೊಂಡು ಆ ಮಾಧವನು ಎಲ್ಲಿಗೆ ಹೋದನು ? ||೩||

|| ನಾರದ ಉವಾಚ ||

ಇತ್ಯುಕ್ತ್ವಾ ಭಗವಾಂ ಸ್ತಸ್ಮಿನ್ ತಟಾಕೇಽತಿ ಮನೋಹರೇ ।
ಆರುಹ್ಯ ಗರುಡಂ ಗಂತುಂ ವೈಕುಂಠೇ ಚ ಮನೋ ದಧೇ ||೪||

ಮಾಮುವಾಚ ರಮಾಕಾಂತೋ ಯಥೇಷ್ಟಂ ಗಚ್ಛ ನಾರದ ।
ಏಹಿ ವಾ ಮಮ ಲೋಕಂ ಸ್ವಂ ಯಥಾ ರುಚಿ ತಥಾ ಕುರು ||೫||

ಬ್ರಹ್ಮ ಲೋಕಂ ಗತಶ್ಚಾಹಮಾಪೃಚ್ಛ್ಯ ಮಧುಸೂದನಂ ।
ಭಗವಾನಪಿ ದೇವೇಶಸ್ತತ್ ಕ್ಷಣಾದ್ಗರುಡಾಸನಃ ||೬||

ವೈಕುಂಠಮಗಮತ್ತೂರ್ಣಂ ಮಾಮಾದಿಶ್ಯ ಯಥಾಸುಖಂ ।
ತತೋಽಹಂ ಪಿತೃಸದನಂ ಗತೋ ಯಾತೇ ಜನಾರ್ದನೇ ||೭||

ಚಿಂತಯನ್ ಸಕಲಂ ದುಃಖಂ ಸುಖಂ ಚ ಪರಮಾದ್ಭುತಂ ।
ಗತ್ವಾ ಪ್ರಣಮ್ಯ ಪಿತರಂ ಸ್ಥಿತೋ ಯಾವತ್ಪುರಃ ಪಿತುಃ ||೮||

---

ನಾರದ ಋಷಿಯು ಹೇಳಿದನು—ಷಡ್ಗುಣೈಶ್ವರ್ಯಸಂಪನ್ನನಾದ ಪೂಜ್ಯನಾದ ವಿಷ್ಣುವು ಬಹಳ ರಮ್ಯವಾದ ಆ ಸರೋವರದಲ್ಲಿ ನನ್ನ ಸಂಗಡ ಹೀಗೆ ಹೇಳಿದ ಮೇಲೆ ಗರುಡನನ್ನು ಹತ್ತಿಕೊಂಡು ವೈಕುಂಠಕ್ಕೆ ಹೋಗಲು ಮನಸ್ಸಿನಲ್ಲಿ ನಿಶ್ಚಯ ಮಾಡಿದನು. ಮತ್ತು, ||೪||

ಲಕ್ಷ್ಮೀಪತಿಯಾದ ವಿಷ್ಣುವು, ಎಲೈ ನಾರದನೇ, ನೀನು ನಿನ್ನ ಮನಸ್ಸಿಗೆ ಬಂದಂತೆ ಎಲ್ಲಿಗೆ ಬೇಕಾದರೂ ಹೋಗು. ಅಥವಾ ನನ್ನ ಲೋಕಕ್ಕಾದರೂ ಬಾ. ನಿನ್ನ ಮನಸ್ಸಿಗೆ ಬಂದಂತೆ ಮಾಡು, ಎಂದು ನನ್ನ ಸಂಗಡ ಹೇಳಿದನು. ||೫||

ಆಗ ನಾನೂ ಮಧುವೆಂಬ ರಾಕ್ಷಸನನ್ನು ನಿಗ್ರಹಮಾಡಿದವನಾದ ವಿಷ್ಣುವಿನ ಅಪ್ಪಣೆಯನ್ನು ಪಡೆದು ಬ್ರಹ್ಮಲೋಕಕ್ಕೆ ಹೋದೆನು. ಪೂಜ್ಯನಾದ, ದೇವತೆಗಳಿಗೆ ಅಧಿಪನಾದ, ಗರುಡನೇ ವಾಹನವಾಗಿ ಉಳ್ಳವನಾದ ವಿಷ್ಣುವು ನನಗೆ ಅನುಮತಿಯ ಅಪ್ಪಣೆಯನ್ನು ಮಾಡಿ, ತನಗೆ ಸುಖವು ತೋರುವ ಹಾಗೆ, ಬೇಗನೆ ವೈಕುಂಠಕ್ಕೆ ಹೊರಟ ಅನಂತರದಲ್ಲಿ ನಾನೂ ನನ್ನ ತಂದೆಯ ಮನೆಗೆ ಹೋದೆನು. ||೬-೭||

ನಾನು ಬ್ರಹ್ಮಲೋಕದಲ್ಲಿ, ನನ್ನ ತಂದೆಯಾದ ಚತುರ್ಮುಖ ಬ್ರಹ್ಮನ ಮನೆಗೆ ಹೋಗಿ ಅಲ್ಲಿ ನನ್ನ ತಂದೆಗೆ ನಮಸ್ಕಾರವನ್ನು ಮಾಡಿದೆನು. ಅನಂತರ ಈ

ತಾವತ್ ಪೃಷ್ಟೋ ಮುನೇ ಪಿತ್ರಾ ವೀಕ್ಷ್ಯ ಚಿಂತಾತುರಂ ಚ ಮಾಂ ।

॥ ಬ್ರಹ್ಮೋವಾಚ ॥

ಕ್ವ ಗತೋಽಸಿ ಮಹಾಭಾಗ ಕಸ್ಮಾಚ್ಚಿಂತಾತುರಸ್ಸುತ ॥೯॥

ಸ್ವಸ್ಥಂ ನೈವಾದ್ಯ ಪಶ್ಯಾಮಿ ಮನಸ್ತೇ ಮುನಿಸತ್ತಮ ।
ಕೇನಾಪಿ ವಂಚಿತೋಽಸಿ ತ್ವಂ ದೃಷ್ಟಂ ವಾ ಕಿಂಚಿದದ್ಭುತಂ ॥೧೦॥

ವಿಷಣ್ಣಂ ಗತವಿಜ್ಞಾನಂ ಪಶ್ಯಾಮಿ ತ್ವಾಂ ಕಥಂ ಸುತ ।

॥ ನಾರದ ಉವಾಚ ॥

ಇತಿ ಪೃಷ್ಟಸ್ತದಾ ಪಿತ್ರಾ ಬೃಸ್ಯಾಂ ಸಮುಪವೇಶ್ಯ ಚ । ॥೧೧॥
ತಮಬ್ರವಂ ಸ್ವ ವೃತ್ತಾಂತಂ ಮಾಯಾಬಲಸಮುದ್ಭವಂ

---

ಭೂಲೋಕದಲ್ಲಿ ಹೆಂಗುಸಿನ ಶರೀರವನ್ನು ಹೊಂದಿ, ನಾನು ಅನುಭವಿಸಿದ ಬಹಳ ಆಶ್ಚರ್ಯಕರವಾದ ಸುಖದುಃಖಗಳನ್ನು ಎಲ್ಲವನ್ನೂ ಯೋಚಿಸುತ್ತಾ, ನನ್ನ ತಂದೆಯ ಮುಂದುಗಡೆಯಲ್ಲಿ ನಿಂತುಕೊಂಡೆನು. ಓ ವ್ಯಾಸನೇ, ಹೀಗೆ ಯೋಚನೆಮಾಡುತ್ತಿರುವ ನನ್ನನ್ನು ಚತುರ್ಮುಖಬ್ರಹ್ಮನು ನೋಡಿ ಹೀಗೆ ಪ್ರಶ್ನೆಮಾಡಿದನು. ॥೮॥

ಬ್ರಹ್ಮನು ಹೇಳಿದನು. ಎಲೈ ಅದೃಷ್ಟಶಾಲಿಯೇ, ಮಗನೇ, ನೀನು ಎಲ್ಲಿಗೆ ಹೋಗಿದ್ದೆ ? ಏತಕ್ಕೆ ವ್ಯಸನದಿಂದ ಯೋಚನೆಯನ್ನು ಮಾಡುತ್ತಿರುವೆ ? ಎಲೈ ಋಷಿಯಾದ ನಾರದನೇ, ಈಗ ನಿನ್ನ ಮನಸ್ಸು ಸುಖವಾಗಿರುವಂತೆ ನನಗೆ ಕಾಣು ವುದಿಲ್ಲ. ನಿನಗೆ ಯಾರಾದರೂ ಮೋಸವನ್ನು ಮಾಡಿದರೆ? ಅಥವಾ ನೀನು ಆಶ್ಚರ್ಯಕರವಾದ ಸಂಗತಿಯನ್ನು ಯಾವುದನ್ನಾದರೂ ನೋಡಿದೆಯಾ ? ನಿನ್ನನ್ನು ನೋಡಿದಲ್ಲಿ, ನೀನು ಯಾರಿಂದಲೋ ವಂಚಿಸಲ್ಪಟ್ಟು ವ್ಯಸನಪಡುತ್ತಿರುವಂತೆಯೂ, ಸರಿಯಾದ ತಿಳಿವಳಿಕೆಯು ಇಲ್ಲದವನಂತೆಯೂ ಕಾಣುತ್ತದೆ. ಎಲೈ ಪುತ್ರನೇ, ಇದೇಕೆ ? ಹೇಳು. ॥೯-೧೦॥

ನಾರದನು ಹೇಳಿದನು—ತಂದೆಯು ಹೀಗೆ ನನ್ನನ್ನು ದರ್ಭಾಸನದಲ್ಲಿ ಕೂರಿಸಿ ಕೇಳಿದನು. ಎಲೈ ವ್ಯಾಸನೇ, ಕೇಳು, ಆಗ ನಾನು ಮಾಯೆಯ ಬಲದಿಂದ ಉಂಟಾದ ನನ್ನ ವೃತ್ತಾಂತವೆಲ್ಲವನ್ನೂ ಹೇಳಿದೆನು. ॥೧೧॥

ವಂಚಿತೋಽಹಂ ಪಿತಃ ಕಾಮಂ ವಿಷ್ಣುನಾ ಪ್ರಭವಿಷ್ಣುನಾ । ॥೧೨॥

ಸ್ತ್ರೀಭಾವಂ ಗಮಿತಃ ಕಾಮಂ ವರ್ಷಾಣಿ ಸುಬಹೂನ್ಯಪಿ
ಅನುಭೂತಂ ಮಹದ್ದುಃಖಂ ಪುತ್ರಶೋಕ ಸಮುದ್ಭವಂ । ॥೧೩॥

ಪ್ರಬೋಧಿತೋಽಹಂ ತೇನೈವ ಮೃದುವಾಕ್ಯಾಮೃತೇನ ಚ ।
ಪುನಸ್ಸರೋವರೇ ಸ್ನಾತ್ವಾ ಜಾತೋಽಹಂ ನಾರದಃ ಪುಮಾನ್ ॥೧೪॥

ಕಿಮೇತತ್ಕಾರಣಂ ಬ್ರಹ್ಮನ್ ಯನ್ಮೋಹಮಗಮತ್ತದಾ ।
ವಿಸ್ಮೃತಂ ಪೂರ್ವವಿಜ್ಞಾನಂ ತನ್ಮಯಸ್ತರಸಾ ಕೃತಃ ॥೧೫॥

ಏತನ್ಮಾಯಾಬಲಂ ಬ್ರಹ್ಮನ್ನ ಜಾನೇಽಹಂ ದುರತ್ಯಯಂ
ಜ್ಞಾನಹಾನಿಕರಂ ಜಾತಂ ಮೂಲಂ ಮೋಹಸ್ಯ ವಿಸ್ಫುಟಂ । ॥೧೬॥

---

ಓ ತಂದೆಯೇ, ನಾನು ಸಮರ್ಥನಾದ, ಪ್ರಭುವಾದ ವಿಷ್ಣುವಿನಿಂದ ಬಹಳ ಮಟ್ಟಿಗೆ ಮೋಸಗೊಳಿಸಲ್ಪಟ್ಟೆನು. ನಾನು ಅನೇಕ ವರ್ಷಗಳವರೆಗೂ ಸ್ತ್ರೀರೂಪವನ್ನು ಹೊಂದಿಸಲ್ಪಟ್ಟವನಾಗಿ, ಆ ಸ್ತ್ರೀಜನ್ಮದಲ್ಲಿ ಪುತ್ರರ ವಿಯೋಗದಿಂದ ಉಂಟಾದ ಹೆಚ್ಚಾದ ದುಃಖವು ನನ್ನಿಂದ ಅನುಭವಿಸಲ್ಪಟ್ಟಿತು. ಅನಂತರದಲ್ಲಿ ನಾನು ಮೃದುವಾದ ಹಿತಕರವಾದ ಮಾತುಗಳಿಂದ ಆ ವಿಷ್ಣುವಿನಿಂದಲೇ ಚೆನ್ನಾಗಿ ಎಚ್ಚರಿಸಲ್ಪಟ್ಟೆನು. ಅನಂತರ ಸರೋವರದಲ್ಲಿ ಸ್ನಾನಮಾಡಿದ್ದರಿಂದ ಬದಲಾಗಿ ಪುರುಷನ ಆಕಾರವನ್ನು ಧರಿಸಿ ನಾರದನಾದೆನು. ಓ ಬ್ರಹ್ಮನೇ, ಆಗ ನಾನು ಯಾವ ಕಾರಣದಿಂದ ಮೋಹವನ್ನು ಹೊಂದಿದೆನು ? ಹೀಗೆ ಆಗಲು ಕಾರಣವೇನು ? ಎಂಬುದನ್ನು ತಿಳಿಸು. ||೧೨-೧೩-೧೪||

ಆಗ ನನಗೆ ಮೊದಲು ಇದ್ದ ಜ್ಞಾನವು ಮರೆತು ಹೋಯಿತು. ಬೇಗನೆ ಆಗ ಪ್ರಾಪ್ತವಾಗಿದ್ದ ಸ್ತ್ರೀಭಾವಸಂಬಂಧಿಯಾದ ಜ್ಞಾನವುಳ್ಳವನಾಗಿಯೇ ಮಾಡಲ್ಪಟ್ಟೆನು. ಈ ಮಾಯೆಯ ಸಾಮರ್ಥ್ಯವನ್ನು ನಾನು ತಿಳಿಯೆನು. ಅಜ್ಞಾನಕ್ಕೆ ಸ್ಪಷ್ಟವಾದ ಮುಖ್ಯಕಾರಣವಾದುದಾಗಿ ಅದು ನನ್ನ ಜ್ಞಾನಕ್ಕೆ ಹಾನಿಯನ್ನುಂಟುಮಾಡುವುದಾಗಿಯೂ ಆಯಿತು. ||೧೫-೧೬||

*

**ಅನುಭೂತಂ ಮಯಾ ಸಮ್ಯಕ್ ಜ್ಞಾತಂ ಸರ್ವಂ ಶುಭಾಶುಭಂ ।**
**ಕಥಂ ತ್ವಂ ಜಿತವಾಂಸ್ತಾತ ತಮುಪಾಯಂ ವದಸ್ವ ಮೇ ॥೧೭॥**

॥ ನಾರದ ಉವಾಚ ॥

**ವಿಜ್ಞಪ್ತೋಽಸೌ ಮಯಾ ಧಾತಾ ಪ್ರೀತಿಪೂರ್ವಮತಃ ಪರಂ ।**
**ಮಾಮುವಾಚ ಸ್ಮಿತಂ ಕೃತ್ವಾ ಪಿತಾ ಮೇ ವಾಸವೀಸುತ ॥೧೮॥**

॥ ಬ್ರಹ್ಮೋವಾಚ ॥

**ದುರ್ಜಯೈಷಾ ಸುರೈಸ್ಸರ್ವೈಃ ಮುನಿಭಿಶ್ಚ ಮಹಾತ್ಮಭಿಃ ।**
**ತಾಪಸೈಃ ಜ್ಞಾನಯುಕ್ತೈಶ್ಚ ಯೋಗಿಭಿಃ ಪವನಾಶನೈಃ ॥೧೯॥**

**ನಾಹಂ ತಾಂ ಸರ್ವಥಾ ಜ್ಞಾತುಂ ಶಕ್ತೋಽಮಾಯಾಂ ಮಹಾಬಲಾಂ ।**
**ವಿಷ್ಣುರ್ಜ್ಞಾತುಂ ನ ಶಕ್ತಶ್ಚ ತಥಾ ಶಂಭುರುಮಾಪತಿಃ ॥೨೦॥**

---

ನಾನು ಚೆನ್ನಾಗಿ ಅನುಭವಿಸಿದ ಒಳ್ಳೆಯದು, ಕೆಟ್ಟದ್ದು ಇವೆಲ್ಲದರ ಜ್ಞಾನವೂ ನನಗೆ ಆಮೇಲೆ ಜ್ಞಾಪಕಕ್ಕೆ ಬಂದಿತು. ತಂದೆಯೇ, ನೀನು ಈ ಮಾಯೆಯನ್ನು ಹೇಗೆ ಜಯಿಸಿದೆ? ಆ ಉಪಾಯವನ್ನು ನನಗೆ ಹೇಳು. ॥೧೭॥

ನಾರದನು ಹೇಳಿದನು—ಎಲೈ ವ್ಯಾಸಋಷಿಯೇ ಕೇಳು, ಈ ಚತುರ್ಮುಖ ಬ್ರಹ್ಮನು ನನ್ನ ತಂದೆಯಾಗಿದ್ದರೂ ನನ್ನಿಂದ ಹೀಗೆ ವಿಜ್ಞಾಪನೆ ಮಾಡಲ್ಪಟ್ಟವನಾಗಿ ನನ್ನನ್ನು ನೋಡಿ ನಗುತ್ತಾ ವಿಶ್ವಾಸದಿಂದ ನನ್ನ ಸಂಗಡ ಹೀಗೆ ಮಾತನಾಡಿದನು. ॥೧೮॥

ಬ್ರಹ್ಮನು ಹೇಳಿದನು—ಈ ಮಾಯೆಯು, ಎಲ್ಲ ದೇವತೆಗಳಿಂದಲೂ ಮಹಾಮಹಿಮೆಯುಳ್ಳವರಾದ ಮುನಿಗಳಿಂದಲೂ, ತಪಸ್ಸನ್ನು ಮಾಡುವವರಿಂದಲೂ, ವಾಯುವನ್ನೇ ಆಹಾರವನ್ನಾಗಿ ಮಾಡಿಕೊಂಡು ಜ್ಞಾನಿಗಳಾಗಿರುವವರಿಂದಲೂ ಸಹ ಜಯಿಸಲಶಕ್ಯವಾದುದು ! ॥೧೯॥

ಬಹಳ ಬಲಿಷ್ಠವಾದ ಈ ಮಾಯೆಯ ಶಕ್ತಿಯನ್ನು ಸಮಗ್ರವಾಗಿ ತಿಳಿಯಲು ನಾನು ಸರ್ವಪ್ರಕಾರದಿಂದಲೂ ಶಕ್ತನಲ್ಲವು, ವಿಷ್ಣುವೂ ಸಾಮರ್ಥ್ಯವಿಲ್ಲದವನು, ಹಾಗೆಯೇ ಪಾರ್ವತೀಪತಿಯಾದ ಶಂಭುವೂ ಈ ಮಾಯೆಯನ್ನು ತಿಳಿಯಲು ಶಕ್ತನಲ್ಲವು. ॥೨೦॥

ದುರ್ಜ್ಞೇಯಾ ಸಾ ಮಹಾಮಾಯಾ ಸೃಷ್ಟಿಸ್ಥಿತ್ಯಂತಕಾರಿಣೀ ।
ಕಾಲಕರ್ಮಸ್ವಭಾವಾದ್ಯೈರ್ನಿಮಿತ್ತಕಾರಣೈರ್ವೃತಾ ॥೨೧॥

ಶೋಕಂ ಮಾಕುರು ವೇಧಾವಿಂಸ್ತತ್ರ ಮಾಯಾ ಮಹಾಬಲೇ ।
ನಚೈವ ವಿಸ್ಮಯಃಕಾರ್ಯೋ ವಯಂ ಸರ್ವೇ ವಿಮೋಹಿತಾಃ ॥೨೨॥

---

ಪ್ರಪಂಚದ ಸೃಷ್ಟಿ ಸ್ಥಿತಿ ವಿನಾಶಗಳನ್ನು ಮಾಡುತ್ತಿರುವ ಆ ಪ್ರಸಿದ್ಧಳಾದ ಮಹಾಮಾಯೆಯು ಯಾರಿಂದಲೂ ತಿಳಿಯಲಶಕ್ಯಳಾದವಳು. ಮಾಯೆಗೆ ಕೆಲಸಗಳನ್ನು ನಡೆಸಲು ಮುಖ್ಯಕಾರಣವಾಗಿರುವ ಕಾಲವೇ ಮುಂತಾದುವುಗಳಿಂದಲೂ, ನಿಮಿತ್ತಕಾರಣವಾದ ಸ್ವಭಾವ, ನಿಯತಿ, ಯದೃಚ್ಛಾ ಇವೇ ಮೊದಲಾದುವುಗಳಿಂದ ಕೂಡಿರುವ ಈ ಮಾಯೆಯನ್ನು ಯಾರೂ ತಿಳಿಯಲು ಶಕ್ತರಲ್ಲವು. ಒಂದೊಂದು ಕಾರಣವನ್ನೇ ಗೆಲ್ಲಲು ಆಗದಿರುವಾಗ, ಇವುಗಳ ಸಮೂಹದಿಂದ ಕೂಡಿರುವ ಈ ಮಾಯೆಯನ್ನು ಗೆಲ್ಲುವುದು ಯಾರಿಗೆ ತಾನೇ ಸಾಧ್ಯವಾದೀತು? ಈ ಅಂಶವನ್ನು ಶ್ವೇತಾಶ್ವತರೋಪನಿಷತ್ತಿನಲ್ಲಿಯೂ ಸೂಚಿಸಿರುತ್ತದೆ. ॥೨೧॥

ಎಲೈ ಬುದ್ಧಿವಂತನೇ, ಮಾಯೆಯ ಈ ಹೆಚ್ಚಾದ ಶಕ್ತಿಯ ವಿಷಯದಲ್ಲಿ ನೀನು ವ್ಯಸನವನ್ನು ಪಡಬೇಡ. ನಾವೆಲ್ಲರೂ ಈ ಮಾಯೆಯಿಂದ ಮೋಹಿತರಾಗಿರುವಾಗ, ನೀನು ಈ ವಿಷಯದಲ್ಲಿ ಆಶ್ಚರ್ಯವನ್ನೂ ಪಡಬೇಕಾದುದಿಲ್ಲವು. ಅಜ್ಞಾನಿಗಳಾದ ನಾವು ಎಲ್ಲರೂ ಈ ಮಾಯೆಯ ಆವರಣಶಕ್ತಿ ಮತ್ತು ವಿಕ್ಷೇಪಶಕ್ತಿ ಇವೆರಡರಿಂದ ಮೋಹಗೊಂಡಿರುವೆವು. ಜ್ಞಾನಿಗಳೂ ವಿಕ್ಷೇಪಶಕ್ತಿಯಿಂದ ಮೋಹಿತರಾಗಿರುವರು. ಆದುದರಿಂದ ಓ ನಾರದನೇ, ಈ ಮಾಯೆಯ ವಿಸ್ತಾರವನ್ನು ತಿಳಿಯಲು ಪ್ರಯತ್ನಿಸಿದ ಹಾಗೆಲ್ಲ ಅದರ ವೈಭವವೈಚಿತ್ರ್ಯಗಳು ಅಪಾರವಾಗಿ ಅನಂತವಾಗಿರುವುದು ಗೊತ್ತಾಗುತ್ತಾ ನಮಗೆ ಆಶ್ಚರ್ಯದಲ್ಲಿ ಪರ್ಯವಸಾನವಾಗುತ್ತದೆಯೇ ಹೊರತು ಅವೆಲ್ಲವನ್ನೂ ಸಮಗ್ರವಾಗಿ ತಿಳಿಯಲೂ ಆಗದೆ, ಕಾಲವೂ ಪ್ರಯತ್ನವೂ ವ್ಯರ್ಥವಾಗುತ್ತವೆ. ಆದಕಾರಣ ವಿವೇಕಿಗಳಾದವರು ಈ ಅನಂತಪ್ರಯತ್ನವನ್ನು ಬಿಟ್ಟು ಈ ಮಾಯೆಗೆ ಅಧ್ಯಕ್ಷನಾದ ಬ್ರಹ್ಮಚೈತನ್ಯವನ್ನು ವಿವೇಕ ವೈರಾಗ್ಯಗಳಿಂದ ಅಪರೋಕ್ಷಾನುಭವದಲ್ಲಿ ಸಾಕ್ಷಾತ್ಕರಿಸಲು ಯತ್ನಿಸಿದರೆ, ಆಗ ನಮ್ಮ ಪ್ರಯತ್ನವೂ ಕಾಲವೂ ಬೇಗ ಸಫಲವಾಗುತ್ತವೆ. ವಿವೇಕವೈರಾಗ್ಯಗಳಿಂದ ನಮಗೆ ಈ ಮಾಯಾಪ್ರಪಂಚದ ಸಂಸಾರದಲ್ಲಿರುವ ನಾನು, ನನ್ನದು, ಎಂಬ ಅಭಿಮಾನವು ಕಳೆದುಹೋಗಿ, ನಮ್ಮ ಆತ್ಮಚೈತನ್ಯವೂ ಬ್ರಹ್ಮಚೈತನ್ಯವೂ ಸಚ್ಚಿದಾನಂದರೂಪದಲ್ಲಿ ಅಭಿನ್ನರೆಂಬ

|| ನಾರದ ಉವಾಚ ||

ಪಿತ್ರೇತ್ಯುಕ್ತಸ್ತದಾ ವ್ಯಾಸ ತಮಾಪೃಚ್ಛ್ಯ ಗತಸ್ಮಯಃ ।
ಆಗತೋಽಸ್ಮ್ಯತ್ರ ಪಶ್ಯನ್ ವೈ ತೀರ್ಥಾನಿ ಚ ವರಾಣಿ ಚ ||೨೩||

ತಸ್ಮಾತ್ ತ್ವಮಪಿ ಸಂತ್ಯಜ್ಯ ಮೋಹಂ ಕೌರವನಾಶಜಂ ।
ಕಾಲಕ್ಷಯಂ ಸುಖಾಸೀನಃ ಸ್ಥಾನೇಽಸ್ಮಿನ್ ಕುರುಸತ್ತಮ ||೨೪||

ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ।
ನಿಶ್ಚಯಂ ಹೃದಯೇ ಕೃತ್ವಾ ವಿಚರಸ್ವ ಯಥಾಸುಖಂ ||೨೫||

---

ಸಾಕ್ಷಾತ್ಕಾರವುಂಟಾಗಿ ನಿತ್ಯಾನಂದರೂಪವಾದ ಮೋಕ್ಷವು ನಿತ್ಯಸಿದ್ಧವಾಗಿ ಉಳಿಯುತ್ತದೆ. ಎಂದು ತಾತ್ಪರ್ಯವು. ||೨೨||

ನಾರದ ಋಷಿಯು ಹೇಳಿದನು–ಎಲೈ ವ್ಯಾಸಋಷಿಯೇ, ಕೇಳು. ತಂದೆಯಿಂದ ನಾನು ಹೀಗೆ ಹೇಳಲ್ಪಟ್ಟವನಾಗಿ ಆ ತಂದೆಯ ಅಪ್ಪಣೆಯನ್ನು ಪಡೆದು ಅಹಂಭಾವ ಆಶ್ಚರ್ಯಗಳಿಲ್ಲದವನಾಗಿ ಉತ್ತಮವಾದ ತೀರ್ಥಗಳನ್ನು ನೋಡುತ್ತಾ ಇಲ್ಲಿಗೆ ಬಂದಿರುವೆನು. ||೨೩||

ಎಲೈ ಕುರುವಂಶದ ರಾಜರಲ್ಲಿ ಶ್ರೇಷ್ಠನೇ ಜನಮೇಜಯರಾಜನೇ, ಕೇಳು– ಮಾಯೆಯು ಯಾರಿಂದಲೂ ಜಯಿಸಲಶಕ್ಯವಾದ ಕಾರಣ ಈ ಮಾಯಾಪ್ರಪಂಚದ ಸಂಸಾರದಲ್ಲಿ ಸುಖದುಃಖಾನುಭವಗಳು ಎಲ್ಲರಿಗೂ ಅನಿವಾರ್ಯವಾಗಿರುವುದರಿಂದ, ನೀನೂ ಕೂಡ ಕೌರವರ ನಾಶದಿಂದ ಉಂಟಾದ ದುಃಖವನ್ನು ಬಿಟ್ಟು ಎಂದರೆ ಅವುಗಳಿಂದ ಪರವಶನಾಗದೆ, ಅವುಗಳನ್ನು ಸಮಭಾವದಿಂದ ಸಹಿಸುತ್ತಾ, ಮನಶ್ಶಾಂತಿಯನ್ನು ಕಳೆದುಕೊಳ್ಳದೆ, ಈ ಪ್ರದೇಶದಲ್ಲಿ ಸುಖವಾಗಿ ಎಂದರೆ ಭೂಮಾನಂದರೂಪಳಾದ ಚೈತನ್ಯಸ್ವರೂಪಳೂ ಚಿಚ್ಛಕ್ತಿರೂಪಳೂ ಆದ ಭಗವತೀ ದೇವಿಯಲ್ಲಿ ಮನಸ್ಸನ್ನಿಟ್ಟು, ಸಮಾಧಿಯಲ್ಲಿ ಇರುವವನಾಗಿ ಕಾಲವನ್ನು ಕಳೆಯುತ್ತಿರು. ||೨೪||

ಜಗದ್ವ್ಯವಹಾರವನ್ನು ಅಭಿಮಾನದಿಂದ ನೋಡದೆ, ಅದರಿಂದಾಗುವ ಸುಖದುಃಖಗಳ ಲೇಪವನ್ನು ಪಡೆಯದೆ ಜೀವನ್ಮುಕ್ತನಂತೆ ಇರುವುದನ್ನು ಅಭ್ಯಾಸಿಸಬೇಕು. ಹೀಗಿದ್ದರೂ ಪ್ರಾರಬ್ಧ ಕರ್ಮವಶದಿಂದ ಚಿತ್ತವಿಕ್ಷೇಪವು ಉಂಟಾದರೆ ಅದನ್ನೂ ಸಹಿಸಬೇಕು. ಏಕೆಂದರೆ, ಯಾರೇ ಆದರೂ ಅವರವರು ಮಾಡಿದ ಕರ್ಮವು ಒಳ್ಳೆಯದಾಗಲಿ, ಕೆಟ್ಟದ್ದಾಗಲಿ ಅದರ ಫಲವನ್ನು ಅವರವರು ಅನುಭವಿಸಿಯೇ ತೀರ

|| ವ್ಯಾಸ ಉವಾಚ ||

**ಇತ್ಯುಕ್ತ್ವಾ ನಾರದೋ ರಾಜನ್ ಗತೋ ಮಾಂ ಪ್ರತಿಬೋಧ್ಯ ಚ ।**
**ಅಹಂ ತಚ್ಚಿಂತಯನ್ ವಾಕ್ಯಂ ಯದುಕ್ತಂ ಮುನಿನಾ ತದಾ ॥೨೬॥**

**ಸ್ಥಿತಸ್ಸರಸ್ವತೀತೀರೇ ಕಲ್ಪೇ ಸಾರಸ್ವತೇ ವರೇ ।**
**ಕಾಲಾತಿವಾಹನಾಯೈತತ್ಕೃತಂ ಭಾಗವತಂ ಮಯಾ ॥೨೭॥**

**ಪುರಾಣಮುತ್ತಮಂ ಭೂಪ ಸರ್ವಸಂಶಯನಾಶನಂ ।**
**ನಾನಾಖ್ಯಾನಸಮಾಯುಕ್ತಂ ವೇದಪ್ರಾಮಾಣ್ಯಸಂಶ್ರಿತಂ ॥೨೮॥**

---

ಬೇಕಾಗಿರುವುದು. ಎಂದು ಈಗ, ನಾನು ಹೇಳುವ ಈ ನಿರ್ಣಯವನ್ನು ದೃಢವಾಗಿ ಮನಸ್ಸಿನಲ್ಲಿಟ್ಟುಕೊಂಡು ನಿನಗೆ ಹೇಗೆ ಸುಖವಾಗುವುದೋ ಹಾಗೆ ಸಂಚರಿಸುತ್ತಿರು. ಇದೇ ಈ ಪುರಾಣದ ವಿಶೇಷವಾದ ಉಪದೇಶವೂ ಗುಣವೂ ಆಗಿದೆ. ||೨೫||

ವ್ಯಾಸಋಷಿಯು ಹೇಳಿದನು—ಎಲೈ ರಾಜನೇ, ಕೇಳು, ಹೀಗೆ ಹೇಳಿ ನನಗೆ ಚೆನ್ನಾಗಿ ಎಚ್ಚರಿಕೆಯ ತಿಳಿವಳಿಕೆಯನ್ನು ಕೊಟ್ಟು ನಾರದನು ಹೊರಟುಹೋದನು. ನಾನು ಆಗ ಋಷಿಯಾದ ನಾರದನು ಯಾವ ವಾಕ್ಯವನ್ನು ಹೇಳಿದನೋ ಅದನ್ನು ಯೋಚಿಸುವವನಾಗಿ ಉತ್ತಮವಾದ ಸಾರಸ್ವತಕಲ್ಪದಲ್ಲಿ, ಸರಸ್ವತೀ ನದಿಯ ತೀರದಲ್ಲಿ ಇದ್ದೆನು. ಮತ್ಸ್ಯಪುರಾಣದಲ್ಲಿ ಸಾರಸ್ವತಸ್ಯ ಕಲ್ಪಸ್ಯ ಮಧ್ಯೇ ಯೇ ಸ್ಯುರ್ನರಾಮರಾಃ । ತದ್ವೃತ್ತಾಂತೋದ್ಭವಂ ಲೋಕೇ ತದ್ಭಾಗವತಮಿಷ್ಯತೇ ॥ ಎಂದು ಹೇಳಿದೆ. ||೨೬||

ನಾನು, ನಾರದನು ನನಗೆ ಉಪದೇಶಮಾಡಿದ ರೀತಿಯಿಂದ, ಕೌರವರ ನಾಶದಿಂದುಂಟಾದ ದುಃಖವನ್ನು ಮರೆತು, ಬಹಳಮಟ್ಟಿನ ಆನಂದ ಸ್ವರೂಪವಾದ ಜ್ಞಾನರೂಪದಿಂದ ಇರುವ ದೇವಿಯನ್ನು ಅಭೇದದಿಂದ ಧ್ಯಾನಮಾಡುತ್ತಾ ಸಮಾಧಿನಿಷ್ಠನಾಗಿ ಜೀವನ್ಮುಕ್ತಿಯನ್ನು ಸಂಪಾದಿಸುವ ಉದ್ದೇಶದಿಂದ ಸರಸ್ವತೀನದಿಯ ತೀರದಲ್ಲಿ ಇದ್ದೆನು. ಆಗ ಸಮಾಧಿಯ ದೆಸೆಯಿಂದ ಚಿತ್ತವು ಬಹಿರ್ಮುಖವಾಗಿ ವಿಕ್ಷೇಪವು ಉಂಟಾದಾಗ ಬೇರೆಯ ವಿಧವಾದ ಜ್ಞಾನವು ಉಂಟಾಗದಂತೆ ಕಾಲವನ್ನು ಕಳೆಯುವುದಕ್ಕಾಗಿ ಸತ್ಕಾಲಕ್ಷೇಪವನ್ನು ಮಾಡುವುದಕ್ಕಾಗಿ ಈ ಗ್ರಂಥವನ್ನು ನಾನು ರಚಿಸಿದೆನು. ಈ ಕಥೆಯು ಉತ್ತಮವಾದ ಸಾರಸ್ವತ ಕಲ್ಪದಲ್ಲಿ ನಡೆದಿರುವ ದೇವಿಯ ಅವತಾರಾದಿಗಳನ್ನು ಅವಲಂಬಿಸಿ ರಚಿತವಾಗಿದೆ. ಇದಕ್ಕೆ ಮೇಲೆ ಉದಾಹರಿ

ಸಂದೇಹೋಽತ್ರ ನ ಕರ್ತವ್ಯಸ್ಸರ್ವಥಾ ನೃಪಸತ್ತಮ
ಯಥೇಂದ್ರಜಾಲಿಕಃ ಕಶ್ಚಿತ್ ಪಾಂಚಾಲೀಂ ದಾರವೀಂ ಕರೇ ॥೨೯॥

ಕೃತ್ವಾ ನರ್ತಯತೇ ಕಾಮಂ ಸ್ವೇಚ್ಛಯಾ ವಶವರ್ತಿನೀಂ ।
ತಥಾ ನರ್ತಯತೇ ಮಾಯಾ ಜಗತ್ಸ್ಥಾವರಜಂಗಮಂ ॥೩೦॥

ಬ್ರಹ್ಮಾದಿಸ್ತಂಬ ಪರ್ಯಂತಂ ಸದೇವಾಸುರಮಾನುಷಂ ।
ಪಂಚೇಂದ್ರಿಯ ಸಮಾಯುಕ್ತಂ ಮನಶ್ಚಿತ್ತಾನುವರ್ತನಂ ॥೩೧॥

---

ಸಿರುವ ಮತ್ಸ್ಯಪುರಾಣ ವಚನವು ಪ್ರಮಾಣವಾಗಿದೆ. ಎಲೈ ರಾಜನೇ, ಕೇಳು, ಈ ಪುರಾಣವು ಸಕಲ ವಿಧವಾದ ಸಂಶಯಗಳನ್ನೂ ನಾಶಮಾಡುವುದಾಗಿರುವುದು. ಅನೇಕ ವಿಧವಾದ ಉಪಾಖ್ಯಾನಗಳಿಂದ ಕೂಡಿರುವುದು, ಮತ್ತು ವೇದದ ಪ್ರಾಮಾಣ್ಯದ ಅವಲಂಬನದಿಂದ ರಚಿತವಾಗಿದೆ. ಇದೇ ವಿಶೇಷಗುಣವು. ॥೨೭-೨೮॥

ಈ ಜಗತ್ಸಂಸಾರದಲ್ಲಿ ನೋಡಲು ಯೋಗ್ಯವಾಗಿರುವ ಎಲ್ಲ ವ್ಯವಹಾರಕ್ಕೂ ಎಲ್ಲ ವಿಧವಾದ ಅಭಿಪ್ರಾಯಗಳೂ ಹುಟ್ಟುವುದಕ್ಕೂ ಸಹ ಮಾಯೆಯೇ ಕಾರಣವಾಗಿರುವುದು. ಈ ವಿಷಯದಲ್ಲಿ ನೀನು ಸ್ವಲ್ಪವೂ ಸಂದೇಹವನ್ನು ಪಡಬೇಡ. ಎಲೈ ಜನಮೇಜಯರಾಜನೇ ಕೇಳು, (ಇಂದ್ರಜಾಲದ) ಯಕ್ಷಿಣೀ ಆಟವನ್ನು ಆಡುವವನು ಮರದಿಂದ ಮಾಡಿದ ಒಂದು ಬೊಂಬೆಯನ್ನು ತನ್ನ ಕೈಯಿನಲ್ಲಿರಿಸಿಕೊಂಡು ತನ್ನ ಮಾಯಾಮಹಿಮೆಯಿಂದ ತನ್ನ ಇಚ್ಛಾನುಸಾರವಾಗಿ ಅದನ್ನು ಕುಣಿಸುವಂತೆ, ಮಾಯೆಯು (ಸ್ಥಾವರ, ಜಂಗಮ) ಚರಸ್ಥಿರಪ್ರಾಣಿಗಳಿಂದಲೂ, ಚಿದಚಿದ್ವಸ್ತುಗಳಿಂದಲೂ ಕೂಡಿದ ಈ ಪ್ರಪಂಚವೆಲ್ಲವನ್ನೂ ಕುಣಿಸುತ್ತಿರುವುದು! ॥೨೯-೩೦॥

ಬ್ರಹ್ಮನೇ ಮೊದಲಾಗಿ ಒಂದು ಕಡ್ಡಿಯ ವರೆಗೆ ಇರುವ ಈ ಪ್ರಪಂಚದಲ್ಲಿರುವ ದೇವತೆಗಳು, ಅಸುರರು, ಮಾನವರು, ಪ್ರಾಣಿಗಳು, ಇವೆಲ್ಲವೂ ಮಾಯೆಗೆ ಅಧೀನವಾಗಿರುವುದು. ಪಂಚಜ್ಞಾನೇಂದ್ರಿಯಗಳಿಂದಲೂ, ಪಂಚಕರ್ಮೇಂದ್ರಿಯಗಳಿಂದಲೂ ಕೂಡಿದ್ದಾಗಿರುವ ಮನಸ್ಸು ಮತ್ತು ಚಿತ್ತ ಇವುಗಳನ್ನು ಅನುಸರಿಸುವುದಾಗಿರುವ ಈ ಅಜ್ಞಾನರೂಪವಾದ ಪ್ರಪಂಚದ ವ್ಯವಹಾರವೂ ಸಹ (ಮಾಯೆಯ) ಪ್ರಭಾವಕ್ಕೆ ಒಳಗಾಗಿರುವುದು. ॥೩೧॥

**ಗುಣಾಸ್ತು ಕಾರಣಂ ರಾಜನ್ ಸರ್ವೇಷಾಂ ಸರ್ವಥಾ ತ್ರಯಃ।**
**ಕಾರ್ಯಂ ಕಾರಣ ಸಂಯುಕ್ತಂ ಭವತೀತಿ ವಿನಿಶ್ಚಯಃ ॥೩೨॥**

**ಭಿನ್ನ ಭಿನ್ನಸ್ವಭಾವಾಸ್ತೇ ಗುಣಾ ಮಾಯಾಸಮುದ್ಭವಾಃ ।**
**ಶಾಂತೋಘೋರಸ್ತಥಾ ಮೂಢಸ್ತ್ರಯಸ್ತು ವಿವಿಧಾ ಯತಃ ॥೩೩॥**

---

ಎಲೈ ರಾಜನೇ ಕೇಳು, ಎಲ್ಲ ವಿಧವಾದ ಕಾರ್ಯಗಳಿಗೂ, ಮಾಯೆಗೆ ಸಂಬಂಧಪಟ್ಟ, ಸತ್ತ್ವರಜಸ್ತಮಸ್ಸೆಂಬ ಮೂರು ಗುಣಗಳು ಸರ್ವಪ್ರಕಾರದಿಂದಲೂ ಕಾರಣವಾಗಿರುವುವು. ಆದ್ದರಿಂದ ಎಲ್ಲವೂ ಕಾರ್ಯಕಾರಣಗಳಿಂದ ಕೂಡಿರುವುವು. ಎಂಬುದಾಗಿ ನಿಶ್ಚಯಮಾಡಲ್ಪಟ್ಟಿರುತ್ತದೆ. ಏಕೆಂದರೆ ಕಾರಣವಿಲ್ಲದೇ ಕಾರ್ಯವು ಉಂಟಾಗದು. ಈ ಜಗತ್ಸಂಸಾರವೆಂಬ ಕಾರ್ಯದಲ್ಲಿ ಸತ್ವ, ರಜಸ್, ತಮಸ್ ಎಂಬ ಮೂರು ಗುಣಗಳ ಸ್ವಭಾವವು ಕಂಡುಬರುತ್ತಿದೆ. ಆದುದರಿಂದ ಈ ಸಂಸಾರವೆಲ್ಲಕ್ಕೂ ಗುಣತ್ರಯಾತ್ಮಕವಾದ ಮಾಯೆಯೇ ಕಾರಣವಾಗಿರಬೇಕೆಂದು ಗೊತ್ತಾಗುತ್ತದೆ. ಅಲ್ಲದೆ ಈ ಗುಣಪರಿಣಾಮಗಳಲ್ಲಿ ಕಾರ್ಯಕಾರಣಭಾವವೂ ಇದೆ ಎಂಬುದೂ ಗೊತ್ತಾಗುತ್ತದೆ. ಏಕೆಂದರೆ ಕಾರಣದ ಗುಣಗಳು ಕಾರ್ಯದಲ್ಲಿರುವುದು ಸಹಜವಾಗಿದೆ. ॥೩೨॥

ಮಾಯೆಯಿಂದ ಹುಟ್ಟಿದ ಆಯಾಯ ಗುಣಗಳು ಬೇರೆ ಬೇರೆಯಾದ ಸ್ವಭಾವವುಳ್ಳವುಗಳಾಗಿ ಅದಕ್ಕೆ ಎಂದರೆ ಆ ಸ್ವಭಾವಕ್ಕೆ ಅನುಸಾರವಾದ ಕಾರ್ಯವನ್ನು ಮಾಡಿಸುವವುಗಳಾಗಿ ಇರುತ್ತವೆ. ಈ ಮೂರು ಗುಣಗಳಲ್ಲಿ ಒಂದನೆಯದಾದ ಸತ್ತ್ವಗುಣವು ಉಪಶಾಂತಿಯನ್ನು ಉಂಟುಮಾಡುವ (ಗುಣವುಳ್ಳದ್ದಾಗಿ) ಸ್ವಭಾವವುಳ್ಳದ್ದಾಗಿ ಶಾಂತ ಎಂಬ ಹೆಸರನ್ನು ಹೊಂದಿರುವುದು. ಎರಡನೆಯದಾದ ರಜೋಗುಣವು ಪ್ರಾಣಿಗಳಿಗೆ ಇರುವ ಬುದ್ಧಿಯಲ್ಲಿ ಹೆಚ್ಚಾಗಿ (ವಿಕ್ಷೇಪ) ಚಾಂಚಲ್ಯ ಎಂದರೆ ಕಾರ್ಯಪರತೆ; ಚಟುವಟಿಕೆ ಮುಂತಾದುವನ್ನು ಹುಟ್ಟಿಸಿ, ಬಹಳಮಟ್ಟಿನ ಕೆಲಸಗಳನ್ನು ಮಾಡಿಸುವುದರ ಮೂಲಕ, ಕ್ಲೇಶವನ್ನು ತುಂಬ ಉಂಟುಮಾಡುವುದರಿಂದ ಘೋರ ಎಂದೆನಿಸಿಕೊಳ್ಳುವುದು. ಮೂರನೆಯದಾದ ತಮೋಗುಣವು ಬುದ್ಧಿಯಲ್ಲಿ ಪ್ರಕಾಶವಿಲ್ಲದಂತೆ ಮಾಡಿ ಸೋಮಾರಿತನವನ್ನು ಉಂಟುಮಾಡಿ ನಿದ್ದೆಯನ್ನು ಹೆಚ್ಚಿಸುವುದು. ಆದ್ದರಿಂದ ಮೂಢವೆಂದೆನಿಸಿಕೊಳ್ಳುವುದು. ಈ ಮೂರು ಗುಣಗಳೂ ಪ್ರಾಯಿಕವಾಗಿ ಯಾವಾಗಲೂ ಆಯಾಯ ಪ್ರಾಣಿಗಳಲ್ಲಿ ಪ್ರತ್ಯೇಕವಾಗಿ ಇರುವುದಿಲ್ಲವು. ಇವುಗಳು ಕೆಲಸಮಾಡುವಾಗ ಒಂದನ್ನು ಬಿಟ್ಟು ಇನ್ನೊಂದು ಕೆಲಸವನ್ನು ಮಾಡದೆ ಇರುವುದರಿಂದ ಇವುಗಳಲ್ಲಿ ಒಂಬತ್ತು ವಿಧವಾದ (ಮಿಶ್ರಣೆಯು) ಸಂಕಲನೆಯು ಸಂಯೋ

ತತ್ಸನೋತಃ ಪುಮಾನ್ನಿತ್ಯಂ ತದ್ವಿಹೀನಃ ಕಥಂಭವೇತ್ ।
ನ ಭವತ್ಯೇವ ಸಂಸಾರೇ ರಹಿತಸ್ತಂತುಭಿಃ ಪಟಃ ॥೩೪॥

ತಥಾ ಗುಣೈಸ್ತ್ರಿಭಿರ್ಹೀನೋ ನ ದೇಹೀತಿ ವಿನಿಶ್ಚಯಃ ।
ದೇವದೇಹೋ ಮನುಷ್ಯೋ ವಾ ತಿರಶ್ಚೋವಾ ನರಾಧಿಪ ॥೩೫॥

ಗುಣೈರ್ವಿರಹಿತೋ ನ ಸ್ಯಾತ್ ಮೃದ್ವಿಹೀನೋ ಘಟೋಯಥಾ ।
ಬ್ರಹ್ಮಾ ವಿಷ್ಣುಸ್ತಥಾ ರುದ್ರಸ್ತ್ರಯಶ್ಚಾಮೀ ಗುಣಾಶ್ರಯಾಃ ॥೩೬॥

ಕದಾಚಿತ್ ಪ್ರೀತಿಯುಕ್ತಾಸ್ತೇ ತಥಾಽಪ್ರೀತಿಯುತಾಃ ಪುನಃ ।
ತಥಾ ವಿಷಾದಯುಕ್ತಾಸ್ತೇ ಭವಂತಿ ಗುಣಯೋಗತಃ ॥೩೭॥

---

ಜನೆಯು ಉಂಟಾಗಿ, ಇನ್ನೂ ಇದೇ ರೀತಿಯಾಗಿ ಅನೇಕ ವಿಧವಾದ ಅನಂತವಾದ ಪ್ರಭೇದಗಳು ಹೆಚ್ಚುವುವು. ||೩೩||

ಈ ಪ್ರಪಂಚವೆಲ್ಲವೂ ಈ ಗುಣಗಳಿಂದ ಕೂಡಿದ ಮಾಯೆಯಿಂದ ನಿರ್ಮಿತ ವಾಗಿ ಮುಂದುವರಿಯುತ್ತಿರುವ ಕಾರಣದಿಂದಲೂ, ಈ ಗುಣಗಳ ಪ್ರಭೇದದೊಡನೆ ಸಂಬಂಧಿಸದಿರುವ ದೇಹವು ಇಲ್ಲದಿರುವ ಕಾರಣದಿಂದಲೂ, ಎಲ್ಲರೂ ಈ ಗುಣಗಳಿಗೆ ಅಧೀನರಾಗಿ ಎಂದರೆ ಗುಣಗಳ ಪರಿಣಾಮಗಳಲ್ಲಿನ ಸ್ವಾಭಾವಿಕವಾದ ನಿಯಮಗಳಿಗೆ ಒಳಪಟ್ಟು ಇರಲೇ ಬೇಕಾಗಿರುವುದು. ಪುರುಷನು ಯಾವಾಗಲೂ ಈ ಗುಣಗಳಿಂದ ಏರ್ಪಟ್ಟಿರುವ ದೇಹದಿಂದ ಕೂಡಿರುವುದರಿಂದ ಈ ದೇಹವು ಇರುವ ವರೆಗೂ ಸುಖ, ದುಃಖ, ಜನನ, ಮರಣ ಇವನ್ನು ಬಿಟ್ಟವನು ಯಾವನೂ ಇಲ್ಲವು. ಬಟ್ಟೆಯು ನೂಲಿನಿಂದ ಬಿಟ್ಟದ್ದಾಗಿ ಹೇಗೆ ಇರುವುದಿಲ್ಲವೋ ಹಾಗೆ ಈ ಮೂರು ಗುಣಗಳ ಸಂಬಂಧವಿಲ್ಲದ ಪ್ರಾಣಿಯು ಇಲ್ಲವೆಂದು ನಿರ್ಣಯಮಾಡಿರುವರು. ||೩೪||

ಎಲೈ ರಾಜನೇ ಕೇಳು, ದೇವತೆಯ ಶರೀರವುಳ್ಳವನಾಗಲಿ, ಮನುಷ್ಯನಾಗಲಿ, ತಿರ್ಯಕ್ಪ್ರಾಣಿಯಾಗಲಿ, ಯಾರೇ ಆದಾಗ್ಯೂ, ಮಣ್ಣಿನ ಸಂಬಂಧವಿಲ್ಲದಿರುವ ಗಡಿಗೆಯು ಇಲ್ಲದಿರುವಂತೆ, ಪ್ರಕೃತಿಯ ಸಂಬಂಧವಾದ ಈ ಮೂರು ಗುಣಗಳ ಪರಿಣಾಮಗಳಿಲ್ಲದವನಾಗಿ ಇರುವುದಿಲ್ಲವು. ||೩೫||

ಬ್ರಹ್ಮನೂ, ವಿಷ್ಣುವೂ, ರುದ್ರನೂ ಇಂತಹ ದೊಡ್ಡ ಜನರೂ ಸಹ ಈ ಮೂರು ಗುಣಗಳಿಗೆ ಆಶ್ರಯರಾಗಿ ಇರುವವರು. ಆದುದರಿಂದಲೇ ಇವರು ಈ ಗುಣಗಳ ಸಂಬಂಧದಿಂದ ಒಂದೊಂದು ಸಾರಿ ಪ್ರೀತಿಯುಳ್ಳವರಾಗಿಯೂ, ಮತ್ತೊಂದು

ಬ್ರಹ್ಮಾ ಕದಾಚಿತ್ ಸತ್ತ್ವಸ್ಥಸ್ತದಾ ಶಾಂತಃ ಸಮಾಧಿಮಾನ್ ।
ಪ್ರೀತಿಯುಕ್ತೋ ಭವೇತ್ಸರ್ವಭೂತೇಷು ಜ್ಞಾನಸಂಯುತಃ ॥೩೮॥

ಪುನಸ್ಸತ್ತ್ವವಿಹೀನಸ್ತು ರಜೋಗುಣ ಸಮಾವೃತಃ ।
ತದಾ ಭವೇದ್ಘೋರ ರೂಪಃ ಸರ್ವತ್ರಾಪ್ರೀತಿಸಂಯುತಃ ॥೩೯॥

ಯದಾ ತಮೋಗುಣಾವಿಷ್ಟೋ ಬಾಹುಳ್ಯೇನ ಭವೇದ್ವಿಧಿಃ ।
ತದಾ ವಿಷಾದಸಂಪನ್ನೋ ಮೂಢೋ ಭವತಿ ನಾನ್ಯಥಾ ॥೪೦॥

ಮಾಧವೋಽಪಿ ಸದಾ ಸತ್ತ್ವ ಸಂಶ್ರಿತಃ ಸರ್ವಥಾ ಭವೇತ್ ।
ಯದಾ ಶಾಂತಃ ಪ್ರೀತಿಯುಕ್ತೋ ಭವೇತ್ ಜ್ಞಾನಸಮನ್ವಿತಃ ॥೪೧॥

---

ಸಮಯದಲ್ಲಿ ದ್ವೇಷವುಳ್ಳವರಾಗಿಯೂ, ಇನ್ನೊಂದು ಸಲ ಮೋಹ ದುಃಖವುಳ್ಳವರಾಗಿಯೂ ಇರುವರು. ॥೩೬-೩೭॥

ಬ್ರಹ್ಮನಲ್ಲಿ ಯಾವಾಗ ಸತ್ವಗುಣವು ಅಧಿಕವಾಗಿರುವುದೋ ಆಗ ಅವನು ಉಪಶಾಂತನಾಗಿ ಧ್ಯಾನಾರೂಢನಾಗುವನು ಮತ್ತು ಎಲ್ಲ ಪ್ರಾಣಿಗಳಲ್ಲಿಯೂ ಪ್ರೀತಿಯಿಂದ ಕೂಡಿದವನಾಗಿ ಸಂತೋಷದಿಂದಿರುವನು. ॥೩೮॥

ಬ್ರಹ್ಮನು ಸತ್ವಗುಣವು ಅಡಗಿರುವ ಕಾಲದಲ್ಲಿ ಹೆಚ್ಚಾದ ರಜೋಗುಣದಿಂದ ಆವರಿಸಲ್ಪಟ್ಟವನಾಗಿ ಘೋರವಾದ ನಡೆನುಡಿ ಭಾವಗಳುಳ್ಳವನಾಗಿ (ಅಪ್ರೀತಿಯಿಂದ) ಕೋಪದಿಂದ ಕೂಡಿದವನಾಗಿ ಇರುವನು. ॥೩೯॥

ಹಾಗೆಯೇ ಆ ಬ್ರಹ್ಮನು ಯಾವಾಗ ಹೆಚ್ಚಿದ ತಮೋಗುಣದಿಂದ ಆವರಿಸಲ್ಪಡುವನೋ ಆಗ ಮೋಹದುಃಖದಿಂದ ಕೂಡಿದವನಾಗಿ ಜಡನಾಗಿರುವನು. ಇದು ಹೊರತು ಬೇರೆಯ ಮಾರ್ಗವಿಲ್ಲವು. ॥೪೦॥

ಬ್ರಹ್ಮನಂತೆಯೇ ವಿಷ್ಣುವೂ ಕೂಡ ಯಾವಾಗ ಸತ್ವಗುಣದಿಂದ ಹೆಚ್ಚಾಗಿ ಆವರಿಸಲ್ಪಡುವನೋ ಆಗ ಸಂತೋಷವುಳ್ಳವನಾಗಿಯೂ ಉಪಶಾಂತನಾಗಿಯೂ ಸರ್ವ ವಿಷಯಕವಾದ ಜ್ಞಾನವುಳ್ಳವನಾಗಿಯೂ ಇರುವನು. ಇವನು ಸಾಮಾನ್ಯವಾಗಿ ಯಾವಾಗಲೂ ಸತ್ವಗುಣಪ್ರಧಾನವಾಗಿರುವ ಸ್ವಭಾವವುಳ್ಳವನಾಗಿರುವನು. ॥೪೧॥

ಸ ಏವ ರಜ ಆಧಿಕ್ಯಾತ್ ಅಪ್ರೀತಿ ಸಂಯುತೋ ಭವೇತ್ ।
ಘೋರಶ್ಚ ಸರ್ವಭೂತೇಷು ಗುಣಾಧೀನೋ ರಮಾಪತಿಃ ॥೪೨॥

ರುದ್ರೋಽಪಿ ಸತ್ತ್ವ ಸಂಯುಕ್ತಃಪ್ರೀತಿರ್ಮಾ ಶಾಂತಿರ್ಮಾ ಭವೇತ್।
ರಜೋ ನಿಮೀಲಿತಸ್ಸೋಽಪಿ ಘೋರಃ ಪ್ರೀತಿ ವಿವರ್ಜಿತಃ ॥೪೩॥

ತಮೋಗುಣಯುತಸ್ಸೋಽಪಿ ಮೂಢೋ ವಿಷಾದಯುಗ್ಭವೇತ್ ।
ಏತೇ ಯದಿ ಗುಣಾಧೀನಾ ಬ್ರಹ್ಮವಿಷ್ಣುಹರಾದಯಃ ॥೪೪॥

ಸೂರ್ಯವಂಶೋದ್ಭವಾಸ್ತದ್ವತ್ಸೋಮವಂಶಭವಾ ಅಪಿ ।
ಮನ್ವಾದಯಶ್ಚ ಯೇ ಪ್ರೋಕ್ತಾ ಶ್ಚತುರ್ದಶ ಯುಗೇಯುಗೇ ॥೪೫॥

---

ಆ ವಿಷ್ಣುವು, ರಜೋಗುಣವು ಹೆಚ್ಚಾದಾಗ ತಾನು ಲಕ್ಷ್ಮಿಗೆ ಗಂಡನಾಗಿ ದ್ದಾಗ್ಯೂ ದುಷ್ಟರ ಮತ್ತು ಶತ್ರುಗಳ ವಿಷಯದಲ್ಲಿಯೂ (ಭಯಂಕರನಾಗಿ) ಕೋಪ ವುಳ್ಳವನಾಗಿ ಸಂತೋಷವಿಲ್ಲದಿರುವನು. ॥೪೨॥

ಇವರಂತೆಯೇ ರುದ್ರನೂ ಕೂಡ ಸತ್ವಗುಣವು ಆಧಿಕವಾಗಿದ್ದಾಗ ಉಪ ಶಾಂತಿಯೂ, ಸಂತೋಷವೂ, ಸರ್ವಜ್ಞತೆಯೂ, ಇವುಗಳುಳ್ಳವನಾಗಿರುವನು. ರಜೋ ಗುಣದಿಂದ ಆವರಿಸಲ್ಪಟ್ಟವನಾದಾಗ ರಾಗದ್ವೇಷಗಳುಳ್ಳವನಾಗಿ ಸಂತೋಷವಿಲ್ಲದವ ನಾಗಿ ಭಯಂಕರನಾಗಿರುವನು. ॥೪೩॥

ಹಾಗೆಯೇ ಈ ರುದ್ರನು ತಮೋಗುಣದ ಆಧಿಕ್ಯದಿಂದ ಕೂಡಿದವನಾದಾಗ ದುಃಖವೂ, ಸಂಕಟವೂ ಇವುಗಳುಳ್ಳವನಾಗಿರುವನು. ಈ ಪ್ರಕಾರವಾಗಿ ಬ್ರಹ್ಮ, ವಿಷ್ಣು, ಈಶ್ವರ, ಇವರಂತಹ ದೊಡ್ಡವರೂ ಈ ಮೂರು ಗುಣಗಳಿಗೆ ಆಧೀನರಾಗಿಯೇ ಇರುವರು. ॥೪೪॥

ಪ್ರತಿಯೊಂದು ಯುಗಕ್ಕೂ ಒಬ್ಬನಂತೆ ಯಾವ ಯಾವ ಮನುಗಳುಂಟೋ ಅವರೆಲ್ಲರೂ ಒಟ್ಟು ಹದಿನಾಲ್ಕು ಮನುಗಳೂ ಮತ್ತು ಸೂರ್ಯವಂಶದಲ್ಲಿ ಹುಟ್ಟಿ ದವರೂ, ಚಂದ್ರವಂಶದಲ್ಲಿ ಹುಟ್ಟಿದ ರಾಜಮಹಾರಾಜರೂ ಚಕ್ರವರ್ತಿಗಳೂ ಸಹ, ಈ ಬ್ರಹ್ಮ ವಿಷ್ಣು ರುದ್ರರ ಹಾಗೆ, ಮಾಯೆಗೆ ಆಧೀನರಾಗಿ ಇರುವರು. ॥೪೫॥

ಅನ್ಯೇಷಾಂ ಚೈವ ಕಾ ವಾರ್ತಾ ಸಂಸಾರೇಽಸ್ಮಿನ್ ನೃಪೋತ್ತಮ ।
ಮಾಯಾಽಧೀನಂ ಜಗತ್ಸರ್ವಂ ಸದೇವಾಸುರಮಾನುಷಂ ॥೪೬॥

ತಸ್ಮಾದ್ರಾಜನ್ ನ ಕರ್ತವ್ಯಃ ಸಂದೇಹೋಽತ್ರ ಕದಾಚನ ।
ದೇಹೀ ಮಾಯಾಪರಾಧೀನಶ್ಚೇಷ್ಟತೇ ತದ್ವಶಾನುಗಃ ॥೪೭॥

ಸಾ ಚ ಮಾಯಾ ಪರೇ ತತ್ತ್ವೇ ಸಂವಿದ್ರೂಪೇಽಸ್ತಿ ಸರ್ವದಾ ।
ತದಧೀನಾ ಪ್ರೇರಿತಾ ಚ ತೇನ ಜೀವೇಷು ಸರ್ವದಾ ॥೪೮॥

---

ಎಲೈ ರಾಜಶ್ರೇಷ್ಠನೇ ಕೇಳು, ಈ ಸಂಸಾರದಲ್ಲಿ, ಬ್ರಹ್ಮ, ವಿಷ್ಣು, ಮನು ಚಕ್ರವರ್ತಿ, ಇಂತಹ ದೊಡ್ಡವರಿಗೇ ಈ ಸ್ಥಿತಿಯಾಗಿರುವಾಗ ಸಾಮಾನ್ಯರಾದವರ ವಿಷಯವನ್ನು ಹೇಳತಕ್ಕದ್ದೇನಿರುವುದು? ದೇವತೆಗಳು, ರಾಕ್ಷಸರು, ಮನುಷ್ಯರು, ಇವರುಗಳಿಂದ ಕೂಡಿದ ಎಲ್ಲಾ ಪ್ರಪಂಚವೂ ಮಾಯೆಗೆ ಅಧೀನವಾಗಿರುವುದು.॥೪೬॥

ಎಲೈ ರಾಜನೇ, ಹೀಗಿರುವುದರಿಂದ ವಿಷ್ಣುವು ಕುದುರೆಯ ಮುಖ (ಹಯ ಗ್ರೀವ) ವುಳ್ಳವನು ಹೇಗಾದನೆಂದು ಕೊಂಚವೂ ಸಂದೇಹಪಡಬೇಡ. ಏಕೆಂದರೆ, ಪ್ರಾಣಿಯಾದವನು ಮಾಯೆಗೆ ಅಧೀನನಾಗಿ ತನ್ನ ಸ್ವಾತಂತ್ರ್ಯವಿಲ್ಲದೆ ಮಾಯೆಯು ಪ್ರೇರಿಸಿದಂತೆ, ಪ್ರಾರಬ್ಧಕರ್ಮಾನುಸಾರವಾಗಿ ಕೆಲಸಮಾಡಿಕೊಂಡಿರುವನು. ಆದರೆ ಈ ಮಾಯೆಯೂ ಜಡವಾದುದರಿಂದ ಈ ಜಗತ್ತೆಲ್ಲವನ್ನೂ ಹೇಗೆ ವಶಪಡಿಸಿಕೊಂಡು ಪ್ರೇರಿಸುತ್ತದೆ? ಎಂದೂ ಸಂಶಯಪಡಬೇಕಾಗಿಲ್ಲವು. ಏಕೆಂದರೆ, ॥೪೭॥

ಈ ಮಾಯೆಯು ಸಚ್ಚಿದಾನಂದರೂಪವಾದ ಪರಬ್ರಹ್ಮ ಚೈತನ್ಯದಲ್ಲಿ ಅಧ್ಯಸ್ತ ವಾಗಿ ಆಶ್ರಯವನ್ನು ಪಡೆದು ಆ ಅಧಿಷ್ಠಾನದ ಚಿಚ್ಛಕ್ತಿರೂಪವಾಗಿದ್ದುಕೊಂಡಿರು ವುದು. ಇದು ಜಡವಾಗಿದ್ದಾಗ್ಯೂ ಚಿಚ್ಛಕ್ತಿರೂಪಳೂ ಸಂವಿದ್ರೂಪಿಣಿಯೂ ಆಗಿರುವ ದೇವಿಯಿಂದ ಪ್ರೇರಿತವಾಗಿರುವುದರಿಂದ ಈ ಜಗತ್ತೆಲ್ಲವನ್ನೂ ವ್ಯಾಪಿಸಿಕೊಂಡು ಈ ಜಗತ್ತನ್ನೂ ಜೀವರನ್ನೂ ಯಾವಾಗಲೂ ತನ್ನ ಅಧೀನಕ್ಕೆ ಒಳಪಡಿಸಿಕೊಂಡಿರು ವುದು. ಮಾಯೆಯು ತನ್ನ ಸ್ವಭಾವವಾದ ಗುಣದಿಂದ ಪ್ರಪಂಚವನ್ನು ತನ್ನ ವಶ ದಲ್ಲಿರಿಸಿಕೊಂಡಿಲ್ಲ. ಮತ್ತೇನೆಂದರೆ ಅಧಿಷ್ಠಾನ ಚೈತನ್ಯದಿಂದ ಪ್ರೇರಿತವಾಗಿ ಪ್ರಪಂ ಚದ ಪ್ರವರ್ತನಾ ಸಾಮರ್ಥ್ಯವನ್ನು ಹೊಂದಿರುವುದು. ಈ ಮಾಯೆಯು ಚಿದ್ರೂಪ ವನ್ನು ಆಶ್ರಯಿಸಿಕೊಂಡು ಇರುವುದೇ ಹೊರತು ತಾನು ಮಾತ್ರ ಬೇರೆಯಾಗಿಲ್ಲ. ಚೇತನ ಸಂಬಂಧದಿಂದಲೇ ಮಾಯೆಗೂ ಈ ಶಕ್ತಿಯು ಇದೆ ಎಂದು ಸೂತ ಸಂಹಿತೆ

ತತೋ ಮಾಯಾ ವಿಶಿಷ್ಟಾಂ ತಾಂ ಸಂವಿದಂ ಪರಮೇಶ್ವರೀಂ ।
ಮಾಯೇಶ್ವರೀಂ ಭಗವತೀಂ ಸಚ್ಚಿದಾನಂದರೂಪಿಣೀಂ ॥೪೯॥

ಧ್ಯಾಯೇತ್ತಥಾ ರಾಧಯೇಚ್ಚ ಪ್ರಣಮೇಚ್ಚ ಜಪೇದಪಿ ।
ತೇನ ಸಾ ಸದಯಾ ಭೂತ್ವಾ ಮೋಚಯತ್ಯೇವ ದೇಹಿನಂ ॥೫೦॥

ಸ್ವಮಾಯಾಂ ಸಂಹರತ್ಯೇವ ಸ್ವಾನುಭೂತಿಪ್ರದಾನತಃ ।
ಭುವನಂ ಖಲು ಮಾಯಾ ಸ್ಯಾದೀಶ್ವರೀ ತಸ್ಯ ನಾಯಿಕಾ ॥೫೧॥

---

ಯಲ್ಲಿಯೂ ಹೇಳಿರುವುದು. ಈ ವಿಷಯದಲ್ಲಿ ಮೈತ್ರಾಯಣೀಯ ಶ್ರುತಿಯೂ ಇದೇ ಬಗೆಯ ಅಭಿಪ್ರಾಯವನ್ನು ಕೊಡುತ್ತಿರುವುದು. ಬ್ರಹ್ಮಚೈತನ್ಯಾಶ್ರಿತವಾಗಿರುವುದ ರಿಂದಲೇ ಸಂವಿದ್ರೂಪಿಣಿಯಾದ ದೇವಿಗೂ, ಚಿಚ್ಛಕ್ತಿರೂಪಿಣಿಯಾದ ಮಾಯೆಗೂ ಪ್ರವರ್ತಕತ್ವವು ಬರುತ್ತದೆಂದು. ತಾತ್ಪರ್ಯವು. ॥೪೮॥

ಇಂತಹ ಮಾಯೆಯ ಬಂಧನದಿಂದ ಪಾರಾಗಬೇಕಾದರೆ ಏನನ್ನು ಮಾಡ ಬೇಕೆಂಬುದನ್ನು ತಿಳಿಯಿಸುತ್ತಾರೆ. ಹೀಗೆ ಮಾಯೆಗೆ ಆಶ್ರಯವಾಗಿರುವ, ಚಿದ್ರೂಪಿಣಿ ಯಾದ, ಪರಮೇಶ್ವರಿಯಾದ, ಷಡ್ಗುಣೈಶ್ವರ್ಯದಿಂದ ಕೂಡಿರುವ ಸಚ್ಚಿದಾನಂದ ರೂಪಿಣಿಯಾದ ದೇವಿಯನ್ನು ಧ್ಯಾನಮಾಡಬೇಕು. ನವವಿಧವಾದ ಭಕ್ತಿಯಿಂದಲೂ ಆರಾಧನೆಯನ್ನು ಮಾಡಬೇಕು. ಆ ದೇವಿಗೆ ಸಂಬಂಧಪಟ್ಟ ಮಂತ್ರವನ್ನು ಜಪ ಮಾಡಬೇಕು. ಹೀಗೆಯೇ ಆ ದೇವಿಯ ಸೇವೆಯನ್ನು ಮಾಡುತ್ತಿದ್ದರೆ ಆ ದೇವಿಯು ತನ್ನನ್ನು ಸೇವೆಮಾಡುವವನ ವಿಷಯದಲ್ಲಿ ದಯೆವುಳ್ಳವಳಾಗಿ ತನ್ನ ನಿಜರೂಪವಾದ ಚಿದ್ರೂಪದ ಅನುಭವವು ಅವನಿಗೆ ಉಂಟಾಗುವಂತೆ ಅನುಗ್ರಹಮಾಡುವುದರ ಮೂಲಕ ಮಾಯೆಯ ತೊಂದರೆಯನ್ನು ತಪ್ಪಿಸಿ ಕಾಪಾಡುವಳು. ಈ ಲೋಕ ದಲ್ಲಿಯೂ ಯಾರು ನಮ್ಮನ್ನು ಶಿರೆಮನೆಯ ನಿರ್ಬಂಧದಲ್ಲಿಡುತ್ತಾರೋ ಅವರನ್ನೇ ನಾವು ವಿಧೇಯತೆಯಿಂದಲೂ ಒಳ್ಳೆಯ ನಡತೆಯಿಂದಲೂ ನಂಬಿಕೆಯನ್ನುಂಟು ಮಾಡಿ ಸಂತೋಷಪಡಿಸಿದರೆ ಅವರೇ ನಮ್ಮನ್ನು ನಿರ್ಬಂಧದಿಂದ ಬಿಡುಗಡೆಮಾಡು ತ್ತಾರೆಂಬುದೂ ಕಂಡುಬಂದಿದೆ. ಎಂದು ಭಾವವು. ॥೪೯-೫೦॥

ಅಲ್ಲದೆ ದೇವಿಯು ತನ್ನನ್ನು ಸೇವೆ ಮಾಡುವವರಿಗೆ ಮಾಯೆಯ ತೊಂದರೆ ಯನ್ನು ತಪ್ಪಿಸಿದ ಮಾತ್ರಕ್ಕೇ, ತಾತ್ಕಾಲಿಕವಾಗಿ ತೊಂದರೆಯು ತಪ್ಪಿದರೂ, ಕಾಲಾಂತರದಲ್ಲಿ ಪುನಃ ಮಾಯೆಯಿಂದ ತೊಂದರೆಯು ಬರಬಹುದೆಂದೂ ಆತಂಕ

**ಭುವನೇಶೀ ತತಃ ಪ್ರೋಕ್ತಾ ದೇವೀ ತ್ರೈಲೋಕ್ಯಸುಂದರೀ ।**
**ತದ್ರೂಪೇ ಯದಿ ಸಕ್ತಂ ಸ್ಯಾಚ್ಚಿತ್ತಂ ಭೂಮಿಪತೇ ಸದಾ ॥೫೨॥**

---

ಪಡಬೇಕಾಗಿಲ್ಲವು. ಏಕೆಂದರೆ ಪುನಃ ಎಂದೆಂದಿಗೂ ಬಾರದಂತೆ ಆ ಮಾಯೆಯನ್ನು ಆ ದೇಹಿಯ ವಿಷಯದಲ್ಲಿ ನಿಶ್ಶೇಷವಾಗಿ ಆ ದೇವಿಯೇ ತಪ್ಪಿಸುವಳು. ಈ ದೇವಿಯು ತನ್ನ ಚಿದ್ರೂಪಾನುಭವವು ಭಕ್ತನಾದ ಆಯಾಯ ಪ್ರಾಣಿಗೆ ಉಂಟಾಗುವಂತೆ ಮಾಡುವುದರ ಮೂಲಕ ಮಾಯಿಕವಾದ ಪ್ರಪಂಚದಲ್ಲಿ ಅಭಿಮಾನಜ್ಞಾನವು ಹೋಗಿ ನಿಜವಾದ ಜ್ಞಾನವು ಎಂದರೆ ಮಾಯೆಗೆ ದೇವಿಯು ಆಶ್ರಯಳು. ಆ ಚಿಚ್ಛಕ್ತಿರೂಪಳಾದ ದೇವಿಯು ಶಕ್ತಿವಿಶಿಷ್ಟಬ್ರಹ್ಮಸ್ವರೂಪವಾದ ಅಧಿಷ್ಠಾನದಲ್ಲಿ ಅವಿನಾಭಾವದಿಂದ ಅಭಿನ್ನಳಾಗಿರುವಳೆಂಬ ಅಭೇದಜ್ಞಾನವು ಉಂಟಾಗುವಂತೆ ಮಾಡುವಳು. ಹೇಗೆಂದರೆ ರಜ್ಜುವಿನಲ್ಲಿ ಉಂಟಾದ ಸರ್ಪಜ್ಞಾನವು ರಜ್ಜುವಿನ ಜ್ಞಾನದಿಂದಲೇ ಹೋಗುವಂತೆ, ಅಧಿಷ್ಠಾನದಲ್ಲಿ ಅದರ ವಿಷಯವಾಗಿ ಉಂಟಾದ ಮಿಥ್ಯಾಜ್ಞಾನವೂ ಆ ಅಧಿಷ್ಠಾನಜ್ಞಾನದಿಂದಲೇ ನಾಶವಾಗುವುದು. ಏಕೆಂದರೆ ಮಾಯೆಯೆಂದರೆ ಪ್ರಪಂಚವು. ಪ್ರಪಂಚದವಿಷಯದಲ್ಲಿ ನಾನು, ನನ್ನದು, ಎಂಬ ಅಭಿಮಾನಪೂರ್ವಕವಾದ ಜ್ಞಾನವೂ ಮಾಯೆಯಿಂದ ಅಜ್ಞಾನದಿಂದ ಉಂಟಾದುದು. ಇದರಿಂದಲೇ " ಅಧಿಷ್ಠಾನಾವಶೇಷೋ ಹಿ ನಾಶಃ ಕಲ್ಪಿತವಸ್ತುನಃ । " ಎಂದು ಸೂತಸಂಹಿತೆಯಲ್ಲಿ ಹೇಳಿರುವಂತೆ ಈ ಅಜ್ಞಾನವು ಅಧಿಷ್ಠಾನವಾದ ಚೈತನ್ಯದ ಜ್ಞಾನದಿಂದ ನಾಶವಾಗುತ್ತದೆ. ಹೀಗೆ ಈ ಮಾಯೆಯ ಪ್ರವೃತ್ತಿನಿವೃತ್ತಿಗಳೆರಡಕ್ಕೂ ಅಧಿಪತಿಯೂ ದೇವಿಯೇ ಆಗಿರುವಳು. ಈ ಕಾರಣದಿಂದಲೇ ದೇವಿಗೆ ಭುವನೇಶ್ವರೀ ಎಂಬ ಬಿರುದು ಪ್ರಸಿದ್ಧವಾಗಿರುವುದು. ಭುವನೇಶೀ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಿಕಾ, ತ್ರೈಲೋಕ್ಯಸುಂದರೀ, ತ್ರಿಪುರಸುಂದರೀ ಎಂದು ಮುಂತಾದ ಹೆಸರುಗಳೂ ಈ ಅರ್ಥವನ್ನೇ ತಿಳಿಯಿಸುತ್ತವೆ. ||೫೧||

ಎಲೈ ರಾಜನೇ, ನೀನು ಅಂತಹ ಭುವನೇಶ್ವರಿಯಾದ ದೇವಿಯ ಅನುಗ್ರಹವು ಆಗುವುದು ಬಹಳ ದುರ್ಲಭವಾದುದು. ಆದ್ದರಿಂದ ಈ ದೇವಿಯನ್ನು ಒಲಿಸಿಕೊಳ್ಳುವುದೂ ಅಸಂಭವವೆಂದೂ ಹೇಳಬೇಡ. ಏಕೆಂದರೆ ಮೇಲೆ ಹೇಳಿದ ರೀತಿಯಿಂದ ಮೂರು ಲೋಕಕ್ಕೂ ಅಧಿಪತಿಯಾದ ತ್ರಿಪುರಸುಂದರಿಯಾದ ಭುವನೇಶ್ವರೀ ದೇವಿಯ ಅನುಗ್ರಹವು ಆಗಲಿ ಅಥವಾ ಆಗದಿರಲಿ, ಈ ದೇವಿಯ ರೂಪವನ್ನು ಧ್ಯಾನಮಾಡುವುದರಲ್ಲಿ ಮಾತ್ರ ಮನಸ್ಸು ಆಸಕ್ತವಾದರೆ, ಬೆಂಕಿಗೆ ಛಳಿಯಾಗದಿರುವಂತೆ, ಬೆಂಕಿ ಇದ್ದಲ್ಲಿಯೂ ಚಳಿಯಾಗದಿರುವಂತೆ, ಭಕ್ತನಾದ ಆ ಮನುಷ್ಯನಿಗೆ

ಮಾಯಯಾ ಕಿಂಭವೇತ್ತತ್ರ ಸದಸದ್ರೂಪತಯಾ ನೃಪ ॥
ತಸ್ಮಾನ್ಮಾಯಾ ನಿರಾಸಾರ್ಥಂ ನಾನ್ಯದ್ವೈ ದೇವತಾಂತರಂ ॥೫೩॥

ಸಮರ್ಥಂತು ವಿನಾ ದೇವೀಂ ಸಚ್ಚಿದಾನಂದ ರೂಪಿಣೀಂ ॥
ತಮೋರಾಶಿಂ ನಾಶಯಿತುಂ ಶಕ್ತಂ ನೈವ ತಮೋ ಭವೇತ್ ॥೫೪॥

ಕಿಂತು ಭಾನುಪ್ರಭಾ ಚಂದ್ರವಿದ್ಯುದ್ವಹ್ನಿಪ್ರಭಾದಯಃ ।
ತಸ್ಮಾನ್ಮಾಯೇಶ್ವರೀಮಂಬಾಂ ಸ್ವಪ್ರಕಾಶಾಂ ತು ಸಂವಿದಂ ॥೫೫॥
ಆರಾಧಯೇದತಿಪ್ರೀತ್ಯಾ ಮಾಯಾಗುಣ ನಿವೃತ್ತಯೇ ॥

---

ಸದಸದ್ವಿಲಕ್ಷಣವಾದ ಮಾಯೆಯು ಏನನ್ನೂ ಮಾಡಲಾರದು. ಅಲ್ಲದೆ ಬೆಂಕಿಯ ಸಮೀಪದಲ್ಲಿರುವವರಿಗೆ ಚಳಿಯಿಂದ ಬಾಧೆಯಾಗದು. ಇದರಿಂದ ಅವರ ವಿಷಯದಲ್ಲಿ ಬೆಂಕಿಯ ಅನುಗ್ರಹವುಂಟಾಯಿತೆಂದು ತಿಳಿಯಬಾರದು. ಮತ್ತೇನೆಂದರೆ ಚಳಿಯನ್ನು ನಾಶಮಾಡುವುದು ಬೆಂಕಿಯ ಸ್ವಭಾವವೇ ಎಂದು ತಿಳಿಯಬೇಕು. ಹಾಗೆಯೇ ದೇವಿಯ ಧ್ಯಾನವೂ ಮಾಯೆಯನ್ನು ತಪ್ಪಿಸುತ್ತಿರುತ್ತದೆ. ||೫೨||

ಅಲ್ಲದೆ ವಿಷ್ಣುಬ್ರಹ್ಮಾದಿದೇವತೆಗಳ ಆರಾಧನೆಯಿಂದಲೂ ಯಜ್ಞಯಾಗಾದಿ ಧರ್ಮಾಚರಣೆಯಿಂದಲೂ, ಈ ಮಾಯೆಯ ಸಂಬಂಧವಾದ ತೊಂದರೆಯು ನೇರವಾಗಿಯೇ ತಪ್ಪುವುದಿಲ್ಲ. ಏಕೆಂದರೆ, ರಜ್ಜುವಿನಲ್ಲಿ ಉಂಟಾದ ಸರ್ಪಭ್ರಮೆಯು ರಜ್ಜುವಿನ ಜ್ಞಾನವೊಂದರಿಂದಲೇ ಹೋಗುವುದೇ ಹೊರತು ಮತ್ತೆ ಬೇರೆ ಯಾವುದರಿಂದಲೂ ಹೋಗುವುದಿಲ್ಲ. ಹಾಗೆಯೇ ಈ ಮಾಯೆಗೆ ಅಧಿಷ್ಠಾನವಾದ ದೇವಿಯಲ್ಲಿ ಭಕ್ತಿರೂಪವಾದ ಜ್ಞಾನದಿಂದ ಈ ಮಾಯೆಯು ನಿಶ್ಶೇಷವಾಗಿ ಹೋಗುವುದು. ಯಜ್ಞಯಾಗಾದಿಗಳಿಂದಾಗಲಿ, ಶಿವವಿಷ್ಣ್ವಾದಿದೇವತಾಂತರಗಳ ಸೇವೆಯಿಂದಾಗಲಿ ಸಾಕ್ಷಾತ್ತಾಗಿ ಹೋಗುವುದಿಲ್ಲ. ಏಕೆಂದರೆ ಅವರೆಲ್ಲರೂ ಮಾಯಾಧೀನರು. ಆದರೆ ಸಚ್ಚಿದಾನಂದ ರೂಪಿಣಿಯಾದ ಎಂದರೆ ನಿತ್ಯವಾಗಿ, ಚಿದ್ರೂಪ ಮತ್ತು ಆನಂದ ರೂಪದಿಂದಿರುವ, ದೇವಿಯ ಜ್ಞಾನದಿಂದಲೇ ಇದು ಶೀಘ್ರವಾಗಿ ನಾಶವಾಗುವುದು. ಹೇಗೆಂದರೆ, ||೫೩||

ಒಂದು ಕತ್ತಲೆಯ ರಾಶಿಯನ್ನು ನಾಶಮಾಡಲು ಮತ್ತೊಂದು ಕತ್ತಲೆಯು ಶಕ್ತವಾಗಲಾರದು. ಆದರೆ, ಸೂರ್ಯ, ಚಂದ್ರ, ಅಗ್ನಿ ಇವರುಗಳ ಪ್ರಭೆಯು, ಬೆಳಕು ಮಾತ್ರ ಆ ಕತ್ತಲೆಯನ್ನು ನಾಶಮಾಡಬಲ್ಲದು. ಇದರಂತೆಯೇ ಮಾಯೆಯನ್ನು ನಾಶಮಾಡಲು ಮಾಯೆಗೆ ಅಧೀನರಾದ ಒಂದೊಂದು ಗುಣವು ಪ್ರಧಾನ

ಇತಿ ಸಮ್ಯಕ್ ಮಯಾಖ್ಯಾತಂ ವೃತ್ರಾಸುರವಧಾದಿಕಂ ॥೫೬॥

ಯತ್ಪೃಷ್ಟಂ ರಾಜಶಾರ್ದೂಲ ಕಿಮನ್ಯತ್ ಶ್ರೋತುಮಿಚ್ಛಸಿ ।
ಪೂರ್ವಾರ್ಧೋಽಯಂ ಪುರಾಣಸ್ಯ ಕಥಿತಸ್ತವ ಸುವ್ರತ ॥೫೭॥

ಯತ್ರ ದೇವ್ಯಾಸ್ತು ಮಹಿಮಾ ವಿಸ್ತರೇಣೋಪಪಾದಿತಃ ।
ಏತದ್ರಹಸ್ಯಂ ಶ್ರೀಮಾತುರ್ನದೇಯಂ ಯಸ್ಯಕಸ್ಯಚಿತ್ ॥೫೮॥

ದೇಯಂ ಭಕ್ತಾಯ ಶಾಂತಾಯ ದೇವೀ ಭಕ್ತಿರತಾಯಚ ।
ಶಿಷ್ಯಾಯ ಜ್ಯೇಷ್ಠಪುತ್ರಾಯ ಗುರುಭಕ್ತಿಯುತಾಯ ಚ ॥೫೯॥

---

ವಾಗಿ ಉಳ್ಳ ತ್ರಿಮೂರ್ತಿಗಳು ಶಕ್ತರಲ್ಲ. ಆದ್ದರಿಂದ ಸ್ವಪ್ರಕಾಶಸ್ವರೂಪಳಾದ, ಚಿಚ್ಛಕ್ತಿ ರೂಪಳೂ, ಸಂವಿದ್ರೂಪಿಣಿಯೂ ಆಗಿರುವ ಮಾಯೇಶ್ವರಿಯಾದ, ಜಗನ್ಮಾತೆಯನ್ನು ಮಾಯಾಗುಣಗಳ ನಾಶಕ್ಕಾಗಿ ಬಹಳ ಪ್ರೀತಿಯಿಂದ ಸೇವಿಸಬೇಕು. ಇದು ಹೊರತು ಬೇರೆಯಾದ, ಸುಲಭವೂ ಶೀಘ್ರಫಲಪ್ರದವೂ ಆದ, ಮಾರ್ಗವಿಲ್ಲವು. ॥೫೪-೫೫॥

ಎಲೈ ರಾಜಶ್ರೇಷ್ಠನೇ ಕೇಳು. ನೀನು ಯಾವ ವೃತ್ರಾಸುರನ ವಧೆಯೇ ಮುಂತಾದ ವಿಷಯಗಳನ್ನು ಕೇಳಿದೆಯೋ, ಇದೆಲ್ಲವನ್ನೂ ನಾನು ವಿಸ್ತಾರವಾಗಿ ಚೆನ್ನಾಗಿ ಹೇಳಿರುವೆನು. ಯಾವ ಗ್ರಂಥದಲ್ಲಿ ದೇವಿಯ ಮಹಿಮೆಯು ವಿಸ್ತಾರವಾಗಿ ಹೇಳಲ್ಪಟ್ಟಿರುವುದೋ, ಆ ಪುರಾಣಗ್ರಂಥದ ಪೂರ್ವಾರ್ಧವು ನಿನಗಾಗಿ ಹೀಗೆ ಹೇಳಲ್ಪಟ್ಟಿರುವುದು. ಇದರಿಂದ ಈ ಪುರಾಣದಲ್ಲಿ ಪೂರ್ವಾರ್ಧವೆಂದೂ, ಉತ್ತರಾರ್ಧವೆಂದೂ, ಎರಡು ಭಾಗಗಳಿವೆ. ಎಂದು ತಿಳಿಯಿಸಿದಂತಾಯಿತು. ಆದುದರಿಂದ ತತೋ ಭಾಗವತಂ ಪ್ರೋಕ್ತಂ ಭಾಗದ್ವಯವಿಭೂಷಿತಂ । ಎಂಬ ಆದಿತ್ಯಪುರಾಣದ ವಚನವೂ ಈ ದೇವೀಭಾಗವತವನ್ನೇ ತಿಳಿಸುತ್ತದೆ, ವಿಷ್ಣುಭಾಗವತವನ್ನಲ್ಲವು, ಎನ್ನಬೇಕು. ಏಕೆಂದರೆ ವಿಷ್ಣುಭಾಗವತದ ಹತ್ತನೆಯ ಸ್ಕಂಧದಲ್ಲಿ ಮಾತ್ರ ಪೂರ್ವಾರ್ಧ, ಉತ್ತರಾರ್ಧ, ವೆಂಬ ವಿಭಾಗವು ಕಾಣಬರುತ್ತಿದೆಯೇ ಹೊರತು, ಒಟ್ಟು ಪುರಾಣದಲ್ಲಿಯೇ ಅಂತಹ ವಿಭಾಗವು ಕಾಣಬರುತ್ತಿಲ್ಲವು. ಆದುದರಿಂದ ದೇವೀಭಾಗವತವೇ ಮಹಾಪುರಾಣಗಳಲ್ಲಿ ಪರಿಗಣಿತವಾಗಿದೆ, ಎಂದು ಸಿದ್ಧಾಂತವಾಗುತ್ತದೆ ಎನ್ನುವುದಕ್ಕೆ ಇದೂ ಒಂದು ಯುಕ್ತಪ್ರಮಾಣವಾಗಿದೆ. ॥೫೬-೫೭॥

ಸಂಪತ್ಪ್ರದಳಾದ ಜಗನ್ಮಾತೆಯ ಚರಿತ್ರೆಯಲ್ಲಿ ಬಹಳ ರಹಸ್ಯವಾದ ಈ ಅಂಶವನ್ನು ಯಾವನಾದರೂ ಅಜ್ಞಾತಕುಲಗೋತ್ರನಾದವನಿಗೆ ಹೇಳತಕ್ಕದ್ದಲ್ಲವು. ಭಕ್ತ

ಇದಮಖಿಲ ಕಥಾನಾಂ ಸಾರಭೂತಂ ಪುರಾಣಂ
ನಿಖಿಲ-ನಿಗಮತುಲ್ಯಂ ಸತ್ಪ್ರಮಾಣಾನುವಿದ್ಧಂ ।
ಪಠತಿ ಪರಮಭಾವಾದ್ಯಃ ಶೃಣೋತೀಹ ಭಕ್ತ್ಯಾ
ಸ ಭವತಿ ಧನವಾನ್ ವೈ ಜ್ಞಾನವಾನ್ ಮಾನವೋಽತ್ರ ॥೬೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ
ಏಕತ್ರಿಂಶೋಽಧ್ಯಾಯಃ.

ವೇದಾಷ್ಟ ವಸುಭೂ ಸಂಖ್ಯೈಃ ಪದ್ಯೈರ್ವ್ಯಾಸಕೃತೈಃ ಶುಭೈಃ ।
ದೇವೀ ಭಾಗವತಸ್ಯಾಸ್ಯ ಷಷ್ಠಃಸ್ಕಂಧಃ ಸಮಾಪ್ತವಾನ್ ॥

---

ನಾದವನಿಗೂ ಉಪಶಾಂತನಿಗೂ, ದೇವಿಯ ಭಕ್ತಿಯಲ್ಲಿ ಆಸಕ್ತನಿಗೂ, ಶಿಷ್ಯನಿಗೂ, ಜ್ಯೇಷ್ಠಪುತ್ರನಿಗೂ, ಗುರುವಿನಲ್ಲಿ ಭಕ್ತಿಯುಳ್ಳವನಿಗೂ ಸಹ ಈ ಅಂಶವನ್ನು ತಿಳಿಸಬಹುದು. ॥೫೮-೫೯॥

ಈ ಪುರಾಣವು ಎಲ್ಲಾ ಪೌರಾಣಿಕ ಕಥೆಗಳಿಗೆ ಸಾರವಾಗಿ ಎಂದರೆ ಅವುಗಳ ಮುಖ್ಯಾಂಶವನ್ನು ಒಳಗೊಂಡಿರುವುದು. ಎಲ್ಲ ವೇದಗಳಿಗೂ ಸಮಾನವಾಗಿರುವುದು. ಎಂದರೆ ಜನರಿಗೆ ಸತ್ಕಾರ್ಯದಲ್ಲಿ ಪ್ರವೃತ್ತಿಯನ್ನೂ ಅಸತ್ಕಾರ್ಯದಲ್ಲಿ ನಿವೃತ್ತಿಯನ್ನೂ ಉಂಟುಮಾಡುವ ಧರ್ಮಾಧರ್ಮ ಜ್ಞಾನವನ್ನು ಕೊಡುತ್ತದೆ. ಸರಿಯಾದ, ಉತ್ತಮವಾದ, ಪ್ರಮಾಣದಿಂದ ಕೂಡಿರುವುದು. ಎಂದರೆ ಪುರುಷದೋಷಗಳಿಲ್ಲದೆ ಶ್ರೇಯಸ್ಕರವಾದ ವೇದದ ಪ್ರಮಾಣದ ಅವಲಂಬನೆಯನ್ನು ಹೊಂದಿರುವುದು. ಆದುದರಿಂದ ಹೀಗಿರುವ ಈ ಪುರಾಣವನ್ನು ಯಾವನು ಭಕ್ತಿಯಿಂದ ಓದುವನೋ, ಯಾವನು ಭಕ್ತಿಯಿಂದ ಕೇಳುವನೋ, ಆ ಮನುಷ್ಯನು ಈ ಲೋಕದಲ್ಲಿ ಐಶ್ವರ್ಯವಂತನಾಗಿಯೂ ಜ್ಞಾನಿಯಾಗಿದ್ದು, ಪರಲೋಕದಲ್ಲಿ ಸದ್ಗತಿಯನ್ನೂ, ಕಡೆಗೆ ಮೋಕ್ಷರೂಪವಾದ ಶ್ರೇಯಸ್ಸನ್ನೂ ಹೊಂದುವನು. ॥೬೦॥

ಮಂಗಳಕರವಾದ, ವ್ಯಾಸಋಷಿಯಿಂದ ಮಾಡಲ್ಪಟ್ಟ, ೧೮೮೪ ಗ್ರಂಥಗಳಿಂದ ಕೂಡಿದ
ಶ್ರೀದೇವೀಭಾಗವತದ

ಆರನೆಯ ಸ್ಕಂಧವು ಇಲ್ಲಿಗೆ ಮುಗಿದುದು.



ಕರ್ಣಾಟಾಧಿಪತಿ ಶ್ರೀಮಜ್ಜಯಚಾಮೇಂದ್ರ ಶಾಸನಾತ್ ।
ದೇವೀಭಾಗವತಸ್ಯಾನುವಾದಂ ಕನ್ನಡಭಾಷಯಾ ॥
ಸುಬ್ಬಮ್ಮಾಂಬಾದೇವಯಜ್ವತನಯಃ ಚಂದ್ರಶೇಖರಃ ।
ಜನಾನಾ ಮುಪಕಾರಾಯ ರಚಯಾಮಾಸ ಸಾದರಂ ॥

ಈಶಸೇವಾಂ, ದೇಶದೇವಾಂ, ಭಾಷಾಸೇವಾಂ ಮಯಾ ಕೃತಾಂ ।
ಸ್ವೀಕೃತ್ಯ ತುಷ್ಯತು ಗುರುಃ ದೇವೋ ರಾಜಾ ಚ ಭಾರತೀ ॥
ಸೇವಿತಾಽವತು ಸಾ ದೇವೀ ಸರ್ವಶಕ್ತಿಸ್ವರೂಪಿಣೀ ।
ಪ್ರಾಣಿಕರ್ಮವಶಾದ್ಗ್ರಹಣೇಚ್ಛಾಜ್ಞಾನಕ್ರಿಯಾತ್ಮಿಕಾ ॥

ತತ್ತ್ವಸ್ಯೈತದ್ಭವತಿ ನಿಯತಂ ಸ್ಯಾತ್ಸ್ವರೂಪಂ ಹಿ ನಾನ್ಯತ್ ।
ಶ್ರೇಷ್ಠಂ ತತ್ತ್ವಂ ವಿಶದ ಮವದ ಚ್ಚಾಸ್ಮದಾಚಾರ್ಯ ಏವ ॥
ತಸ್ಮಿನ್ ಭಕ್ತ್ಯಾ ಭವತಿ ಸುಲಭಾ ಮುಕ್ತಿ ರನ್ಯತ್ರ ನ ಸ್ಯಾತ್ ।
ಇತ್ಯಾದುಕ್ತಿರ್ನಭವತಿ ಮತಂ ನಾಪಿ ತೇನೇಷ್ಟಲಾಭಃ ॥

